# ವಿ. ಸೀ. - ೭೫

(ಸಂಭಾವನಾ ಗ್ರಂಥ)

ಸಂಪಾದಕರು

ವಿ. ಎಂ. ಇನಾಂದಾರ್

ವಿ. ಸೀ. ಸತ್ಕಾರ ಸಮಿತಿಗಾಗಿ

ಐ ಬಿ ಎಚ್ ಪ್ರಕಾಶನ

ಬೆಂಗಳೂರು–560009

ಬೆಲೆ : ರೂ. ೧೫–೦೦



ವಿ. ಸೀ. – ೭೫ : ಸಂಭಾವನಾ ಗ್ರಂಥ

*

ಲೇಖನಗಳು : ವಿವಿಧ ಹೆಸರಾಂತ ಲೇಖಕರು

*

ಸಂಪಾದಕರು : ವಿ. ಎಂ. ಇನಾಂದಾರ್

*

ಪ್ರಕಾಶನ : ವಿ. ಸೀ. ಸತ್ಕಾರ ಸಮಿತಿಗಾಗಿ
ಐ ಬಿ ಎಚ್ ಪ್ರಕಾಶನ, ಗಾಂಧಿನಗರ, ಬೆಂಗಳೂರು-೫೬೦೦೦೯

*

ಮುದ್ರಣ : ಐ ಬಿ ಎಚ್ ಪ್ರಕಾಶನ ಪ್ರಿಂಟರಿ, ಬೆಂಗಳೂರು-೫೬೦೦೫೪

# ಅರಿಕೆ

ನಮ್ಮ ನಾಡಿನ ಹಿರಿಯ ವಿದ್ವಾಂಸರಲ್ಲೊಬ್ಬರೂ, ಕನ್ನಡದ ಕವಿಗಳು, ವಿಮರ್ಶಕರು, ಸದಭಿರುಚಿಯ ಕಲಾರಾಧಕರು, ಎಲ್ಲಕ್ಕೂ ಮಿಗಿಲಾಗಿ ಸತ್‌ಸಂಸ್ಕಾರಗಳ ಪರಿಣತಿಯ ಹೃದಯವಂತಿಕೆಯ ಸದ್ಗೃಹಸ್ಥರೂ ಆದ ಪ್ರೊ. ವಿ. ಸೀತಾರಾಮಯ್ಯನವರಿಗೆ ಇಂಥ ಒಂದು ಸಂಭಾವನಾ ಗ್ರಂಥವನ್ನು ಅರ್ಪಿಸಬೇಕೆಂದು ಅವರ ಕೆಲವು ಸ್ನೇಹಿತರೂ ಅಭಿಮಾನಿಗಳೂ ಸಂಕಲ್ಪಿಸಿ ಹಲಗಾಲವಾಯಿತು. ಸಂಕಲ್ಪಕ್ಕೂ ಸಿದ್ಧಿಗೂ ನಡುವೆ ಕೆಲವೊಂದು ಅನಿವಾರ್ಯ ಕಾರಣಗಳಿಂದಾಗಿ ದೀರ್ಘಕಾಲದ ವಿಳಂಬ ಅವತರಿಸಿ ಗ್ರಂಥದ ಸಂಕಲನವನ್ನು ಕೈಕೊಂಡಿದ್ದವರನ್ನು ಹೇಗೋ ಹಾಗೆ ವಿ. ಸೀ.ಯವರ ಅನೇಕ ಸ್ನೇಹಿತರನ್ನು ಮತ್ತು ಅಭಿಮಾನಿಗಳನ್ನು ನೋಯಿಸಿತು. ಸ್ವಸಂತೋಷದಿಂದ, ಅವರಲ್ಲಿ ನನಗಿರುವ ಗಾಢ ಗೌರವಭಾವನೆಯಿಂದ ಮಾತ್ರ ಪ್ರೇರಿತನಾಗಿ ಈ ಕೆಲಸವನ್ನು ಒಪ್ಪಿಕೊಂಡ ನಾನು ಕೆಲವರ ವ್ಯಂಗ್ಯ ವಿನೋದಕ್ಕೆ ಗುರಿಯಾಗಬೇಕಾಯಿತು. ಈ ವಿಚಾರದಲ್ಲಿ ವೃತ್ತಪತ್ರಿಕೆಗಳಲ್ಲಿ ಕಟುವಾಗಿ ಬರೆದುದುಂಟು. ನನ್ನ ಬಗೆಯ ಅಸಮಾಧಾನ ಅಪನಂಬಿಕೆಗಳಿಗಿಂತ ಹೆಚ್ಚಾಗಿ ಹಿರಿಯರೊಬ್ಬರಿಗೆ ಸಲ್ಲಬೇಕಾಗಿದ್ದ ಗೌರವ ವಿಳಂಬಿಸಿತೆಂಬ ಅಸಮಾಧಾನವೇ ಇದೆಲ್ಲಕ್ಕೂ ಕಾರಣವೆಂದು ನಾನು ತಿಳಿದುಕೊಂಡಿದ್ದೇನೆ. ಆದ್ದರಿಂದ ಬೇಡವಾಗಿ, ತಪ್ಪಿಸಲಾಗದೆ, ಬಂದ ಈ ವಿಳಂಬದ ವಿಚಾರವನ್ನು ವಿಸ್ತರಿಸದೆ ಎಂದಿಗೋ ಆಗಬೇಕಾದದ್ದು ಇಂದಿಗಾದರೂ ಆಯಿತು ಎಂದು ಸಂತೋಷಪಡಬಹುದಾಗಿದೆ. ಈ ಸಂತೋಷದಲ್ಲಿ ಸಮಭಾಗಿಗಳಾಗಿ ವಿ. ಸೀ.ಯವರ ಅಭಿಮಾನಿಗಳೆಲ್ಲರೂ ನನ್ನಲ್ಲಿಯ ಕೊರತೆಗಳನ್ನು ಮನ್ನಿಸಿ ಇದುವರೆಗಿನ ಅನಿವಾರ್ಯವಾದ ನಿಧಾನಕ್ಕಾಗಿ ಕ್ಷಮಿಸುವರೆಂದು ನಂಬಿದ್ದೇನೆ.

* * *

ಇಂಥ ಗೌರವ ಗ್ರಂಥ ಸಮರ್ಪಣೆಗೆ, ತಮ್ಮ ಬಗೆಯಲ್ಲಿ ಮೆಚ್ಚುಗೆಯ ಪ್ರದರ್ಶನಕ್ಕೆ, ವಿ.ಸೀ.ಯವರು ಎಂದಿಗೂ ವಿಮುಖರು ಎನ್ನುವುದನ್ನು ಅವರ ಸಂಕೋಚ

ಪ್ರವೃತ್ತಿಯನ್ನು, ಅವರ ವಿನಯ ಸೌಜನ್ಯಗಳನ್ನು ತಿಳಿದವರು ಬಲ್ಲರು. ಅವರನ್ನು ಇದಕ್ಕಾಗಿ ಒಪ್ಪಿಸುವುದೇ ಒಂದು ದೊಡ್ಡ ಕೆಲಸವಾಗಿದೆ. ಹತ್ತಾರು ಬಾರಿ ಅವರೊಂದಿಗೆ ಹಟ ಹಿಡಿದು ವಾದಿಸಿದ್ದೇನೆ. ಕೊನೆಯಲ್ಲಿ ಅವರು ಒಪ್ಪಿದ್ದು ತಮಗಿಂತ ಹೆಚ್ಚಾಗಿ ನನಗಾಗಿ ಎಂಬುದನ್ನು ತಿಳಿದಿದ್ದೇನೆ. ಯಾರನ್ನೂ ಎಂದಿಗೂ ನೋಯಿಸದ ಅವರು ನಾನು ನೋಯುವುದು ಬೇಡ ಎಂದು ಒಪ್ಪಿದ್ದಾರೆ ಎನ್ನುವುದು ಅವರ ಸ್ವಭಾವವನ್ನು ಎತ್ತಿ ತೋರಿಸುವ ವಿಷಯವಾಗಿದ್ದಂತೆ ನನಗೊಂದು ಹೆಮ್ಮೆಯ ವಿಷಯವೂ ಆಗಿದೆ. ನನ್ನ ಅವರ ಮೊದಲ ಪರಿಚಯವಾಗಿ ಸುಮಾರು ಮೂವತ್ತೇಳು ವರ್ಷಗಳೇ ಆದವು. ಈ ಅವಧಿಯಲ್ಲಿ ಅಂದು ವಿಜಾಪುರದಲ್ಲಿ ಮಾಸ್ತಿಯವರೊಂದಿಗೆ ಅವರನ್ನು ನನ್ನ ಮನೆಗೆ ಕರೆದುಕೊಂಡು ಹೋದಂದು ಮೊದಲಾದ ಪರಿಚಯ, ಅಲ್ಪಾವಧಿಯಲ್ಲಿಯೇ ಸ್ನೇಹವಾಗಿ, ಪ್ರೀತಿಯಾಗಿ, ಒಂದು ಬಗೆಯ ಜನನಾಂತರ ಸೌಹೃದವೆನ್ನಬೇಕಾದ ಭಾವಬಂಧನವಾಗಿ ಬೆಳೆದು ನಿಂತದ್ದು ನನ್ನ ಬದುಕಿನ ಒಂದು ಭಾಗ್ಯವಾಗಿದೆ. ಈ ಮಾತು ಉಪಚಾರದ ಅತ್ಯುಕ್ತಿಯಾಗಿ ಕಾಣುವುದು ಸಾಧ್ಯವಿದೆ. ಆದರೆ ಅಂಥ ಮಾತಿನಿಂದಲ್ಲದೆ ಬೇರೆಯಾಗಿ ನನಗೆನಿಸಿದ್ದನ್ನು ಹೇಳುವುದು ಸಾಧ್ಯವಿಲ್ಲವಾಗಿದೆ.

ಇಷ್ಟು ಹತ್ತಿರವಾಗಿದ್ದವರ ವಿಚಾರವಾಗಿ ಬರೆಯುವುದು ಎಂದಿಗೂ ಕಷ್ಟವೇ. ಬರೆಯುವುದಕ್ಕೆ ವಿಷಯ ಸಾಲದೆಂದಲ್ಲ; ಏನು ಬರೆಯುವುದು, ಎಷ್ಟು ಬರೆಯುವುದು, ಎಷ್ಟೆಂದು ಬರೆಯುವುದು ಎಂದು. ಅವರನ್ನು ಕುರಿತು ನೆನೆದಾಗಲೆಲ್ಲ, ಅವರ ಹತ್ತಿರ ಇರುವಾಗಲೆಲ್ಲ "ಸ್ವರ್ಗದೊಳಗೀ ಸ್ನೇಹ ದೊರೆವುದೇನು?" ಎಂದೇ ಅನಿಸುತ್ತದೆ. ನನಗೆ ಅವರಲ್ಲಿ ಅದೇ ಬಹಳ ದೊಡ್ಡದಾಗಿ ಕಂಡಿದೆ. ಅವರ ಆರ್ದ್ರವಾದ, ಉದಾರವಾದ, ನಿರ್ಮಲವಾದ ಹೃದಯವಂತಿಕೆ ಹಿರಿಕಿರಿಯರ ಜೊತೆಯಲ್ಲಿಯ ಅವರ ನಡೆನುಡಿಗಳಲ್ಲಿ ಸ್ನೇಹದ ಒಂದು ಬಗೆಯಾಗಿ, ಒಂದು ನಿತ್ಯ ಪ್ರಸಾದವಾಗಿ, ಕಾಣಿಸಿಕೊಳ್ಳುತ್ತದೆ. ಸಾಹಿತ್ಯ, ಸಂಸ್ಕೃತಿ, ಕಲೆ ಮುಂತಾದ ಕಾರ್ಯವಿಶೇಷಗಳಲ್ಲಿಯಾದರೆ ಹಿರಿದಾದದ್ದರ ಬಗೆಯಲ್ಲಿ, ದೊಡ್ಡದಾದದ್ದರ ಬಗೆಯಲ್ಲಿ, ಬದುಕಿಗೆ ಸಾರ್ಥಕ್ಯ ಭಾವವನ್ನು ಒದಗಿಸಬಲ್ಲ ಎಲ್ಲ ಅನುಭವದ ಬಗೆಯಲ್ಲಿ, ಒಂದು ನಿರಂತರವಾದ ನಿಷ್ಠೆಯಾಗಿ, ಅದೇ ಹೃದಯವಂತಿಕೆ ಸಹಜವಾದ ಔದಾರ್ಯದಿಂದ ಪ್ರತಿಸ್ಪಂದಿಸಬಲ್ಲ ಅವರ ವ್ಯಕ್ತಿತ್ವದ ಮಾನವೀಯ ವಿಶೇಷವಾಗಿ ಕಾಣಿಸಿಕೊಳ್ಳುತ್ತದೆ. ಅಂಥ ಹೃದಯವಂತಿಕೆಯನ್ನು ನನ್ನ ಬದುಕಿನ ಅರುವತ್ತೊಂದು ವರ್ಷಗಳಲ್ಲಿ ಬೇರೆಡೆ ಎಲ್ಲಿಯೂ ಕಂಡಿಲ್ಲ. ನನ್ನ ನಡೆ ನುಡಿಗಳ ಮೇಲೆ, ನನ್ನ ತಿಳುವಳಿಕೆಯ ಸಾಮರ್ಥ್ಯದ ಮೇಲೆ, ನನ್ನಲ್ಲಿಯ ಅಭಿರುಚಿ, ವಿಮರ್ಶನಶಕ್ತಿ, ವಿವೇಚನೆ, ಒಟ್ಟು ಬದುಕನ್ನು ಕಾಣುವ ನೋಟದ ಮೇಲೆ ಅವರ ಹೃದಯವಂತಿಕೆ ಬೀರಿದ ಪ್ರಭಾವ ಇಷ್ಟು ಎಂದು ಹೇಳುವುದು ಕಷ್ಟ. ಮನುಷ್ಯ ಮನುಷ್ಯನಾಗಿ ಬಾಳಬೇಕು, ಬೆಳೆಯಬೇಕು; ಕಲೆ, ಸಾಹಿತ್ಯ, ತತ್ವ, ಎಲ್ಲವೂ ಅಷ್ಟಕ್ಕಾಗಿ; ಅವೆಲ್ಲವುಗಳ

ಮುಖಾಂತರ ಸಿದ್ಧಿಸಬೇಕಾದ ಬುದ್ಧಿಭಾವನೆಗಳ ಸಂಸ್ಕರಣವೆಲ್ಲವೂ ಸ್ನೇಹಮಯಿಯಾಗಿ ಬಾಳಿ ತನ್ನ ಮತ್ತು ತನ್ನವರ ಬಾಳನ್ನು ಹಸನವಾಗಿಸಿ ಮೇಲಕ್ಕೆತ್ತುವುದಕ್ಕಾಗಿ, ಎಂದು ನಂಬಿ, ನಡೆದು, ನಡೆಯಿಸಬಲ್ಲ ಅವರ ಸಹವಾಸದ ಪ್ರಭಾವ ಒಂದು ಪುಣ್ಯ ವಿಶೇಷದ ಫಲ ಎಂದು ನನ್ನಂತೆ ಹಲವರು ಭಾವಿಸಿದ್ದರೆ ಅದೊಂದು ಆಶ್ಚರ್ಯದ ವಿಷಯುವಲ್ಲ.

ಯಾರೊಡನೆಯಾದರೂ ನಿಷ್ಕಲ್ಮಷವಾದ ಸೌಹಾರ್ದದಿಂದಲೇ ನಡೆದುಕೊಳ್ಳುವ ಅವರು ನನ್ನನ್ನು ಸದಾಕಾಲವೂ ಆತ್ಮೀಯತೆಯಿಂದ ಕಂಡಿದ್ದಾರೆನ್ನುವುದೊಂದು ವಿಶೇಷವಲ್ಲ. ಆದರೆ ಅವರು ತೋರಿದ ಆತ್ಮೀಯತೆಯ ಹಿಂದುಗಡೆಯಲ್ಲಿ ನನ್ನ ಬಗೆಯಲ್ಲಿಯ ಅವರ ಮನೋಭಾವದ ಇನ್ನೊಂದು ಪರಿಯನ್ನು ಗುರುತಿಸಿದ್ದೇನೆ. ಸಾಹಿತ್ಯಕ್ಕೆ ಸಂಬಂಧಿಸಿದ ಯಾವ ವಿಷಯುವೇ ಆಯಿತು; ವಿಮರ್ಶೆಗೆ ಸಂಬಂಧಿಸಿದ ಯಾವ ಸೂಕ್ಷ್ಮವೇ ಆಯಿತು; ಅಂಥ ಹಲವಾರು ವಿಷಯುಗಳನ್ನು ಕುರಿತು ಅವರು ನನ್ನೊಡನೆ ಮಾತನಾಡಿದಾಗ, ಚರ್ಚಿಸಿದಾಗ, ನಾನು ಹೇಳಿದ ಮಾತುಗಳನ್ನು ಅವರು ಒಪ್ಪದಿರುವಾಗಲೂ ತಾವು ಹೇಳುತ್ತಿರುವುದನ್ನು ಕೇಳುವ, ತಿಳಿದು ಅರ್ಥವಾಗಿಸಿಕೊಳ್ಳುವ 'ಅಧಿಕಾರ' ಕೆಲಮಟ್ಟಿಗಾದರೂ ನನ್ನಲ್ಲಿದೆ ಎಂಬ ಭರವಸೆಯನ್ನು ಎಂದಿಗೂ ಮೂಡಿಸಿದ್ದಾರೆ. ಇದರ ಪರಿಣಾಮವಾಗಿಯೇ ಇರಬಹುದು; ಕಾಲಕ್ರಮದಲ್ಲಿ ನನ್ನ ಅನೇಕ ವಿಮರ್ಶೆಯ ಧೋರಣೆಗಳನ್ನು, ಬೆಲೆಗಾಣ್ಕೆಯ ದೃಷ್ಟಿಯನ್ನು, ತಿದ್ದಿಕೊಳ್ಳುವುದು ಸಾಧ್ಯವಾಗಿದೆ. ಇಪ್ಪತ್ತೈದು ವರ್ಷಗಳ ಹಿಂದೆ ಒಂದು ಸಲ ಶಾಕುಂತಲ ನಾಟಕದಲ್ಲಿಯ ವಸ್ತುವಿನ್ಯಾಸಕ್ಕೂ ಅದರಲ್ಲಿ ಪಾತ್ರಗಳ ಕಲ್ಪನೆಗೂ ನಡುವಣ ಸಂಬಂಧದಲ್ಲಿ ನಮ್ಮ ಭಿನ್ನಾಭಿಪ್ರಾಯದ ಚರ್ಚೆ ಪರಿಷತ್ ಪತ್ರಿಕೆಯ ಪುಟಗಳವರೆಗೂ ಹಬ್ಬಿತು. ಅದರ ಫಲಶ್ರುತಿ ಎಂದರೆ ಅವರು ಆವಾಗ ಹೇಳಿದ್ದನ್ನು ನಾನು ಇಂದು ಪೂರ್ತಿಯಾಗಿ ಒಪ್ಪುವಂತಾಗಿದೆ. ಯಾವ ವಿಷಯುವನ್ನಾದರೂ ಅವರು ಇದು ಸರಿ, ಅಥವಾ ಇದೇ ಸರಿ, ಎಂದು ಎಂದಿಗೂ ಹೇಳುವುದಿಲ್ಲ. ಆದರೆ ವಿಷಯುವನ್ನು ಅವರು ಕಾಣುವ ಬಗೆಯನ್ನು ಗಮನಿಸಿದಾಗ ವಿಷಯುಕ್ಕೆ ಒಂದಲ್ಲ ಹತ್ತು ಮುಖಗಳಿರಬಹುದು ಎಂದು ಮನವರಿಕೆಯಾಗುತ್ತದೆ. ಆ ಹತ್ತು ಮುಖಗಳೂ ಒಂದೊಂದು ಬಗೆಯ ಸತ್ಯವನ್ನು ಹೇಳುತ್ತವೆ ಎನ್ನುವುದರ ಅರಿವಾಗುತ್ತದೆ. ಇದರಿಂದಾಗಿ ತಾತ್ಕಾಲಿಕವಾಗಿ ಒಂದು ತೀರ್ಮಾನ ಕಷ್ಟವಾಗುತ್ತದೆಯಾದರೂ ವಿಷಯುದ ಪರಿಜ್ಞಾನ ವಿಸ್ತರಿಸುತ್ತದೆ. ಅವರೊಡನೆ ಮಾತನಾಡುವ ಎಲ್ಲರಿಗೂ ಇದರ ಅನುಭವವಿದೆ. ಹತ್ತು ಮುಖಗಳನ್ನು ಹೇಳಿದರೂ ಹತ್ತನ್ನೂ ಅವರು ಸೌಹಾರ್ದದಿಂದ ಕಂಡಿರುತ್ತಾರೆ, ಕೇಳುವವರು ಕಾಣುವಂತೆ ಮಾಡುತ್ತಾರೆ, ಎನ್ನುವುದು ವಿಶೇಷ. ಇದು ಸಹೃದಯತೆಯ ಪರಮಾವಧಿ ಎಂದು ಕಾಣುತ್ತದೆ. ವ್ಯಕ್ತಿಗಳ ಬಗೆಯಲ್ಲಿ ಅವರು ತೋರುವ ಸೌಹಾರ್ದ ಚರ್ಚೆಗೆ ಬಂದ ಒಂದು ವಿಷಯುದ ಬಗೆಯಲ್ಲಿ, ಹಾಗೆಯೆ ವಿಮರ್ಶೆಗೊಳಗಾದ ಒಂದು ಕೃತಿಯ ಬಗೆ

ಯಲ್ಲಿ ಇದೇ ರೀತಿ ವ್ಯಕ್ತವಾಗುತ್ತದೆ. ಇಂಥದೊಂದು ನನ್ನ ಪುಸ್ತಕ ಹೊರಬರ ಲಿದೆ ಎಂದು ಸೂಚನೆ ಕೊಟ್ಟಾಗ ಅವರು "ಬರಲಿ, ನೋಡುವಾ, ಸರಿಯಾಗಿ ಅದಕ್ಕೆ ಚಾಕು ಹಾಕುತ್ತೇನೆ" ಎಂದು ಬಾಯಿಂದ ಹೇಳಿದರೂ ಹೊಸ ಪುಸ್ತಕವನ್ನು ಅವರಿಗೆ ಕೊಟ್ಟಾಗ ಮುಂದೆ ಮೂರೇ ದಿನಗಳಲ್ಲಿ ಅದರ ಸವಿಸ್ತಾರವಾದ ವಿಶ್ಲೇಷಣೆಯನ್ನೂ ವಿಮರ್ಶೆಯನ್ನೂ ಒಳಗೊಂಡ ಒಂದು ಕಾಗದ ಬರುತ್ತದೆ. ಅಂಥ ನಿಖರವಾದ ವಿಮರ್ಶೆಯ ಮಾತುಗಳು ವೈಯಕ್ತಿಕವಾದ ಪತ್ರವ್ಯವಹಾರಕ್ಕೆ ಮಾತ್ರ ಮೀಸಲು. ಇಂಥ ಅನೇಕ ಕಾಗದಗಳನ್ನು ಬರೆದು ನನ್ನ ಕೃತಿಗಳ ಇತಿಮಿತಿಗಳನ್ನು, ವಿಶೇಷ ಗಳನ್ನು ಎತ್ತಿ ತೋರಿಸಿದ್ದಾರೆ. ಪರೋಕ್ಷವಾಗಿ ಮೆಚ್ಚಿಗೆಯ ಮಾತುಗಳನ್ನು ಹೇಳಿ ನನ್ನ ಬರವಣಿಗೆ ಮುಂದುವರಿಯುವಂತೆ ಉತ್ತೇಜಿಸಿದ್ದಾರೆ. ಅದೂ ಒಂದು ಸ್ನೇಹ ಕಾರ್ಯವೇ.

ಆದರೆ ಅವರ ಸ್ನೇಹಭಾವ ಸಾಹಿತ್ಯಕ ಆಸಕ್ತಿಗಳಿಗೆ ಮಾತ್ರ ಸೀಮಿತವಾದು ದಲ್ಲ. ಒಂದೆರಡು ವಾರ ಅವರನ್ನು ನಾನು ಕಾಣದೆ ಹೋದಾಗ ಇದ್ದಕ್ಕಿದ್ದ ಹಾಗೆ ಚಾಮರಾಜಪೇಟೆಯಿಂದ ಮಲ್ಲೇಶ್ವರದವರೆಗೆ ಬಂದುಬಿಡುತ್ತಾರೆ. ಊಟ ಮಾಡಿ ಕೊಂಡು ಹೋಗಿ ಎಂದರೆ ಉತ್ತರ ಕರ್ನಾಟಕದ ಯಾವುದಾದರೊಂದು ತಿಂಡಿಯನ್ನು ಹೇಳಿ, ಅಂಥದನ್ನು ತಮ್ಮ ನಾಡ ಹಬ್ಬಗಳ ಸಂಚಾರ ಕಾಲದಲ್ಲಿ ಯಾರ ಮನೆಯಲ್ಲಿ ಎಂದು ತಿಂದದ್ದು ಎಂದು ಮುಂತಾಗಿ ಅದರ ರುಚಿವಿಶೇಷವನ್ನು ವಿವರವಾಗಿ ವಿಸ್ತ ರಿಸಿ, ಅಂಥದನ್ನು ಮಾಡಿಸಿದರೆ ಊಟಕ್ಕೆ ಒಪ್ಪುತ್ತಾರೆ. ತಿನ್ನುವುದು ಅಷ್ಟಕ್ಕೆ ಅಷ್ಟೆ. ಆದರೆ ಅದನ್ನು ಕುರಿತಾದ ರಸವತ್ತಾದ ವ್ಯಾಖ್ಯಾನ ತಿಂಡಿಗಿಂತಲೂ ರುಚಿಕರವಾಗಿ ರುತ್ತದೆ. ಇಂಥ ನೆನಹುಗಳು ಅವರಲ್ಲಿ ಲೆಕ್ಕವಿಲ್ಲದಷ್ಟು. ಎಂದೋ ಒಂದು ಸಲ ನಮ್ಮ ಮನೆಯಲ್ಲಿ ತಿಂದ ಹೂರಣದ ಹೋಳಿಗೆಯನ್ನು ನೆನೆದು ಒಂದು ಸಲ ಬೆಳಗಾವಿ ಯಲ್ಲಿ ಬೆಳಗಿನ ಜಾವ ಮನೆಗೆ ಬಂದು ಅಂದು ಮಧ್ಯಾಹ್ನ ಅಂಥ ಹೋಳಿಗೆಯಾಗ ಬೇಕು ಎಂದರು. ಅದನ್ನು ತಯಾರಿಸುವಲ್ಲಿ ನನ್ನ ತಾಯಿಯದು ಎತ್ತಿದ ಕೈ. ಅಂದು ಮಾಡಿಸಿಕೊಂಡು ತಿಂದ ಹೋಳಿಗೆಯ ಕಥೆಯನ್ನು ಇಂದಿಗೂ ಅವರು ನೆನೆ ಯುತ್ತಾರೆ. ತಿಂದದ್ದು ಎಂದಿಗೋ ಮಣ್ಣಾಗಿ ಹೋದರೂ ಸ್ನೇಹದಿಂದ ಮಾಡಿಸಿ ಕೊಂಡದ್ದು, ಮಾಡಿ ಹಾಕಿದ್ದು, ಚಿನ್ನದಂಥ ಒಂದು ಸ್ಮೃತಿಯಾಗಿ ಉಳಿದಿದೆ. ಇಂಥ ಸಂದರ್ಭಗಳು ನೂರಾರು ಮೂವತ್ತೇಳು ವರ್ಷಗಳ ಸಂಪರ್ಕಾನುಭವದು ದ್ದಕ್ಕೂ ಹರಡಿಕೊಂಡಿವೆ. ನನ್ನ ಬದುಕಿನಲ್ಲಿಯ ಒಂದು ಅತ್ಯಂತ ಕಷ್ಟದ ಸಂದರ್ಭ ದಲ್ಲಿ "ಇಂಥ ವರ್ತಮಾನವನ್ನು ನಾನು ನಿರೀಕ್ಷಿಸಿರಲಿಲ್ಲ. ಈ ದುಃಖ ನಿನ್ನ ಪಾಲಿಗೆ ಬರಬಾರದಿತ್ತು. ಆದರೇನು ಮಾಡುವುದು? ಧೈರ್ಯವಾಗಿ ಎದುರಿಸಬೇಕಷ್ಟೇ. ಅಂಥ ಗಟ್ಟಿತನ ನಿನ್ನಲ್ಲಿದೆ ಎಂಬ ಭರವಸೆ ನನಗಿದೆ" ಎಂದು ಬರೆದು ಕುಸಿಯ ಬಹುದಾಗಿದ್ದವ ಮತ್ತೆ ನಿಂತು ನಡೆಯುವಂತೆ ಮಾಡಿದರು. ಅಂಥವರ ಸ್ನೇಹ ಸೌಹಾರ್ದಗಳ ಪರಿಯನ್ನು ಏನೆಂದು ವರ್ಣಿಸುವುದು? ಫ್ರೆಂಡ್, ಫಿಲಾಸಫರ್

ಎಂಡ್ ಗೈಡ್ ಎಂಬ ಮಾತಿದೆ. ಅದೊಂದು ಸವಕಲು ಮಾತಾಗಿರಬಹುದು. ಆದರೆ ನನ್ನ ಅವರ ಸಂಬಂಧವನ್ನು ನಿರ್ದೇಶಿಸುವುದಕ್ಕೆ ಆ ಮಾತು ಸಾಕು. ಹೊಸ ಮಾತು ಉತ್ಪ್ರೇಕ್ಷೆಯಾಗಿ ಅರ್ಥವನ್ನು ಕಳೆದುಕೊಳ್ಳಬಲ್ಲದು. ಹಳೆಯ ಸಂಬಂಧವನ್ನು ಹಳೆಯ ಮಾತೇ ಹೇಳಲಿ. ಇಂಥವರಿಗೆ ಕೃತಜ್ಞತೆಯ ವಂದನೆಗಳನ್ನಲ್ಲದೆ ಬೇರೆ ಏನನ್ನು ಸಲ್ಲಿಸಬಹುದು?

ಮೇಲಿನ ಮಾತುಗಳು ವೈಯಕ್ತಿಕವಾದವುಗಳಾದರೂ ಅಂಥವೇ ಅಥವಾ ಇನ್ನೂ ಹೆಚ್ಚಿನ ಮಾತುಗಳನ್ನು ನಾಡಿನುದ್ದಗಲದಲ್ಲಿಯೂ ಇರುವ ಅವರ ನೂರಾರು ಸ್ನೇಹಿತರು, ಅಭಿಮಾನಿಗಳು ಹೇಳಿಯಾರು. ಹೇಳುತ್ತಾರೆ. ಅವರ ಪಾಠಕ್ರಮದ ವೈಖರಿಯನ್ನು ಸಾವಿರಾರು ವಿದ್ಯಾರ್ಥಿಗಳು ಇಂದಿಗೂ ನೆನೆದು ಕೊಳ್ಳುತ್ತಾರೆ. ಅವರ ಬರಹಗಳನ್ನು ಓದಿ ಅವುಗಳ ಹಿಂದೆ ಮಿಡಿಯುವ ನಿರ್ಮ ಲಾಂತಃಕರಣದ ಸೊಗಸನ್ನು ಪ್ರಭಾವವನ್ನು ಸಂತೋಷದಿಂದ ಸ್ಮರಿಸಿಕೊಳ್ಳುತ್ತಾರೆ. ಅವರ ವಿಷಯದಲ್ಲಿ ಒಳ್ಳೆಯದಲ್ಲದ ಒಂದು ಮಾತನ್ನು ಯಾರು ಹೇಳಿದ್ದನ್ನೂ ನಾನು ಕೇಳಿಲ್ಲ. ಸಾಹಿತ್ಯದ ಕೃಷಿ ವ್ಯಾಸಂಗಗಳಿಂದ, ಮಾನವ್ಯ ಸಂಸ್ಕೃತಿಯ ನೆಲೆ ಬೆಲೆ ಆಶೋತ್ತರಗಳಲ್ಲಿಯ ಅಚಲ ನಿಷ್ಠೆಯಿಂದ, ಚಿತ್ರ ಸಂಗೀತಾದಿ ಲಲಿತಕಲೆಗಳ ಸದಭಿರುಚಿಯ ಆರಾಧನೆಯಿಂದ, ಈ ಎಲ್ಲಕ್ಕೂ ಮಿಗಿಲಾಗಿ ಸದಾಕಾಲವೂ ಒಳ್ಳೆಯ ದಾದುದನ್ನು ಕುರಿತೇ, ಚೆಲುವಾಗಿರುವುದನ್ನು ಕುರಿತೇ ಚಿಂತಿಸುವ ಮನೋಧರ್ಮ ದಿಂದ ಒಂದು ಚಿತ್ತ ಪಾವನವಾಗಬಹುದಾದರೆ ಅಂಥ ಒಂದು ಪಾವನವಾದ ಚಿತ್ತ ವನ್ನು ಅವರ ಅಭಿಮಾನಿಗಳೆಲ್ಲರೂ ಅವರಲ್ಲಿ ಗುರುತಿಸಿದ್ದಾರೆ; ಅದರ ಒಂದು ಆವಿಷ್ಕಾರವಾದ ಸ್ನೇಹವನ್ನು ಕಂಡಿದ್ದಾರೆ, ಪಡೆದಿದ್ದಾರೆ. ಇಂಥ ಮಹನೀಯ ರೊಬ್ಬರು ತಮ್ಮ ಎಪ್ಪತ್ತೈದನೆಯ ವರ್ಷಕ್ಕೆ ಕಾಲಿರಿಸಿದ್ದರೂ ಎಂದಿನಂತೆ ತಮ್ಮ ವೈವಿಧ್ಯಪೂರ್ಣವಾದ ಸ್ನೇಹ ಕಾರ್ಯವನ್ನು ಸಾಹಿತ್ಯರಂಗದಲ್ಲಿ ಹೇಗೋ ಹಾಗೆ ತಮ್ಮ ಬದುಕಿನ ರಂಗದಲ್ಲಿ ಮುಂದುವರಿಸಿಕೊಂಡು ಹೋಗುತ್ತಿರುವುದು ಕನ್ನಡದ ಒಂದು ಪುಣ್ಯ ವಿಶೇಷವೆಂದೇ ಹೇಳಬೇಕು. ಅಂಥವರನ್ನು ಗೌರವಿಸಬೇಕೆಂದ ಈ ಸಂದರ್ಭದಲ್ಲಿ ಗೌರವ ಗ್ರಂಥದ ಸಂಪಾದಕನಾಗಿ ಪಾಲುಗೊಳ್ಳುವ ಅವಕಾಶಕ್ಕಾಗಿ ಸತ್ಕಾರ ಸಮಿತಿಗೆ ನಾನು ಕೃತಜ್ಞನಾಗಿದ್ದೇನೆ.

* * *

ಇಂಥ ಒಂದು ಸಂಭಾವನಾ ಗ್ರಂಥವನ್ನು ಸಿದ್ಧಪಡಿಸುವುದರಲ್ಲಿಯ ಕಷ್ಟಗಳೇ ನೆಂಬುದನ್ನು ಅಂಥದನ್ನು ಮಾಡಿದವರಿಗೆಯೆ ಗೊತ್ತು. ಅನೇಕರ ಸಹಕಾರ ಸಹಾಯ ಗಳಿಲ್ಲದೆ ಕೈಗೂಡುವ ಕೆಲಸವಿದಲ್ಲ. ವಿ.ಸೀ. ಅವರ ಬಗೆಯಲ್ಲಿಯ ತಮ್ಮ ಪ್ರೀತಿ ಅಭಿ ಮಾನಗಳಿಗಾಗಿ ಅನೇಕ ಸ್ನೇಹಿತರು ಈ ಗ್ರಂಥಕ್ಕಾಗಿ ಲೇಖನಗಳನ್ನು ಬರೆದುಕೊಟ್ಟಿ ದ್ದಾರೆ. ಇನ್ನು ಕೆಲವರು ಮೊದಲೇ ಬರೆದುದನ್ನು ಒದಗಿಸಿಕೊಟ್ಟಿದ್ದಾರೆ. ಹಿರಿಯರು ತಮ್ಮ ಹರಕೆ ಹಾರೈಕೆಗಳನ್ನು ದಯಪಾಲಿಸಿದ್ದಾರೆ. ಇನ್ನೂ ಅನೇಕರು ಬರೆಯ

ಬಹುದಾಗಿತ್ತು. ಆದರೆ ಗ್ರಂಥದ ಅರ್ಪಣೆಯ ವಿಷಯದಲ್ಲಿ ಹೆಚ್ಚಿನ ವಿಳಂಬವನ್ನು ತಪ್ಪಿಸುವ ದೃಷ್ಟಿಯಿಂದ ಅವರಿಗಾಗಿ ಕಾಯುವುದು ಬೇಡವೆನಿಸಿತು. ಒಟ್ಟಿನಲ್ಲಿ ಇಲ್ಲಿ ಸಂಕಲಿತವಾದ ಲೇಖನಗಳ ಮುಖಾಂತರ ವಿ. ಸೀ. ಅವರ ಬಹುಮುಖವಾದ ಸಾಹಿತ್ಯ ಕಾರ್ಯದ ಸಹೃದಯ ಪರಿಚಯದೊಂದಿಗೆ ಜನ ಅವರನ್ನು ಕುರಿತಾಗಿ ಇರಿಸಿಕೊಂಡ ಪ್ರೀತಿ, ವಿಶ್ವಾಸ, ಗೌರವ, ಆದರಗಳ ಒಂದು ಇಣುಕುನೋಟ ಸಿಕ್ಕು ವಂತಾದರೆ ಸಂಪಾದಕನ ಕೆಲಸ ಸಾರ್ಥಕ. ಇದೊಂದು ಪ್ರೀತಿಗಾಗಿ ಮಾಡಿದ ಕೆಲಸ. ಪ್ರೀತಿಯಿಂದ ಮಾಡಿದ್ದು. ಲೋಪದೋಷಗಳಿಲ್ಲದಿಲ್ಲ. ಇಷ್ಟನ್ನಾದರೂ ಸಾಧ್ಯ ವಾಗಿಸುವಲ್ಲಿ ಸಹಕರಿಸಿದ ಲೇಖಕರೆಲ್ಲರಿಗೂ ಹಾರ್ದಿಕವಾದ ಕೃತಜ್ಞತೆಗಳು.

ಬೆಂಗಳೂರಿನ ಇಂಡಿಯ ಬುಕ್ ಹೌಸ್‌ನವರು ಈ ಗ್ರಂಥವನ್ನು, ಅಚ್ಚು ಹಾಕಿಸಿ, ಸಿದ್ಧಪಡಿಸಿ, ಅದಕ್ಕೆ ಸಂಬಂಧಿಸಿದ ಎಲ್ಲ ವೆಚ್ಚವನ್ನು ತಾವೇ ವಹಿಸಿ ಗ್ರಂಥದ ಒಂದು ಸಾವಿರ ಪ್ರತಿಗಳನ್ನು ತಮ್ಮ ಕೊಡುಗೆ ಎಂದು ಸತ್ಕಾರ ಸಮಿತಿಗೆ ಒಪ್ಪಿಸಿ ದ್ದಾರೆ. ಅವರ ಔದಾರ್ಯವನ್ನು ಎಷ್ಟು ಕೊಂಡಾಡಿದರೂ ಸಾಲದು. ಇದನ್ನು ಸಾಧ್ಯವಾಗಿಸಿದವರು ವಿ. ಸೀ. ಅವರ ವಿಷಯದಲ್ಲಿ ತುಂಬ ಪ್ರೀತಿವಿಶ್ವಾಸಗಳನ್ನಿರಿಸಿ ಕೊಂಡ ಆ ಸಂಸ್ಥೆಯ ಅಧಿಕಾರಿಗಳಾದ ಶ್ರೀ ಕಾಮತ್ ಮತ್ತು ಶ್ರೀ ಅನಂತರಾಮ್ ಅವರು. ಅವರಿಬ್ಬರಿಗೆ ಮತ್ತು ಅವರ ಸಂಸ್ಥೆಗೆ ಸಮಿತಿಯ ಪರವಾಗಿ ಅನಂತ ವಂದನೆಗಳು. ಮುದ್ರಣ ಕಾರ್ಯವನ್ನು ಕೇವಲ ಮೂರು ವಾರಗಳ ಅವಧಿಯಲ್ಲಿ ಮುಗಿಸಿಕೊಟ್ಟ ಐ ಬಿ ಎಚ್ ಪ್ರಕಾಶನ ಪ್ರಿಂಟರಿಯ ಕೆಲಸಗಾರರಿಗೆ ಎಷ್ಟು ಕೃತಜ್ಞತೆಯನ್ನು ಹೇಳಿದರೂ ಸಾಲದು. ಹಾಗೆಯೆ ಈ ಕೆಲಸದಲ್ಲಿ ನೂರು ವಿಧವಾಗಿ ನನ್ನೊಡನೆ ಸಹಕರಿಸಿ ಸಹಾಯ ಮಾಡಿದ ಮಿತ್ರರನೇಕರಿಗೆ, ಅದರಲ್ಲಿಯೂ ವಿಶೇಷ ವಾಗಿ ಮೊದಲಿನಿಂದ ಕೊನೆಯವರೆಗೂ ಆಸ್ಥೆವಹಿಸಿ ದುಡಿದ ಶ್ರೀ ರಾಮಕೃಷ್ಣ ಐತಾಳರಿಗೆ, ಹಾಗೂ ಮಾರ್ಗದರ್ಶಕರಾಗಿ ಸಲಹೆ ಸೂಚನೆಗಳನ್ನಿತ್ತ ಸತ್ಕಾರ ಸಮಿ ತಿಯ ಅಧ್ಯಕ್ಷರೂ ಹಿರಿಯರೂ ಸನ್ಮಾನ್ಯರೂ ಆದ ಶ್ರೀ ನಿಟ್ಟೂರು ಶ್ರೀನಿವಾಸರಾಯ ರಿಗೆ ನಾನು ತುಂಬಾ ಕೃತಜ್ಞನಾಗಿದ್ದೇನೆ.

ಎ. ಎಂ. ಇನಾಂದಾರ್

# ಪರಿವಿಡಿ

## ಭಾಗ—೧ ವ್ಯಕ್ತಿತ್ವ



## ಭಾಗ—೨ ಕೃತಿದರ್ಶನ



## ಭಾಗ—೩ ಹರಕೆ–ಹಾರೈಕೆ



ಹಿರಿಕಿರಿಯರ ಮಧ್ಯದಲ್ಲಿ

# ವಿ. ಸೀ.

## ೧

**ವಿ. ಸೀ.** ಅವರ ಬಗೆಗೆ ವಿವರಗಳನ್ನು ಸಂಗ್ರಹಿಸುವುದು ಸುಲಭವಲ್ಲ. ಅವರು ಸ್ವಂತ ವಿಷಯಗಳ ಸುದ್ದಿ ಎತ್ತುವುದಿಲ್ಲ; ಅಂಥ ಪ್ರಶ್ನೆಗಳಿಗೂ ಅವಕಾಶ ಕೊಡುವುದಿಲ್ಲ. ಅವುಗಳನ್ನು ಕಟ್ಟಿಕೊಂಡು ಆಗಬೇಕಾದ್ದೇನು ಅನ್ನುತ್ತಾರೆ.

ವಿ. ಸೀ. ಅವರ ತಂದೆಯುವರಿದ್ದದ್ದು ಬೆಂಗಳೂರು ಜಿಲ್ಲೆಯ ಹೊಸಕೋಟೆ ತಾಲೂಕಿನ ದೊಡ್ಡಹುಲ್ಲೂರಿನಲ್ಲಿ; ಅದೇ ಜಿಲ್ಲೆಯ ದೇವನಹಳ್ಳಿ ತಾಲೂಕಿನ ಬೂದಿಗೆರೆ ಅವರ ತಾಯಿಯುವರ ಸ್ಥಳ. ಅಲ್ಲಿಗಲ್ಲಿಗೆ ಸುಮಾರು ೮ ಮೈಲಿ. ೨–೧೦–೧೮೯೯ ರಲ್ಲಿ ಬೂದಿಗೆರೆಯಲ್ಲಿ ವಿ. ಸೀ. ಅವರ ಜನನ. ಮನೆಯುವರು ಆಮೇಲೆ ಬೆಂಗಳೂರಿಗೆ ಬಂದು ನೆಲಸಿದರು.

೧೯೦೭ ರಿಂದ ೧೯೧೦ ರ ವರೆಗೆ ಚಾಮರಾಜಪೇಟೆಯ ಮ್ಯುನಿಸಿಪಲ್ ಪ್ರಾಥಮಿಕ ಶಾಲೆಯಲ್ಲಿ, ೧೯೧೦ ರಿಂದ ೧೯೧೩ ರ ವರೆಗೆ ಕೋಟೆ ಎ. ವಿ. ಶಾಲೆಯಲ್ಲಿ, ಮತ್ತು ೧೯೧೩ ರಿಂದ ೧೯೧೭ ರ ವರೆಗೆ ಸರ್ಕಾರಿ ಪ್ರೌಢಶಾಲೆಯಲ್ಲಿ ಅವರ ವಿದ್ಯಾಭ್ಯಾಸ ನಡೆಯಿತು; ೧೯೧೭ ರಲ್ಲಿ ಮೈಸೂರು ಮಹಾರಾಜ ಕಾಲೇಜಿನ ಮೆಟ್ಟಲು ಹತ್ತಿದರು; ೧೯೨೦ ರಲ್ಲಿ ಅರ್ಥಶಾಸ್ತ್ರ, ರಾಜ್ಯಶಾಸ್ತ್ರ ಮತ್ತು ದರ್ಶನಗಳಲ್ಲಿ ಸರ್ ಶೇಷಾದ್ರಿ ಬಂಗಾರದ ಪದಕದೊಂದಿಗೆ ಬಿ. ಎ. ಪದವಿಯನ್ನೂ, ೧೯೨೨ ರಲ್ಲಿ ಅರ್ಥಶಾಸ್ತ್ರದಲ್ಲಿ ಎಂ.ಎ. ಪದವಿಯನ್ನೂ ಗಳಿಸಿದರು. ಕಾಲೇಜಿನಲ್ಲಿ ಓದುತ್ತಿರುವಾಗಲೇ ಶಾರದಾವಿಲಾಸ ಪ್ರೌಢಶಾಲೆಯಲ್ಲಿ ಉಪಾಧ್ಯಾಯರಾಗಿ ಕೆಲಸ ಮಾಡಿದರು. ಓದು ಮುಗಿದ ಮೇಲೆ ಕೆಲವು ತಿಂಗಳ ಮಟ್ಟಿಗೆ–ಎಂದರೆ ೧೯೨೨ ರ ಮೇ ತಿಂಗಳಿನಿಂದ ಅಕ್ಟೋಬರ್ ತಿಂಗಳವರೆಗೆ – ಮುಂಬೈನಲ್ಲಿ ಎಲ್. ಎಲ್. ಬಿ. ಗೆ ವ್ಯಾಸಂಗ ಮಾಡುತ್ತ, ಡೆಪ್ಯುಟಿ ಕಂಟ್ರೋಲರ್ ಆಫ್ ಕರೆನ್ಸಿ ಕಛೇರಿಯಲ್ಲಿ ನೌಕರಿ ಮಾಡಿದರು. ೧೯೨೩ ರಲ್ಲಿ ಮೈಸೂರಿಗೆ ಹಿಂದಿರುಗಿ ೧೯೨೮ ರ ವರೆಗೆ ಮತ್ತೆ ಶಾರದಾವಿಲಾಸ ಪ್ರೌಢಶಾಲೆಯಲ್ಲಿ ಉಪಾಧ್ಯಾಯರಾಗಿ ಮುಂಬರಿದರು.

೧೯೨೮ರ ಹೊತ್ತಿಗೆ ಮೈಸೂರು ವಿಶ್ವವಿದ್ಯಾನಿಲಯದಲ್ಲಿ ಕನ್ನಡ ಬೋಧ

ನೆಯ ಕ್ರಮವನ್ನು ಆಧುನಿಕಗೊಳಿಸುವ ಒಂದು ಹೊಸ ಯೋಜನೆ ರೂಪುಗೊಂಡಿತು; ಆಗ ವಿ. ಸೀ. ಬೆಂಗಳೂರಿನ ಇಂಟರ್ಮೀಡಿಯೆಟ್ ಕಾಲೇಜಿನಲ್ಲಿ ಕನ್ನಡ ಅಧ್ಯಾಪಕರಾಗಿ ನೇಮಕಗೊಂಡರು. ಮೈಸೂರು ಮಹಾರಾಜ ಕಾಲೇಜಿನಲ್ಲಿ ಕನ್ನಡ ಎಂ. ಎ. ತರಗತಿ ಆರಂಭವಾದದ್ದು ಆಗಲೇ ಎಂಬುದನ್ನು ನಾವಿಲ್ಲಿ ನೆನೆಯಬಹುದು.

೧೯೨೮ ರಿಂದ ೧೯೪೨ ರ ವರೆಗೆ ಬೆಂಗಳೂರು ಇಂಟರ್ಮೀಡಿಯೆಟ್ ಮತ್ತು ಸೆಂಟ್ರಲ್ ಕಾಲೇಜುಗಳಲ್ಲಿ ಕನ್ನಡದ ಅಧ್ಯಾಪಕರಾಗಿ, ೧೯೪೩ ರಿಂದ ೧೯೪೮ ರ ವರೆಗೆ ಮೈಸೂರು ಮಹಾರಾಜ ಕಾಲೇಜಿನಲ್ಲಿ ಕನ್ನಡದ ಉಪಪ್ರಾಧ್ಯಾಪಕರಾಗಿ, ೧೯೪೮ ರಿಂದ ೧೯೫೦ ರ ವರೆಗೆ ಚಿಕ್ಕಮಗಳೂರಿನ ಇಂಟರ್ಮೀಡಿಯೆಟ್ ಕಾಲೇಜಿನ ಸೂಪರಿಂಟೆಂಡೆಂಟಾಗಿ, ೧೯೫೦ ರಿಂದ ೧೯೫೫ ರ ವರೆಗೆ ಮತ್ತೆ ಬೆಂಗಳೂರು ಸೆಂಟ್ರಲ್ ಕಾಲೇಜಿನಲ್ಲಿ ಕನ್ನಡ ವಿಭಾಗದ ಮುಖ್ಯಸ್ಥರಾಗಿ ಕೆಲಸ ಮಾಡಿದ ವಿ.ಸೀ. ತಮ್ಮ ಸೇವೆಯ ಕಡೆಯ ದಿನದತನಕ ಪಾಠಹೇಳುತ್ತಲೇ ಇದ್ದು ನಿವೃತ್ತರಾದರು.

ಆ ನಿವೃತ್ತಿ ಒಂದು ಬಗೆಯ ಸೇವೆಯಿಂದ ಇನ್ನೊಂದಕ್ಕೆ ಬಿಟ್ಟುಕೊಟ್ಟಿತೇ ಹೊರತು, ವಿಶ್ರಾಂತಿಯು ಆರಾಮಪೀಠವಾಗಲಿಲ್ಲ. ಗಡಿಯಾರದ ಮುಳ್ಳನ್ನು ಹಠಾತ್ತಾಗಿ ನಿಲ್ಲಿಸಿದರೆ ಕಾಲದ ಓಟ ನಿಲ್ಲುವುದಿಲ್ಲ. ಕ್ರಿಯಾವಾಹಿನಿ ಬತ್ತಿಹೋಗುವುದಿಲ್ಲ. ನಿವೃತ್ತಿಯ ಮಾರನೆಯ ಬೆಳಗಾಗ ನಾನು ಅವರನ್ನು ಕಂಡಿದ್ದೆ; ಅವರು ಇನ್ನೂ ಕಾಲೇಜಿಗೆ ಹೊರಡುವ ಅವಸರದಲ್ಲಿದ್ದಂತೆಯೇ ನನಗೆ ತೋರಿತು !

ವಿ. ಸೀ. ೧೯೫೬ ರಲ್ಲಿ ಆಕಾಶವಾಣಿಯ ಬೆಂಗಳೂರು ಕೇಂದ್ರದ ಭಾಷಣ ವಿಭಾಗದ ಉತ್ಪಾದಕರಾಗಿ ನೇಮಕಗೊಂಡು ೧೯೫೮ ರ ವರೆಗೆ ಕೆಲಸ ಮಾಡಿ ಹೊರಬಂದರು. ೧೯೬೪ ರಿಂದ ೧೯೬೮ ರ ವರೆಗೆ ಹೊನ್ನಾವರದ ಪ್ರಥಮ ದರ್ಜೆ ಕಾಲೇಜಿನ ಮೊತ್ತಮೊದಲನೆಯ ಪ್ರಿನ್ಸಿಪಾಲ್ ಆಗಿ ದುಡಿದು ಆ ಹೊಸ ಕಾಲೇಜಿಗೆ ಭದ್ರವಾದ ತಳಹದಿಯನ್ನು ಹಾಕಿದರು.

ತಮ್ಮ ಉಪಾಧ್ಯಾಯ ವೃತ್ತಿಗೇ ಅವರು ಆದ್ಯ ಗಮನವನ್ನು ಕೊಟ್ಟರೂ, ೧೯೩೯ ರಿಂದ ೧೯೪೨ ರ ವರೆಗೆ 'ಕನ್ನಡ ನುಡಿ' 'ಪರಿಷತ್ಪತ್ರಿಕೆ'ಗಳ ಸಂಪಾದಕರಾಗಿ, ೧೯೪೩ ರಿಂದ ೧೯೪೭ ರ ವರೆಗೆ 'ಪ್ರಬುದ್ಧ ಕರ್ಣಾಟಕ'ದ ಸಂಪಾದಕರಾಗಿ, ಮತ್ತೆ ೧೯೫೫ ರಿಂದ ೧೯೫೬ ರ ವರೆಗೆ ಪರಿಷತ್ಪತ್ರಿಕೆಯ ಸಂಪಾದಕರಾಗಿ ಸೇವೆ ಸಲ್ಲಿಸಿದರು. ಪಿ. ಈ. ಎನ್., ಸಾಹಿತ್ಯ ಅಕಾಡಮಿ, ಜ್ಞಾನಪೀಠ ಮುಂತಾದ ಸಭೆ ಸಮಿತಿಗಳಲ್ಲಿ ಭಾಗವಹಿಸಿ ಕನ್ನಡ ವರ್ಚಸ್ಸನ್ನು ಬೀರಿದರು.

ಕನ್ನಡ ಸಾಹಿತ್ಯಪರಿಷತ್ತಿಗೂ ವಿ. ಸೀ. ಅವರಿಗೂ ಇರುವ ಸಂಬಂಧ ತುಂಬಾ ಹಿಂದಿನಿಂದ ಬಂದದ್ದು. ಪರಿಷತ್ತನ್ನು ಕಟ್ಟಿದ ಮಹಾನುಭಾವರಾದ ಬೆಳ್ಳಾವೆ ವೆಂಕಟನಾರಣಪ್ಪ, ಬಿ. ಎಂ. ಶ್ರೀ., ಡಿ. ವಿ. ಜಿ., ಮಾಸ್ತಿ ಮುಂತಾದವರೊಂದಿಗೆ ಅವರು ಪರಿಷತ್ತಿಗಾಗಿ ಶ್ರದ್ಧೆಯಿಂದ ದುಡಿದಿದ್ದಾರೆ. ೧೯೩೧ ರಲ್ಲಿ ಕಾರವಾರದಲ್ಲಿ

ಸೇರಿದ್ದ ಕವಿಸಮ್ಮೇಳನದ ಅಧ್ಯಕ್ಷತೆಯೂ, ೧೯೫೩ ರಲ್ಲಿ ಕುಮಟಾದಲ್ಲಿ ಜರುಗಿದ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷತೆಯೂ ಅವರಿಗಾಗಿ ನಮ್ಮ ಜನತೆ ಮನ ವೊಲಿದು ಸಲ್ಲಿಸಿದ ಪ್ರಮುಖ ಗೌರವಗಳು.

ಈ ನಾಡಿನ ಮತ್ತು ಹೊರನಾಡಿನ ಅನೇಕ ಪತ್ರಿಕೆಗಳಲ್ಲಿ ವಿ. ಸೀ. ಅವರು ಬರೆದಿರುವ ಗ್ರಂಥಾವಲೋಕನಗಳೂ ವಿಮರ್ಶಾತ್ಮಕ ಲೇಖನಗಳೂ ಅವರ ಸದಭಿ ರುಚಿಗೂ ಬಹುಮುಖ ವಿದ್ವತ್ತಿಗೂ ಸಾಕಷ್ಟು ಪುರಾವೆಯಾಗಿವೆ.

ವಿ. ಸೀ. ಅವರ ಜೀವನದ ಹಲವು ಸಾಧನೆಗಳಲ್ಲಿ ಅವರ ಸುದೀರ್ಘ ಉಪಾ ಧ್ಯಾಯಗಿರಿಯೇ ಅತ್ಯುನ್ನತವಾದದ್ದು. ಏಕೆಂದರೆ, ಇದು ಕೇವಲ ಜೀವನೋಪಾಯ ವಾಗದೆ, ಜೀವನದ ಧ್ಯೇಯವೇ ಆಗಿತ್ತು. ತಾವೇ ಹಿರಿಯ ಉಪಾಧ್ಯಾಯರಾಗಿ ದ್ದರೂ, ತಮಗೆ ಪಾಠ ಹೇಳಿದ ಗುರುಗಳಾದ ಡಾ. ಸಿ. ಆರ್. ರೆಡ್ಡಿ, ಡಾ. ರಾಧಾ ಕೃಷ್ಣನ್, ಪ್ರೊ. ಎನ್. ಎಸ್. ಸುಬ್ಬರಾವ್, ಬಿ. ಎಂ. ಶ್ರೀ., ಹಿರಿಯಣ್ಣನವರು ಮುಂತಾದ ಮಹನೀಯರನ್ನು ಅವರು ಸ್ಮರಿಸದ ದಿನವಿಲ್ಲ; ಮತ್ತು ಹಿರಿಯ ಮಿತ್ರ ರಾದ ಎಂ. ಆರ್. ಶ್ರೀನಿವಾಸಮೂರ್ತಿಗಳನ್ನೂ, ಎ. ಆರ್. ಕೃಷ್ಣಶಾಸ್ತ್ರಿಗಳನ್ನೂ, ಟಿ. ಎಸ್. ವೆಂಕಣ್ಣಯ್ಯನವರನ್ನೂ ನೆನೆಯುತ್ತ, ಅಂಥವರೊಂದಿಗೆ ಕೆಲಸ ಮಾಡು ವಂತಾದ್ದು ತಮ್ಮ ಪುಣ್ಯವೆಂದುಕೊಳ್ಳುತ್ತಾರೆ.

ವಿ. ಸೀ. ಅವರು ಸಹಸ್ರಾರು ಜನ ವಿದ್ಯಾರ್ಥಿಗಳಿಗೆ ಪಾಠಹೇಳಿದ್ದಾರೆ. ನಾಡಿ ನೊಳಗೂ ನಾಡ ಹೊರಗೂ ಅವರ ವಿದ್ಯಾರ್ಥಿಗಳಿದ್ದಾರೆ. ವಿ. ಸೀ. ಅವರ ಬೋಧನ ಕ್ರಮವನ್ನು ಅವರು ಕೃತಜ್ಞತೆಯಿಂದ ನೆನೆಯುತ್ತಾರೆ. ನೀವು ಪರವೂರುಗಳಿಗೆ ಹೋದಾಗ ಅವರ ಶಿಷ್ಯರು ನಿಮಗೆ ಸಿಕ್ಕಿದರೆ, ಅವರು ಮೊದಲು ಮಾತಾಡುವುದು ತಮ್ಮ ಮೇಷ್ಟರ ವಿಷಯವನ್ನೇ.

ಕಾಲೇಜಿನಲ್ಲಿ ಹೇಳಿಕೊಟ್ಟದ್ದು ಸಾಲದೆಂಬಂತೆ, ಅವರ ವಿದ್ಯಾರ್ಥಿಗಳಲ್ಲಿ ಕೆಲ ವರು ಆಗಾಗ ಮನೆಗೂ ಬಂದು ಪಠ್ಯ ವಿಷಯಗಳಲ್ಲಿನ ಸಂದೇಹಗಳನ್ನು ನಿವಾರಿಸಿ ಕೊಳ್ಳುತ್ತಿದ್ದರು; ಅಷ್ಟೇ ಅಲ್ಲ. ಹಸಿರು ಬಯಲಿನ ಮರದ ನೆರಳಲ್ಲಿ ಕೂಡ ಪಾಠ ಪ್ರವಚನ ನಡೆಯುತ್ತಿತ್ತು. ಹಿಂದಿನ ಕಾಲದ ಗುರು–ಶಿಷ್ಯ ಸಂಬಂಧವನ್ನಲ್ಲಿ ಕಾಣ ಬಹುದಿತ್ತು.

ವಿ. ಸೀ. ಅವರು ಇಂಗ್ಲಿಷಿನ ಕವನವನ್ನಾಗಲಿ ಕನ್ನಡದ್ದನ್ನಾಗಲಿ ತರಗತಿಯಲ್ಲಿ ಓದುತ್ತಿದ್ದ ಅಪೂರ್ವ ಧಾಟಿಯನ್ನು ಅವರ ವಿದ್ಯಾರ್ಥಿಗಳು ಇನ್ನೂ ನೆನೆಯುತ್ತಾರೆ. ಅದೊಂದು ವಿಶೇಷ ರೀತಿಯ ಗಮಕ ಕಲೆ. ಆಳವಾದ ಅರಿವಿನಿಂದಲೂ, ಆತ್ಮೀ ಯತೆಯಿಂದಲೂ ಅದು ಅವರಿಗೆ ಸಿದ್ಧಿಸಿದೆ.

ಕಾಲೇಜಿನಲ್ಲಿ ಶಿಸ್ತನ್ನು ಕಟ್ಟುನಿಟ್ಟಾಗಿ ವಿಧಿಸುತ್ತಿದ್ದ ಈ ಅಧ್ಯಾಪಕರು ಆ ಆವರಣವನ್ನು ಬಿಟ್ಟ ಒಡನೆಯೇ ಎಷ್ಟು ಸುಲಭರಾಗಿಬಿಡುತ್ತಿದ್ದರೆನ್ನುವುದು ಅವರ ವಿದ್ಯಾರ್ಥಿಗಳಿಗೆಲ್ಲ ಸುಪರಿಚಿತ.

ಅಧ್ಯಾಪಕರಾಗಿದ್ದ ವಿ. ಸೀ. ಅವರನ್ನು ಒಮ್ಮೆ ತರಗತಿಯ ಒಂದು ವಿಭಾಗದಿಂದ ಇನ್ನೊಂದಕ್ಕೆ ಬದಲಾಯಿಸಿದಾಗ, ವಿದ್ಯಾರ್ಥಿಗಳು ತಮಗೆ ಅವರೇ ಬೇಕೆಂದು ಬೊಬ್ಬೆಹಾಕಿ ಚಳವಳಿ ಹೂಡಿದ್ದುದಾಗಿ ಅವರ ಹಳೆಯ ವಿದ್ಯಾರ್ಥಿಗಳಲ್ಲಿ ಒಬ್ಬರು ತಿಳಿಸಿದ್ದಾರೆ.

ವಿಶ್ವವಿದ್ಯಾನಿಲಯದಲ್ಲಿ ಕನ್ನಡದ ಅಧ್ಯಾಪಕರಾಗಿ, ಉಪಪ್ರಾಧ್ಯಾಪಕರಾಗಿ ಕೆಲಸ ಮಾಡುತ್ತಿದ್ದ ಕಾಲದಲ್ಲಿ ಕರ್ಣಾಟಕ ಸಂಘಗಳೊಂದಿಗೆ ನಿಕಟ ಸಂಪರ್ಕವನ್ನಿಟ್ಟುಕೊಂಡಿದ್ದರು. ಅವುಗಳ ಕೆಲಸ ಕಾರ್ಯಗಳು ಚೆನ್ನಾಗಿ ನಡೆಯುವಂತೆ, ವಿದ್ಯಾರ್ಥಿಗಳಿಗೆ ಉತ್ತೇಜನ ಲಭಿಸುವಂತೆ ನೋಡಿಕೊಂಡರು. ಅವರದೊಂದು ಕವನ ಸಂಗ್ರಹವನ್ನು ತನ್ನ ವತಿಯಿಂದ ಪ್ರಕಟಿಸಬೇಕೆಂದು ಬೆಂಗಳೂರ ಸೆಂಟ್ರಲ್ ಕಾಲೇಜ್ ಕರ್ಣಾಟಕ ಸಂಘ ಎಷ್ಟು ಬಯಸಿದರೂ ತಾವು ಅದರ ಕಾರ್ಯನಿರ್ವಾಹಕ ಮಂಡಳಿಯಲ್ಲಿರುವತನಕ ವಿ. ಸೀ. ಅದಕ್ಕೆ ಒಪ್ಪಲಿಲ್ಲ; ಅವರು ನಿವೃತ್ತರಾದ ಮೇಲೆ ಆ ಬಯಕೆ ಸಂದಿತು. ಇಂಥ ವಿಚಾರಗಳಲ್ಲಿ ಅವರು ಎಷ್ಟು ಸೂಕ್ಷ್ಮವಾಗಿದ್ದರು ಎಂಬುದಕ್ಕೆ ಇದೊಂದು ನಿದರ್ಶನ.

ಇವೆಲ್ಲ ಈ ಕನ್ನಡದ ಮೇಷ್ಟರ ವ್ಯಕ್ತಿತ್ವದ ಮೇಲೆ ಬೆಳಕು ಹರಿಸುವ ಕೆಲವು ಸಂಗತಿಗಳು. ಆದರೆ ಅರ್ಥಶಾಸ್ತ್ರದಲ್ಲಿ ಎಂ. ಎ. ಪದವಿ ಗಳಿಸಿದವರೊಬ್ಬರು ತನ್ನ ಕಾಲೇಜ್‌ಗಳಲ್ಲಿ ೨೭ ವರುಷಗಳಕಾಲ ಕನ್ನಡದ ಉಪಾಧ್ಯಾಯರಾಗಿ ದುಡಿದು ಎಲ್ಲರ ಪ್ರೀತಿ ಗೌರವಗಳನ್ನೂ ಗಳಿಸಿದ್ದು ಬಹುಶಃ ವಿಶ್ವವಿದ್ಯಾನಿಲಯದ ಇತಿಹಾಸದಲ್ಲೇ ಒಂದು ವಿಶೇಷ ಸಂಗತಿ.

## ೨

ಸಾವಿರ ಜನ ಕಿಕ್ಕಿರಿದ ಸಭೆಯಲ್ಲಿ ಕೂಡ ವಿ. ಸೀ. ಅವರನ್ನು ಕಂಡು ಹಿಡಿಯುವುದು ಸುಲಭ. ಅವರ ಬಿಳಿಯ ರುಮಾಲೇ – ಮೈಸೂರು ರುಮಾಲೇ–ನಮ್ಮನ್ನು ಆಕರ್ಷಿಸುತ್ತದೆ. ಅವರು ಅದಿಲ್ಲದೆ ಹೊರಗೆ ಬರುವುದಿಲ್ಲ. ಎಂಥ ಗಾಳಿ ಬೀಸಿದರೂ ಅದನ್ನು ಬಿಡುವುದಿಲ್ಲ. ಜರತಾರಿ ರುಮಾಲೂ ಅದೇ ಜಾತಿಗೆ ಸೇರಿದ್ದಾದರೂ ಅವರು ಅದನ್ನು ಆಡಂಬರದ್ದೆಂದು ನಿರಾಕರಿಸಿದ್ದಾರೆ. ನಮ್ಮ ರಾಷ್ಟ್ರದಲ್ಲಿ ಸನ್ಮಾನ್ಯರಾಗಿರುವ ಮಹನೀಯರಲ್ಲಿ ಕೆಲವರು ರುಮಾಲನ್ನು ಇಟ್ಟುಕೊಂಡಿದ್ದಾರೆ. ವಿ. ಸೀ. ಅವರ ಗುರುಗಳೂ ರುಮಾಲು ಧರಿಸುತ್ತಿದ್ದರು.

ವಿ. ಸೀ. ಅವರು ಹಿಂದಿನ ಶತಮಾನದಲ್ಲೂ ಮೂರು ತಿಂಗಳು ಹಾಜರಿ ಹಾಕಿರುವುದರಿಂದ ಅವರನ್ನು ಪೂರ್ತಿ ಈ ಶತಮಾನಕ್ಕೇ ಜಮಾ ಹಾಕುವುದು ತಪ್ಪಾದೀತು! ಹಾಗೆಂದು ನಾವು ವಾಸ್ತವಾಂಶಗಳನ್ನು ಗಮನಿಸದಿರುವುದೂ ಕಷ್ಟ. ಅವರ ಮನೆಯೊಳಗಿರುವ ಪುಸ್ತಕಗಳ ದುರ್ಗವೂ, ದೇಶ ವಿದೇಶಗಳ ಪತ್ರಿಕೆಗಳ

ಜೋಡಣೆಯೂ ಅವರು ಖಂಡಿತವಾಗಿ ನಮ್ಮ ಕಾಲದವರೆಂಬುದಕ್ಕೆ ಸಾಕ್ಷಿ. ಯಾವ ಯಾವ ದೇಶದಲ್ಲಿ ಏನೇನಾಗಿದೆ, ಆಗುತ್ತಿದೆ, ಆಗಬಹುದು – ಇವೆಲ್ಲದರ ಪರಿಚಯ ಅವರಿಗೆ ಬೇಕು. ಹೀಗೆ ಎಲ್ಲ ಕಡೆಗಳಿಂದ ಬರುವ ಬೆಳಕಿಗೂ ಅವರಲ್ಲಿ ಸ್ವಾಗತ. ಯಾವ ಸಂಕುಚಿತ ಭಾವನೆಯಾಗಲೀ ಕೊಂಕು ನುಡಿಯಾಗಲಿ ಅವರಲಿಲ್ಲ. ಇಂಗ್ಲಂಡಿನಲ್ಲಿ ಕವಿತೆ ಈ ಘಟ್ಟಕ್ಕೆ ಬಂದಿದೆ; ಫ್ರಾನ್ಸಿನಲ್ಲಿ ಇಂಥ ನಾಟಕ ಆಡಿದರು; ರಷ್ಯದಲ್ಲಿ ಇಂಥ ನೃತ್ಯ ಯಶಸ್ವಿಯಾಯಿತು; ಜಪಾನಿನಲ್ಲಿ ಇಂಥವರ ವರ್ಣಚಿತ್ರ ಪ್ರದರ್ಶನ ನಡೆಯಿತು; ಮತ್ತೊಂದು ದೇಶದಲ್ಲಿ ವಾಸ್ತುಶಿಲ್ಪದ ಮೇಲೆ ಹೊಸ ಪುಸ್ತಕವೊಂದು ಬಂತು; ಹೀಗೆ ಎಲ್ಲೆಲ್ಲಿನದೋ ಸುದ್ದಿ ಅವರಿಗೆ ತಲಪುತ್ತದೆ. ನಮ್ಮ ಕನ್ನಡದಲ್ಲಿ ಈ ಕೆಲಸ ಆಗಬೇಕು, ಆ ಕೆಲಸ ಆಗಬೇಕು ಎನ್ನುವ ಆತಂಕ ಅವರನ್ನು ಹಿಡಿಯುತ್ತದೆ. ಅವರೊಂದಿಗೆ ೫ ನಿಮಿಷ ಮಾತನಾಡಿದರೆ ಸಾಕು, ಒಂದು ಹೊಸ ನೋಟದ ಇಣುಕು ಸಿಕ್ಕುತ್ತದೆ.

ತಾವು ಕಂಡ ಬೆಳಕನ್ನು, ಮಾಧುರ್ಯವನ್ನು ತಮಲ್ಲಿಗೆ ಬಂದವರಿಗೆ ಅವರು ಹಂಚಿಕೊಡುತ್ತಾರೆ. ಪತ್ರಿಕೆಗಳ ಸಂಪಾದಕರಾಗಿದ್ದಾಗ ಪ್ರತಿಭಾವಂತರೂ ಶ್ರದ್ಧಾಳುಗಳೂ ಆದ ತರುಣರಲ್ಲಿ ಅವರು ಹೊಸ ದೃಷ್ಟಿಯನ್ನು ಅರಳಿಸಿ ಹುರಿದುಂಬಿಸಿ ಒಳ್ಳೆಯ ಲೇಖನಗಳನ್ನು ಬರೆಸಿದ್ದಾರೆ. ಅಷ್ಟೇ ಅಲ್ಲ. ಹಿರಿಯ ನಾಟಕಕಾರರಾದ ಷಾ ಅವರ 'ಪಿಗ್‌ಮೇಲಿಯನ್' ಮತ್ತು 'ಮೇಜರ್ ಬಾರ್ಬರ' ಎಂಬೆರಡು ಪ್ರಸಿದ್ಧ ನಾಟಕಗಳನ್ನು ಕನ್ನಡಿಸಿದ್ದಾರೆ; ನಮ್ಮಲ್ಲಿ ಕೆಲವರ ಕಾವ್ಯಗಳನ್ನು ಇಂಗ್ಲಿಷಿಗೆ ಅನುವಾದ ಮಾಡಿದ್ದಾರೆ; ನಮ್ಮ ನಾಡಿನ ಸುಪ್ರಸಿದ್ಧ ಕಲೆಗಾರರಾದ ವೆಂಕಟಪ್ಪನವರನ್ನು ಕುರಿತು ಒಂದು ಸುಂದರವಾದ ಸಚಿತ್ರ ಕಿರುಹೊತ್ತಗೆಯನ್ನು ಇಂಗ್ಲಿಷಿನಲ್ಲಿ ಬರೆದಿದ್ದಾರೆ; 'ಬಂಗಾಳಿ ಸಾಹಿತ್ಯದ ಚರಿತ್ರೆ'ಯನ್ನು ಕನ್ನಡಕ್ಕೆ ಅನುವಾದ ಮಾಡಿದ್ದಾರೆ. ಅಮೆರಿಕದ ಸುಪ್ರಸಿದ್ಧ ಕಾದಂಬರಿಕಾರನಾದ ಮೆಲ್‌ವಿಲ್ಲನ 'ಮಾಬಿ ಡಿಕ್' ಎಂಬ ಬೃಹತ್ ಕಾದಂಬರಿಯನ್ನು ಕನ್ನಡಕ್ಕೆ ತಂದಿದ್ದಾರೆ (ಅದು ಇನ್ನೂ ಅಚ್ಚಿನಲ್ಲಿದೆ). ನಮ್ಮ ಕನ್ನಡದ ಆದಿಕವಿಯೂ ಮಹಾಕವಿಯೂ ಆದ ಪಂಪನ ಮೇಲೆ ಇಂಗ್ಲಿಷಿನಲ್ಲಿ ೨೪೫ ಪುಟಗಳ ವಿದ್ವತ್‌ಪೂರ್ಣವಾದ ಗ್ರಂಥವನ್ನು ರಚಿಸಿ ಆ ಮಹಾಕವಿಯನ್ನು ಇಂಗ್ಲಿಷಿನ ಮೂಲಕ ಭಾರತಕ್ಕೂ, ಪ್ರಪಂಚಕ್ಕೂ ಪರಿಚಯ ಮಾಡಿಕೊಟ್ಟಿದ್ದಾರೆ. ಇಂಥ ಇನ್ನೂ ಹಲವಾರು ಕೆಲಸಗಳಲ್ಲಿ ತೊಡಗಿದ್ದಾರೆ.

ವಿ. ಸೀ. ಅವರಿಗೆ ಸಂಗೀತ ಎಷ್ಟು ಪ್ರಿಯವೆಂಬುದನ್ನು ಅವರ 'ಗೀತ'ಗಳಿಂದ ತಿಳಿಯಬಹುದು. ಕರ್ನಾಟಕ ಸಂಗೀತವನ್ನು ಕಲಿಯುವ ಅಭಿಲಾಷೆ ಅವರಿಗೆ ಚಿಕ್ಕಂದಿನಲ್ಲೆ ಅಂಕುರಿಸಿತ್ತಂತೆ. ಒಂದು ಕಾಲದಲ್ಲಿ ಅವರೂ ಅವರದೇ ಹೆಸರಿನ ಇನ್ನೊಬ್ಬ ಮಹನೀಯರೂ ಮಹಾವಿದ್ವಾಂಸರಾದ ವಾಸುದೇವಾಚಾರ್ಯರಲ್ಲಿ ಕೆಲವು ತಿಂಗಳು ಶಿಷ್ಯವೃತ್ತಿ ಮಾಡಿದ್ದರಂತೆ. ಆದರೆ ಭೈರವಿ ವರ್ಣದ ಕಲಿಕೆಯೊಂದಿಗೆ ಅದು

ಮುಗಿದುಹೋಯಿತಂತೆ. ಶೇಷಣ್ಣನವರ ವೀಣೆ, ಬಿಡಾರಂ ಕೃಷ್ಣಪ್ಪನವರ ಹಾಡುಗಾರಿಕೆ, ವರದಾಚಾರ್ಯರು ಹಾಡುತ್ತಿದ್ದ ಕಂದಗಳ ಮಟ್ಟುಗಳು ಇನ್ನೂ ಇವರ ಕಿವಿಯಲ್ಲಿ ಮೊಳಗುತ್ತಲೇ ಇವೆ. ಅದೇ ಅಭಿಮಾನದಿಂದ ಇವರು ಹಿಂದುಸ್ತಾನಿ ಗಾಯನವನ್ನೂ, ಪಾಶ್ಚಾತ್ಯರ ಸಿಂಫೊನಿಗಳನ್ನೂ ಕೇಳಬಲ್ಲರು.

ಅವರಿಗೆ ಚಿತ್ರಕಲೆಯಲ್ಲಿ ಎಷ್ಟು ಆಳವಾದ ಆಸಕ್ತಿ ಇದೆ ಎನ್ನುವುದಕ್ಕೆ, ಅವರು ವೆಂಕಟಪ್ಪನವರ ಮೇಲೆ ಇಂಗ್ಲಿಷಿನಲ್ಲಿ ಬರೆದಿರುವ ಕಿರುಹೊತ್ತಿಗೆ ಸಾಕ್ಷಿ.

ಅಂತೆಯೇ ಊರಿಗೆ ಯಾವ ಒಳ್ಳೆಯ ನಾಟಕ, ಚಲನಚಿತ್ರ, ನೃತ್ಯ ಬಂದರೂ ಅವರು ಎಷ್ಟು ದೂರವಾದರೂ ಹೋಗಿ ನೋಡಿಬರುತ್ತಾರೆ.

## ೩

ನಾನು ವಿ. ಸೀ. ಅವರನ್ನು ಪರಿಚಯ ಮಾಡಿಕೊಂಡದ್ದು ೧೯೩೭ರಲ್ಲಿ. ಬೆಂಗಳೂರಿನಲ್ಲಿ ಅವರ ಮನೆಯಲ್ಲಿ. ನಾನು ಆ ಹೊತ್ತಿಗಾಗಲೇ ಬರೆದಿದ್ದ ಕೆಲವು ಕವನಗಳು ತೀ.ನಂ.ಶ್ರೀ ಅವರ ಮೂಲಕ 'ಪ್ರಬುದ್ಧ ಕರ್ಣಾಟಕ'ದಲ್ಲಿ ಅಚ್ಚಾಗಿದ್ದುವು. ವಿ. ಸೀ. ಅವುಗಳನ್ನು ಗಮನಿಸಿದ್ದರು; ನನ್ನ ಅವರ ಪರಿಚಯ ಬೇಗ ಆಯಿತು.

ಈ ಪರಿಚಯ ಸ್ನೇಹವಾಗಿ ಬೆಳೆದ ಮೊತ್ತಮೊದಲಿನಲ್ಲಿಯೇ ಅವರು ನನಗೆ ದಕ್ಷಿಣ ಕನ್ನಡ ಜಿಲ್ಲೆಯ ಸಾಕ್ಷಾತ್ ಪರಿಚಯವನ್ನು ಮಾಡಿಕೊಟ್ಟರು. ಅವರಿಗೆ ಆ ಜಿಲ್ಲೆ ತುಂಬ ಪ್ರಿಯ. ಅವರ ಜತೆಗೆ ನಾನಲ್ಲಿ ಮಂಜೇಶ್ವರದಿಂದ ಕುಂದಾಪುರದ ವರೆಗೆ ಕರಾವಳಿಯಲ್ಲಿ ಓಡಾಡಿ ತಾಯ ಸೆರಗ ಸೌಂದರ್ಯವನ್ನು ಕಂಡು ಹಿಗ್ಗಿದ್ದೇನೆ. ಗೋವಿಂದ ಪೈಗಳಿಗೆ ನಮಸ್ಕಾರ ಮಾಡಿದ್ದೇನೆ; ಕಾರಂತರ ಬೆಟ್ಟದ ಮನೆಯಲ್ಲಿ ನಿಂತು ದೂರದ ಗುಡ್ಡಗಳ ಮೇಲೆ ಗುಡುಗು ಮೊಳಗುವುದನ್ನು ಕೇಳಿದ್ದೇನೆ. 'ತೆಂಗುಗರಿ ಕೊಡೆಯಿರ್ಪ ಕಡಲುಲಿಯ ಮನೆ'ಯಲ್ಲಿನ ಶಕ್ತಿಸೌಂದರ್ಯಗಳಿಗೆ ಬೆರಗಾಗಿದ್ದೇನೆ. ನನ್ನ ಜೀವನದಲ್ಲೇ ಮೊತ್ತಮೊದಲಿಗೆ ಉಡುಪಿಯಲ್ಲಿ ವಿ. ಸೀ. ಅವರ ಅಧ್ಯಕ್ಷತೆಯಲ್ಲಿ ನನ್ನ ಕವನಗಳನ್ನು ಓದಿದ್ದೇನೆ.

ನನ್ನ ದಾರಿಯನ್ನು ನಾನು ಕಂಡುಕೊಳ್ಳಲು ವಿ. ಸೀ. ಅವರು ತುಂಬ ಸಹಾಯ ಮಾಡಿದ್ದಾರೆ. ನನ್ನಂಥ ಕಿರಿಯರನೇಕರಿಗೆ ಅವರು ಮಾರ್ಗದರ್ಶನ ಮಾಡಿದ್ದಾರೆ. ಹೇಳಬೇಕಾದ್ದನ್ನು ಒರಟಲ್ಲದ ರೀತಿಯಲ್ಲಿ ಹೇಳುವುದು ಅವರ ಪದ್ಧತಿ. ಅವರೇ ಒಂದು ಕಡೆ ಹೀಗೆ ಹೇಳಿದ್ದಾರೆ: ಪುಷ್ಪಾವಚಯದಲ್ಲಿ ಹೂವನ್ನು ಆಯುವವರುಂಟು. ತಿರಿಯುವವರು ಬಿಡಿಸುವವರು ಉಂಟು. ಕೊಯ್ಯುವವರುಂಟು. ಈ ಕಾರ್ಯದಲ್ಲಿ ಗಿಡ ಕೆಟ್ಟು ಹೂ ನಲುಗಿದರೆ ಕಟುಕತನವಾದೀತು. ವಿ. ಸೀ. ಅವರು ಎಲ್ಲರಂತೆ ಬಾಳಿನ ನಲಿವು ನೋವುಗಳನ್ನು ಕಂಡವರು. ತಮ್ಮ ಕವನಸಂಗ್ರಹವೊಂದರ ಮುನ್ನುಡಿಯಲ್ಲಿ ಅವರೇ ಹೇಳಿಕೊಂಡ ಮಾತಿದು: (ಇಲ್ಲಿ 'ನಾವು'

'ನಮ್ಮ'ಗಳ ಬದಲು 'ನಾನು' 'ನನ್ನ' ಇಟ್ಟುಕೊಳ್ಳಬಹುದು): "ನಾವೂ ಒಳ್ಳೆಯ ಊಟ ಉಪಚಾರ ಕಂಡಿದ್ದೇವೆ; ಬಗೆಬಗೆಯಾದ ಒಳ್ಳೆಯ ಪುಸ್ತಕಗಳನ್ನು ಓದಿದ್ದೇವೆ; ವಿಧವಿಧವಾದ ಚೆಲುವನ್ನು ನೋಡಿ ನಮ್ಮ ಪಾಲಿಗೆ ಬಂದುದನ್ನು ಸವಿದಿದ್ದೇವೆ; ಒಳ್ಳೆಯ ಸಂಗೀತ, ಚಿತ್ರ, ನಾಟ್ಯ, ಶಿಲ್ಪಗಳನ್ನು ಕೇಳಿ ನೋಡಿ ಆನಂದಿಸಿದ್ದೇವೆ. ಹತ್ತು ಮಂದಿ ಹಿರಿಯರ ಮತ್ತು ಕೆಳೆಯರ ಪ್ರೀತಿಯನ್ನು ಅನುಭವಿಸಿದ್ದೇವೆ. ನಾಡಿನ ಸುತ್ತ ದುಂಬಿಯಂತೆ ಸುತ್ತಿ ಅದರ ಭೌಮಶೃಂಗಾರವನ್ನು-ಂಪು ಕಾನು, ಮಲೆ, ಬಾನು, ಕಡಲು, ಬಯಲು, ಇರುಳು, ಮಳೆ, ಬಿಸಿಲು, ತಂಗಾಳಿ, ತಾರಾಗ್ನಿ, ಹಿಮಮಣಿ, ಹಕ್ಕಿ, ಹೂ, ಪಶು, ಪಕ್ಷಿ, ಪ್ರಾಣಿ, ವೇಷ-ಭೂಷ, ರಾಗ-ರೂಪ, ರಸ – ಗಂಧ, ಸ್ಪರ್ಶ, ನೋಟ, ಬೆಡಗು – ಕಂಡು ಅವನ್ನು ಹೃದಯದಲ್ಲಿ ತುಂಬಿಕೊಂಡು ಮೈಮರೆತಿದ್ದೇವೆ." ಆದರೆ ತಮ್ಮ ಬಾಳಿನಲ್ಲಿ ಅನುಭವಿಸಿದ ನೋವಿನ ಬಗೆಗೆ ಅವರು ಹೇಳುವುದಿಲ್ಲ; 'ಶ್ರೀನಿವಾಸ'ರು 'ನವರಾತ್ರಿ'ಯಲ್ಲಿ ಅದನ್ನು ಹೀಗೆ ವರ್ಣಿಸಿದ್ದಾರೆ:

"ಬಾಳು
ಕಷ್ಟವನು, ತರುವುದೇ, ತರಲಿ, ಆಯಿತು, ಏನು ?
ಸಹಿಸಿದರೆ ಮುಗಿಯಿತು, ಸಹಿಸುವುದು ಸಾಧ್ಯವೇ ?
ನೋಡುವ; ನಮ್ಮಿಂದ ಆದಷ್ಟು ಸಹಿಸುವ.
ಇದು ಇವರ ರೀತಿ. ಎಂದಾದರೂ ಈ ಮಾತ
ನನಗೆ ತಿಳಿಸಿರುವರೆಂದಲ್ಲ. ಈ ತಿಳಿಸುವುದು
ಇವರ ಪದ್ಧತಿಯಲ್ಲ....ಇಂಥ ವಜ್ರ ಕಠೋರ
ದಾರ್ಢ್ಯದಿಂದಿವರು ಜೀವನಪಥವ ನಡೆದರೂ
ಕಷ್ಟದಲಿ ಸಿಲುಕಿರುವ ಇತರ ಜೀವವ ಕಂಡು
ಹೂವಂತೆ ಬಾಡುವರು, ಬೆಣ್ಣೆಯೆನೆ ಕರಗುವರು.
ದೇವರನು ಕರೆದು ಯಾವುದೆ ನೋವ ಭಾರವನು
ಅವನ ಹೆಗಲಲಿ ಹೇರುವುದು ಇವರಿಗೊಪ್ಪದು."

ಈ ಕೆಲವೇ ಪಂಕ್ತಿಗಳು ಎಷ್ಟನ್ನು ಹೇಳಿದರೆ ಮಾತ್ರ ಸಾಕೋ, ಅಷ್ಟನ್ನು ಯಾವ ರೀತಿಯಲ್ಲಿ ಹೇಳಿದರೆ ಸರಿಯೋ ಆ ರೀತಿಯಲ್ಲಿ, ನುಡಿದಿವೆ.

## ೪

ವಿ. ಸೀ. ಅವರು ಶ್ರೇಷ್ಠ ಭಾಷಣಕಾರರು. ವಿಶ್ವವಿದ್ಯಾನಿಲಯದ ಪ್ರಚಾರೋಪನ್ಯಾಸಮಾಲೆಯಲ್ಲಿ, ಆಕಾಶವಾಣಿಯಲ್ಲಿ, ಮತ್ತು ಅನೇಕ ಸಂಘ ಸಂಸ್ಥೆಗಳಲ್ಲಿ ಅವರು ಈ ವರೆಗೆ ಅನೇಕ ಭಾಷಣಗಳನ್ನು ಮಾಡಿದ್ದಾರೆ. ಅವುಗಳಲ್ಲಿ ಕೆಲವು ಪುಸ್ತಕ ರೂಪದಲ್ಲಿ ಬಂದಿವೆ.

ಬರೆದು ತಂದು ಭಾಷಣ ಮಾಡುವುದು ಅವರ ರೂಢಿಯಲ್ಲ. ಸ್ವಾತಂತ್ರ್ಯ ಪೂರ್ವಕಾಲದಲ್ಲೂ, ಆ ಬಳಿಕವೂ ಅವರು ನಾಡಿನಾದ್ಯಂತ ಹಲವು ಬಾರಿ ಸುತ್ತಿ ಸುಳಿದು, ಸಾಹಿತ್ಯ ಸಂಸ್ಕೃತಿ ಅರ್ಥಶಾಸ್ತ್ರ ರಾಜಕೀಯ ಮುಂತಾದ ಅನೇಕ ವಿಷಯಗಳ ಮೇಲೆ ಇಂಗ್ಲಿಷೆಂದರೆ ಇಂಗ್ಲಿಷಿನಲ್ಲಿ ಕನ್ನಡವೆಂದರೆ ಕನ್ನಡದಲ್ಲಿ – ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಧಾರಾಕಾರವಾಗಿ ಸುರಿವ ಮಳೆಯಂತೆ–ಭಾಷಣ ಮಾಡಿದ್ದಾರೆ. ನಮ್ಮ ಜನಕ್ಕೆ ಈ ವಿಷಯವನ್ನು ತಿಳಿಸಲೇಬೇಕು ಎಂಬ ತವಕದಿಂದ ನುಡಿಯುತ್ತಾರೆ. ಅವರು ಭಾಷಣವನ್ನು ಪ್ರಾರಂಭಿಸಿದರೆ ಸಭೆ ಶಾಂತವಾಗಿ ಕುಳಿತು ಕಿವಿಗೊಟ್ಟು ಕೇಳುತ್ತದೆ. ಆ ಶಕ್ತಿ ವಿ. ಸೀ. ಅವರಲ್ಲಿದೆ.

ವಿ. ಸೀ. ಅವರ ಪ್ರವಾಸಗಳೂ ಭಾಷಣಗಳೂ ಕನ್ನಡ ನಾಡಿಗೇ ಮಿತಿಗೊಂಡಿಲ್ಲ. ದೆಹಲಿ, ಜಯಪುರ, ಕಲ್ಕತ್ತಾ, ಮುಂಬೈ. ಮದರಾಸು, ಚಂಡೀಘಡ, ಎರ್ನಾಕುಲಂ, ಅಲಹಾಬಾದ್, ಅಹಮದಾಬಾದ್, ಆಗ್ರಾ, ಸಿಮ್ಲಾ ಮುಂತಾದ ಭಾರತದ ಅನೇಕ ಪ್ರಮುಖ ನಗರಗಳಲ್ಲಿ ನಡೆದ ಹಲವಾರು ಸಭೆ ಸಮಿತಿಗಳಲ್ಲಿ ಭಾಗವಹಿಸಿ ಭಾಷಣಮಾಡಿ ಅಲ್ಲಿನ ಕವಿ ಸಾಹಿತಿ ವಿದ್ವಾಂಸರಲ್ಲಿ ಇಂಗ್ಲಿಷಿನ ಮೂಲಕ ಕನ್ನಡದ ಸಾಹಿತ್ಯ ಸಂಸ್ಕೃತಿಗಳ ಬಗೆಗೆ ಕುತೂಹಲವನ್ನು ಕೆರಳಿಸಿದ್ದಾರೆ.

ಬೇರೆಯವರ ಭಾಷಣಕ್ಕೆ ತಾವು ಅಧ್ಯಕ್ಷರಾಗಿದ್ದಾಗ ವಿ. ಸೀ. ಅವರು ನಡೆದುಕೊಳ್ಳುವ ರೀತಿಯೂ ಗಮನಾರ್ಹ. ಭಾಷಣಕಾರ ಹೇಳಿದ್ದರಲ್ಲಿ ಇರಬಹುದಾದ ಗುಣಗಳನ್ನು ಮಾತ್ರ ಎತ್ತಿಕೊಂಡು ವಿವರಿಸಿ ಆ ಭಾಷಣಕಾರನೂ ಮೆಚ್ಚಿಕೊಳ್ಳುವಂತೆ ಮುಕ್ತಾಯ ಕೊಡುತ್ತಾರೆ.

## ೫

ವಿ. ಸೀ. ಅವರು ಈ ವರೆಗೆ ಅನೇಕ ಪುಸ್ತಕಗಳನ್ನು ರಚಿಸಿದ್ದಾರೆ; ಅವುಗಳಲ್ಲಿ ವಿಮರ್ಶೆ, ನಾಟಕ, ಹರಟೆ, ಕವಿತೆ, ಅರ್ಥಶಾಸ್ತ್ರ, ಧರ್ಮಶಾಸ್ತ್ರ, ಚಿತ್ರಕಲೆ, ಪ್ರವಾಸಕಥನಗಳೂ, ಇಂಗ್ಲಿಷಿನಲ್ಲಿ ಬರೆದ ಆರು ಕೃತಿಗಳೂ ಸೇರಿವೆ. ಇವುಗಳೆಲ್ಲವನ್ನೂ ಒಳಕೊಳ್ಳುವಂಥ ವಿಮರ್ಶೆಯಾಗಲಿ ಒಂದೊಂದನ್ನೇ ಕುರಿತ ವಿಸ್ತಾರ ವಿಮರ್ಶೆಯಾಗಲಿ ಇಲ್ಲಿನ ಗುರಿಯಲ್ಲ. ತಥಾಪಿ ಶಾಸ್ತ್ರಗ್ರಂಥಗಳ ಬಗೆಗೆ ನನಗೆ

ಅಧಿಕಾರವಿಲ್ಲ; ಅದು ಆಯಾ ಕ್ಷೇತ್ರಗಳ ವಿದ್ವಾಂಸರಿಗೆ ಸೇರಿದ್ದು. ಇದು ಬಹು ಮಟ್ಟಿಗೆ ವ್ಯಕ್ತಿಪರಿಚಯ.

ಬಹುಗ್ರಂಥಪರಿಚಯವೂ, ತೀಕ್ಷ್ಣ ಧೀಶಕ್ತಿಯೂ, ಸಹೃದಯತೆಯೂ ವಿಮರ್ಶೆಗೆ ಅಗತ್ಯ. ಅಂಥ ಗುಣಗಳಿರುವವರಲ್ಲಿ ವಿ. ಸೀ. ಅವರೂ ಒಬ್ಬರಾಗಿದ್ದಾರೆ. "ಸಾಹಿತ್ಯ ವಿಮರ್ಶೆಗಳಲ್ಲಿ ಅರ್ಥ ಮತ್ತು ಮೌಲ್ಯ" ಮತ್ತು "ಸಾಹಿತ್ಯ – ಸಂಪ್ರದಾಯ ಮತ್ತು ಹೊಸ ಮಾರ್ಗ" ಎಂಬೆರಡು ವಿದ್ವತ್ಪೂರ್ಣ ಗ್ರಂಥಗಳನ್ನು ರಚಿಸಿದ್ದಾರೆ. ಜತೆಗೆ, ಇವೆರಡಕ್ಕೂ ಹಿಂದೆಯೇ ಅವರು ಬರೆದಿರುವ 'ಕವಿ – ಕಾವ್ಯ – ದೃಷ್ಟಿ'ಯಲ್ಲೂ ವಿಮರ್ಶಾತ್ಮಕ ಪ್ರಬಂಧಗಳಿವೆ. ಮೊದಲು ಹೇಳಿದ ಎರಡು ಗ್ರಂಥಗಳೂ ಅವರು ಕ್ರಮವಾಗಿ ಮೈಸೂರು, ಧಾರವಾಡದ ವಿಶ್ವವಿದ್ಯಾನಿಲಯಗಳ ಆಶ್ರಯದಲ್ಲಿ ಮಾಡಿದ ಭಾಷಣಗಳ ಪುಸ್ತಕರೂಪ. ಸಾಹಿತ್ಯದಲ್ಲಿ, ವಿಮರ್ಶೆಯಲ್ಲಿ ಯಾವುದು ಅರ್ಥ, ಯಾವುದು ಮೌಲ್ಯ? ಅವೆರಡರಲ್ಲಿಯೂ ಅರ್ಥ ಮೌಲ್ಯಗಳ ಸ್ಥಾನವೇನು? ಕನ್ನಡ ಸಾಹಿತ್ಯದಲ್ಲಿ ಯಾವುದು ಸಂಪ್ರದಾಯ ಯಾವುದು ಹೊಸ ದೃಷ್ಟಿ – ಎಂಬ ಪ್ರಶ್ನೆಗಳ ಆಳವೂ ವಿಸ್ತಾರವೂ ಆದ ವಿವೇಚನೆ ಇವುಗಳಲ್ಲಿ ನಡೆದಿದೆ.

ತಮ್ಮ ದೃಷ್ಟಿಯಲ್ಲಿ ಇತಿಹಾಸಕಾವ್ಯ (ಎಪಿಕ್) ಎಂದರೇನು, ಅದು ಹೇಗಿರುತ್ತದೆ ಎಂಬುದನ್ನು ಅವರು ಕೆಲವೆಡೆಗಳಲ್ಲಿ ವರ್ಣಿಸಿದ್ದಾರೆ; ಅವುಗಳನ್ನು ಇಲ್ಲಿ ಆಯ್ದುಕೊಟ್ಟಿದೆ:

೧೯೪೫ ರ ಅಕ್ಟೋಬರ್ ತಿಂಗಳಲ್ಲಿ ಜಯಪುರದಲ್ಲಿ ನಡೆದ ಅಖಿಲ ಭಾರತ ಪಿ. ಈ. ಎನ್. ಸಮ್ಮೇಳನದಲ್ಲಿ ಡಾ. ಎಸ್. ರಾಧಾಕೃಷ್ಣನ್ ಅವರು 'ಸಾಹಿತ್ಯದಲ್ಲಿನ ಧಾರ್ಮಿಕ ದೃಷ್ಟಿ' ಪ್ರಮಾಣಗಳನ್ನು ಕುರಿತು ಉನ್ನತಾಶಯಗಳಿಂದ ಕೂಡಿದ ಒಂದು ಭಾಷಣವನ್ನು ಮಾಡಿದರು. ಅವರ ಮಾತಿಗೆ ಒಂದು ಬಗೆಯಾಗಿ ಪೂರಕವಾಗಿ, ಇ. ಎಂ. ಫಾರ್ಸ್ಟರ್ ಅವರು ಎರಡು ಮಹಾಯುದ್ಧಗಳ ನಡುವಣ ಕಾಲದಲ್ಲಿ ಇಂಗ್ಲಂಡಿನಲ್ಲಿ ನಡೆದಿರುವ ಸಾಹಿತ್ಯ ನಿರ್ಮಾಣ ಕಾರ್ಯವೇನೆಂಬುದನ್ನು ವಿವರಿಸುತ್ತ "ಮಹಾಕೃತಿಗಳೆನ್ನಬಹುದಾದ ಉದ್ದಾಮ ಗ್ರಂಥಗಳು ಹುಟ್ಟದಿದ್ದರೂ ಇದ್ದದ್ದರಲ್ಲಿ ಸಾಹಿತಿಗಳು ಸನ್ನಿವೇಶ ಅವಕಾಶಗಳನ್ನು ಪೂರ್ತಿಯಾಗಿ ಉಪಯೋಗಿಸಿಕೊಂಡಿದ್ದಾರೆ. ಮಾನ್ಯಕೃತಿಗಳನ್ನು ನಿರ್ಮಿಸಿಕೊಟ್ಟಿದ್ದಾರೆ" ಎಂದರಂತೆ. ೧೯೪೫ ರ ಪ್ರಬುದ್ಧ ಕರ್ಣಾಟಕದ ದೀಪಾವಳಿ ಸಂಚಿಕೆಯ ಸಂಪಾದಕೀಯದಲ್ಲಿ ಇದನ್ನು ಪ್ರಸ್ತಾಪಿಸುತ್ತ ವಿ. ಸೀ. ಹೀಗೆ ಹೇಳಿದ್ದಾರೆ:

"ಇಂಥ ಆಕ್ಷೇಪಣೆಯ ಸಂದರ್ಭದಲ್ಲಿ ಒಂದು ಮಾತನ್ನು ಆಡಬಹುದೇನೋ. ರಾಜಕೀಯ, ಆರ್ಥಿಕರಂಗ, ಸಮಾಜಹಿತ ಸಾಧನೆ, ಧಾರ್ಮಿಕ ಅಥವಾ ವಿಜ್ಞಾನ ಪ್ರಪಂಚ ಇವು ಯಾವುದರ ಮೇಲೂ ಇಲ್ಲದ ಸಲ್ಲದ ಹೊಣೆಗಾರಿಕೆ ಸಾಹಿತ್ಯ ಕಲೆಗಳು ಮಾತ್ರ ಏಕೆ ಹೊರಬೇಕು? ಆ ಅವರು ಯಾವ ಮಹಾಕೃತಿ (ಎಪಿಕ್ಸ್)

ನಿರ್ಮಾಣ ಮಾಡಿ ಸಾಧನೆಯ ಸೌಧಗಳನ್ನು ರಚಿಸಿದ್ದಾರೆ ? ಜೀವನವೆಲ್ಲ ಒಂದು ತೊಳಲಿಗೆ ಸಿಕ್ಕಿ ದಿಕ್‌ಶೂನ್ಯವಾದಂತಿರುವ ಅಥವಾ ನೂರು ದಾರಿ ಕಾಣುತ್ತಿರುವ ಈ ಕಾಲದಲ್ಲಿ ಎಲ್ಲ ಸಂಪರ್ಕಗಳಿಗೂ ವಿಶಿಷ್ಟ ವಿಶಿಷ್ಟವಾಗಿ ಮಿಡಿಯುವ ಸಾಹಿತ್ಯ. ಕಲೆ ಸಮಗ್ರ ದೃಷ್ಟಿಯನ್ನು ಹೆಚ್ಚು ಸುಲಭವಾಗಿ ತೋರಬಲ್ಲುದೆ? ಜೀವನದ ಒಂದು ಸಮಗ್ರತೆ ಖಚಿತವಾಗಿ ರೂಪುಗೊಂಡು ನಿಲ್ಲುವವರೆಗೂ ಒಂದು ಉತ್ಕೃತಿ ನಿರ್ಮಾಣವಾಗಬಲ್ಲುದೆ? ಜೀವನಕ್ಕೆ ಇಂದು ಒಂದು ಗುರಿ, ಒಂದು ದೃಷ್ಟಿ, ಒಂದು ಶ್ರದ್ಧೆ ಇವೆಯೆ ? ಯಾವೊಂದು ನಿಷ್ಠೆಯೂ ಸಿದ್ಧಾಂತವೂ ದೊರೆಯುವ ಕಾಲದಲ್ಲಿ ಆ ಕಾಲದ ಎಪಿಕ್ ಹೇಗೆ ಹುಟ್ಟೀತು ? ಹಿಂದಿನ ಕಾಲದ ಎಪಿಕ್ ರೀತಿಯನ್ನು ಅನುಸರಿಸಿ ಅನುಕರಿಸಿ ಬರೆದ ಮಾತ್ರದಿಂದ ಅದು ಪ್ರಾಮಾಣಿಕವಾದ ಆಧುನಿಕ ಸತ್ವವಾಗಿ ನಮ್ಮ ಕಾಲದ ಎಪಿಕ್ ಆದೀತೆ ? ಸಹಜವಾಗಿ ? ಸ್ವಾಯತ್ತವಾಗಿ ? ಸ್ವರಸತಯಾ ? ಹಿಂದಿನ ಕಾಲದ ಎಪಿಕ್ ಪ್ರಕಾರ ಹುಟ್ಟಿದುದು ಒಂದೊಂದು ನಾಗರೀಕತೆ ಪೂರ್ತಿಯಾಗಿ ಪ್ರತಿಷ್ಠಾಪಿತವಾಗಿ ಬೆಳಗಿದಾಗ, ವಿಜೃಂಭಿಸಿದ್ದಾಗ; ಆ ಸಮಗ್ರತೆಯ ಪ್ರತಿನಿಧಿಯಾಗಿ, ಪ್ರತಿಬಿಂಬವಾಗಿ; ಅದರ ಸ್ಮಾರಕವಾಗಿ. ಆ ವಿಶ್ವಾಸವೂ ನಿಷ್ಠೆಯೂ ಇಲ್ಲದ ಕಾಲದಲ್ಲಿ ಯಾವ ಕವಿ ದರ್ಶನವೇ ಆಗಲಿ ಸುತ್ತಲ ಪ್ರಪಂಚವನ್ನು ತಾನೇ ತೋರಿಸಬಲ್ಲುದು? ಅದರ ಸುಖಿಗಳನ್ನು ತಾನೇ ಚಿತ್ರಿಸೀತು? ಸುತ್ತಲವೆಂದ ಮಾತ್ರಕ್ಕೆ ಅದರ ನಿರ್ಜೀವ ಅನುಕರಣ ಅಥವಾ ಫೋಟೋ ಅಲ್ಲ. ಸ್ಥಿತಿ ಚಿತ್ರವೆಂಬಲ್ಲಿಗೂ ಅಲ್ಲಿ ಒಳಗೆ ಅಡಗಿರುವ ಆಸೆ, ಆಕಾಂಕ್ಷೆ, ಗುರಿಮುಟ್ಟದ ಸೋಲು, ಧ್ಯೇಯದ ದೃಢ, ಭಂಗ ಈ ಎಲ್ಲವೂ ಪ್ರಕಾಶವಾಗಲಿರುತ್ತವೆಂಬುದನ್ನು ಯಾರೂ ಮರೆಯಬಾರದು.”

ಇನ್ನೊಮ್ಮೆ ಅವರ “ಸಾಹಿತ್ಯ ವಿಮರ್ಶೆಗಳಲ್ಲಿ ಅರ್ಥ ಮತ್ತು ಮೌಲ್ಯ” ಎಂಬ ೧೯೬೭ರಲ್ಲಿ ಬಂದ ಪುಸ್ತಕದಲ್ಲಿ ಎಪಿಕ್‌ನ ಮಾತು ಹೀಗೆ ಬರುತ್ತದೆ: “ಯಾವುದು ಶ್ರೇಷ್ಠ ಕೃತಿ ಎಂದು ಎಲ್ಲ ಕಾಲದಲ್ಲಿಯೂ ಒಪ್ಪಿತವಾಗಿದೆಯೋ ಅಂಥ ಕೃತಿಗಳಲ್ಲಿ ಆಯಾ ಕಾಲ ಪರಿಸ್ಥಿತಿಗಳ ಮಿತಿಗಳನ್ನೂ ಕಾರ್ಪಣ್ಯಗಳನ್ನೂ ದಾಟುವ ಸಾರ್ವಕಾಲಿಕ ಜೀವ ಶಕ್ತಿ, ಉಳಿವ ಶಕ್ತಿ, ಸರ್ವೈವಲ್ ವ್ಯಾಲ್ಯೂ, ಇರುತ್ತದೆ. ಅದಕ್ಕೆ ಕಾರಣ ಆ ಕೃತಿಗಳಲ್ಲಿ ಅಡಗಿ ಕಾಣುವ ಸಮಗ್ರ ಮಾನವತೆಯ ಆಳ, ವಿಸ್ತಾರ, ಉನ್ನತಿ ಹೆಚ್ಚಿನದಾಗಿರುವುದು. ಹೆಚ್ಚು ಕುಸುರಿ ಇಲ್ಲದೆ ಹೆಚ್ಚು ನಯನುಣುಪುಗಳಿಗೆ ಹೋಗದೆ, ಜೀವನಾನುಭವದ, ಸಾರವತ್ತಾದ, ಮಾನವತೆ ತುಂಬಿದ, ಮೂಲಭಾವ ಪ್ರವೃತ್ತಿಗಳ ನುಣ್ಪು ಗಾಂಭೀರ್ಯ ಇರುತ್ತವೆ. ಆದುದರಿಂದಲೇ ಈಚಿನ ಎಲ್ಲ ಕಾವ್ಯಗಳಿಗಿಂತ ಮಹಾಭಾರತ, ರಾಮಾಯಣ, ಇಲಿಯಡ್, ನಿಬುಲುಂಗೆನ್ ಲೈಡ್, ಷಾಹನಾಮಾ ಮುಂತಾದ ‘ಎಪಿಕ್’ ಎಂದು ಕರೆಯುವ ಇತಿಹಾಸ ಕಾವ್ಯಗಳಲ್ಲಿ ಸಾರ್ವಕಾಲಿಕ ಕಾವ್ಯತ್ವ ಹೆಚ್ಚಾಗಿ ಕಾಣುವುದು. ಮಹಾಕಾವ್ಯಗಳ ಮತ್ತು ಈಚಿನ ರೊಮ್ಯಾಂಟಿಕ್ ಕಾವ್ಯಗಳ ಕಲೆಗಾರಿಕೆ ನುಣುಪು

ನವುರು, ಸೂಕ್ಷ್ಮ ಪ್ರೌಢಿಮೆ, ಧ್ವನಿಪೊಸೆ, ಭಾವಮಯತೆ, ಉದ್ರೇಕ ಇಲ್ಲವಾದರೂ ಮಾನವಜೀವನದ ಸತ್ವಕ್ಕೂ ಒಟ್ಟು ಸಹಜತೆಗೂ ಹೆಚ್ಚು ಶುಭ್ರವಾದ ಪ್ರಕಾಶನ ದೊರೆತಿರುವುದು ರಾಮಾಯಣಾದಿಗಳ ಚಿರಂತನತೆಗೆ ಕಾರಣ. ಕೆಲವೇಳೆ ಅಲ್ಲಿನ ನಿರಾಭರಣ ಸೌಂದರ್ಯ ಪರ್ವತ ಶಿಖರಗಳಂತೆ ಮಹಾರಣ್ಯಗಳ ಮಹಾವೃಕ್ಷಗಳಂತೆ ಕಡಲಿನ ವಿಸ್ತಾರದಂತೆ ಆಳದಂತೆ ಕಾಣುವುದು."

ಮತ್ತೆ ೧೯೬೭ರಲ್ಲಿ ಬಂದ ಅವರ "ಸಾಹಿತ್ಯ ; ಸಂಪ್ರದಾಯ ಮತ್ತು ಹೊಸ ಮಾರ್ಗ"ದಲ್ಲಿ "ಕಾದಂಬರಿ"ಗಳನ್ನು ಕುರಿತು ಆಡುವಾಗ ಹೀಗೆ ಹೇಳಿದ್ದಾರೆ: "ವ್ಯಾಸಂಗ, ಕಲ್ಪನಾಸಾಮರ್ಥ್ಯ, ನೋಟದ ತೀಕ್ಷ್ಣತೆ, ಸಂಗ್ರಹಣಶಕ್ತಿ, ಧಾರಣೆ ಬೆಳೆದಂತೆಲ್ಲ ಅವಧಾನಕ್ಕೆ ವಸ್ತು ವಿಷಯ ಸಿಕ್ಕುತ್ತದೆ. ಅವಧಾನ, ಕಣ್ಣ ಚುರುಕು, ಬಗೆಯ ಗ್ರಹಿಕೆ, ಆಲೋಚನೆ ಬೆರೆತರೆ ಆಗದ ಕಾರ್ಯವಾವುದು ? ಬಹು ಆಳ ವಾಗಿ, ಬಹುದೂರವಾಗಿ ಬೇರು ನಟ್ಟು ಚಾಚಿ ಒಳ ಕತ್ತಲಿನಲ್ಲಿ ಪಾಷಾಣಗಳ ಅಡ್ಡಿ ಯಲ್ಲಿ ದೃಢವಾಗಿ ಭೂತಳದಲ್ಲಿ ನಟ್ಟು, ದೊಡ್ಡ ತಾಳು ಬಲಿಸಿ, ಮೇಲೆದ್ದು ವಿಸ್ತಾರವಾಗಿ ಕೊಂಬೆ ರೆಂಬೆ ತೊಟ್ಟ ಮರ ಭೂಮಿಯಿಂದ ಸಮಸ್ತ ಸಾರವನ್ನೂ ಹೀರಿಕೊಳ್ಳುತ್ತದೆ. ತನ್ನ ದಿಂಡನ್ನು ಬಲಿಸಿಕೊಳ್ಳುತ್ತದೆ ; ಚಿಗುರು, ಎಲೆ, ಹೂ, ಹಣ್ಣು, ನಿರಂತರವಾಗಿ ಬಿಡುತ್ತದೆ. ಅದರ ನೆಳಲು ಸಾವಿರ ಜನಕ್ಕೆ ಆಶ್ರಯ ಕೊಡುತ್ತದೆ ; ಸುತ್ತಣ ಪ್ರಕೃತಿಯ ಆವರಣದ ಎಲ್ಲ ಬಿಸಿಲು, ಗಾಳಿ, ಬೆಳಕುಗಳ ಸಾರ ಪೋಷಣವನ್ನು ಸಂಗ್ರಹಿಸಿ ಸ್ವಂತ ಶಕ್ತಿಯನ್ನು ಸಂಪನ್ನಗೊಳಿಸಿಕೊಂಡು, ನೂರು ಕಾಲ ನಿಲ್ಲುವ ಸ್ಥಿರತೆಯನ್ನೂ ಹಿರಿಮೆಯನ್ನೂ ಎತ್ತಿ ತೋರಿಸಿ ಬದುಕು ತ್ತದೆ. ಅಂಥಾ ಮಹಾವೃಕ್ಷಗಳ ಬೆಳವಣಿಗೆಯಂತೆ ನಮ್ಮ ಕಾದಂಬರಿಯೂ ಆಗ ಬಲ್ಲುದು. ಪ್ರಾಚೀನ ಕಾಲಗಳಲ್ಲಿ ಇತಿಹಾಸ ಕಾವ್ಯಗಳಾಗಿ ಇಲಿಯಡ್, ರಾಮಾ ಯಣ, ಮಹಾಭಾರತ, ನಿಬುಲುಂಗೆನ್ ಲೈಡ್, ಡಿವೈನ್ ಕಾಮೆಡಿ ಮುಂತಾದವು ಹುಟ್ಟಿದುದು ಹಾಗೆ. ಇಂದಿನ ಕಾದಂಬರಿ ಆ ಎಪಿಕ್‌ನ ಕಾರ್ಯವನ್ನು ಮಾಡ ಬೇಕಿದೆ."

ವಿ.ಸೀ. ಅವರ ವಿಮರ್ಶೆ ಶ್ರೀಯವರ 'ಅಶ್ವತ್ಥಾಮನ್' ನಾಟಕದ ವಿಷಯ, ರೀತಿ, ರಚನೆ, ದೃಷ್ಟಿಗಳಲ್ಲಿನ ವಿಶೇಷತೆಯನ್ನು ಪರಿಚಯಮಾಡಿಕೊಡುತ್ತದೆ. ಅದು ಹೇಗೆ ಕನ್ನಡ ಸಾಹಿತ್ಯಕ್ಕೆ ಪೂರ್ತಿಯಾಗಿ ಹೊಸ ಕಾಣ್ಕೆ ಎಂಬುದನ್ನು ಸ್ಥಾಪಿಸುತ್ತದೆ. ಅಂತೆಯೇ, ಕಾಳಿದಾಸ ಮಹಾಕವಿಯ ಶಾಕುಂತಲ ನಾಟಕವನ್ನು ಪರಿಚಯ ಮಾಡಿ ಕೊಡುತ್ತ ಕಾಳಿದಾಸನ "ಕವಿತಾಮಾಧುರ್ಯ, ಲಾಲಿತ್ಯ, ಆತನ ಉಪಮೆಗಳ ಸಹಜತೆ, ನುಣ್ಪು, ಚೆಲುವು, ಅರ್ಥಸಂಪನ್ನತೆ, ಧ್ವನಿ ಗಂಭೀರತೆ, ಸನ್ನಿವೇಶ ಚಿತ್ರಗಳ ಸೌಭಾಗ್ಯ, ಚಿತ್ತ ಸಂಸ್ಕಾರ, ನಾಟಕದಲ್ಲಿ ತುಂಬಿ ಕಾಣುವ ಬಗೆಬಗೆಯ ಬೆಳಕು, ಬಣ್ಣ, ಶಬ್ದ, ಗತಿ, ರೇಖಾವಿಲಾಸ, ಸಂದರ್ಭಕ್ಕೂ ಪಾತ್ರ ಸ್ವಭಾವಕ್ಕೂ ತಕ್ಕಂತೆ

ಬಳಸುವ ವೃತ್ತಗಳ ರಚನಾ ವಿಲಾಸ, ವ್ಯಾಪಕವಾಗಿ ಕಾಣಿಸುವ ಜೀವನದರ್ಶನ, ಅದರ ಸ್ನಿಗ್ಧತೆ"—ಇವುಗಳನ್ನು ಮುಕ್ತಕಂಠದಿಂದ ಹೊಗಳುತ್ತದೆ.

ಅವರ ವಿಮರ್ಶೆ ಕೆಲವೇಳೆ ತನ್ನ ದೃಷ್ಟಿಗೆ ಬರ್ಬರವೆಂದು ತೋರಿದ್ದನ್ನು ಖಂಡಿಸಲೂ ಹಿಂಜರಿಯದು. ಇದಕ್ಕೆ ನಿದರ್ಶನ "ಕರ್ಣಾಟಕ ಕಾದಂಬರಿ" ಎಂಬ ಕಿರುಹೊತ್ತಗೆಯ ಕಡೆಯ ಅಧ್ಯಾಯದಲ್ಲಿ ಒದಗುತ್ತದೆ. ಅಲ್ಲಿ ಗಿಳಿ ಶೂದ್ರಕ ಮಹಾ ರಾಜನಿಗೆ ಜಯಾಶೀರ್ವಾದ ಮಾಡುವ ಪ್ರಖ್ಯಾತ ಆರ್ಯೆಯನ್ನು ಕುರಿತು ಎ.ಸೀ. ಅವರ ಟೀಕೆ ಇದು : "ರಾಜನಿಗೆ ಜಯವಾಗಲಿ ಎನ್ನಿ, ರಾಜನ ಹಗೆಗಳು ಹೆಸರಿಲ್ಲದೆ ಅಳಿಯಲಿ ಎನ್ನಿ, ಅವರ ಹೆಂಡಿರು ವಿಧವೆಯರಾಗಲಿ ಎಂಬ ಬರ್ಬರತೆಯ ಮೂಲಕ ಏಕೆ ಹರಸಬೇಕು ? ಇವನಿಗೆ ಕೆಡುಕು ಮಾಡದ ಹೆಣ್ಣುಗಳ ಅಳಲು ವೈಧವ್ಯದ ನೋವು, ಬೇನೆ ಕಣ್ಣೀರುಗಳನ್ನು ಮಹಾಪೂರವಾಗಿ ವರ್ಣಿಸಿ, ಹೆಣ್ಣುಗಳಾದ ಅವರಿಗೆ ತಾಳಲಾಗದ ಅಳುವನ್ನು ತರುವುದು ಏನು ವೀರ ವರ್ತನೆ ? ಹಿಂದೂ ಸಮಾಜದಲ್ಲಿ ವೈಧವ್ಯದುಃಖ ಅಳಿಯತೀರದ್ದು, ನುಡಿದು ಮುಗಿಯದ್ದು. ಈ ದೇಶದಲ್ಲಿ ಆ ಚಿತ್ರದ ಉರಿ ಬೇಗೆಯನ್ನು ಬಾಯಿ ಚಪ್ಪರಿಸುತ್ತ ವರ್ಣಿಸಬಾರ ದೆನ್ನಿಸುತ್ತದೆ. ಒಂದು ಬಗೆಯ ಸಂಪ್ರದಾಯವೇ ಚಮತ್ಕಾರವನ್ನು ಇನ್ನೂ ಮೆಚ್ಚುತ್ತಿದೆಯಾದ್ದರಿಂದ ಈ ಮಾತನ್ನು ನುಡಿಯುತ್ತಿದೆ. ಇಲ್ಲಿನ ಶ್ಲೇಷೆಯ ಅಂಶ ಅಂಶವೂ ಅನಾರ್ಯ....ಪ್ರೇಮದ ಶುಚಿಸಂಪತ್ತಿಯನ್ನು ಬೆಳಗುವ ಮಹಾಕಾವ್ಯದಲ್ಲಿ ಮಂಗಳಾಚರಣದಂತಿರುವ ಈ ಪದ್ಯವನ್ನು ಗಿಳಿಯ ಬಾಯಲ್ಲಿ ಹೇಳಿಸುವುದು ಸರಿಯಲ್ಲವೆನಿಸುವುದು. ಕವಿ ಈ ನಮ್ಮ ವಿಪರೀತ ರೀತಿಯಲ್ಲಿ ಯೋಚಿಸಲಿಲ್ಲ, ನಿಜ. ಅದಕ್ಕೆ ಎಷ್ಟು ಪಾಂಡಿತ್ಯವಿತ್ತು ಎಂದು ತೋರಿಸಿ ಬೆರಗುಗೊಳಿಸುವುದು, ಶೂದ್ರಕನ ಕೌತುಕವನ್ನು ಕೆರಳಿಸುವುದು ಅವನ ಉದ್ದೇಶ. ಕಾವ್ಯದಲ್ಲಿನ ವೈಧವ್ಯ, ಅಳಲು, ಮುತ್ತಿನ ಹಾರ, ತಪಸ್ಸುಗಳನ್ನು ಬಳಸಿನಲ್ಲಿ ತೋರಿಸುವ ಇಚ್ಛೆಯೂ ಆಗಿರಬಹುದು. ಉಕ್ತಿ ಚಾತುರ್ಯದ ಮೂಲಕ ಅರ್ಥಪ್ರೌಢಿಮೆಯನ್ನು ಕಾಣಿಸುವ ಪದ್ಯವನ್ನು ಬರೆದು ಜಗತ್ತಿನ ಮೆಚ್ಚುಗೆ ಬೇಡಿದ ಕವಿ. ಆ ಮೆಚ್ಚುಗೆ ಕೊಡ ಬಹುದು. ಆದರೆ ಕಾವ್ಯದ ಮೊದಲ ರಾಜಾಶೀರ್ವಾದವಾಗಿ ಇಂತಹ ಪದ್ಯ ಇರು ವುದು ಬೇಡವೆನ್ನಿಸುತ್ತದೆ."

ಎ.ಸೀ. ಅವರು ಆದಿಕವಿಯೂ ಮಹಾಕವಿಯೂ ಆದ ಪಂಪನ ಮೇಲೆ ಇಂಗ್ಲಿಷಿನಲ್ಲಿ ಒಂದು ವಿಮರ್ಶಾತ್ಮಕ ಗ್ರಂಥವನ್ನು ಬರೆದಿರುವುದನ್ನು ಈ ಲೇಖನದ ಮೊದಲಿನಲ್ಲೇ ಸೂಚಿಸಿದೆ. ಆ ಮಹಾಕವಿಯ ಮೇಲೆ ಇಂಗ್ಲಿಷಿನಲ್ಲಿ ಇಷ್ಟು ವಿಸ್ತಾರವಾದ ಒಂದು ಗ್ರಂಥ ಬಂದಿರುವುದು ಇದೇ ಮೊದಲು. ಪಂಪನ ಕಾಲ, ದೇಶ, ಧರ್ಮ, ಅವನು ಬರೆದ ಮಹಾಕಾವ್ಯಗಳು, ಅವುಗಳ ಶಕ್ತಿ ಸೌಂದರ್ಯಗಳು, ಪಾತ್ರಗಳು, ಶೈಲಿ, ತಂತ್ರ, ಬೆಲೆಗಳಿಗೆ ಸಂಬಂಧಿಸಿದ ವಿವರಗಳು—ಇವುಗಳೆಲ್ಲವನ್ನೂ ಕುರಿತು ಅಲ್ಲಿ ಸಹೃದಯ ವಿಮರ್ಶೆ ನಡೆದಿದೆ. ಅವರಿಗೆ ಇಂಗ್ಲಿಷ್ ಭಾಷೆಯ

ಮೇಲಿರುವ ಪ್ರಭುತ್ವಕ್ಕೂ ಇದು ನಿದರ್ಶನವಾಗಿದೆ. ಇವರ ಪ್ರಾರಂಭದ ಎರಡು ಪುಟಗಳಲ್ಲಿ ಇತಿಹಾಸ ಕಾವ್ಯಗಳ ಮತ್ತು ಮಹಾಕಾವ್ಯಗಳ ಕ್ಲಾಸಿಕ್ ಬಗೆಗೂ, ಮಹಾಕವಿ ಪಂಪನನ್ನು ಆದಿಕವಿ ಎನ್ನುವುದರ ಅರ್ಥವೇನು, ಪಂಪನ ಮಹಾಕಾವ್ಯಗಳ ಹಿರಿಮೆಯೇನು, ಅವುಗಳ ವಿಶಿಷ್ಟತೆ ಏನು ಎಂಬುದನ್ನೂ ವಿಸ್ತರಿಸಲಾಗಿದೆ.

ವಿ.ಸೀ. ಅವರ ವಿಮರ್ಶೆಯ ಕ್ಷೇತ್ರ ವಿಶಾಲವಾದದ್ದು. ಅದು ಪಂಪನನ್ನು ಮೆರೆಸುತ್ತದೆ. ಭಾರತಗಳಲ್ಲಿ ಶ್ರೀಕೃಷ್ಣ ಹೇಗೆ ರೂಪುಗೊಂಡಿದ್ದಾನೆಂಬುದನ್ನು ಚಿತ್ರಿಸುತ್ತದೆ; ಅಲ್ಲಮ ಪ್ರಭುವನ್ನು ಮೆಚ್ಚಿಕೊಂಡು "ಇಂಥ ಮಹನೀಯರು ಹುಟ್ಟಿ ಆ ರೀತಿ ಬಾಳಿದ್ದರಿಂದಲೇ ನಮ್ಮ ಸಂಸ್ಕೃತಿಗೆ ದೊಡ್ಡತನ ಬಂದಿರುವುದು" ಎಂದು ಸಾರುತ್ತದೆ. ಉದ್ವೇಗಗಳನ್ನಳಿಸಿ ಶಾಂತಿ ಸಂತೋಷ ಧೈರ್ಯಗಳನ್ನು ತರುವ 'ದಾಸರ ಪದ'ಗಳನ್ನೂ ಆಪ್ತತೆ ಸಹಜತೆ ಭಾವ ಬಂಧುರತೆ ಭವ್ಯತೆಗಳಿಂದ ಬೆಳಗುವ 'ವಚನ'ಗಳನ್ನೂ ಸ್ವಾಗತಿಸುತ್ತದೆ. ಜನಪದ ಗೀತೆಗಳಲ್ಲಿ ತ್ರಿಪದಿಗಳಲ್ಲಿ ಮತ್ತು ರಾತ್ರಿಯ ಹೊತ್ತು ಬೀದಿಕವಳದವರು ದನಿಯೆತ್ತುವ 'ಹಾಲು ಅನ್ನದ ಬುತ್ತಿ, ಕೈಲಿ ಚಿನ್ನದ ಕತ್ತಿ' ಎಂಬಂಥ ಕನ್ನಡದ ಹಾಡುಗಳಲ್ಲಿ ಇರುವ ಲೋಕಾನುಭವದ ಕಾವ್ಯವನ್ನು ಮೆಚ್ಚಿ 'ಇವೆಲ್ಲ ಈಗೆಲ್ಲಿ ಹೋದವೆಂ'ದುಕೊಳ್ಳುತ್ತದೆ. ಅನೇಕ ಮಟ್ಟುಗಳ, ರೀತಿಗಳ, ಕೃತಿಗಳ ಪರಿಚಯ ಅದಕ್ಕಿದೆ.

ಈ ಹೊಸ ಕಾಲದ ಕನ್ನಡ ಕೃತಿಗಳನ್ನೂ ಇವರ ವಿಮರ್ಶೆ ಮುಟ್ಟದೆ ಇಲ್ಲ. ಕೆಲವು ವೇಳೆ ನೇರವಾಗಿ, ಕೆಲವು ವೇಳೆ ಪ್ರಾಸಂಗಿಕವಾಗಿ ಇದನ್ನು ಮಾಡಿದೆ; ಆದರೆ ಅವು ಅಲ್ಲಲ್ಲಿ ಬಿಡಿಲೇಖನಗಳಲ್ಲಿ, ಅವಲೋಕನಗಳಲ್ಲಿ ಸೇರಿಕೊಂಡಿವೆ.

ಕನ್ನಡದ ವಿಮರ್ಶೆಯನ್ನು ಕುರಿತು ವಿ.ಸೀ. ಅವರು ಹೀಗೆ ಹೇಳಿದ್ದಾರೆ:

"ಎಷ್ಟೋ ಮಂದಿ ವಿದ್ವಾಂಸರು ಪುಸ್ತಕ ವಿಮರ್ಶೆಗಳಲ್ಲಿ, ಸ್ವತಂತ್ರ ಮೌಲ್ಯ ನಿರ್ಣಯಗಳಲ್ಲಿ ತೊಡಗಿ ೪೦ ವರ್ಷಗಳಲ್ಲಿ ಒಳ್ಳೆಯ ವಿಮರ್ಶೆಯನ್ನು ಮಾಡಿದ್ದಾರೆ. ನಯವಾಗಿ ಮೃದುವಾಗಿ ನುಡಿದಿರುವವರು ಕೆಲವರು. ಒರಟಾಗಿ ಬರ್ಬರವಾಗಿ, ಕರ್ಕಶವಾಗಿ ಆರ್ಭಟದಿಂದ ನುಡಿದಿರುವವರು ಕೆಲವರು."

"ಇಂದಿನದು ಕಾವ್ಯಾವಲೋಕನಕ್ಕೆ ತಕ್ಕುದು, ಸಾಕಲ್ಯದಿಂದ ವಿಮರ್ಶೆ ಮಾಡಬೇಕಾದರೆ ಕಾಲಗತಿ ಬೇಕು ಎಂಬ ವಾದ ಪೂರ್ತಿ ತುಳಿದು ಹಾಕುವಂಥದಲ್ಲ. ಆದರೂ ನಮ್ಮಲ್ಲಿ ವಿಮರ್ಶೆ ಬೆಳೆಯಲಿಲ್ಲವೆಂದು ಇಂಥವರೇ ನುಡಿವುದು ಸೋಜಿಗ."

೬

ನಾನು ಹೈಸ್ಕೂಲಿನಲ್ಲಿ ಓದುತ್ತಿದ್ದಾಗ, ಇಂಗ್ಲಿಷ್ ಉಪಾಧ್ಯಾಯರೊಬ್ಬರು ವಿದ್ಯಾರ್ಥಿಗಳಾದ ನಮ್ಮೆದುರಿಗೆ ಒಂದು ಗುಲಾಬಿ ಹೂವನ್ನಿಟ್ಟು ಇದರ ವಿಷಯ ವಾಗಿ ಒಂದು ಪುಟದಷ್ಟು ವರ್ಣನೆಯನ್ನು ಬರೆಯಿರಿ ಎಂದರು. ಅದಕ್ಕೆ ಒಂದೆಸೀ ನಾವು ಆನೆಯ ಮೇಲೆ ಕತ್ತೆಯ ಮೇಲೆ ಅಂಥವನ್ನು ಬರೆದಿದ್ದವರು, ಇದೇನು ಕಷ್ಟ ಎಂದು ಇದಕ್ಕೂ ಕೈಹಾಕಿದೆವು; ನಮ್ಮ ಬರಹಗಳನ್ನೆಲ್ಲ ನೋಡಿದ ಮೇಲೆ ಉಪಾಧ್ಯಾಯರು, ಇವುಗಳಲ್ಲಿ ಕೆಲವಾದರೂ ತಪ್ಪಿಲ್ಲದೆ ಸಾಕಷ್ಟು ಚೆಲುವಾಗಿವೆ; ಆದರೆ ಈ ಹೂವನ್ನು ನೋಡಿ–ಒಂದೂ ಇದರಂತಿಲ್ಲ ಎಂದರು. ಗುಲಾಬಿ ಹೂವನ್ನು ಕುರಿತ ಬರಹ ಗುಲಾಬಿ ಹೂವಿನಷ್ಟೇ ಚೆಲುವಾಗುವುದು ಸಾಧ್ಯವಿಲ್ಲ. ವಿ.ಸೀ. ಅವರ ಪಂಪಾಯಾತ್ರೆಯನ್ನು ಕುರಿತ ವಿಮರ್ಶೆಯ ಪಾಡೂ ಅಷ್ಟೇ. ಅದು ನಮ್ಮ ರಸಿಕತೆಗೆ ಒಂದು ಒರೆಗಲ್ಲು; ಹಿತಮಿತ ವಚನನೂ ಪ್ರತಿಭಾಸಂಪನ್ನನೂ ಆದ ತರುಣ ಕವಿ ಕಟ್ಟಿದ ಭಾವಗೀತೆ. ಕನ್ನಡದಲ್ಲಿಯೇ ಮೊತ್ತಮೊದಲು ಯಶಸ್ವೀ ಪ್ರವಾಸಕಥನವಾಗಿರುವುದಷ್ಟೇ ಅಲ್ಲ ಅದರ ಬೆಲೆ. ಅದರ ಮಟ್ಟಿಗೆ ಓದುಗ ಓದುಗನಾಗಿಯೇ ಉಳಿಯುವುದಿಲ್ಲ; ಕವಿಯೊಂದಿಗೆ, ಪ್ರವಾಸ ಮಾಡಿದ ಮಹಾನು ಭಾವರೊಂದಿಗೆ ಸೇರಿಕೊಂಡು ಅವರು ನೋಡಿದ ನೋಟ, ಕಂಡ ಕನಸುಗಳಲ್ಲಿ ಭಾಗಿಯಾಗುತ್ತಾನೆ. ಸೌಂದರ್ಯ ಪ್ರೇಕ್ಷಿತವಾದ ಸತ್ಯವನ್ನು ಕಾಣುತ್ತಾನೆ; ಇವರ ಜೊತೆ ಪಂಪಾಯಾತ್ರೆ ಮಾಡಿದ್ದು ತನ್ನ ಬಾಳಿನ ಮಹಾಭಾಗ್ಯವೆಂದು ನೆನೆಯು ತ್ತಾನೆ. ಹನ್ನೆರಡು ವರುಷಗಳಿಗೊಮ್ಮೆ ಬಾರಕೂರಿಗೆ ಹಿಂದಿರುಗುವ ಚೈತ್ರ ಪೂರ್ಣಿಮೆಯ ವೈಭವವನ್ನು 'ಶ್ರೀನಿವಾಸರು' ತಮ್ಮ 'ಸೋಜಿಗದ ಹೊಳಲಿ'ನಲ್ಲಿ ವರ್ಣಿಸಿದ್ದಾರೆ. ಅದರಂಥ ಅನುಭವವೇ ಪಂಪಾಯಾತ್ರೆಯ ಓದುಗನಿಗೆ, ಯಾತ್ರಿಕ ನಿಗೆ ಆಗುತ್ತದೆ. "ಯಾತ್ರೆ ಮುಗಿಯಿತು" ಎಂದು ವಿ.ಸೀ. ತಮ್ಮ ಕಥನವನ್ನು ನಿಲ್ಲಿಸಿದ್ದಾರೆ. ಆ ಮುಗಿವಿನ ಸೊಗಸೇ ಸೊಗಸು. ಕೃತಕೃತ್ಯತೆಯ ವಿನಮ್ರ ಆತ್ಮ ವಿಶ್ವಾಸ ಆ ಎರಡು ಪದಗಳಲ್ಲಿ ಮಿನುಗುತ್ತಿದೆ; ಈ ತೆರನಾದ ಮುಕ್ತಾಯ ಅಪರೂಪ. ಈ ಕೃತಿ ಅಲ್ಲಿಗೆ ಮುಗಿಯಿತು; ಆದರೆ ಅದರ ಓದುಗರ ಪ್ರವಾಸ ಮುಗಿಯದು.

೭

ವಿ. ಸೀ. ಅವರ 'ಸೊಹ್ರಾಬ್–ರುಸ್ತುಂ' ನಾಟಕ ೧೯೩೦ರಲ್ಲಿ ರಚಿತವಾದದ್ದು. ಇಂಗ್ಲಿಷಿನಿಂದ, ಗ್ರೀಕಿನಿಂದ ಕನ್ನಡಕ್ಕೆ ಕಾವ್ಯ ನಾಟಕಗಳನ್ನು ತರಲು ಶ್ರೀ ಅವರು ಸ್ವಂತವಾಗಿ ದುಡಿದದ್ದೇ ಅಲ್ಲದೆ. ಅಂಥ ಕೆಲಸಗಳನ್ನು ಮಾಡಬೇಕೆಂಬ ಉತ್ಸಾಹ

ವನ್ನು ಕಿರಿಯರಲ್ಲೂ ಬಿತ್ತಿದರು. ಆ ಆವರಣದಲ್ಲಿದ್ದ ವಿ.ಸೀ. ಅವರಿಗೆ ಮ್ಯಾಥ್ಯೂ ಆರ್ನಾಲ್ಡ್ ಕವಿಯ "ಸೋಹ್ರಾಬ್ ಅಂಡ್ ರುಸ್ತುಂ" ಕವನವನ್ನೋದಿದ ಮೇಲೆ ಅದನ್ನು ನಾಟಕರೂಪದಲ್ಲಿ ಕನ್ನಡಿಸಬೇಕೆಂಬ ಅಭಿಲಾಷೆ ಹುಟ್ಟಿದ್ದು ಸಹಜವೇ. ಆ ಕಥೆ ಮ್ಯಾಥ್ಯೂ ಆರ್ನಾಲ್ಡ್‌ಗೆ ಸಿಕ್ಕಿದ್ದು ಫಿರ್ದೂಸಿ ಮಹಾಕವಿಯ 'ಷಹ ನಾಮಾ' ದಲ್ಲಿ. ಕಥೆ ಲೋಕ ಪ್ರಸಿದ್ಧವಾದುದು. ವಿ. ಸೀ. ಅವರು ತಾಯಿ ತಹ ಮೀನಳನ್ನು ಯುದ್ಧರಂಗಕ್ಕೆ ಕರೆತರುವ ಒಂದು ಸಣ್ಣ ಮಾರ್ಪಾಟನ್ನು ಮಾಡಿ ಕೊಂಡು, ತಮ್ಮ ಬಿಗಿಯಾದ, ರಸವತ್ತಾದ ಗದ್ಯ ಶೈಲಿಯಲ್ಲಿ ಈ ನಾಟಕವನ್ನು ಕನ್ನಡಕ್ಕೆ ತಂದಿದ್ದಾರೆ.

ವಿ. ಸೀ. ಅವರ ಇನ್ನೊಂದು ಕನ್ನಡ ನಾಟಕ "ಆಗ್ರಹ." ಮಹಾಭಾರತದ ಗದಾಯುದ್ಧದ ಅನಂತರದ ಘಟನೆಗಳಲ್ಲಿ ಮುಖ್ಯವಾದ ಅಶ್ವತ್ಥಾಮ ಪ್ರಕರಣ ವನ್ನು ಈ ನಾಟಕದಲ್ಲಿ ಎತ್ತಿಕೊಳ್ಳಲಾಗಿದೆ. ಗ್ರೀಕ್ ಮಹಾನಾಟಕಕಾರರಲ್ಲಿ ಒಬ್ಬ ನಾದ ಸೊಫೊಕ್ಲೀಸ್ ಕವಿಯ 'ಆಯಾಸ್' ಎಂಬ ರುದ್ರ ನಾಟಕವನ್ನು ಅನು ಸರಿಸಿ, ಶ್ರೀ ಯವರು ಕನ್ನಡದಲ್ಲಿ 'ಅಶ್ವತ್ಥಾಮನ್' ಎಂಬ ನಾಟಕವನ್ನು ರಚಿಸಿ ದರು. ವಿ. ಸೀ. ಅವರ 'ಆಗ್ರಹ'ದಲ್ಲೂ ಬರುವುದು ಅಶ್ವತ್ಥಾಮನ ಪ್ರಕರಣವೇ. ಶ್ರೀಯವರ ಅಶ್ವತ್ಥಾಮನು ಗ್ರೀಕ್ ನಾಟಕದಲ್ಲಿನ ವೀರೋಚಿತ ರೀತಿಯಲ್ಲಿ ತನ್ನ ಖಡ್ಗದ ಮೇಲೆ ತಾನೇ ಬಿದ್ದು ಮಡಿಯುತ್ತಾನೆ. 'ಆಗ್ರಹ' ನಾಟಕದಲ್ಲಾದರೋ ಅಶ್ವತ್ಥಾಮ ತನ್ನ ತಲೆಮಣಿಯನ್ನು ಭೀಮ ಕಿತ್ತುಕೊಂಡ ಬಳಿಕ, ಕೃಷ್ಣನ ಶಾಪಕ್ಕೆ ಒಳಗಾಗಿ, "ಅಯ್ಯೋ ಅಯ್ಯೋ, ಮೂರು ಸಾವಿರ ವರ್ಷಗಳು! ಇಹೈವ ಫಲಂ! ಇಹೈವ ಫಲಂ!" ಎಂದು ಚೀರಿ ಹೇಳುತ್ತ ತತ್ತರಿಸಿ ತಲೆಯನ್ನು ಹಿಡಿದುಕೊಂಡು ಹೋಗುತ್ತಾನೆ. ಈ ಅಶ್ವತ್ಥಾಮನ ಗತಿಯನ್ನು ಕಂಡು ಯಾರೂ ಭಯಪಡ ಬಹುದು. "ಶ್ರೀಶೈಲಶಿಖರ"ವೆಂಬುದು ವಿ. ಸೀ. ಅವರ ಮೂರನೆಯ ನಾಟಕ; ೧೯೬೦ರಲ್ಲಿ ಇದು ಪ್ರಕಟವಾಯಿತು. ಶ್ರೀ ಶೈಲಕ್ಕೆ ಸಂಬಂಧಿಸಿದ ಈ ಕಥೆಯನ್ನು ಮೋಟಗಾನಹಳ್ಳಿ ಸುಬ್ರಹ್ಮಣ್ಯ ಶಾಸ್ತ್ರಿಗಳು ತಮಗೆ ಹೇಳಿದುದಾಗಿಯೂ, ಅದ ರಲ್ಲಿ ಬರುವ ಹೆಣ್ಣಿನ ಬಾಳು ತಮಗೆ ದೊಡ್ಡದಾಗಿ ಕಂಡಿತೆಂದೂ ವಿ. ಸೀ. ಅವರು ಮುನ್ನುಡಿಯಲ್ಲಿ ಹೇಳಿದ್ದಾರೆ. ಕಥೆ ಸಂಗ್ರಹವಾಗಿ ಹೀಗಿದೆ:

ಒಂದನೆಯ ಅಂಕದಲ್ಲಿ ಶಿವಗೌರಿಯರು ಶ್ರೀಶೈಲವನ್ನು ಸಂದರ್ಶಿಸುವ ನಿರ್ಧಾರವನ್ನು ಮಾಡುತ್ತಾರೆ. ಲೋಕದ ಜನರಿಗೆ ಮುಕ್ತಿ ಎಷ್ಟು ಸುಲಭವೆಂಬು ದನ್ನು ಗೌರಿಗೆ ಕಾಣಿಸುವುದು ಶಿವನ ಉದ್ದೇಶ.

ಎರಡನೆಯ ಅಂಕದಲ್ಲಿ, ಶಿವಗೌರಿಯರು ಮುದುಕ ಮುದುಕಿಯರ ವೇಷ ಧರಿಸಿ, ಶಿವರಾತ್ರಿಯುತ್ಸವಕ್ಕಾಗಿ ಶ್ರೀಶೈಲಕ್ಕೆ ಹೋಗುತ್ತಿರುವವರ ಗುಂಪಿನಲ್ಲಿ ಸೇರಿಕೊಳ್ಳುತ್ತಾರೆ. ತಾವು ಯಾರೆಂಬುದನ್ನರಿಯದ ಜನ ತಮ್ಮ ತಮ್ಮೊಳಗೆ ಆಡಿ ಕೊಳ್ಳುವ ಮಾತುಗಳನ್ನು ಇವರು ಕೇಳುತ್ತಾರೆ.

ಮೂರನೆಯ ಅಂಕದಲ್ಲಿ, ದೇವಸ್ಥಾನದ ಹತ್ತಿರದ ಪುಷ್ಕರಿಣಿಯಲ್ಲಿ ಪುಣ್ಯ ಸ್ನಾನಕ್ಕಾಗಿ ಅಸಾಧ್ಯ ಜನಸಂದಣಿ. ಈ ವೃದ್ಧ ದಂಪತಿಗಳೂ ಅಲ್ಲಿ ಸೇರಿದ್ದಾರೆ. ಸುತ್ತಲೂ ಜನ ಕನ್ನಡದಲ್ಲಿ ತೆಲುಗಿನಲ್ಲಿ ತಮಗೆ ತೋರಿದಂತೆ ಮಾತಾಡುತ್ತಿದ್ದಾರೆ. ಮುದುಕಿ ಸ್ನಾನಮಾಡಿ ಬಂದು ಮೆಟ್ಟಿಲ ಮೇಲೆ ಕುಳಿತಿದ್ದಾಳೆ. ಮುದುಕ ನೀರಿಗಿಳಿದಿದ್ದಾನೆ. ಮೆಟ್ಟಲು ಸವೆದಿದೆ ಎಂದು ಪಕ್ಕದವರು ಎಚ್ಚರಿಕೆ ಕೊಡುತ್ತಿದ್ದಾರೆ. ಇವರು ಯಾರು ಎಂದು ಜನ ಕೇಳುತ್ತಿದ್ದಾರೆ. ಮುದುಕಿ ಮಾತನಾಡುತ್ತಿದ್ದಾಳೆ. ಹೀಗಿರುವಲ್ಲಿ, ಈಜುತ್ತಿದ್ದ ಮುದುಕ ಕಾಲು ಸೋತು ಮುಳುಗಿ ಹೋಗುತ್ತಿರುವುದು ಕಾಣುತ್ತದೆ. 'ಅಯ್ಯೋ! ಅವರನ್ನು ಉಳಿಸಿ' ಎಂದು ಮುದುಕಿ ಎಲ್ಲರನ್ನೂ ಕೇಳಿಕೊಳ್ಳುತ್ತಾಳೆ. ಪಾಪಲೇಪವಿದ್ದವರಿಗೆ ತನ್ನ ಗಂಡನ ಮೈ ಸಿಕ್ಕುವುದಿಲ್ಲವೆಂದೂ, ನೀರಿಗಿಳಿದು ಅವನನ್ನು ಉಳಿಸುವವರು ಮೊದಲು ತಾನು ಕೊಡುವ ಚಂದನವನ್ನು ಹಚ್ಚಿಕೊಳ್ಳಬೇಕೆಂದೂ, ಹಾಗೆ ಮಾಡದೆ ಮುಟ್ಟಬಾರದೆಂದೂ ಅವಳು ಎಲ್ಲರಿಗೂ ತಿಳಿಸುತ್ತಾಳೆ.

ಅಲ್ಲಿ ಸೇರಿದ್ದ ನರಸರೆಡ್ಡಿ, ವೀರಭದ್ರರಾವ್, ಶೇಷಶಾಸ್ತ್ರಿ ಚಂದನವನ್ನು ಸ್ವೀಕರಿಸಿ ಹಣೆಗಿಟ್ಟುಕೊಂಡು ನೀರಿಗಿಳಿಯುತ್ತಾರೆ. ಮುದುಕಿ ಕೂಗುತ್ತಲೇ ಇರುತ್ತಾಳೆ.

ಈ ಮಜಲಿನಲ್ಲಿ ೩ ಒಳದೃಶ್ಯಗಳು ಒಂದಾದ ಮೇಲೊಂದರಂತೆ ಬರುತ್ತವೆ; ಅವುಗಳಲ್ಲಿ ಮೂರು ಪ್ರಸಂಗಗಳು ಬೆಳೆಯುತ್ತವೆ. ರೆಡ್ಡಿ, ರಾವ್, ಶಾಸ್ತ್ರಿ ಈ ಮೂವರೂ ಆ ವೃದ್ಧ ದಂಪತಿಗಳಲ್ಲಿ ಒಂದು ಅಲೌಕಿಕ ಪ್ರಭೆಯನ್ನು ಕಾಣುತ್ತಾರಾದರೂ ಒಬ್ಬೊಬ್ಬ ಒಂದೊಂದು ರೀತಿಯಲ್ಲಿ ಪ್ರತಿಕ್ರಿಯೆ ತೋರಿಸುತ್ತಾರೆ. "ಮುದುಕ ಸಿಕ್ಕದೆ ಹೋಗಬಹುದು. ನಾನೇಕೆ ವೃಥಾ ಜೀವಕಳೆದುಕೊಳ್ಳಬೇಕು? ಉಹುಂ!" ಎನ್ನುತ್ತಾನೆ. ರೆಡ್ಡಿ. ಒಳದೃಶ್ಯದ ಕೊನೆಯಲ್ಲಿ "ನಿಮಗೋಸ್ಕರ ಸಂಘ, ಕೂಲಿಗಾರರಿಗೆ ಜಯವಾಗಲಿ–ಸಂಘಕ್ಕೆ ಜಯವಾಗಲಿ!" ಎಂದು ತಾನೇ ಕೂಗಿದ್ದನ್ನು ನೆನೆಯುತ್ತ ನಿಟ್ಟುಸಿರೆಳೆದು "ಉಹುಂ–ನಾನು ನೀರಿಗೆ ಬೀಳುವುದಿಲ್ಲ" ಎನ್ನುತ್ತಾನೆ ರಾವ್. "ಅಯ್ಯೊ! ಈ ಕರ್ಮದಿಂದ ಪಾರಾಗುವಹಾಗಿಲ್ಲ. ಮೋಸ ಮಾಡಿದೆ, ನಿಜ. ಪತ್ರಗಳನ್ನು ಬದಲಾಯಿಸಿದ್ದುಂಟು. ಅವರಿಬ್ಬರೂ ನನ್ನಿಂದ ಹಾಳಾದರು. ಆದರೆ ಅದಕ್ಕಾಗಿ ಇನ್ನೆಷ್ಟು ದಿನ ಪಶ್ಚಾತ್ತಾಪ ಪಡುವುದು ? ದಾನ ಧರ್ಮ ಮಾಡಿದ್ದೇನೆ. ದೇವರಿಗೆ ಉತ್ಸವ ಅಭಿಷೇಕ ಮಾಡಿಸಿದ್ದೇನೆ. ಇನ್ನೇನು ಮಾಡಬಹುದು ?" ಎಂದು ಯೋಚಿಸುತ್ತ "ಉಹುಂ–ಮುದುಕನನ್ನು ನಾನು ಮುಟ್ಟಲಾರೆ" ಎನ್ನುತ್ತಾನೆ ಶಾಸ್ತ್ರಿ. ನೀರಿಗಿಳಿಯದೆ ಮೂವರೂ ಕೊಟ್ಟಿರುವ ಅವರವರ ಉತ್ತರಗಳು, ಅವರವರ ನಡತೆಗೆ, ಸ್ವಭಾವಕ್ಕೆ ಅನುಸಾರವಾಗಿಯೇ ಇವೆ. ರೆಡ್ಡಿಯಲ್ಲಿ ಮಾನವತೆಯ ಸುಳಿವಿಲ್ಲ; ರಾವು ಸ್ವಾರ್ಥಿಯಾದರೂ ಅವನಲ್ಲಿ ಕಷ್ಟ ಕಾರ್ಪಣ್ಯ ಭೂಯಿಷ್ಠವಾದ ಮಾನವ ಸಂಪರ್ಕ ಸ್ವಲ್ಪವಾದರೂ ಇದೆ. ಶಾಸ್ತ್ರಿಯ

ಮನಸ್ಸು ವಿಷಾದಪಟ್ಟಿದೆ; ಪಶ್ಚಾತ್ತಾಪಕ್ಕೆ ತಿರುಗಬಲ್ಲದು, ಆದರೆ ಇನ್ನೂ ಚಂಚಲ. ನಾಲ್ಕನೆಯ ಅಂಕದಲ್ಲಿ ಕರ್ನೂಲಿನ ಚೆಲುವೆ ಕಮಲಾಸಾನಿ ತನ್ನ ಸೇವಕ ಜೊತೆ ಗಾತಿಯರೊಂದಿಗೆ, ದೇವಸ್ಥಾನದಿಂದ ಪೂಜೆ ಮಾಡಿಸಿ, ತಂದ ಹೂ ಹಣ್ಣು ಕಾಯಿ ಗಳೊಂದಿಗೆ ಪ್ರವೇಶಿಸುತ್ತಾಳೆ. ಜನದ ಕುಹಕ, ಕೇಕೆ. ಅವಳನ್ನು ಕಂಡ ನರಸ ರೆಡ್ಡಿಯ ಕಣ್ಣಿಗೆ ಸಂತೋಷವಾಗದೆ ಏನಾದೀತು! ಅವಳೊಂದಿಗೆ ಮಾತಾಡುತ್ತ, ನೀರಿಗೆ ಬಿದ್ದ ಮುದುಕನ ವಿಷಯವನ್ನು ತಿಳಿಸಿ, ಮುದುಕಿ ಅಲ್ಲೇ ಇರುವುದನ್ನು ತೋರಿಸುತ್ತಾನೆ. 'ಬೇಕಾದರೆ ಹೋಗಿ ಆ ಮುದುಕನನ್ನು ಎಳೆದುಕೊಂಡು ಬಾ' ಎನ್ನುತ್ತಾನೆ. ಕಮಲ ಕುತೂಹಲದಿಂದ ಮುದುಕಿಯ ಬಳಿಗೆ ಹೋಗಿ ಮಾತಾಡಿಸಿ, ತಾನು ಕೀಳು ಹೆಣ್ಣೆಂದೂ, ಮುಟ್ಟುವ ಯೋಗ್ಯತೆ ತನಗಿಲ್ಲವಾದರೂ, ಅಪ್ಪಣೆ ಕೊಟ್ಟರೆ ತಾನು ಹೋಗಿ ಅವರನ್ನು ದಡಕ್ಕೆ ತರುವುದಾಗಿಯೂ ತಿಳಿಸುತ್ತಾಳೆ. ತಾನು ಮಾಡಿದ ಪಾಪವನ್ನು ಒಪ್ಪಿಕೊಂಡು, ತನ್ನ ಮನಸ್ಸು ಒಪ್ಪದಿದ್ದರೂ ಹೆರ ವರ ಬಲಾತ್ಕಾರಕ್ಕೆ ಮಣಿದು ತನ್ನ ಹೊಟ್ಟೆಪಾಡಿಗಾಗಿ ಹಾಗೆ ಮಾಡಿದ್ದಾಯ್ತೆಂದು ಹೃದಯವನ್ನು ಬಿಚ್ಚಿ ತೋರುತ್ತಾಳೆ. ಮುದುಕಿ "ಶಕ್ತಿಯಿದ್ದರೆ ಬೇಗ ಹೋಗಮ್ಮ....ಆದರೆ ತಾಳು, ಈ ಕುಂಕುಮ ಇಟ್ಟುಕೊಂಡು ಹೋಗು........ಇಲ್ಲ ದಿದ್ದರೆ ನೀನು ಅವರನ್ನು ಮುಟ್ಟಲಾರೆ. ಅವರು ಮುಳುಗಿ ಹೋಗುತ್ತಾರೆ ಎನ್ನು ತ್ತಾಳೆ. ಆ ಸಮಯದಲ್ಲಿ ಕಮಲ ಮುದುಕಿಯ ಕೊರಳಲ್ಲಿದ್ದ ಮುತ್ತಿನ ಸರವನ್ನು ಕಂಡು 'ಇದನ್ನು ಎಲ್ಲಿ ಮಾಡಿಸಿದಿರಿ, ತಾಯಿ' ಎನ್ನುತ್ತಾಳೆ. 'ಕಾಣುತ್ತೆಯೆ ನಿನಗೆ ಅದು? ನೀನು ಪುಣ್ಯಶಾಲಿ,' ಎಂದು ಮುದುಕಿಯ ಉತ್ತರ. ಬಳಿಕ ಧೀರೆ ಕಮಲ "ಇದು ಶಿವ ಕಾರ್ಯ; ಶಿವ ನಡೆಸಿಕೊಡಲಿ" ಎಂದು ಕೈ ಮುಗಿದು ನೀರಿಗೆ ಕೈಮು ಗಿದು ನೀರಿಗೆ ಧುಮುಕುತ್ತಾಳೆ. ಮೆಟ್ಟಲ ಮೇಲೆ ನಿಂತಿದ್ದ ಜನ ಬೆರಗಾಗಿ ನೋಡು ತ್ತಿದ್ದಂತೆ, ಮುದುಕನನ್ನು ಎಳೆದುಕೊಂಡು ಬಂದು ಘಟ್ಟವನ್ನು ಸೇರುತ್ತಾಳೆ.

ಮುದುಕಿ ಮುದುಕನಿಗೆ ಕಮಲಳ ಪರಿಚಯವನ್ನು ಮಾಡಿಕೊಡುತ್ತಾಳೆ. ಮುದುಕ "ನೀನು ಪುಣ್ಯಾತ್ಮಳು ಕಮಲಮ್ಮ" ಎನ್ನುತ್ತಾನೆ. ರಾವೂ, ರೆಡ್ಡಿಯೂ 'ಇವಳು ಮಾಡದ ಪಾಪವೇ ಇಲ್ಲ' ಎಂದು ಮುಂದೆ ನುಗ್ಗುತ್ತಾರೆ. ರಾವ್ ಕೇಳು ತ್ತಾನೆ, "ತಮ್ಮನ್ನು ಮುಟ್ಟುವ ಧೈರ್ಯ ಇವಳಿಗೆ ಹೇಗೆ ಬಂತು?" ಎಂದು. ಶಾಸ್ತ್ರಿಯೋ ತಾವು ಹಿಮ್ಮೆಟ್ಟಿದ್ದನ್ನು ಒಪ್ಪಿಕೊಳ್ಳುತ್ತಾನೆ. (ಇವರು ಮೂವರ ಇಲ್ಲಿನ ವರ್ತನೆಯಲ್ಲೂ ವ್ಯಂಗ್ಯ, ಸಂಶಯ, ಅರೆಮನಸ್ಸಿನ ನಂಬಿಕೆಗಳ ಮೂರು ಮೆಟ್ಟಲುಗಳಿವೆ.) ಮುದುಕ ಇವರ ಅಸಭ್ಯತೆ ಮುಂಬರಿಯದಂತೆ ಕಣ್ಣಿನಿಂದಲೇ ತಡೆಯುತ್ತಾನೆ. ಆ ಮೇಲೆ ಹಂತ ಹಂತವಾಗಿ ಕಮಲಸಾನಿಯ ಶುದ್ಧಾಂತಃಕರಣವೂ, ಅವಳ ಆತ್ಮದ ಪವಿತ್ರತೆಯೂ ಸ್ಫುಟಗೊಳ್ಳುತ್ತವೆ. ಮುದುಕಿಯ ಕೊರಳ ಮುತ್ತಿನ ಸರದಲ್ಲಿ ನೀನು ಕಂಡದ್ದೇನು ಎಂದು ಮುದುಕ ಕೇಳಿದ್ದಕ್ಕೆ ಕಮಲ "ಒಂದೊಂದರಲ್ಲೂ ಶಿವನನ್ನು ಕಂಡಂತಾಯಿತು, ತಂದೆ" ಎನ್ನುತ್ತಾಳೆ. ಎಲ್ಲರಿಗೂ

ವೊದಲು ಈ ಮುದುಕ ಮುದುಕಿಯರೆ ಶಿವಗೌರಿಯರೆನ್ನುವುದು ಆಕೆಗೆ ತಿಳಿಯು ತ್ತದೆ. ಅವರೊಂದಿಗೆ ಕೈಲಾಸಕ್ಕೆ ನಡೆದು ಹೋಗುತ್ತಾಳೆ. ದೊಡ್ಡ ಪವಾಡವನ್ನು ಕಂಡ ಜನ ಅವಳಿಗಲ್ಲೊಂದು ಸ್ಮಾರಕ ಏರ್ಪಡಿಸುತ್ತಾರೆ. ರೆಡ್ಡಿ, ರಾವ್, ಶಾಸ್ತ್ರಿ ಈ ಮೂವರೂ ತಮ್ಮ ತಮ್ಮ ರೀತಿಯಲ್ಲಿ ದುಷ್ಟರು, ನಡತೆಗೆಟ್ಟವರು. ತಾವು ಮಾಡಿದ ಪಾಪವನ್ನು ಮುಚ್ಚಿಕೊಳ್ಳಲು ಯತ್ನಿಸುವವರು. ವೇಶ್ಯಾವೃತ್ತಿಗಿಳಿದ ಕಮಲಾಸಾನಿಯೂ ಪಾಪಮಾಡಿದವಳೇ; ಆದರೆ "ಇವರ ಪ್ರೋತ್ಸಾಹದಿಂದ ಜೀವನ ಮಾಡಿರುವವಳು ನಾನು. ಈ ಮೈ ಇವರ ಎಂಜಲು. ತಂದೆ, ಕೊಳೆ, ಹೇಸಿಗೆ ಮಾಡಿಕೊಂಡಿದ್ದೆ ಈ ವರೆಗೂ. ಇಂದು ಪರಿವರ್ತನೆ ಹೊಂದಿದ್ದೇನೆ. ಇನ್ನೆಂದೂ ಆ ಬದುಕಿಗೆ ಹಿಂತಿರುಗಿ ಹೋಗುವುದಿಲ್ಲ. ನಿಮ್ಮ ಅನುಗ್ರಹವೊಂದಿ ರಲಿ, ತಂದೆ" ಎಂದು ಶಿವನಲ್ಲಿ ತಪ್ಪೊಪ್ಪಿಕೊಂಡು ಶರಣಾಗುತ್ತಾಳೆ. "ನೀವಿಟ್ಟಲ್ಲಿ ಕೈಲಾಸ ನನಗೆ" ಎನ್ನುವ ದೃಢ ಭಕ್ತಿ ಅವಳದು. ಆದ್ದರಿಂದ ಅವಳಿಗೆ—ಲಕ್ಷದಲ್ಲಿ ಒಂದು ಜೀವಕ್ಕೆ—ಮುಕ್ತಿ ಲಭಿಸಿತು, ಶ್ರೀಶೈಲ ಶಿಖರದ ದರ್ಶನವಾಯಿತು.

ಮುದುಕಿ ಆ ಮೂವರಿಗೂ ನೀರಿಗಿಳಿಯುವ ಮುನ್ನ ಚಂದನವನ್ನೇಕೆ ಕೊಟ್ಟಳು ?—ಕಮಲಾಸಾನಿಗೆ ಅದರ ಬದಲು ಕುಂಕುಮವನ್ನೇಕೆ ಕೊಟ್ಟಳು ? ನಾಟಕದ ಮುಗಿವಿನ ಹೊತ್ತಿಗೆ ತಿಳಿಯುತ್ತದೆ. ಚಂದನ ಮೈ ಸೋಕಿದರೆ ಅವರವರ ಪಾಪಗಳ ನೆನಪುಗಳು ಮರುಕಳಿಸುವವಂತೆ, ಕರ್ಮಸ್ಮೃತಿ ಬರುವುದಂತೆ; ನೀರಿಗಿಳಿದು ಹಿಮ್ಮೆಟ್ಟಿದ ಆ ಮೂವರೂ ಚಂದನವನ್ನು ಲೇಪಿಸಿಕೊಂಡೊಡನೆಯೆ ಅದರ ಪ್ರಭಾವಕ್ಕೊಳಗಾಗುತ್ತಾರೆ. ಒಳ ದೃಶ್ಯಗಳು ತೆರೆಯುತ್ತವೆ; ತಾವು ಮಾಡಿದ ಕರ್ಮವನ್ನು ಕಾಣುತ್ತಾರೆ. ಮುದುಕಿ ಅದನ್ನು ಕೊಡದೆ ಕಮಲಳಿಗೆ ಕುಂಕುಮ ವನ್ನು ಕೊಡುತ್ತಾಳೆ—ತಾಯಿ ಮಗಳಿಗೆ ಕುಂಕುಮವನ್ನು ಕೊಡುವಂತೆ. ಇದಕ್ಕೆ ಕಾರಣ: ಮುದುಕಿಯ ವೇಷದಲ್ಲಿ ಲೋಕಜನನಿಗೆ 'ಕಮಲಾಸಾನಿ, ಹಿಂದೆ ಪಾಪದಲ್ಲಿ ಭಾಗಿಯಾಗಿದ್ದರೂ ಈಗ ಪರಿಶುದ್ಧಳು, ದೃಢ ಭಕ್ತಿಯುಳ್ಳವಳು' ಎಂಬುದು ಆ ಹೊತ್ತಿಗಾಗಲೆ ತಿಳಿದುಹೋಗಿರುವುದು. ಪಶ್ಚಾತ್ತಾಪದಿಂದ ಪರಿಶುದ್ಧಳಾದ ಕಮಲಳ ಕಣ್ಣಿಗೆ ಮಾತ್ರ ಮುದುಕಿಯು ಕೊರಳಿನಲ್ಲಿದ್ದ ಏಕಾವಳಿ (ಮುತ್ತಿನ ಸರ) ಕಾಣಿಸುವುದೂ, ಅಲ್ಲಿನ ಒಂದೊಂದು ಮುತ್ತಿನಲ್ಲೂ ಶಿವನೇ ಹೊಳೆಯುತ್ತಿರು ವಂತೆ ಅವಳಿಗೆ ಭಾಸವಾಗುವುದೂ ಸಮರ್ಥನೀಯವಾದುದು. ಹೇಗಿದ್ದವಳು ಯಾವ ಬೆಲೆಗೇರಿದಳು ಎನ್ನುವುದನ್ನು ತೋರಿಸುವುದೇ ಈ ನಾಟಕದ ಉದ್ದೇಶ.

ಶ್ರೀಶೈಲದ ಪುಷ್ಕರಿಣಿಯ ಸುತ್ತುಮುತ್ತಿನಲ್ಲಿ, ದೇವಾಲಯದ ಘಂಟೆಗಳ ನಾದದ ಸರಹದ್ದಿನಲ್ಲಿ ಈ ನಾಟಕದ ಘಟನೆಗಳು ಸಾಗುತ್ತವೆ. ಒಳ್ಳೆಯ ಕಥೆ, ಚೆನ್ನಾದ ನಾಟಕ.

ಕನ್ನಡದ ಸಾಹಿತ್ಯದಲ್ಲಿ ಒಂದು ಹೊಸ ಯುಗವನ್ನು ಆರಂಭಿಸಿದ ಕೀರ್ತಿ ಶ್ರೀಯವರಿಗೆ ಸೇರಿದ್ದು. ಅವರು ಒಂದು ಹೊಸ ಪ್ರಪಂಚದ, ಅಥವಾ ಈ ಪ್ರಪಂಚ ವನ್ನೇ ಒಂದು ಹೊಸ ದೃಷ್ಟಿಯಿಂದ ನೋಡುವ ಬಾಗಿಲನ್ನು ತೆರೆದುದೇ ತಡ, ಹೊಸ ಕಾವ್ಯ ಧ್ವನಿಗಳು ಕೇಳಿಬಂದವು. 'ಸೆರೆಬಿಟ್ಟ ಹಕ್ಕಿಗಳು ಮರಮರದ ಮೇಲೆ, ಹಾಡತೊಡಗಿದವು.' ಆ ಅನುಭವ ಚಿರಸ್ಮರಣೀಯವಾದದ್ದು.

'ವಿ. ಸೀ.' ಶ್ರೀಯವರ ಮುಖ್ಯ ಶಿಷ್ಯರಲ್ಲಿ ಒಬ್ಬರು, ಶ್ರೀಯವರ ಪ್ರೇರಕ ಶಕ್ತಿಗೆ ಓಗೊಟ್ಟವರು. ಕನ್ನಡದಂತೆಯೇ ಇಂಗ್ಲಿಷಿನ ಹೃದಯವನ್ನೂ ಕಂಡುಕೊಂಡ ವರು. ವಿಶಾಲವೂ ಆದ ಅಧ್ಯಯನವೂ, ರಸಿಕರಾದ ವಿದ್ವನ್ಮಿತ್ರರ ಸ್ನೇಹವೂ ಅವ ರನ್ನು ಕವಿತೆಗೆ ಸೆಳೆದುದು ಸಹಜವೇ. "ಪಂಪಾಯಾತ್ರೆ"ಯ ಗದ್ಯದಲ್ಲಿಯೇ ಅವರ ಕವಿಮನೋಧರ್ಮ ಪ್ರತಿಬಿಂಬಿತವಾಗಿತ್ತು. ಶ್ರೀಯವರ ಮೃದು ಸ್ಪರ್ಶದಿಂದ ಮೊಗ್ಗರಳಿ ಹೂವಾಯಿತು. ವಿ. ಸೀ. ಅವರು ನಮ್ಮ ಮೈಸೂರಿನ ಗಾನವಿಶಾರದರ, ವೈಣಿಕ ಪ್ರವೀಣರ ಮತ್ತು ಸಂಗೀತಶಾಸ್ತ್ರ ರತ್ನಗಳ ಪರಿಚಯವುಳ್ಳವರು; ಶೇಷಣ್ಣ ನವರು ವೀಣೆಯನ್ನು ಮಾತಾಡಿಸುತ್ತಿದ್ದುದನ್ನು ಕೇಳಿದವರು. ಹೀಗಾಗಿ ಕವಿತೆ ಯೊಂದಿಗೆ ಸಂಗೀತವೂ ಸೇರಿಕೊಳ್ಳುವುದು ಅವರಿಗೆ ಪ್ರಿಯವೆನಿಸಿತು. ಅವರ ಮೊದಲ ಕವನಸಂಗ್ರಹವಾದ "ಗೀತೆಗಳು" ಹೀಗೆ ಹುಟ್ಟಿರಬೇಕೆಂದು ನನ್ನ ನಂಬಿಕೆ. (Lyre ನಿಂದ Lyric ಹುಟ್ಟಿತು.)

'ಗೀತೆಗಳು' ಆದ ಮೇಲೆ 'ದೀಪಗಳು', 'ನೆಳಲು ಬೆಳಕು', 'ದ್ರಾಕ್ಷಿ ದಾಳಿಂಬೆ', 'ಹೆಜ್ಜೆಪಾಡು', 'ಅರಲು ಬರಲು'–ಈ ಅಂಕಿತಗಳೂ ಕಲಾತ್ಮಕವಾಗಿವೆ. ಕನ್ನಡ ಪುಸ್ತಕಗಳನ್ನು ಚೆಲುವಾಗಿ ಪ್ರಕಟಿಸಬೇಕೆಂಬುದು ಅವರ ಸಂಕಲ್ಪ ; ಅವರ ಪುಸ್ತಕ ಗಳಂತೂ ಹಾಗೆಯೇ ಇವೆ ಎಂಬುದು ಎಲ್ಲರಿಗೂ ತಿಳಿದ ವಿಷಯ.

'ನನ್ನ ಮನಸ್ಸು ದಿನಜೀವನಕ್ಕೆ ಮಣಿಯುತ್ತದೆ. ಇಲ್ಲಿನ ನೋವು, ನಿರಾಸೆ, ಪ್ರೀತಿ, ಇಲ್ಲಿಯ ಔದಾರ್ಯ, ಸ್ನೇಹದ ನೆರವು, ಕಾರುಣ್ಯ ನನಗೆ ತುಂಬಾ ಪ್ರಿಯ' ಎನ್ನುತ್ತಾರೆ. ಅವರ ಕವನಗಳಲ್ಲಿ ಈ ಪ್ರೀತಿಯೇ ಹಬ್ಬಿಕೊಂಡಿದೆ. ಶುಚಿಯನ್ನು ಜೀವನದಲ್ಲಿ, ಕಾವ್ಯದಲ್ಲಿ ಕಾಣಿಸಿದ್ದಾರೆ. ಜನತೆಯ ಸೋಲು, ನೋವುಗಳಿಗೆಂತೋ, ಅದರ ಸಾಹಸಕ್ಕೂ ಗೆಲವಿಗೂ ತಮ್ಮ ಕವನಗಳಲ್ಲಿ ದನಿಗೂಡಿಸಿದ್ದಾರೆ.

ಅವರ 'ಮನೆ ತುಂಬಿಸುವ ಹಾಡು' (ಹೆಣ್ಣೊಪ್ಪಿಸುವ ಹಾಡು) ಇಡೀ ನಾಡ ತುಂಬ ಹರಡಿಕೊಂಡು ಅವರಿಗೆ ಕೀರ್ತಿಯನ್ನು ಗಳಿಸಿಕೊಟ್ಟಿದೆ. ಜನಪದಸಾಹಿತ್ಯ ಪ್ರಕಾರಗಳಲ್ಲಿ ಕಂಡುಬರುವ ಭಾವಸಿದ್ಧಿಯನ್ನು ಇದರಲ್ಲಿ ಕಾಣಬಹುದು. ಹುಟ್ಟಿದ ಹೆಣ್ಣು ಪರರ ಒಡವೆ ಎಂಬುದನ್ನು ಮನೆಯವರು ಚೆನ್ನಾಗಿ ಬಲ್ಲರು; ಗಂಡು ಹುಡುಕಿ ಕಷ್ಟಪಟ್ಟು ಹೆಣ್ಣಿಗೆ ಮದುವೆ ಮಾಡುವವರೂ ಅವರೇ. ಇಷ್ಟೆಲ್ಲ ತಿಳಿ

ದಿದ್ದು, ಅವಳನ್ನು ಗಂಡನ ಮನೆಗೆ ಕಳಿಸಿಕೊಡುವಾಗ ಅಗಲಿಕೆಯ ನೋವನ್ನು ಅನುಭವಿಸಿ ಕಣ್ಣೀರು ಹಾಕುವುದು, 'ಮದುವೆ' ಎನ್ನುವ ಪದ್ಧತಿ ಹುಟ್ಟಿದಂದಿನಿಂದ ಇಂದಿನ ವರೆಗೆ ನಡೆದು ಬಂದ ದಾರಿಯಾಗಿದೆ. ಮನುಷ್ಯರನ್ನು ಕಲ್ಲಿನಲ್ಲಾಗಲೀ ಮರದ ತೊಲೆಯಲ್ಲಾಗಲೀ ಕಡೆದಿಲ್ಲವಾದ್ದರಿಂದ ಅವರು ಈ ಸಂದರ್ಭದಲ್ಲಿ ನೊಂದುಕೊಳ್ಳುತ್ತಾರೆ. ಆ ನೋವು ಇಲ್ಲಿ ಸುಂದರವಾದ ಹಾಡಾಗಿ ಮೂಡಿದೆ. ಹೆಣ್ಣೊಪ್ಪಿಸುವ ಸಂದರ್ಭದಲ್ಲಿ ಈ ಹಾಡನ್ನು ಹೆಣ್ಣಿನವರು ಹಾಡಿಸುತ್ತಾರೆ; ಹಾಡು ವಾಕೆಯ ಕಣ್ಣು ನೀರುತುಂಬುತ್ತದೆ. ಕಣ್ಣ ಬಳಿಗೆ ಸೀರೆಯ ಸೆರಗು ತಾನಾಗಿ ಬರುತ್ತದೆ. "ನಿಲ್ಲು, ಕಣ್ಣೊರೆಸಿಕೊಳು, ನಿಲ್ಲು ತಾಯ್, ಹೋಗುವೆವು" ಎನ್ನುವ ಭಾರವಾದ ಮಾತುಗಳಲ್ಲಿ ವರ್ಣಿತವಾಗಿರುವ ನೋವು ಬರಿಯ ಕವಿತೆಯಲ್ಲ, ಜೀವನದ ಒಂದು ಎಸಳು. ಆದ್ದರಿಂದ ಇದೊಂದು ಚಿರಂತನ ಕೃತಿ.

ಯಾವಾಗಲೂ ಈ ಕವಿಯ ಮನೋಧರ್ಮ ಹೀಗೆಯೇ ಇರುತ್ತದೆ ಎನ್ನಲಾಗದು. ಕುಸುಮ ಕೋಮಲತೆಯನ್ನು ದಾಟಿ ಅದು ವಜ್ರ ಕಠಿನವಾದಾಗ "ಅಭೀಃ" (ಮಾ ಭೀಃ) ಎಂಬಂಥ ಗಂಡು ಕವನ ಹುಟ್ಟುತ್ತದೆ:

ಕಾಡ ಮೌನವ ಸೀಳಿ ಹಬ್ಬುತಿದೆ, ಕೇಳುತಿದೆ
ಬಿತ್ತರದ ದಿಕ್ತಟಗಳಡ್ಡಿ ದಾಟುತಿದೆ!
ಉಳಿದೆಲ್ಲ ನುಡಿಗಳನು ಮುಳುಗಿಸುತೆ ಮೊಳಗುತಿದೆ
ಬಾಳ ಹೆದ್ದಾರಿಯನು ಹಿಡಿದೆತ್ತಿ ತೋರುತಿದೆ
ಅಭೀಃ! ಅಭೀಃ! ಅಭೀಃ! ಎಂಬಮೃತವಾಣಿಯಿದು
ಮೂವತ್ತು ಶತಮಾನಗಳ ಮೆಟ್ಟಿ ಕೇಳುತಿದೆ
ಕಾಲದಾ ಕರೆಯಂಚಿನಾಚೆಯಿಂದ."

ಈ ಕವನದ ಭಾವದ ಧೀರತೆಯನ್ನೂ ಅದು ಪ್ರವಹಿಸುವ ಛಂದಸ್ಸಿನ ಬಿಗಿಕಟ್ಟನ್ನೂ ಅಲ್ಲಿನ ಪದಗಳ ತೇಜಸ್ಸನ್ನೂ ಕವನವನ್ನು ಓದಿಯೇ ತಿಳಿಯಬೇಕು. ಮಣಿಯದಿಹ ಮನ, ಸಾಧಿಸುವ ಹಟ, ನಿಜದ ನೇರಕೆ ನಡೆವ ನಿಶ್ಚಲತೆ, ಅನ್ಯಾಯಕೆಂದೆಂದು ಬಾಗದೆಚ್ಚರ ಮರುಕಕ್ಕೆ ಪ್ರೇಮಕ್ಕೆ ಚಿರತೆರೆದ ಎದೆ—ಇವು ನಿನ್ನನ್ನು ಮುನ್ನಡೆಸುತ್ತಿವೆ ಹೆದರಬೇಡ ಎನ್ನುವ ಭರವಸೆ ಇಲ್ಲಿ ರೂಪುಗೊಂಡಿವೆ. ಇಂಥ ಕವನಗಳು ಅನೇಕ.

ಕನ್ನಡ ನಾಡಿನ ಪ್ರೇಮವನ್ನೂ, ರಾಷ್ಟ್ರಪ್ರೇಮವನ್ನೂ ಬೆಳಗುವ ಹಲವು ಗೀತೆಗಳನ್ನು ಅವರು ರಚಿಸಿದ್ದಾರೆ. "ಕನ್ನಡದ ನಾಡು ಕಸ್ತೂರಿ ನಾಡು, ವೀರ ಸಿರಿ ಕಲೆ ಬೀಡು" ಎಂದು ಹಾಡಿದ್ದಾರೆ. ಅವರ 'ಗಡಿದಾಟು' ಎಂಬ ಕವನದಲ್ಲಿ ರಾಷ್ಟ್ರದ ಎಲ್ಲ ಕಡೆಗಳಿಂದಲೂ ಎಲ್ಲ ವಲಯಗಳಿಂದಲೂ ಬಂದು ಕೂಡಿಕೊಂಡು ಸಾಗುತ್ತಿರುವ ಜನತೆಯ ಉತ್ಸವವನ್ನು ಕಾಣುತ್ತೇವೆ; ಅಲ್ಲಿ ಸೇರಿರುವ ಎಲ್ಲರ ಕಣ್ಣಿಗೆ ತ್ರಿವರ್ಣಧ್ವಜ ಎದ್ದು ಕಾಣುತ್ತಿದೆ.

ಅದೆ ಕಾಣ್ ಅದೇ, ಮೂವಣ್ಣದ ಮೂಸಾಸಿರ ಗುಣಗಳ
ಒಳ್ಪೆಳಸು, ನೆರವೇರಿದ ಕನಸು,
ಅದೆ ಕಾಣ್ ಅದೇ, ಈ ನಾಡಿನ ನಡೆಜಾಡಿನ ಹಿರಿಜಾಣಿನ ತೆನೆಗಟ್ಟಿದ ಬೆಳಸು
ಅದೆ ಕಾಣ್ ಅದೇ ಅರಗಾಲಿನ ಅರಗಾಲಿಯ ಹಿರಿನಾಗನ ಹೆಬ್ಬೆಡೆ ಹರಹು.
ಎದೆಯಾಸೆಯು ನೆಲೆಮೇಲಕೆ ನಿಡುಬಾನಿಗೆ ನಟ್ಟಾಡಿದೆ ಒಲೆದು.

ಈ ಛಂದಸ್ಸಿನ ನರ್ತನವೇ ನಮ್ಮನ್ನು ಅಲ್ಲಿಗೆ ಸೆಳೆಯುತ್ತದೆ. ಈ ಧ್ವಜದ ನೆರಳಲ್ಲಿ ನಿಂತವರ ಆಸೆಯೊಂದೇ: ನಾಡ ಬಿಡುಗಡೆ. ಇವರು "ಪೆರನಾವುದನೇನಾಗಲಿ ಒಲ್ಲದರು"

"ಭಾರತ ವೈಜಯಂತಿ"ಯೂ ಅಂಥದೊಂದು ಶಕ್ತಿಪೂರ್ಣಗೀತ :

ಕೊನೆಗೆ ಅವರ ಜೀವನದರ್ಶನವೇನೆಂಬುದನ್ನು ಅವರ ಮಾತಿನಲ್ಲೇ ಕೇಳಿ :

"ನನಗೆ ಇಷ್ಟು ನಿಜ; ಬದುಕಿನಲ್ಲಿ ದುಃಖವಿರುವಂತೆ ಸಂತೋಷವೂ ಇದೆ. ಹಗೆಯಿರುವಂತೆ ಕೆಳೆ ಇದೆ. ನಿಷ್ಠುರತೆ ವಂಚನೆ ಇರುವಂತೆ ನಯ ಪ್ರಾಮಾಣಿಕತೆ ಇವೆ. ಕಷ್ಟದಲ್ಲಿ ಇರುವಾಗ ಯಾರೋ ಒಬ್ಬರಾಡಿದ ಮಾತು ಅಮೃತಸತ್ವವಾಗ ಬಲ್ಲದು. ಕೋಟಿ ಕರ್ಕಶ ಕೊಲ್ಲುತ್ತಿರುವಾಗ ಮೌನದಲ್ಲಿ ಮರೆಯಲ್ಲಿ ನಮಗಾಗಿ ಚಾಚಿ ಹಿಡಿವ ಕೈಕಳೆ, ಕೊಡುವ ಧೈರ್ಯ, ನುಡಿವ ತುಟಿಯ ಒಂದು ಅಲುಗು, ಮಾತು, ಕಣ್ಣಿನ ಒಂದು ಸ್ನೇಹದ ಮಿನುಗು ಸಾಕು – ತಾರಣೆಗೆ, ಉಳಿಸುವುದಕ್ಕೆ, ಬದುಕಿನಲ್ಲಿ ನಂಬಿಕೆ ಸ್ಥಾಪಿಸುವುದಕ್ಕೆ. ಈ ಲಕ್ಷಣ ಮಾನವತೆಯ ಪರಮ ಲಕ್ಷಣ ವಾಗಿದೆ. ಇದು ಸೌಭಾಗ್ಯ. ಈ ಸೌಭಾಗ್ಯ ಎಷ್ಟು ಹಮ್ಮಿದರೂ ಕಡಿಮೆಯೇ ಎನ್ನಿಸುತ್ತದೆ ನನಗೆ. ಅದನ್ನು ಸವಿಯುವ ಭೋಗ ಸಾಧಿಸುವ ಯೋಗ ಸಾಹಿತ್ಯ ಯೋಗ. ಲೋಕ ಕ್ಷಣಿಕವೇನು ? ಆಗಲಿ. ಈ ಸೌಂದರ್ಯ, ಮೈತ್ರಿ ನಶ್ವರವೇ ಆಗಲಿ. ಪ್ರೀತಿ ನನಗೆ ದಿವ್ಯ. ಬಾಳಿಗೆ ನಾನು ಕೃತಜ್ಞ ಎಂಬ ಕವಿನುಡಿಗಳಿವೆ. ಆ ಸುಖೋಷ್ಣತೆ, ಆ ಕರುಳ ಕರುಣೆ ನನಗೂ ಸಾಕು. ಅವನ್ನು ಎರೆವವರು ಬಂಧು ಗಳು. ಲೋಕವೆಲ್ಲ ನಿರ್ಘೃಣವಾಗಿ ಕೈಬಿಟ್ಟ ಕಾಲದಲ್ಲಿ ಎಲ್ಲಿನದೋ ಒಂದು ಪ್ರೀತಿ, ಧೈರ್ಯ ಕಂಡಾಗ ನನಗೆ ಮಾನವನ ಬದುಕು ಸಾರ್ಥಕವಾದಂತೆ ಕಾಣುತ್ತದೆ. ಹತ್ತು ಯುಗಗಳ ಕಷ್ಟವನ್ನು ದಾಟಬಲ್ಲೆನೆಂಬ ದೃಢ ಸ್ಫೂರ್ತಿ ಬರುತ್ತವೆ. ರಾಜ್ಯ ಸಾಮ್ರಾಜ್ಯಗಳ ದರ್ಪವನ್ನು ಪ್ರತಿಭಟಿಸಬಲ್ಲೆನೆಂಬ ನಿಶ್ಚಯ, ಸಾಹಸ ಉಂಟಾಗು ತ್ತವೆ. ಈ ನಂಬಿಕೆ ಸಾಕು." ಈ ನಂಬಿಕೆಯನ್ನು ಸಾಮಾನ್ಯವಾಗಿ ಅವರ ಎಲ್ಲ ಕೃತಿ ಗಳಲ್ಲೂ ಸಹೃದಯರು ಕಾಣಬಹುದಾಗಿದೆ.

ಈ ಬರಹ ಅವರ ಎಲ್ಲ ಕೃತಿಗಳ ಅಥವಾ ಯಾವುದಾದರೂ ಒಂದು ಕೃತಿಯ ವಿಸ್ತಾರವಾದ ವಿಮರ್ಶೆಯಲ್ಲ. ನಮ್ಮ ನಾಡಿನ ಹಿರಿಯರಲ್ಲಿ ಒಬ್ಬರಾಗಿರುವ ವಿ.ಸೀ. ಅವರ ಬಹುಮುಖ ಸಾಧನೆಗಳ ಬಗೆಗೆ ಒಂದು ಇಣುಕು ಮಾತ್ರ ಇಲ್ಲಿ ಸಿಕ್ಕಬಹು ದೇನೋ. ಅವರ ವ್ಯಕ್ತಿಪರಿಚಯ ಒಂದಿಷ್ಟು ಆದೀತೇನೋ ಎಂದುಕೊಂಡಿದ್ದೇನೆ. ಇದನ್ನು ಮುಗಿಸುವ ಮುನ್ನ ಕೆಲದಿನಗಳ ಹಿಂದೆ ವಿ. ಸೀ. ಅವರು ಹೇಳಿದ ಒಂದು ಪುಟ್ಟ ಸಂಗತಿಯನ್ನು ಇಲ್ಲಿ ತಿಳಿಸಲು ಇಷ್ಟಪಡುತ್ತೇನೆ. ವಿ. ಸೀ. ಅವರ ಕೊಠಡಿಯ ಬಾಗಿಲು ಅವರ ಮನೆಯ ಎಲ್ಲ ಬಾಗಿಲುಗಳಿಗಿಂತ ಎತ್ತರವಾಗಿದೆ; ಇದಕ್ಕೆ ಕಾರಣವೇನೆಂದರೆ: ಅವರ ಹಿರಿಯ ಮಿತ್ರರೂ, ಮಹಾ ವಿದ್ವಾಂಸರೂ ಎತ್ತರದ ವ್ಯಕ್ತಿಗಳೂ ಆದ ಪ್ರೊ. ವೆಂಕಣ್ಣಯ್ಯನವರು, ವಿ. ಸೀ. ಅವರ ಕೊಠಡಿಯನ್ನು ಪ್ರವೇಶಿಸುವಾಗ ತಲೆ ಬಗ್ಗಿಸಿಕೊಂಡು ಒಳಕ್ಕೆ ಬರುತ್ತಿದ್ದರಂತೆ; ಇದನ್ನು ತಪ್ಪಿಸು ವುದಕ್ಕಾಗಿ ವಿ. ಸೀ. ಅವರು ಆ ಬಾಗಿಲುವಾಡವನ್ನು ತೆಗೆಸಿ ಹಾಕಿ ಹೆಚ್ಚು ಎತ್ತರ ವಾದ ಬಾಗಿಲುವಾಡವನ್ನು ತಮ್ಮ ಕೊಠಡಿಗೆ ಇಡಿಸಿದರಂತೆ. ಅವರ ಮನಸ್ಸು ಎಂಥಾದ್ದೆಂಬುದನ್ನು ಈ ಪುಟ್ಟ ಸಂಗತಿಯಿಂದಲೂ ಅರಿಯಬಹುದು.

**ಕೆ. ಎಸ್. ನರಸಿಂಹಸ್ವಾಮಿ**

# ಸ್ನೇಹಶೀಲ

ಕಳೆದ ಅಕ್ಟೋಬರ್ ೨ರಂದು ವಿ. ಸೀ. ಅವರು ತಮ್ಮ ೭೫ನೆಯ ವರ್ಷದಲ್ಲಿ ಕಾಲಿರಿಸಿದರು. ಅದರ ಸವಿನೆನಪಿಗಾಗಿ ಈ ಸಂಭಾವನಾ ಗ್ರಂಥವನ್ನು ಅವರಿಗೆ ಅರ್ಪಿಸುತ್ತಿರುವುದು ತುಂಬ ಸಂತಸ ತರುವ ಸಂಗತಿ. ಕಳೆದ ಹದಿನೈದಿಪ್ಪತ್ತು ವರ್ಷಗಳಿಂದ ವಿ. ಸೀ. ಅವರನ್ನು ಅತ್ಯಂತ ಸಮೀಪಸ್ಥನಾಗಿ ನಾನು ಕಂಡಿದ್ದೇನೆ; ಅವರ ಹಾಗೂ ಅವರ ಕುಟುಂಬದ ಅತಿಶಯವಾದ ಪ್ರೀತಿ ನನಗೆ ದೊರೆತಿದೆ; ಅವರ "ಭಾರತ ಬಿಡುಗಡೆ ಗಳಿಸಿತು", "ಪಂಪ ಮಹಾಕವಿ", "ಮೋಬಿ ಡಿಕ್", "ಭಾರತದಲ್ಲಿ ಯೋಜನೆ", ವಿಶ್ವೇಶ್ವರಯ್ಯನವರ ಜೀವನ ಚರಿತ್ರೆ ಮೊದಲಾದ ಗ್ರಂಥಗಳ ಲೇಖನ ಕಾರ್ಯದಲ್ಲಿ ಅವರಿಗೆ ನೆರವಾಗುವ ನೆವದಲ್ಲಿ ಅವರ ಕಷ್ಟವನ್ನು ಇಮ್ಮಡಿಸಿದ್ದೇನೆ; ಮತ್ತು ನಲವತ್ತು ವರ್ಷಗಳಷ್ಟರ ವಯೋಭೇದವನ್ನು ಮರೆತು ನನ್ನಸಮವಯಸ್ಕರೋ ಎನ್ನುವಷ್ಟು ಮಟ್ಟಿನ ಸಲಿಗೆಯಿಂದ ಅವರಲ್ಲಿ ವ್ಯವಹರಿಸಿದ್ದೇನೆ. ಅವರಾದರೋ ನನ್ನ ಕಿರುಕುಳಗಳನ್ನೂ ಕೊಂಕು ಮಾತುಗಳನ್ನೂ ಉಪಹಾಸಗಳನ್ನೂ ನಿಂದೆಯೆಂದು ಹೇಳಬಹುದಾದಂಥ ಟೀಕೆಗಳನ್ನೂ ಉದಾರವಾಗಿ ಸಹಿಸಿ ನನ್ನಲ್ಲಿ ಏಕರೀತಿಯ ಅವ್ಯಾಜವಾದ ಪ್ರೇಮವನ್ನು ತೋರಿದ್ದಾರೆ. ಕಾಳಿದಾಸ ಕವಿ ವರ್ಣಿಸಿದ "ಜನನಾಂತರ ಸೌಹೃದ"ವನ್ನು ನಿದರ್ಶನಪಡಿಸಿದ್ದಾರೆ. ಅವರಿಗೆ ಈ ಶುಭ ಸಂದರ್ಭದಲ್ಲಿ ಪ್ರಣಾಮ ಸಲ್ಲಿಸುವುದು ನನ್ನ ಕರ್ತವ್ಯವಾಗಿದೆ.

ವಿ. ಸೀ. ಅವರ ಸಾಹಿತ್ಯಕಾರ್ಯ ಲೋಕ ವಿಶ್ರುತವಾಗಿದೆ. ಅವರ "ಗೀತಗಳು", "ದೀಪಗಳು", "ನೆಳಲು ಬೆಳಕು", "ದ್ರಾಕ್ಷಿ ದಾಳಿಂಬೆ", "ಹೆಜ್ಜೆಪಾಡು"– "ಅರಲು ಬರಲು" ಈ ಆರು ಕವನ ಸಂಕಲನಗಳೂ "ಸೊಹ್ರಾಬ್ ರುಸ್ತುಂ", "ಆಗ್ರಹ", "ಶ್ರೀಶೈಲ ಶಿಖರ", "ಪಿಗ್ಮೇಲಿಯನ್", "ಮೇಜರ್ ಬಾರ್ಬರಾ"ನಾಟಕಗಳೂ "ಹಣಪ್ರಪಂಚ" ಅರ್ಥ ವಿಜ್ಞಾನ ಗ್ರಂಥವೂ, ಹತ್ತಾರು ವಿಮರ್ಶನ ಪ್ರಬಂಧಗಳೂ ಲಘು ಬರಹಗಳೂ ಅವರಿಗೂ ಕನ್ನಡ ಭಾಷೆಗೂ ಕೀರ್ತಿ ಪ್ರದವಾದುವೆಂದು ಎಲ್ಲರೂ ಅಂಗೀಕರಿಸಿದ್ದಾರೆ. ೪೦ ವರ್ಷಗಳ ಹಿಂದೆ ಬರೆಯಲಾದ ಅವರ "ಮನೆ

ತುಂಬಿಸುವ ಹಾಡು", "ಎಲ್ಲವನು ನಾನೆಂದು", "ಶಬರಿ" ಮುಂತಾದ ಕೃತಿಗಳಂತೂ ವಿ. ಸೀ. ಅವರ ಹೆಸರು ಕೇಳದವರಿಗೂ ಕರ್ಣತಾಡಿತಗಳಾಗಿವೆಯೆನ್ನಬಹುದು.

## ಹೃದಯೋನ್ಮೇಷ

ಆದರೂ

"Much of V. Si. consists in what he has not written"

ಎಂದು ಯಾರೋ ಹೇಳಿದ ಮಾತು ಸರಿಯಾದದ್ದೆಂದೇ ನನ್ನ ಭಾವನೆ. ಅವರ "ಅಶ್ರುತ ಗಾನ"ದ "ಅಭಿರಾಮತೆ"ಯನ್ನು ಸವಿಯುವ ಭಾಗ್ಯ ನನಗೆ ದೊರೆತದ್ದು ಪೂರ್ವಪುಣ್ಯ. ಅವರ ಸೌಂದರ್ಯಾಭಿಜ್ಞತೆ; ಮನಸ್ಸಿನ ತಾರುಣ್ಯ; ಸಿತ್ಯಕುತೂಹಲ; ಸಾಹಿತ್ಯದಿಂದ ಅರ್ಥಶಾಸ್ತ್ರ ಪ್ರಕ್ರಿಯೆಗೂ ಅಯೋಧ್ಯೆಯಿಂದ ಅಥೆನ್ಸಿಗೂ ಖರಹರಪ್ರಿಯದಿಂದ ಕ್ಯೂಬಿಸಮ್ಮಿಗೂ ಜಿಂಕೆಯಂತೆ ನೆಗೆಯುವ ಚಪಲತೆ–ಒಂದು ನೇಪಥ್ಯನೋಟ. ಈ ಹೃದಯೋನ್ಮೇಷವೂ ಭಾವಸ್ನಿಗ್ಧತೆಯೂ ಅನ್ಯತ್ರ ಅಲಭ್ಯ. "ಕ್ಯಾರೆಕ್ಟರ್" ಮತ್ತು "ಪರ್ಸನ್ಯಾಲಿಟಿ" ಎಂಬ ಪೃಥಕ್ಕರಣವನ್ನು ವಿ. ಸೀ. ಆಗಾಗ ಪ್ರತಿಪಾದಿಸುತ್ತಾರೆ. ಗುಣಸಂಪತ್ತು, ವ್ಯಕ್ತಿವೈಶಿಷ್ಟ್ಯ–ಈ ಎರಡರ ಸಮೃದ್ಧಿಯನ್ನೂ ವಿ. ಸೀ.ಯವರಲ್ಲಿ ಕಾಣಬಹುದು.

ವಿ. ಸೀ.ಯವರ ಕಾವ್ಯಕಲೆಗೂ ಬುದ್ಧಿಸಾಹಸಕ್ಕೂ ನನ್ನ ಅಥವಾ ಯಾರದೂ ಪ್ರಶಸ್ತಿ ಬೇಕಿಲ್ಲ. ಆದರೆ ಅವರ ಬರವಣಿಗೆಯಲ್ಲಿ ಹೊರಪಡದ ವ್ಯಕ್ತಿತ್ವ ಸೌಂದರ್ಯದ ಆಕರ್ಷಕ ಗುಣವನ್ನು, ಅದರ ಹಲವು ಮುಖಗಳನ್ನು ಪ್ರಸ್ತಾಪಿಸಬೇಕೆನಿಸಿದೆ. ಇದಕ್ಕೆ ವಿ. ಸೀ. ಅವರ ಕ್ಷಮೆ ಇದ್ದೀತು.

"The whole is greater than a sum of its parts" ಎಂಬ ಗಣಿತ ವಿರೋಧ ಹೇಳಿಕೆಯನ್ನು ವಿ. ಸೀ.ಯವರ ವ್ಯಕ್ತಿತ್ವಕ್ಕೆ ಸಾರ್ಥಕವಾಗಿ ಅನ್ವಯಿಸಬಹುದು.

ವಿ. ಸೀ. ಅವರದು ಸರಳ ಜೀವನ. ವೀಳ್ಯದೆಲೆ, ಕಾಫಿ, ರುಮಾಲು, ಪಂಚೆ, ಹೋಟೆಲ್ ತಿಂಡಿ–ಇವನ್ನು ಭೋಗವಿಲಾಸವೆಂದು ಯಾರೂ ಕರೆಯರು. ಆದರೆ ಈ ಸರಳತೆ ಹಲವು ಅಂಶಗಳಲ್ಲಿ ಗಾಂಧಿಯವರ ಸರಳತೆಯಂತೆ, ಜಟಿಲ, ದುಬಾರಿ ಆಗುವುದುಂಟು. (ಗಾಂಧೀ, ವಿ. ಸೀ. ಇಬ್ಬರ ಜನ್ಮದಿನವೂ ಒಂದೇ– ಅಕ್ಟೋಬರ್ ೨; ಮೂವತ್ತು ವರ್ಷಗಳ ಅಂತರ, ಅಷ್ಟೆ.) ವಿ. ಸೀ. ಅವರಿಗೆ ಬೇಕಾದ ವೀಳ್ಯದೆಲೆ ಬಳೇಪೇಟೆಯ ಫಲಾನೆ ಅಂಗಡಿಯಿಂದಲೇ ಬರಬೇಕು.

ವಿ. ಸೀ. ಕಾಫಿ ವ್ಯಸನಿಗಳು. "ನಾನು ಕಾಫಿ ಕುಡಿದಿರುವಷ್ಟು ನೀವು ನೀರು ಕುಡಿದಿಲ್ಲ" ಎಂದು ನನ್ನನ್ನು ಆಗಾಗ ಮೂದಲಿಸುತ್ತಾರೆ. ಕಾಫಿಯು ಗುಣದಲ್ಲಿಯೂ ಪ್ರಮಾಣದಲ್ಲಿಯೂ ಮಜಬೂತಾಗಿರಬೇಕು. ವಿದ್ಯಾರ್ಥಿಗಳು ಸ್ನೇಹಿತರು, ಪತ್ರಿಕಾಕರ್ತರು, ವಿ. ಸೀ. ಯವರನ್ನು ಕೆಣಕುವುದಕ್ಕೆಂದೇ ಅವರಲ್ಲಿಗೆ

ಹೋಗುವ ನಮ್ಮಂಥವರು–ಯಾರಾದರೂ ಅತಿಥಿಗಳು ವಿ. ಸೀ. ಅವರ ಕೋಣೆಯೊಳಕ್ಕೆ ಕಾಲಿಟ್ಟು ಐದು ನಿಮಿಷಗಳೊಳಗಾಗಿ ವಿ. ಸೀ. "ನೋಡೂ........" ಎಂದು ಕೂಗುವರು. ಈ "ನೋಡೂ........" ಎಂಬುದು ಪಾರಿಭಾಷಿಕ ಶಬ್ದ. ಇದಕ್ಕೆ ಎರಡು ಅರ್ಥ; (೧)ಭಾರ್ಯೆ ಸರೋಜಮ್ಮನವರನ್ನು ಉದ್ದೇಶಿಸಿದ ಸಂಬೋಧನೆ; (೨) ಅತಿಥಿಗಳು ಬಂದಿದ್ದಾರೆ, ಕಾಫಿ ತೆಗೆದುಕೊಂಡು ಬಾ. ಕೆಲವು ನಿಮಿಷಗಳೊಳಗಾಗಿ ಒಂದು ಪಾವಿನಷ್ಟು ಗಾತ್ರದ ಕಂಚಿನ ಲೋಟಗಳ ಭರ್ತಿ ಕಾಫಿ ಹಾಜರಾಗುವುದು.

ಅವರ "ನೋಡೂ" ಪರಿಭಾಷೆಯನ್ನು ಅವರ ಮಕ್ಕಳು ಹಾಸ್ಯ ಮಾಡುವುದೂ ಉಂಟು. ಒಂದು ಸಲ "ಬಚ್ಚಲು ಮನೆಯಲ್ಲಿ ಯಾರಿದ್ದಾರೆ?" ಎಂದು ವಿ. ಸೀ. ಕೇಳಿದಾಗ ಅವರ ಕೊನೆಯ ಮಗಳು ಉಷಾ "ನೋಡೂ ಇದ್ದಾಳೆ" ಎಂದು ಉತ್ತರಿಸಿದಳು.

(ಉಷಾಗೆ ವಿ. ಸೀ. ಅವರಿಟ್ಟಿರುವ ಮುದ್ದಿನ ಹೆಸರು "ಚಿಂತಾ".)

## ವಸ್ತ್ರವ್ಯಸನ

ವಿ. ಸೀ. ಅವರ ರುಮಾಲಿಗೆ ಅತ್ಯಂತ ಶ್ರೇಷ್ಠ ದರ್ಜೆಯ ಮಲ್ ಬಟ್ಟೆಯೆ ಬೇಕು. ರುಮಾಲಿಗಾಗಲಿ, ಷರಟಿಗಾಗಲಿ, ಪಂಚೆಗಾಗಲಿ, ೧೭೦೫ಜಾತಿಯ ಮಲ್‌ಗಿಂತ ಕಡಿಮೆಯಾದ ಯಾವುದರಿಂದಲೂ ವಿ. ಸೀ. ಅವರಿಗೆ ಸಮಾಧಾನವಿಲ್ಲ. ನಾವಿಬ್ಬರೂ ಯಾವುದೋ ಸಂದರ್ಭಕ್ಕಾಗಿ ಮದರಾಸಿಗೆ ಹೋಗಿದ್ದಾಗ, ಮಲ್‌ಬಟ್ಟೆಗಾಗಿ ಒಂದಾನೊಂದು ಪೇಟೆಬೀದಿಯ ಅಂಗಡಿ ಅಂಗಡಿಯಲ್ಲೂ ಅಜಮಾಯಷಿ ಮಾಡಬೇಕಾಯಿತು.

ವಿ. ಸೀ. ಅವರ ಮನಸ್ಸಿಗೆ ನೋವುಂಟು ಮಾಡಬೇಕಾದರೆ ಅವರ ರುಮಾಲು ಸರಿಯಾಗಿಲ್ಲವೆಂದು ಸೂಚಿಸಿದರೆ ಸಾಕು. ಇದಕ್ಕಿಂತ ಮರ್ಮಘಾತಕವಾದ ಟೀಕೆ ಬೇರೆಯಿಲ್ಲ. ಒಂದು ಸಲ ಯಾರೋ ಒಬ್ಬರು "ನಿಮ್ಮ ರುಮಾಲು ಏಕೋ ಮಾಮೂಲಿನ ಹಾಗಿಲ್ಲವಲ್ಲ?" ಎಂದು ಕೇಳಿದರು. ಹಲವಾರು ದಿನಗಳಾದರೂ ಆ ಗಾಯ ಮಾಯಲಿಲ್ಲ; "ನೋಡಿ ಅವರು ಹೀಗೆಂದು ಬಿಟ್ಟರು"–ಎಂದು ವಿ. ಸೀ. ಪ್ರಲಾಪಿಸುತ್ತಿದ್ದರು.

ಒಂದು ಸಲ ವಿ. ಸೀ. ಪಂಚೆಯ ಖರೀದಿಗೆ ಹೊರಟರು. ಜೊತೆಯಲ್ಲಿ ಫಿಸಿಕ್ಸ್ ಪ್ರೊಫೆಸರ್ ಪಿ. ಶ್ರೀನಿವಾಸರಾಯರನ್ನೂ ಕರೆದುಕೊಂಡು ಹೋಗಿದ್ದರು. ಇಬ್ಬರೂ ಬಳೆಪೇಟೆಯ ಅಂಗಡಿ ಅಂಗಡಿಯನ್ನೂ ಸುತ್ತಿದರು. ವಿ. ಸೀ. ಒಂದೊಂದು ಅಂಗಡಿಯಲ್ಲೂ ಇದ್ದ ನಮೂನೆಗಳನ್ನೆಲ್ಲ ತೆಗೆಸಿನೋಡಿ "ಇದು ತುಂಬ ದಪ್ಪ", "ಇದರ ಟೆಕ್ಸ್‌ಚರ್ ಚೆನ್ನಾಗಿಲ್ಲ", "ಇದು ನಯವಾಗಿಲ್ಲ", "ಇದರ ಕೌಂಟ್

ಸಾಲದು"—ಹೀಗೆ ಹೇಳುತ್ತ ಬೇರೆ ಬೇರೆ ಅಂಗಡಿಗಳನ್ನು ತಲಾಷ್ ಮಾಡುತ್ತಲೇ ಹೋದರು.

ಕೊನೆಗೆ ಒಂದು ಅಂಗಡಿಯಲ್ಲಿ ಯಾವುದೋ ಒಂದು ಪಂಚೆಜೋಡಿ ಅಷ್ಟೇನೂ ಅಸಮರ್ಪಕವಲ್ಲವೆಂದು ವಿ. ಸೀ. ತೀರ್ಮಾನಿಸಿದರು. (ಕಾಲು ನೋಯುತ್ತಿತ್ತು ವೇಳೆಯೂ ಮೀರಿತ್ತು.) ಅದರ ಬೆಲೆ ಎಷ್ಟೆಂದು ಕೇಳಿದರು. ಅಂಗಡಿಯವ "ಜೊತೆಗೆ ೪೦ ರೂಪಾಯಿ" ಎಂದ. ವಿ. ಸೀ. ಕಿಸೆಯಲ್ಲಿ ನೋಡಿಕೊಂಡರು. ಅಲ್ಲಿ ದ್ದದ್ದು ೧೦ ರೂಪಾಯಿ ಮಾತ್ರ. ಒಂದು ಜೊತೆ ಇಲ್ಲದಿದ್ದರೆ ಹೋಗಲಿ, ಒಂದು ಒಂಟಿ ಕೊಳ್ಳಬೇಕಾದರೂ ಇನ್ನೂ ಹತ್ತು ರೂಪಾಯಿ ಊನವಾಗಿತ್ತು. ಶ್ರೀನಿವಾಸ ರಾಯರನ್ನು ಕೇಳಿದರು.

"ಶ್ರೀನಿವಾಸರಾವ್, ನಿಮ್ಮಲ್ಲಿ ೧೦ ರೂಪಾಯಿ ಇದ್ದರೆ ಕೊಡುತ್ತೀರಾ? ಆಮೇಲೆ ವಾಪಸ್ ಮಾಡುತ್ತೇನೆ."

(ಜೇಬನ್ನು ನೋಡಿಕೊಂಡು) "ಓಹೋ, ಕೊಡುತ್ತೇನೆ ಸೀತಾರಾಮಯ್ಯ, ಅದಕ್ಕೇನಂತೆ, ಆದರೆ ಈಗಲೇ ಈ ವ್ಯಾಪಾರಕ್ಕೆ ಏನು ಮುಹೂರ್ತ? ನಾಳೆಯೋ ನಾಳಿದ್ದೋ ಬಂದು ಕೊಂಡುಕೊಂಡರಾಯಿತಲ್ಲ?"

"ಉಹು, ಅರ್ಜೆಂಟಾಗೇ ಬೇಕಾಗಿದೆ, ಶ್ರೀನಿವಾಸರಾವ್. ನಾಳೆ ಆ ಸ್ಕೂಲಿ ನಲ್ಲಿ ಏನೋ ಫಂಕ್‌ಷನ್ ಇದೆಯಂತೆ. ನನ್ನನ್ನು ಅಧ್ಯಕ್ಷತೆಗೆ ಕರೆದಿದ್ದಾರೆ. ಹಳೆಯ ಪಂಚೆ ಉಟ್ಟುಕೊಂಡು ಹೇಗೆ ಹೋಗುವುದು? ಹೊಸ ಪಂಚೆ ಮುರ ಮುರ ಅಂತ ಚೆನ್ನಾಗಿರುತ್ತದೆ. ಆದ್ದರಿಂದ ಈಗಲೇ ಕೊಂಡುಕೊಂಡುಬಿಡೋಣ."

**ಹಣಪ್ರಪಂಚ**

ಒಮ್ಮೆ ಯಾವುದೋ ಊರಿಗೆ ಹೋಗಿ ವಿ. ಸೀ. ಅವರು ದೇಶದ ಸಂಪದಭಿ ವೃದ್ಧಿಯನ್ನು ಕುರಿತು ಭರ್ಜರಿಯಾಗಿ ಭಾಷಣ ಮಾಡಿದರು. ಅವರ ತತ್ತ್ವಪ್ರಣಾ ಳಿಕೆಯಲ್ಲಿ ಕೋಟಿ ಅರ್ಬುದ ನ್ಯರ್ಬುದಗಳಷ್ಟು ಹಣ ಲೀಲಾಜಾಲವಾಗಿ ಸುಳಿದಾ ಡಿತು. "ಒಂದು ದೇಶದ ಆಧುನಿಕೀಕರಣಕ್ಕೆ ಒಂದೆರಡು ಬಿಲಿಯ ರೂಪಾಯಿ ಏನು ಮಹಾ?"—ಎಂದೆಲ್ಲಾ ವಾದ ಹೇಳಿದರು.

ಉಪನ್ಯಾಸವಾದ ಮೇಲೆ ವಿ. ಸೀ. ಅವರನ್ನು ಪಕ್ಕದಲ್ಲಿದ್ದ ಎನ್. ಎಸ್. ಸುಬ್ಬರಾಯರೋ, ಬಿ. ಎಂ. ಶ್ರೀಕಂಠಯ್ಯನವರೋ ಕೇಳಿದರು: "ಉದ್ದುದ್ದ ಮಾತನ್ನೇನೋ ಆಡಿದಿರಿ. ಈಗ ನಿಮ್ಮ ಜೇಬಿನಲ್ಲಿ ಎಷ್ಟು ಹಣ ಇದೆ?"

ವಿ. ಸೀ: "ನೀವು ದಯಮಾಡಿ ಬಸ್‌ಚಾರ್ಜ್ ಕೊಟ್ಟರೆ ವಾಪಸ್ ಹೋಗಿ ಮನೆ ಸೇರಿಕೊಳ್ಳುತ್ತೇನೆ."

ಇದು ವಿ. ಸೀ. ಅವರ ಹಣಪ್ರಪಂಚ.

ಅಕ್ಕಿ ಬೇಳೆಗೆ ಪರದಾಟವಾದರೂ ಲಂಡನ್ನಿನಿಂದ "ಇಕಾನಮಿಸ್ಟ್" ಪತ್ರಿಕೆಯ

ಏರ್‌ಮೈಲ್ ಆವೃತ್ತಿ ತರಿಸುವುದನ್ನು ವಿ. ಸೀ. ನಿಲ್ಲಿಸರು. ಭಾರತೀಯ ಪತ್ರಿಕೆಗಳ ಜೊತೆಗೆ "ಲಿಸ್ನರ್", "ಟೈಂಸ್ ಲಿಟರರಿ ಸಪ್ಲಿಮೆಂಟ್", "ನ್ಯೂ ಸ್ಟೇಟ್ಸ್‌ಮನ್"– ಇವೆಲ್ಲಾ ವಿ. ಸೀ. ಅವರಿಗೆ ಉಚ್ಛ್ವಾಸ ನಿಃಶ್ವಾಸಗಳಿದ್ದಂತೆ ಪರಮಾಗತ್ಯಗಳು.

ಮುಂದುಗಾರಿಕೆಯ ಪ್ರಸಂಗವೇನಾದರೂ ನಡೆದಾಗ, "ನೀವು ಇಕನಾಮಿಕ್ಸ್‌ನಲ್ಲಿ ಮೆಡಲಿಸ್ಟ್" ಇತ್ಯಾದಿಯಾಗಿ ಸೂಚಕವಾಗಿ ಚುಚ್ಚುಮಾತುಗಳನ್ನಾಡುವುದು ನನ್ನ ರೂಢಿ.

"You are a killjoy"; "ಏನು arch cynics ಅಪ್ಪ!"– ಎಂದು ವಿ. ಸೀ. ಅವರ ಪ್ರತಿಕ್ರಿಯೆ.

**ಖಯಾಲಿ**

ವಿ. ಸೀ. ಅವರ ಇಂಥ ಖಯಾಲಿಗಳನ್ನು ಬಲ್ಲ ಮಿತ್ರವರ್ಗಕ್ಕೆ ಏಳೆಂಟು ವರ್ಷಗಳ ಹಿಂದೆ ಒಂದು ಪ್ರಸಂಗ ಹಾಸ್ಯಾವಕಾಶವಾಯಿತು. ಒಬ್ಬ ಸ್ನೇಹಿತರು ನನ್ನನ್ನು ಕೇಳಿದರು.

ಅವರು: "Did you hear the joke of the year?"

ನಾನು: "ಇಲ್ಲವಲ್ಲ? ಏನು?"

ಅವರು: "V. Si is deliverig a lecture tomrrow. Guess what is the subject?"

ನಾನು: "ಏನು?"

ಅವರು: "Simple Living !"

* * * *

ದಿಲ್ಲಿಯಲ್ಲೋ ಮುಂಬೈನಲ್ಲೋ ಯಾವುದೋ ಸಮ್ಮೇಳನವೆನ್ನಿ. ಅವರಲ್ಲಿ ಭಾಗವಹಿಸುವವರಿಗೆ ಮಾರ್ಗವ್ಯಯ ಕೊಡಲಾಗುವುದೆಂದು ಹಲವೇಳೆ ಏರ್ಪಾಟಾಗಿರುತ್ತದೆ. ಅಂಥ ಅನುಕೂಲ ಏನೂ ಇರಲಿ, ಇಲ್ಲದಿರಲಿ: ಪರಸ್ಥಳಕ್ಕೆ ಹೋಗುವುದೆಂದರೆ ವಿ. ಸೀ.ಗೆ ಎಳೆಯ ಮಕ್ಕಳಂತೆ ಆಸೆ, ಉತ್ಸಾಹ. ಇನ್ನು ರೈಲುಚಾರ್ಜು ಕೊಡುತ್ತೇವೆಂದರೆ ಸ್ವರ್ಗಕ್ಕೆ ಎರಡೇ ಮೆಟ್ಟಿಲು ಉಳಿದಂತೆ! ತತ್‌ಕ್ಷಣ ರಾಮ್ ಮೋಹನ್ ಕಂಪನಿಗೆ ಯಾರನ್ನಾದರೂ ಅಟ್ಟಿ ಏರೋಪ್ಲೇನಿಗೆ ರಿಟರ್ನ್ ಟಿಕೆಟ್ ಬುಕ್ ಮಾಡಿಸುತ್ತಾರೆ. ಸಮ್ಮೇಳನಕ್ಕೆ ಹೋಗಿ ಹಿಂದಿರುಗುವಷ್ಟರೊಳಗಾಗಿ ಸಂಸ್ಥೆಯವರು ಇವರಿಗೆ ಕೊಡುತ್ತೇವೆಂದು ಹೇಳಿದ್ದ ನಾಲ್ಕೈದರಷ್ಟು ಹಣ ವ್ಯಯವಾಗಿರುವುದು ಅಪರೂಪವಲ್ಲ.

**ನಚ್ಚು**

ರುಮಾಲು ಪಂಚೆಗಳ ವಿಷಯದಲ್ಲಿ ಹೇಗೋ ಉಳಿದ ವಿಷಯಗಳಲ್ಲೂ

ಹಾಗೆಯೇ ಸಸನಸೆ ವಿ. ಸೀ.ಯವರದು. ಅವರು ಹೋಟೆಲಿನಲ್ಲಿ ದೋಸೆ ಆರ್ಡರ್ ಮಾಡಬೇಕಾದಾಗ ಸಪ್ಲೈಯರಿಗೆ ಕೊಡುವ ನಿರ್ದೇಶ:

"ನೋಡಪ್ಪಾ–ಎರಡು ಮಸಾಲೆದೋಸೆ, ಬೆಣ್ಣೆ ಹಾಕಬೇಕು ಅಂತ ಹೇಳು. ಚೆನ್ನಾಗಿ ರೋಸ್ಟ್ ಆಗಿರಲಿ. ದೋಸೆಯ ತುದಿ ಕೆಂಪಗೆ ಆಗಬೇಕು........"

ಇದನ್ನು ಹಲವು ಸಲ ನೋಡಿದ ಡಿ.ವಿ.ಜಿ. ಒಮ್ಮೆ (ಸಂದರ್ಭೋಚಿತ ಕರನ್ಯಾಸ ದೊಡನೆ) ಹೇಳಿದರಂತೆ: "ಅವನು ಎಲ್ಲರಿಗೂ ಮಾಡುವುದನ್ನೇ ನಿಮಗೂ ಮಾಡು ತ್ತಾನೆ ಸೀತಾರಾಮಯ್ಯ, ಯಾಕೆ ಯೋಚನೆ ಮಾಡುತ್ತೀರಿ?"

* * * *

ಪಿ. ಶ್ರೀನಿವಾಸರಾಯರೂ ವಿ.ಸೀ. ಅವರೂ ಅನೇಕವರ್ಷಕಾಲ ಸಿನೆಮ ನಾಟಕ ಹೋಟಲುಗಳಿಗೆ ಒಟ್ಟಿಗೇ ಹೋಗುತ್ತಿದ್ದರು. ಒಂದುಸಲ ಇಬ್ಬರೂ ಪಾಶ್ಚಾತ್ಯ ರೀತಿಯ ಹೋಟಲೊಂದಕ್ಕೆ ಹೋದರು. ಮಸಾಲೆದೋಸೆ ತರಿಸಿದರು. ಸೀತಾ ರಾಮಯ್ಯನವರು ಮೊದಲು ತಿಂದು ಮುಗಿಸಿದರು. ಶ್ರೀನಿವಾಸರಾಯರು ತಿನ್ನ ಲಾರಂಭಿಸುವಾಗ, ದೋಸೆಗೆ ಸೆಲುಫೇನಿನಂಥ ಅತಿ ಸೂಕ್ಷ್ಮ ತೆಳುಕಾಗದದ ಕವಚ ವೊಂದ್ದಿದ್ದು ಕಾಣಿಸಿತು. ಅದನ್ನು ಚಾಕುವಿನಿಂದ ಬಿಡಿಸಿ ಶ್ರೀನಿವಾಸರಾಯರು ದೋಸೆಯನ್ನು ತಿನ್ನತೊಡಗಿದರು.

"ಏನದು ಶ್ರೀನಿವಾಸರಾವ್?"

"ತೆಳು ಕಾಗದದ ಕವರಿಂಗ್ ಇತ್ತು ಸೀತಾರಾಮಯ್ಯ, ಅದನ್ನು ತೆಗೆದಿಟ್ಟೆ ಅಷ್ಟೆ."

"ಅಯ್ಯೋ! ನಾನು ನೋಡಲೇ ಇಲ್ಲವಲ್ಲ! ಅದರಸಮೇತ ದೋಸೆ ತಿಂದು ಬಿಟ್ಟೆನಲ್ಲ!"

"–ಹೊಡಿಸಿಕೊಳ್ಳಿ" ಎಂದರು ರಾಯರು, ಸಾಭಿನಯವಾಗಿ.

ಸೀತಾರಾಮಯ್ಯನವರಿಗೆ ಕಾಗದ ಹೊಟ್ಟೆಗೆ ಸೇರಿತೆಂಬುದಕ್ಕಿಂತ, ತಾವು ಕಾಗ ದದಸಮೇತ ದೋಸೆ ತಿಂದದ್ದನ್ನು ನೋಡಿದ ಇತರರು ಏನೆಂದು ಕೊಂಡಿದ್ದಾರು? ಎಂಬುದು ಹೆಚ್ಚು ಚಿಂತೆಗೆ ಕಾರಣವಾಯಿತು.

ವಿ. ಸೀ.ಯವರಿಗೆ ಇಂಥ ಗಾಯ ಏನಾದರೂ ಆದರೆ ಮಾಯುವುದು ನಿಧಾನ. ನಮಗೆಲ್ಲ ಅನೇಕ ದಿನಗಳವರೆಗೆ ಹಾಸ್ಯದ ಸರಕಾಗಿ ಒದಗುತ್ತದೆ.

**ಮುದ್ರಣ–ಪ್ರಕಾಶನ**

ತಮ್ಮ ಪುಸ್ತಕಗಳು ಅಂದವಾಗಿ ಮುದ್ರಿತವಾಗಬೇಕೆಂದು ವಿ. ಸೀ.ಯವರ ಚಪಲ. "ಇಲ್ಲಿ ಮೊರಾಕ್ಕೊ ಬೈಂಡಿಂಗ್ ಯಾರು ಮಾಡುತ್ತಾರೆ? ವೆಲ್ಲಂ ಬೈಂಡಿಂಗ್ ಯಾರಾದರೂ ಮಾಡಿಕೊಟ್ಟಾರೆ?"–ಎಂದೆಲ್ಲ ವಿಚಾರಿಸುತ್ತಿರುತ್ತಾರೆ.

ಲೆಟರ್‌ಹೆಡ್ ಮಾಡಿಸುವುದರಲ್ಲಿ ವಿ. ಸೀ. ಅವರಿಗೂ ಪಿ. ಶ್ರೀನಿವಾಸರಾಯ

ರಿಗೂ ಹಲವಾರು ವರ್ಷ ಪೋಟಾಪೋಟಿ ನಡೆಯುತ್ತಿತ್ತು. ಅವರು ಬಾಂಡ್‌ಪೇಪರಿನಲ್ಲಿ ಮಾಡಿಸಿದರೆ ಇವರು ಟಿಷ್ಯು ಪೇಪರಿನಲ್ಲಿ; ಅವರು ಉದ್ದುದ್ದವಾಗಿ ಮಾಡಿಸಿದರೆ ಇವರು ಅಗಲಗಲವಾಗಿ–ಹೀಗೆ.

ತಮ್ಮ ಎಷ್ಟೋ ಕೃತಿಗಳು ಮುದ್ರಣ ಕಾಣದೆ ನಾಲ್ಕಾರು ವರ್ಷ ಕಪಾಟಿನಲ್ಲಿ ನಿದ್ರಿಸಬೇಕಾಗಿ ಬಂದದ್ದು ವಿ. ಸೀ. ಅವರ ದುರದೃಷ್ಟ. ಗ್ರಂಥ ಪ್ರಕಟಣೆಯಿಂದ ಅವರಿಗೆ ನಷ್ಟವಾಗಿರುವ ಸಂದರ್ಭಗಳೇ ಹೆಚ್ಚು. ಒಂದೆರಡು ಸಂದರ್ಭಗಳಲ್ಲಿ ಪ್ರಕಟನೆಯ ಖರ್ಚನ್ನು ಹೊತ್ತುಕೊಳ್ಳುವುದಾಗಿ ಮಾತು ಕೊಟ್ಟ ಪ್ರಕಾಶಕರು ಗ್ರಂಥ ಮುದ್ರಣವಾದ ಮೇಲೆ ಜಾರಿಕೊಳ್ಳಲು ಪ್ರಯತ್ನಿಸಿ, ಮುದ್ರಣದ ಬಿಲ್ ಕೊಡುವ ಬಗೆ ಹೇಗೆಂದು ವಿ. ಸೀ. ನಿದ್ದೆಕೆಟ್ಟದ್ದೂ ಉಂಟು.

ಅವರ ತುಂಬ ಪ್ರಖ್ಯಾತ ಪದ್ಯಸಂಕಲನಗಳು ಕೂಡ ಪುನರ್ಮುದ್ರಣ ಕಾಣಲು ಹಲವು ದಶಕಗಳೇ ಬೇಕಾಯಿತು.

* * * *

ವಿ. ಸೀ. ಅವರ ಗ್ರಂಥಗಳನ್ನು ಪ್ರಕಟನೆ ಮಾಡಿದವರು ಅವರಿಗೇ ಒಂದು ಪ್ರತಿಯನ್ನು ಕಳಿಸದಿರುವ ಸಂದರ್ಭಗಳೂ ಉಂಟು. ಸರಕಾರದ ಯಾವುದೋ ಇಲಾಖೆ ವಿ. ಸೀ.ಯವರಿಂದ ಗ್ರಂಥವೊಂದನ್ನು ಬರೆಯಿಸಿತು. ಮೂರು ನಾಲ್ಕು ವರ್ಷಗಳಾದ ಮೇಲೆ, ಬಳೆಪೇಟೆಯ ಯಾವುದೋ ಅಂಗಡಿಯಲ್ಲಿ ಪ್ರತಿಗಳನ್ನು ನೋಡಿದಾಗಲೇ ಗ್ರಂಥ ಪ್ರಕಟವಾಗಿದ್ದ ಸಂಗತಿ ಅವರಿಗೆ ತಿಳಿದದ್ದು.

* * * *

ಒಂದಾನೊಂದು ಪುಸ್ತಕವನ್ನು ವಿ. ಸೀ. ಪುನರ್ಮುದ್ರಣಕ್ಕಾಗಿ ಪರಿಷ್ಕರಿಸಬೇಕಾಗಿತ್ತು. ಆದರೆ ಅವರಲ್ಲಿ ಒಂದು ಪ್ರತಿಯೂ ಇರಲಿಲ್ಲ. ಅವರ ಮಗ ಸತ್ಯಣ್ಣನನ್ನು ಕರೆದು ಅಂಗಡಿಗಳಲ್ಲಿ ತಲಾಷ್ ಮಾಡಲು ಹೇಳಿದರು. ಎರಡು ದಿನಗಳ ನಂತರ ಸತ್ತಿ ಹೇಳಿದ:

"ಎಲ್ಲೂ ಸಿಕ್ಕಲಿಲ್ಲ ಮಾವಯ್ಯ–ಎಲ್ಲ ಅಂಗಡಿಗಳಲ್ಲೂ ಹುಡುಕಿದೆ."

"ಗುಜರಿಗಳಲ್ಲೂ ಇಲ್ಲವೇನೋ? ನನ್ನ ಪುಸ್ತಕಗಳನ್ನು ಮನೆಯಲ್ಲಿ ಯಾರು ಜೋಪಾನ ಮಾಡುತ್ತಾರೆ? ಗುಜರಿಗಳಲ್ಲಿ ಇರಲೇಬೇಕು."

"ಮೊದಲು ಕೊಂಡುಕೊಂಡಿದ್ದರೆ ತಾನೆ, ಮಾವಯ್ಯ, ಗುಜರಿಗೆ ಹಾಕುವುದಕ್ಕೆ? ಮೊದಲೇ ಕೊಂಡುಕೊಳ್ಳದಿದ್ದರೆ?"

ವಿ. ಸೀ. ಅವರು ಸತ್ತಿಯ ಉತ್ತರವನ್ನು ಜ್ಞಾಪಿಸಿಕೊಂಡು ನಾಲ್ಕಾರು ದಿನಗಳವರೆಗೆ ನಗುತ್ತಿದ್ದರು.

* * * *

ವಿ. ಸೀ.ಯವರ ಗ್ರಂಥಗಳ ಮುದ್ರಣ ಸ್ವಲ್ಪ ಗಾಬರಿ ತರುವ ವಿಷಯವೇ— ಅವರ ಲಿಪಿಯ ದುರ್ಗ್ರಾಹ್ಯತೆಯ ಕಾರಣದಿಂದ; ಮತ್ತು ಒಂದೊಂದು ಮುದ್ರಣಾ

ವಸ್ಥೆಯಲ್ಲೂ ಅವರು ಮಾಡುವ ಮಾರ್ಪಾಟುಗಳ ಕಾರಣದಿಂದ. ವ್ಯಕ್ತವ್ಯಭಾವ, ವಾಕ್ಯರಚನೆ, ಶಬ್ದ ಪ್ರಯೋಗ, ಕಾಗದದ ಮೇಲೆ ದಾಖಲಾಗುವ ಅಕ್ಷರಾಕೃತಿ, ಅಚ್ಚಿನಮೊಳೆ ಜೋಡಿಸಿದ ಮೇಲೆ ಗ್ಯಾಲಿ, ಪೇಜ್ ಮೊದಲಾದ ಘಟ್ಟಗಳು, ಮುದ್ರಿತ ಪುಸ್ತಕ–ಈ ಕಾರ್ಯಸರಣಿಯುದ್ದಕ್ಕೂ ಅಸ್ಪಷ್ಟತೆಯೂ ಅನಿಶ್ಚಿತತೆಯೂ ಉಳಿಯುವುದು ಮಾತ್ರವಲ್ಲ; ಹೆಚ್ಚುವ ಸಂಭವ. ಆದ್ದರಿಂದ ವಿ. ಸೀ. ಅವರ ಪುಸ್ತಕಗಳಲ್ಲಿ ಮುದ್ರಣಸ್ಖಾಲಿತ್ಯಗಳು ತಲೆಹಾಕಲು ವಿಪುಲ ಅವಕಾಶವಿರುತ್ತದೆ.

**ಬೇನೆ**

ವಿ. ಸೀ. ತಮ್ಮ ಒಂದು ಪುಸ್ತಕದಲ್ಲಿ ಶುದ್ಧಾಶುದ್ಧ ಪತ್ರಿಕೆಗೆ "ಕೆಲವು ಅಚ್ಚಿನ ತಪ್ಪುಗಳು" ಎಂಬ ಶೀರ್ಷಿಕೆಯನ್ನು ಕೊಟ್ಟಿದ್ದರು. ಅದನ್ನು ನೋಡಿದ ಒಬ್ಬರು "ಉಳಿದಿದ್ದರ ಪಟ್ಟಿಯೂ ಬರಲಿ–ಆ ಮೇಲೆ ಕೊಂಡುಕೊಳ್ಳೋಣ" ಎಂದರಂತೆ.

ವಿ. ಸೀ.ಯವರಿಗೂ ನನಗೂ ತುಂಬ ನಗೆಯನ್ನು ತಂದ ಒಂದು ಸಂದರ್ಭ. ಅವರ ಶಾಕುಂತಲ ವಿಮರ್ಶೆಯ ದ್ವಿತೀಯಾವೃತ್ತಿ ಅಚ್ಚಾಗುತ್ತಿತ್ತು. ಮುದ್ರಕರ ಕ್ಲೇಶವನ್ನು ಕಡಿಮೆಮಾಡಲು, ವಿ. ಸೀ.ಯವರ ತಿದ್ದಾವಣೆಗಳನ್ನೆಲ್ಲ ಬೇರೊಂದು ಕರಡು ಪ್ರತಿಯಲ್ಲಿ ಸ್ಫುಟವಾಗಿ ಸೂಚಿಸಿ ಗೆಳೆಯ ಜಿ. ಪಿ. ರಾಜರತ್ನಂ ಪ್ರೆಸ್ಸಿಗೆ ತಲಪಿಸುತ್ತಿದ್ದರು. ಆದರೂ ಪ್ರೂಫುಗಳಲ್ಲಿ ತಪ್ಪುಗಳಿಗೆ ಕೊರತೆಯಿರಲಿಲ್ಲ. ಒಂದು ವಾಕ್ಯ "ಶಕುಂತಲೆಯ ಮೂಕಬೇನೆ" ಎಂದಿತ್ತು. ವಿ.ಸೀ. ಅವರಿಗೆ ಬಂದಿದ್ದ ಪ್ರೂಫಿನಲ್ಲಿ "ಮ"ಕ್ಕೆ ಬದಲಾಗಿ "ಪ" ಎಂದಿತ್ತು.

**ಸಂಶಯ ಪಿಶಾಚಿ**

ವಿ. ಸೀ. ಅವರಿಗೆ ಹೆಜ್ಜೆ ಹೆಜ್ಜೆಗೂ ಸಂದೇಹಗಳು. "ಹೀಗೆ ಹೇಳಿದರೆ ಈ ಪ್ರಶ್ನೆ ಏಳುತ್ತದೆ", "ಹಾಗೆ ಹೇಳಿದರೆ ಆ ಪ್ರಶ್ನೆ ಏಳುತ್ತದೆ"– ಎಂಬ ಸಂದಿಗ್ಧತೆ ಅವರ ಮಾತಿನಲ್ಲೂ ಬರಹದಲ್ಲೂ ತುಂಬಿರುತ್ತದೆ. ಇದಕ್ಕೆ ಡಿ.ವಿ.ಜಿ.ಯವರ ಪ್ರತಿಕ್ರಿಯೆ:

"ಪ್ರಶ್ನೆಗಳೇನೋ ಎದ್ದುಬಿಡುತ್ತವೆ, ಸೀತಾರಾಮಯ್ಯ: ಅದರ ಉತ್ತರಗಳು ಏಳಬೇಕಲ್ಲ?"

* * * *

ಹಾಗೆ ಪ್ರಶ್ನೆಯೆದ್ದ ಒಂದು ಸಂದರ್ಭ ನೆನಪಿಗೆ ಬರುತ್ತದೆ.

ವಿ. ಸೀ.ಯವರನ್ನು ಯಾವುದೋ ಸಾರ್ವಜನಿಕ ಸಭೆಯಲ್ಲಿ ಸಂಧಿಸಿದ ಒಬ್ಬ ಮಹಾಶಯರು ಮಾರನೆಯ ದಿನ ಸಂಜೆ ನಡೆಯಲಿದ್ದ ಒಂದು ಗ್ರಂಥ ಪ್ರಕಟನ ಸಮಾರಂಭಕ್ಕೆ ಅವರನ್ನು ಕರೆದರು.

ಮಾರನೆಯ ದಿನ, ವಿ. ಸೀ.ಯವರನ್ನು ಸಂಶಯ ಪಿಶಾಚಿ ಹಿಡಿಯಿತು. ಬೆಳಗಿನಿಂದ ಒಂದೇ ಸಮನೆ ಚಿಂತಿಸಿದರು.

ಅಂತರ್ಧ್ವನಿ ೧: "ಎಲ್ಲಿಯೋ ಬೀದಿಯಲ್ಲಿ ಸಿಕ್ಕಿದಾಗ ಆತ ಕರೆದರೆ ನೀನು ಹೋಗಿಬಿಡುವುದೇ? ವಿಹಿತ ರೀತಿಯ ಆಹ್ವಾನವಿಲ್ಲದೆ ಏಕೆ ಹೋಗಬೇಕು?"

ಅಂತರ್ಧ್ವನಿ ೨: "ಗಣ್ಯರೆಲ್ಲ ಸೇರುವ ಆ ಸಂದರ್ಭಕ್ಕೆ ನೀನು ಹೋಗದಿದ್ದರೆ ನಷ್ಟ ನಿನಗೆ ತಾನೆ?"

ಅಂತರ್ಧ್ವನಿ ೩: "ನೀನು ಇನ್ನೂ ಚಲಾವಣೆಯಲ್ಲಿರುವ ನಾಣ್ಯ ಎಂದು ಜನರಿಗೆ ಗೊತ್ತಾಗಲು ಇದೊಂದು ಅವಕಾಶವಾಗುವುದಲ್ಲವೆ?"

ಇತ್ಯಾದಿ ಇತ್ಯಾದಿ.

ಹೋಗುವುದು ಅನಾವಶ್ಯಕವೆಂದು ಕೆ. ಎಸ್. ನರಸಿಂಹಸ್ವಾಮಿಗಳೂ ನಾನೂ ಹೇಳಿದೆವು. ತಾತ್ಕಾಲಿಕವಾಗಿ ಹಾಗೇ ನಿರ್ಣಯವಾಯಿತು.

ಸಮಾರಂಭಕ್ಕೆ ಇನ್ನು ಅರ್ಧ ಘಂಟೆ ಉಳಿದಿದ್ದಾಗ ಥಟ್ಟನೆ ವಿ. ಸೀ. ಯವರ ನಿರ್ಣಯ ಟಾಂಗ್ ಬಿರಾಂಗ್ ಆಯಿತು. ಧಿಗ್ಗನೆ ಎದ್ದು ನಿಂತು "ನಾನು ಹೋಗಿ ಬರುತ್ತೇನೆ" ಎಂದು ಸಿದ್ಧರಾದರು.

ಆಗ ಇನ್ನೊಂದು ಪ್ರಶ್ನೆ ಎದ್ದಿತು. ಕ್ಷೌರ ಮಾಡಿಕೊಳ್ಳಬೇಕೆ, ಬೇಡವೆ? ಸಮಾರಂಭಕ್ಕೆ ಪ್ರಮುಖ ವ್ಯಕ್ತಿಗಳೆಲ್ಲ ಬಂದಿರುತ್ತಾರಲ್ಲ? ಮತ್ತೆ ಜಿಜ್ಞಾಸೆ ಪ್ರಾರಂಭ. ಕ್ಷೌರಕರ್ಮ ಷುರು ಆಯಿತು. ಕೆಲವೇ ನಿಮಿಷಗಳು ಉಳಿದಿದ್ದವು. ಕ್ಷೌರ ಸಮರ್ಪಕವಾಗಿ ಆಗಲಿಲ್ಲ. ಕೈ ಆಯ ತಪ್ಪಿತು. ಬ್ಲೇಡು ತಗಲಿ ಬೆರಳುಗಳಿಂದ ರಕ್ತ ಬಂತು.

"ಇದು ಅಪಶಕುನ; ಹೋಗಬೇಡಿ ಮಾವಯ್ಯ"—ಎಂದ ಹಿರಿಯ ಮಗ ಕಿಟ್ಟಿ. ಕಿವಿಯಲಿ ಬಿತ್ತಿದನು ಭಯವ! ಕಿಟ್ಟಿ ಹೇಳಿದ್ದು. ಕೋತಿಗೆ ಇಂಗು ತಿನ್ನಿಸಿದಂತಾಯಿತು. ಸಾವಿರ ಕಾಲಿನ ಬಸವನಹುಳುವನ್ನು "ನೀನು ಯಾವ ಕಾಲನ್ನು ಮೊದಲು ಮುಂದಿಡುತ್ತೀ?" ಎಂದು ಕೇಳಿ ತಬ್ಬಿಬ್ಬು ಮಾಡಿದಂತಾಯಿತು.

ಅಂತೂ ಕಡೆಗೂ ಆಟೋರಿಕ್ಷಾ ಹತ್ತಿ ಹೊರಟೇ ಹೊರಟರು ದಿಗ್ವಿಜಯಕ್ಕೆ.

## ಪ್ರಾಶ್ನಿಕ

ಇಂಥ ಸಂದಿಗ್ಧಗಳು ವಿ. ಸೀ. ಅವರನ್ನು ಪದೇ ಪದೇ ಬಾಧಿಸುತ್ತವೆ.

ವಿ. ಸೀ. ಅವರ ರಚನೆಗಳನ್ನೂ ಶೈಲಿಯನ್ನೂ ಟೀಕಿಸಿ ಕುಚೋದ್ಯ ಮಾಡುವುದು ಗೆಳೆಯ ಕೆ. ಎಸ್. ನರಸಿಂಹಸ್ವಾಮಿಗಳಿಗೂ ನನಗೂ ಬಹಳ ಇಷ್ಟವಾದ ಕೆಲಸ. ಒಂದು ಕವಿ ಸಮ್ಮೇಳನದಲ್ಲಿ ವಿ. ಸೀ., ಕೆ. ಎಸ್. ನ. ಇಬ್ಬರೂ ಪುರಂದರ ದಾಸರ ಮೇಲೆ ಕವಿತ್ವ ಮಾಡಿ ಪಠಿಸಿದರು. ಕೆ. ಎಸ್. ನ. ಉಪಾಯಗಾರರು; ಅವರ ಪದ್ಯದಲ್ಲಿ ಮುಕ್ಕಾಲು ಪಾಲು ದಾಸರದೇ ಮಾತುಗಳು ತುಂಬಿದ್ದವು. ವಿ.ಸೀ.

ಯುವರ ಕವನದಲ್ಲಿ ಆಶ್ಚರ್ಯ, ಅವಧಾರಣೆ, ಪ್ರಶ್ನೆಗಳ ಸುರಿಮಳೆ. ಮಾರನೆಯ ದಿನ ವಿಮರ್ಶೆ.

ವಿ. ಸೀ. "You virtually put across Purandaradasa's lines as your own."

ಕೆ. ಎಸ್. ನ.: "ಪುರಂದರದಾಸರ ಮೇಲೆ ಪದ್ಯ ಬರೆಯಿರೆಂದರೆ ನೀವು ಅವರಿಗೇ ಪ್ರಶ್ನೆಗಳನ್ನು ಹಾಕಿಬಿಟ್ಟಿದ್ದೀರಲ್ಲ? "ಏನು," "ಏನು"–ಎಂದೆಲ್ಲ ರೇಗಾಡಿಸಿಬಿಟ್ಟಿದ್ದೀರಿ—ಏನುವನ್ನೂ ಪದದೊಳಕ್ಕೆ ತಂದುಬಿಟ್ಟಿದ್ದೀರಿ!"

ಅಲ್ಲಿಂದೀಚೆಗೆ ವಿ. ಸೀ. ಯವರು ಹೊಸದಾಗಿ ಏನು ಬರೆದರೂ, "ಅದರಲ್ಲಿ 'ಏನು' ಬಂದಿದೆ ತಾನೆ?" ಎಂದು ಕೇಳುತ್ತಾರೆ ಕೆ. ಎಸ್. ನ.

**ಒಂದು ಉಪನ್ಯಾಸ**

ವಿ. ಸೀ. ಯವರ ಉಪನ್ಯಾಸಗಳಲ್ಲಿ ಈ ಪ್ರಾಶ್ನಿಕ ಮನೋವೃತ್ತಿಯ ವಿಲಾಸ ಪ್ರೇಕ್ಷಣೀಯ. ಕೆಲವು ದಿನಗಳ ಹಿಂದೆ ವಿ. ಸೀ. ತಮ್ಮ ಒಂದು ಉಪನ್ಯಾಸಕ್ಕಾಗಿ ಆರಿಸಿಕೊಂಡ ವಿಷಯ "Facts and Values" ಎಂದು. ಉಪನ್ಯಾಸಕ್ಕೆ ಮುಂಚೆ ನಮ್ಮ ನಮ್ಮಲ್ಲಿ ಲಾಬಿಯಿಂಗ್– ವಿಷಯ ಸ್ವರೂಪವನ್ನು ಕುರಿತು ಹರಟೆ ನಡೆದಿತ್ತು. ಪ್ರೊಫೆಸರ್ ಕೆ. ಸಂಪದ್ಗಿರಿರಾಯರು ಪಕ್ಕದಲ್ಲಿದ್ದ ಇಂಜಿನಿಯರ್ ವೆಂಕಟೇಶದಾಸ್ ಅವರನ್ನು ಕೇಳಿದರು.

ಸಂ: "ಈ ಗೋಡೆ ಏತರಿಂದ ಕಟ್ಟಿದ್ದು ಮಿಸ್ಟರ್ ದಾಸ್?"

ವೆಂ: "ಇಟ್ಟಿಗೆಯಿಂದ ಸಾರ್."

ಸಂ: (ನಮ್ಮ ಕಡೆಗೆ ತಿರುಗಿ) "ನೋಡಿದಿರಾ–ಇದು ಫ್ಯಾಕ್ಟ್." (ದಾಸ್‌ರವರ ಕಡೆಗೆ ತಿರುಗಿ–) "ಇಟ್ಟಿಗೆ ಒಂದು ಗಾಡಿಗೆ ಎಷ್ಟಾಗುತ್ತದೆ?"

ವೆಂ: "ಅರವತ್ತು ರೂಪಾಯಿ ಸಾರ್"

ಸಂ: (ನಮ್ಮ ಕಡೆಗೆ ತಿರುಗಿ–) "ಇದೇನಪ್ಪ ವ್ಯಾಲ್ಯು."

ಉಪನ್ಯಾಸವಾದ ಮೇಲೆ ಅದಕ್ಕೆ ಪ್ರತಿಕ್ರಿಯೆಗಳು ಒಬ್ಬೊಬ್ಬರದೂ ಒಂದೊಂದು ಬಗೆಯಾಗಿದ್ದವು. "ಸರಿಯೆ; ಅವರು ಇಷ್ಟುಹೊತ್ತೂ ಮಾತನಾಡಿದ್ದರ ಅಭಿಪ್ರಾಯವೇನು?" ಎಂದು ಕೇಳಿದರು ಒಬ್ಬರು. "ಎಷ್ಟು ನಿರರ್ಗಳವಾಗಿ ಮಾತನಾಡುತ್ತಾರೆ!" ಎಂದರು ಇನ್ನೊಬ್ಬರು. ಮತ್ತೊಬ್ಬ ಮಿತ್ರರು "ಇದು ಏಕೋ ಮಹಾಲಿಂಗಂ ಕೊಳಲು ನುಡಿಸಿದ ಹಾಗಿತ್ತು; ಶಂಕರಾಭರಣದ ಆಲಾಪನೆ. ಭೈರವಿ ಪಲ್ಲವೀ, ಕೇದಾರಗೌಳದ ಚರಣ."

**ಕಲ್ಪನಾ ಲೋಕ**

ವಿ. ಸೀ. ಯವರ ಕಾಲ್ಪನಿಕತೆಗೂ ದಿನದಿನದ ಪ್ರಪಂಚದ ಒರಟುತನಕ್ಕೂ ಇರುವ ತರಂಗಾಂತರ ಭೇದವನ್ನು ಈ ಆಪಾತ ಆಭಾಸಗಳೂ ಟೀಕೆಗಳೂ ತೋರಿಸು

ತ್ರವೆ. ವಿ.ಸೀ. ಯವರ ವ್ಯಕ್ತಿತ್ವಕ್ಕೆ ವಿಶೇಷ ಮೆರುಗು ಕೊಟ್ಟಿರುವುದೇ ಈ ಕಲ್ಪನಾ ವಿಲಾಸ. "ಒಂಟಿ ಬೇಕೆಂದರೆ ಅದರ ಡುಬ್ಬ ಜೊತೆಯಲ್ಲಿಯೇ ಇರುವುದಿಲ್ಲವೆ ?" ಎಂದು ಅವರೇ ಒಂದು ಕಡೆ ಹೇಳಿದ್ದಾರೆ.

ಕೆಲವು ತಿಂಗಳ ಹಿಂದೆ ವಿ. ಸೀ. ಕಾಯಿಲೆಬಿದ್ದು ಆಸ್ಪತ್ರೆ ಸೇರಿದ್ದಾಗ ಅವರನ್ನು ನೋಡಲು ಹೋದೆ. ದೇಹದ ಒಂದು ಭಾಗದ ಎಕ್ಸ್‌ರೇ ತೆಗೆಯಲಾಗಿತ್ತು. ಆ ನೆಗೆಟಿವ್‌ನ್ನು ಪರಿಶೀಲಿಸುತ್ತಿದ್ದಾಗ ವಿ. ಸೀ. ಅಂದರು: "ಇದೇನು ಪ್ರಾರಬ್ಧ! ಒಂದು ಒಳ್ಳೆಯ ಪೈಂಟಿಂಗ್ ಆದರೂ ತಂದುಕೊಟ್ಟರೆ ನೋಡಿ ಸಂತೋಷಪಡಬಹುದು. ಇದರಲ್ಲೇನಿದೆ–ಡೆಪ್ತ್, ಫಾರ್ಮ್, ಕಾನ್‌ಫಿಗರೇಷನ್, ಲೆವೆಲ್ಸ್–ಏನಿದೆ ಇದರಲ್ಲಿ ? ನಮ್ಮ ಆಕ್ಯುಪೇಷನ್ ಬಿಟ್ಟರೆ ಬೇರೆ ಯಾವುದರಲ್ಲಿದೆ ಅಷ್ಟು ಸಂತೋಷ ? ಒಳ್ಳೇ ಪದ್ಯ ಓದಬಹುದು, ಸೌಂದರ್ಯ ನೋಡಬಹುದು, ಸಂಗೀತ ಕೇಳಬಹುದು.... What a blessing !"....

ಈ ಮನೋಭಾವವಿರುವವರನ್ನು ಮೆಚ್ಚದಿರುವುದು ಹೇಗೆ ? ವಿ. ಸೀ. ಯವರ ಮನಸ್ಸಿನ ನಿರ್ಮಲಾನಂದವೂ ತೀವ್ರ ಸಂವೇದನ ಶಕ್ತಿಯೂ ನಮ್ಮೆಲ್ಲನೇಕರ ಪಾಲಿಗೆ ಹಬ್ಬವಾಗಿದೆ; ಸಂಸ್ಕಾರಕವಾಗಿದೆ. ಅವರೊಡನೆ ಸರಸ ಸಲ್ಲಾಪದಲ್ಲಿ ನಾನು ಕಳೆದಿರುವ ದಿನಗಳು ಲೆಕ್ಕವಿಲ್ಲದಷ್ಟು. ಅವರ ಕಾಂಟ್ರಡಿಕ್ಷನ್ಸ್–ಸ್ವವಿರೋಧವೆಂದು ತೋರುವ ಮನೋಭಂಗಿಗಳು ಅವರ ವ್ಯಕ್ತಿತ್ವದ ಸೊಗಸನ್ನು ಹೆಚ್ಚಿಸಿವೆ; ಅವರನ್ನು ಪ್ರಿಯರನ್ನಾಗಿಸಿವೆ; ಅವರ ಸಹವಾಸವನ್ನು ಉತ್ಸವವೆನಿಸಿವೆ.

ವಿ. ಸೀ. ಯವರ ಕಾಲ್ಪನಿಕತೆ ಅವರ ವ್ಯವಹಾರಗಳ ಮೇಲೂ ಪ್ರಭಾವ ಬೀರುವುದುಂಟು. ಒಟ್ಟನ್ನೂ ಸಗಟನ್ನೂ ಗ್ರಹಿಸುವ ಆತುರದಲ್ಲಿ ಅಂಕಿ ಅಂಶಗಳು, ಲೆಕ್ಕಾಚಾರ, ವಿವರ, ತಾರೀಖು, ದಾಖಲೆ—ಮುಂತಾದವು ಅವರ ಹಿಡಿತಕ್ಕೆ ಸಿಕ್ಕುವುದಿಲ್ಲ.

ಒಮ್ಮೆ ಯಾರಿಗೋ ಕಾಗದ ಬರೆದರು–ಬಹಳ ಮುಖ್ಯವಾದ ಯಾವುದೋ ವಿಷಯವನ್ನು ಕುರಿತು. ಉತ್ತರಕ್ಕಾಗಿ ಕಾಯುತ್ತ ಕುಳಿತರು. ಹಲವಾರು ದಿನಗಳಾದರೂ ಜವಾಬಿಲ್ಲ.

ಐದಾರು ವರ್ಷಗಳಾದ ಮೇಲೆ ಎಂದೋ ವಿ. ಸೀ. ತಮ್ಮ ಸೂಟ್‌ಕೇಸಿನಲ್ಲಿ ಏನನ್ನೋ ಹುಡುಕುತ್ತಿದ್ದಾಗ ತಾವು ಬರೆದ ಕಾಗದವೇ ಕೈಗೆ ಸಿಕ್ಕಿತು. ಕಾಗದದ ವಿಷಯದ ಮುಖ್ಯತೆ ಅವರ ಮನಸ್ಸಿನ ವಿವರ ವಿವರವನ್ನೂ ಆವರಿಸಿ, ಬರೆದ ಕಾಗದವನ್ನು ಪೋಸ್ಟ್ ಮಾಡುವ ಕ್ಷುದ್ರ ಕಾರ್ಯವನ್ನು ಮರೆಯಿಸಿತ್ತು.

ರೋಟರಿ ಸಭೆಯೊಂದರಲ್ಲಿ–ವಿ. ಸೀ. ಯವರೂ ಅಲ್ಲಿದ್ದರು–ಕಾಗದಗಳನ್ನು ಅಂಚೆ ಇಲಾಖೆ ಸರಿಯಾಗಿ ರವಾನಿಸುತ್ತಿಲ್ಲವೆಂದು ಯಾರೋ ದೂರು ಮಾಡಿದಾಗ ಅಂಚೆ ಅಧಿಕಾರಿ ಸಾರಂಗಪಾಣಿ ಹೇಳಿದರು.

"Well, unless you post the letters, it would be rather difficult for us to deliver them, you know !"

ವಿವರಾಂಶವನ್ನು ಗಮನಿಸದೆ ಹೋದ ಕಾರಣ, ಕನ್ನಡದಲ್ಲಿ ಬರೆಯಬೇಕೆಂದು ಪ್ರಕಾಶಕರು ನಿರೀಕ್ಷಿಸಿದ್ದ ಒಂದು ೨೫೦ ಪುಟದ ಪುಸ್ತಕವನ್ನು ವಿ. ಸೀ. ಇಂಗ್ಲಿಷಿನಲ್ಲಿ ಬರೆದಿದ್ದರು.

**ವಿನೋದ ಪ್ರಿಯತೆ**

ಇಂಥ ಘಟನೆಗಳನ್ನು ವಿ. ಸೀ. ತಾವೇ ನೆನಪು ಮಾಡಿಕೊಂಡು ತಾವೂ ನಕ್ಕು ನಮ್ಮನ್ನೂ ನಗಿಸುತ್ತಾರೆ. ತಮ್ಮನ್ನು ತಾವೇ ವಿಶ್ಲೇಷಿಸಿಕೊಂಡು ನಗುವ ಸಾಮರ್ಥ್ಯ ಅವರಿಗೆ ದೇವರು ಕೊಟ್ಟಿರುವ ದೊಡ್ಡ ವರ. ಅವರು ಜೀವನದ ಅನೇಕ ಏರುಪೇರುಗಳನ್ನು ಸಹಿಸಲಾಗಿರುವುದು ಈ ಬಲದಿಂದ.

ಅಡಿಗೆ ಮನೆಯ ಮೂಲೆಯಲ್ಲಿ ಬೆಚ್ಚಗೆ ಕುಳಿತು, ತಾವು ಕಾಣದ, ಕೇಳದ ಯುದ್ಧಾದಿ ಸಂದರ್ಭಗಳನ್ನು ವರ್ಣಿಸುವ ಕವಿಗಳ ಅವಾಸ್ತವ ನಿರ್ಮಿತಿಗಳನ್ನು–ಕೂರಸಿಯ ಝಳಪನ್ನೂ ರಕ್ತದೋಕುಳಿಯನ್ನೂ ವಿ. ಸೀ. ಒಂದು ಉಪನ್ಯಾಸದಲ್ಲಿ ಪ್ರಸ್ತಾಪಿಸಿ, ಒಂದು ಉದಾಹರಣೆಯನ್ನು ಹೇಳಿ, ಸಭಿಕರಲ್ಲಿ ನಗುವಿನ ಲಹರಿಗಳನ್ನೆಬ್ಬಿಸಿದರು. ನಗು ಕೊಂಚ ಅಡಗಿದ ಮೇಲೆ ಹೇಳಿದರು ವಿ. ಸೀ :

"I wrote these lines myself, thirty years ago !"

ಆಗ ಹೊರಟ ನಗುವಿನ ಹೊಳೆ ಮೊದಲಿನದನ್ನು ಮೀರಿಸಿತು.

* * * *

ತಮ್ಮನ್ನೇ ತಮ್ಮಿಂದ ಪೃಥಕ್ಕರಿಸಿಕೊಳ್ಳುವ ಸಾಮರ್ಥ್ಯವಿಲ್ಲದಿದ್ದರೆ, ವಿ.ಸೀ.ಯವರು ಜೀವನದಲ್ಲಿ ತಿಂದಿರುವ ಆಘಾತಗಳು ಎಂಥ ದೃಢಚೇತನರನ್ನೂ ಕುಗ್ಗಿಸಬಲ್ಲಂಥವು. ಕಷ್ಟಕ್ಕೆ ಸಿಕ್ಕಿದ ಸ್ನೇಹಿತರನ್ನು ಪಾರುಮಾಡಲು ತಾವು ಜಾಮೀನಾಗಿ ನಿಂತು ಸಾವಿರಗಟ್ಟಲೆ ಹಣ ಕಳೆದುಕೊಂಡಿದ್ದಾರೆ. ಅವರ ಒಳ್ಳೆಯತನ ಅವರನ್ನು ಎಷ್ಟೋ ವೇಳೆ ಹೇಳಲಾಗದಷ್ಟು ನಷ್ಟಕಷ್ಟಗಳಿಗೆ ಗುರಿ ಮಾಡಿವೆ.

ಅವರೂ ನಾನೂ ಸಂಧಿಸಿದಾಗಲೆಲ್ಲ ಅವರು ನನ್ನನ್ನು "You are a fossil", ನಿಮ್ಮ ವೇದ ಪುರಾಣಶಾಸ್ತ್ರಗಳೆಲ್ಲ "Mumbo-jumbo"–ಇತ್ಯಾದಿಯಾಗಿ ಟೀಕಿಸುವುದೂ ನಾನೂ ಅವರ ವಾದವೆಲ್ಲ ಅಕಾಂಡ ತಾಂಡವವೆಂದು ಹೇಳುವುದೂ ನಮ್ಮಿಬ್ಬರಿಗೂ ರೂಢಿಯಾಗಿದೆ. ನನ್ನನ್ನು ಯಾರಿಗಾದರೂ ಪರಿಚಯ ಮಾಡಿಕೊಡಬೇಕಾದರೂ ಎಷ್ಟೋ ವೇಳೆ ವಿ. ಸೀ. :

"Here comes a grammarian. He stands for systems and codification. I am the opposite. I say, blast all your systems" ಎನ್ನುವರು.

ಈ ವಾಗ್ವಾದವೆಲ್ಲ ನಗುವಿನಲ್ಲಿ ಪರ್ಯವಸಾನವಾಗುವುದೂ ಮಾಮೂಲೇ.

ಆದರೆ ವಿ. ಸೀ. ಅವರ ನೈತಿಕ–ಧಾರ್ಮಿಕ ಶ್ರದ್ಧೆ ಆಳವಾದದ್ದು. ಅವರ ನಾಸ್ತಿಕತೆ ಮೇಲುಮೇಲಿನದು. ಶಿಖೆಯ ಲಾಂಛನವನ್ನಾಗಲೀ ನಿತ್ಯಾಚಮನವನ್ನಾಗಲೀ ಭೋಜನ ಪೂರ್ವದಲ್ಲಿ ಸಾದಿನ ಚುಕ್ಕೆಯಿಡುವುದನ್ನಾಗಲೀ ಶಿವರಾತ್ರಿಯ ದಿನ ಸಕುಟುಂಬರಾಗಿ ಶಿವಾಲಯಕ್ಕೆ ಹೋಗಿ ದೇವರ ದರ್ಶನ ಮಾಡುವುದನ್ನಾಗಲಿ ವಿ. ಸೀ. ಇಂದಿಗೂ ಬಿಟ್ಟಿಲ್ಲ. ಅವರ ಭಗವಚ್ಛ್ರದ್ಧೆ ಗಾಢವಾದದ್ದು.

ಒಂದು ದಿನ ರಾತ್ರಿ ಅವರು ಏಕೋ ತುಂಬಾ ನಿರುತ್ಸಾಹದ ಮನಃಸ್ಥಿತಿಯಲ್ಲಿದ್ದರು. ಸ್ವಲ್ಪ ಅನಾರೋಗ್ಯವೂ ಸೇರಿತ್ತು. ನಾನು ಕೊಠಡಿಯೊಳಕ್ಕೆ ಕಾಲಿಟ್ಟಾಗ ಅವರು ತಲೆಯ ಮೇಲೆ ಕೈಯಿಟ್ಟುಕೊಂಡು ಗೌಳಿ ಪಂತು ರಾಗದ "ತೆಂ ತೀಯಗ ರಾದಾ" ಕೃತಿಯ ಕೊನೆಯ ಚರಣ "ವಾಗುರಯನಿ ತೆಲಿಯಕ ಮೃಗಗಣಮುಲು" ಗುನುಗಿಕೊಳ್ಳುತ್ತಿದ್ದರು. ಕಣ್ಣುಗಳಲ್ಲಿ ನೀರು. ನನ್ನನ್ನು ಕುಳಿತುಕೊಳ್ಳ ಹೇಳಿ, ತ್ಯಾಗರಾಜರ ಆಧ್ಯಾತ್ಮಿಕ ಸಮುನ್ನತಿಯನ್ನು ಪ್ರಶಂಸೆ ಮಾಡತೊಡಗಿದರು. ಕೆಲ ಕಾಲ ಸುಮ್ಮನೆ ಕುಳಿತಿದ್ದೆವು. ಆ ಮೇಲೆ ವಿ. ಸೀ. ಹೇಳಿದರು:

"ಇವೊತ್ತು ಏಕೋ ಬೆಳಗಿನಿಂದ ಜೀವಕ್ಕೆ ತುಂಬ ಅಧೈರ್ಯ ಬಂದುಬಿಟ್ಟಿತ್ತು. ಮೂರು ಹೊತ್ತೂ ಏನೇನೋ ನಾನ್ಸೆನ್ಸ್ ಮಾತನಾಡುತ್ತಿರುತ್ತೇನೆ–ದೈವನಿಂದೆ ಮಾಡುತ್ತಿರುತ್ತೇನೆ. ಮಧ್ಯಾಹ್ನ ತುಂಬ ನಿಶ್ಶಕ್ತಿ ತೋರಿತು, ಕುಸಿಯುವಂತಾಯಿತು. ಶಿವಾಪರಾಧ ಕ್ಷಮಾಪಣ ಸ್ತೋತ್ರ ಹೇಳಿಕೊಂಡೆ. ಇನ್ನೂ ಮನಸ್ಸು ಸ್ತಿಮಿತಕ್ಕೆ ಬರುತ್ತಿಲ್ಲ."

ಅಂದು ರಾತ್ರಿ ನನಗೂ ನಿದ್ರೆ ಬರಲಿಲ್ಲ.

* * *

ಲೇಖನ ಬರೆಯಲು ಪ್ರಾರಂಭಿಸಿದಾಗ ಉದ್ದೇಶದಲ್ಲಿರದಿದ್ದ ಏನೇನೋ ಸಂಗತಿಗಳು ಇಲ್ಲಿ ನುಸುಳಿ ಬಂದಿವೆ. ವಿ. ಸೀ. ಯವರನ್ನು ಕುರಿತು ಯೋಚಿಸ ಹೊರಟರೆ ಎಷ್ಟೋ ನೆನಪುಗಳು ಒತ್ತಿಕೊಂಡು ಬರುತ್ತವೆ. ಒಂದೆರಡನ್ನು ಬರೆದಿದ್ದೇನೆ. ವಿ. ಸೀ. ಯವರ ಬಗೆಗೆ ನನಗಿರುವ ಗೌರವ ಅಭಿಮಾನ ಪ್ರೀತಿಗಳನ್ನು ಅವರು ಬಲ್ಲರು; ನಮ್ಮ ಮಿತ್ರರೆಲ್ಲ ಬಲ್ಲರು. ವಿ. ಸೀ. ಯವರ ಸಹವಾಸ ಭಾಗ್ಯವನ್ನು ನಮಗೆ ಕರುಣಿಸಿದುದಕ್ಕಾಗಿ ದೈವಕ್ಕೆ ಕೃತಜ್ಞತೆ ಸಲ್ಲಿಸಿ ವಿ.ಸೀ. ಯವರನ್ನು ನೂರುಕಾಲ ನಾಡಿಗೆ ಉಳಿಸಲೆಂದು ಪ್ರಾರ್ಥಿಸುತ್ತೇನೆ.

ವರ್ಧಯ್ಯೈನಂ ಮಹತೇ ಸೌಭಗಾಯ
ವಿಶ್ವ ಏನಮನು ಮದನ್ತು ದೇವಾಃ ॥

ಎಸ್. ಆರ್. ರಾಮಸ್ವಾಮಿ

# ಜ್ಞಾನನಿಧಿ ವಿ. ಸೀ.

೧೯೪೨–೪೩ ರಲ್ಲಿ ಬೆಂಗಳೂರಿನ ಸೆಂಟ್ರಲ್ ಕಾಲೇಜಿನಲ್ಲಿ ಒಂದು ತರಗತಿ. ಕಾಳಿದಾಸನ 'ಶಾಕುಂತಳ' ಪಾಠ. ಜಿಂಕೆಯನ್ನು ಬೇಟೆಯಾಡುತ್ತ ಕೊಲ್ಲಲು ಧಾವಿಸಿದ ದುಷ್ಯಂತ, ತಾನು ಬಂದುದು ಕಣ್ವಾಶ್ರಮಕ್ಕೆ ಎಂದು ತಿಳಿಯುತ್ತಲೇ ಧನುವನ್ನಿಳಿಸಿ, ರಥವಿಳಿದು, ಆಭರಣಗಳನ್ನು ತೆಗೆದಿಟ್ಟು, ಕಣ್ವರ ಆಶೀರ್ವಾದ ಪಡೆಯಲು ಹೆಜ್ಜೆ ಹಾಕುವ ಸನ್ನಿವೇಶ.

"Here is temporal authority, entering the domain of spiritual authority. ಇವೆರಡರ ಮಧುರ ಸಂಬಂಧವನ್ನು ಕವಿ ಹೇಗೆ ಸೂಚಿಸುತ್ತಾನೆ ಎಂಬುದನ್ನು ಗಮನಿಸಬೇಕು," ಎಂದರು ಉಪಾಧ್ಯಾಯರು. ಅಲ್ಲಿಂದ ಮಠಾಧಿಪತಿಗಳಿಗೂ, ಸಿಂಹಾಸನಾಧಿಪತಿಗಳಿಗೂ ನಡೆಯಬಹುದಾದ ಘರ್ಷಣೆ, ಇದು ಯುರೋಪಿನ ಇತಿಹಾಸವನ್ನು ರೂಪಿಸಿದ ಬಗೆ, ಬೆಕೆಟನ ಕೊಲೆ, ಭಾರತ ಈ ಸಮಸ್ಯೆಯನ್ನು ಬಿಡಿಸಿದ ರೀತಿ–ಇವನ್ನು ಕುರಿತ ವಿವರಣೆ; ಅರ್ಧ ಘಂಟೆ, ವಿದ್ಯಾರ್ಥಿಗಳೆಲ್ಲ ಜಗತ್ತಿನ ಪ್ರಜೆಗಳು.

ವಿದ್ಯಾರ್ಥಿಗಳ ದೃಷ್ಟಿಯ ದಿಗಂತವನ್ನು ವಿಸ್ತರಿಸಲು ಹಂಬಲಿಸುತ್ತಿದ್ದವರು ವಿ. ಸೀತಾರಾಮಯ್ಯನವರು. ಅವರನ್ನು ಸಂದರ್ಶಿಸಲು ಹೊರಟ ನಾನು ಇಂತಹ ನೆನಪುಗಳನ್ನು ಮೆಲಕುಹಾಕುತ್ತಿದ್ದೆ.

**ಅರ್ಥಶಾಸ್ತ್ರವೇ ಏಕೆ ?**

ದೊಡ್ಡ ಕೊಠಡಿಯನ್ನು ಚಿಕ್ಕದನ್ನಾಗಿ ಮಾಡಿದ ಪುಸ್ತಕದ ಕಪಾಟುಗಳು, ಅವುಗಳಲ್ಲಿ ಸಂಸ್ಕೃತ, ಕನ್ನಡ, ಇಂಗ್ಲಿಷ್ ಭಾಷೆಗಳ ಸಾಹಿತ್ಯ ಕೃತಿಗಳು, ಅರ್ಥಶಾಸ್ತ್ರ, ರಾಜನೀತಿಶಾಸ್ತ್ರ, ತತ್ತ್ವಶಾಸ್ತ್ರ, ಚರಿತ್ರೆ, ಸಂಗೀತ–ಹಲವು ವಿಷಯಗಳಿಗೆ ಸಂಬಂಧಪಟ್ಟ ಪುಸ್ತಕಗಳು ಒಂದನ್ನೊಂದು ಒತ್ತಿಕೊಂಡು ನಿಂತಿದ್ದುವು. ವಿ. ಸೀ. ಆರು ಗಂಟೆಯ ವಾರ್ತಾ ಪ್ರಸಾರವನ್ನು ಎದುರುನೋಡುತ್ತಿದ್ದರು.

"ಬನ್ನಿ, ಬನ್ನಿ."

ಆತ್ಮೀಯವಾದ ಆಹ್ವಾನ. ಸೊಗಸಾದ ಉಪಾಹಾರ. ಅದು ಸಾಗುತ್ತಿದ್ದಂತೆಯೆ, ಸಂಭಾಷಣೆ ಪ್ರಾರಂಭವಾಯಿತು.

ನಾನು ಅವರ ವಿದ್ಯಾರ್ಥಿಯಾಗಿದ್ದ ಮಾತು ಬಂದಿತು. ನನ್ನ ಕೃತಜ್ಞತೆಯನ್ನು ಸೂಚಿಸಿದೆ. ಅವರು ತಮ್ಮ ವಿದ್ಯಾರ್ಥಿದೆಸೆಯನ್ನೂ ತಮ್ಮ ಮೇಲೆ ಪ್ರಭಾವ ಬೀರಿದವರನ್ನೂ ಸ್ಮರಿಸಿಕೊಂಡರು. ಎನ್. ಎಸ್. ಸುಬ್ಬರಾವ್, ಎಂ. ಹಿರಿಯಣ್ಣ, ಪ್ರೊ. ಎಸ್. ರಾಧಾಕೃಷ್ಣನ್, ಪ್ರೊ. ಬಿ. ಎಂ. ಶ್ರೀ. ಇಂತಹ ಗುರುಗಳ ಶಿಷ್ಯರು ಅವರು. "ನನಗೆ ದೊರಕಿದ ಅಧ್ಯಾಪಕರಿಗಿಂತ ಶ್ರೇಷ್ಠರಾದವರು ಭಾರತದಲ್ಲಿ ಸಿಕ್ಕಲಾರರು." ಆಗಿನ ವ್ಯವಸ್ಥೆಯಲ್ಲಿ ಭಾರತದ ವಿಷಯ ಒಂದಕ್ಷರ ಓದದೆ ಎಂ. ಎ. ಪದವಿ ಪಡೆಯಲು ಸಾಧ್ಯವಿತ್ತು. 'ಶ್ರೀ'ಯವರಂತಹವರೂ ತರಗತಿಯಲ್ಲಿ ಸಂಸ್ಕೃತ ಅಥವಾ ಕನ್ನಡ ಸಾಹಿತ್ಯವನ್ನು ಪ್ರಸ್ತಾಪಿಸಲು ಸಂಕೋಚಪಡಬೇಕಾಗಿತ್ತು. ಸುಬ್ಬರಾಯರು ಅರ್ಥಶಾಸ್ತ್ರದ ಗುರುಗಳು. ಮಾರ್ಷಲ್ ಕೇನ್ಸ್, ವಿ. ಸೀ. ಅವರು ಮೆಚ್ಚಿದ ಅರ್ಥಶಾಸ್ತ್ರಜ್ಞರು. "ಮಾರ್ಷಲ್ ಬರೆದ ಒಂದು ಅಧ್ಯಾಯವನ್ನು ತೃಪ್ತಿಕರವಾಗಿ ಕನ್ನಡಕ್ಕೆ ಅನುವಾದ ಮಾಡಲು ನನ್ನ ಜೀವನದ ಹತ್ತು ವರ್ಷಗಳನ್ನು ಕೊಟ್ಟೇನು. ಈತ ಭೌತವಿಜ್ಞಾನದಿಂದ ನೀತಿಶಾಸ್ತ್ರದ ಅಭ್ಯಾಸಕ್ಕೆ ತಿರುಗಿ, ಬರಿಹೊಟ್ಟೆಯ ಜನರಿಗೆ ಗಣಿತಶಾಸ್ತ್ರ, ನೀತಿಶಾಸ್ತ್ರ, ಅಧ್ಯಾತ್ಮಗಳನ್ನು ಹೇಳುವ ಕೆಲಸವಿಲ್ಲ, ಎಂದು ಅರ್ಥಶಾಸ್ತ್ರದ ಅಧ್ಯಯನಕ್ಕೆ ತೊಡಗಿದ. ಪ್ರಪಂಚದಲ್ಲಿ ಸಂಪನ್ಮೂಲಗಳಿಗೂ ತಾಂತ್ರಿಕಜ್ಞಾನಕ್ಕೂ ಕೊರತೆಯಿಲ್ಲ. ತಕ್ಕಷ್ಟು ಮಾನವತೆ ಮತ್ತು ಸಹಕಾರಗಳಿದ್ದರೆ ಲೋಕದ ಬಡತನವನ್ನು ತೊಡೆದುಹಾಕಬಹುದು ಎಂದು ಆಗಿನ ಕಾಲಕ್ಕೆ ಕ್ರಾಂತಿಕಾರಿಯಾದ ಅಭಿಪ್ರಾಯವನ್ನು ಮಂಡಿಸಿದ." ತತ್ತ್ವಶಾಸ್ತ್ರದ ಅಭ್ಯಾಸ ಮುಗಿದ ನಂತರ ವಿ. ಸೀ. ಅವರಿಗೆನ್ನಿಸಿತು, ನಮ್ಮ ವೇದಾಂತ ಮುಂದಿಡುವ ಆದರ್ಶಗಳಿಗೂ – ನಿರಾಸಕ್ತಿಯೋಗ, ವೈರಾಗ್ಯ, ತ್ಯಾಗಗಳಿಗೂ – ಇವೊತ್ತಿನ ಜಗತ್ತಿಗೂ ಸಂಬಂಧವೇ ಇಲ್ಲ ಎಂದು. ಆರ್ಥಿಕಕ್ಷೇತ್ರ, ಕೈಗಾರಿಕಾಕ್ಷೇತ್ರಗಳಲ್ಲಿ ಹೊರಜಗತ್ತಿನ ಗಾಳಿ, ಬೆಳಕು ನುಗ್ಗಿದ್ದವು. ಆದರೆ ಸಾಹಿತ್ಯ – ವೈಚಾರಿಕ ಜಗತ್ತುಗಳಲ್ಲಿ ಜನ ಯಾವುದೋ ಶತಮಾನದಲ್ಲಿದ್ದಂತೆ ತೋರಿತು. ಆಗಲೆ (೧೯೨೬) 'ಕಸ್ಮೈ ದೇವಾಯ ?' (ಅದಕ್ಕೆ ಮೊದಲಿಟ್ಟ ಹೆಸರು 'ದೇವರ ಸಾವು') ಬರೆದದ್ದು.

"ರಾಜಕೀಯ ಕ್ಷೇತ್ರದ ಲಿಬರಲ್ಸ್‌ಗಳಂತೆ ನಾವಿನ್ನೂ ಎಂದಿನದೋ ಆದರ್ಶಗಳನ್ನು ಅಪ್ಪಿಕೊಂಡಿದ್ದೇವೆ. ಸಾಹಿತ್ಯ ಮತ್ತು ವಿಚಾರ ಜಗತ್ತುಗಳಲ್ಲಿ ಮಾತಿನ ಅಫೀಮಿನ ಗುಂಗಿನಲ್ಲಿದ್ದೇವೆ. 'ಸತ್ಯಂ ಶಿವಂ ಸುಂದರಂ' ಇಂತಹ ಸುಲಭದ ಮಾತುಗಳನ್ನಾಡುತ್ತೇವೆ. ವೈದಿಕ ಮೂಲಗಳಲ್ಲಿ 'ಸುಂದರಂ' ಇದೆಯೊ ಇಲ್ಲವೊ."

"ಈ ಮೂರು ಒಟ್ಟಿಗೆ ಸೇರಬೇಕಾಗಿಲ್ಲ, ಒಂದಕ್ಕೊಂದು ಹೊಂದಿಕೊಳ್ಳಬೇಕಾಗಿಯೂ ಇಲ್ಲ, ನಮ್ಮ ಪ್ರಪಂಚದಲ್ಲಿ." ಸತ್ಯ ? ಯಾರಿಗೆ ಸತ್ಯ ? ಯಾವ ಸನ್ನಿವೇಶದಲ್ಲಿ ? ೨ × ೨ = ೪ ಎನ್ನುವುದೂ ಯಾವಾಗಲೂ ಸತ್ಯವಲ್ಲ ಎಂದು ಗಣಿತ

ಶಾಸ್ತ್ರ ಹೇಳುತ್ತದೆ. ಏರಡರ್ಥ ಕಾಫಿ ಒಂದಕ್ಕಿಂತ ಹೆಚ್ಚು, ಪ್ರಮಾಣದಲ್ಲಿ; ಬೆಲೆಯೂ ಹೆಚ್ಚಲ್ಲವೆ? ನಮ್ಮಲ್ಲಿ ಬಹುಮಟ್ಟಿಗೆ ಕಾಣುವುದು ರಕ್ತಗತವಾದ ಆಧ್ಯಾತ್ಮಿಕತೆ. ನನಗೆ ತಿಳಿದಂತೆ ನಿಜವಾದ ಆಧ್ಯಾತ್ಮ ಸಿದ್ಧಿ ಕಾಣುವುದು ರಾಮಕೃಷ್ಣ ಪರಮಹಂಸ ರಲ್ಲಿ. ಗಂಟಲು ಹುಣ್ಣು ಬಂದು ನರಳುತ್ತಿದ್ದಾಗ ಅವರಿಗೆ ವಿವೇಕಾನಂದರು ಹೇಳಿ ದರು, 'ತಾಯಿಯನ್ನು ಕೇಳಿಕೊಳ್ಳಬಾರದೆ ಸ್ವಲ್ಪ ಗುಣಮಾಡುವ ಹಾಗೆ, ಏನಾ ದರೂ ಆಹಾರ ತೆಗೆದುಕೊಳ್ಳಲು ಸಾಧ್ಯವಾಗಲಿ'–ಎಂದು. 'ಹೂಂ; ಕೇಳುತ್ತೇನೆ' ಎಂದರು ಪರಮಹಂಸರು. ಆಮೇಲೆ ಮಾರನೇ ದಿವಸ 'ಕೇಳಿದೆ, ನಿನ್ನನ್ನೂ, ದೇಶದ ಕೋಟ್ಯಂತರ ಮಂದಿಯನ್ನೂ ತೋರಿಸಿ ತಾಯಿ, ಇಷ್ಟು ಬಾಯಿಗಳಿಂದ ಆಹಾರ ತೆಗೆದುಕೊಳ್ಳುತ್ತಿದ್ದೀ, ಸಾಲದೇ? ಈ ಒಂದು ಬಾಯಿಯಿಂದ ಇಲ್ಲದಿದ್ದರೆ ಏನಾ ಯಿತು? ಎಂದಳು' ಎಂದರು. ಇದು ನಿಜವಾದ ಸಿದ್ಧಿ. Spirituality finds live expression here. I don't think post-graduate instruction of a higher level is possible." "ಆಧ್ಯಾತ್ಮಕ್ಕೆ ಇಲ್ಲಿ ಜೀವಂತ ಅಭಿವ್ಯಕ್ತಿ ದೊರಕಿದೆ. ಇದಕ್ಕಿಂತ ಹೆಚ್ಚಿನ ಮಟ್ಟದ ಸ್ನಾತಕೋತ್ತರ ಶಿಕ್ಷಣ ಅಸಾಧ್ಯ" ಎಂದರು.

### ವೈಚಾರಿಕ ಗೊಂದಲ

ಅಲ್ಲಿಂದ ಮಾತು ನಾನು ಒಂದೆರಡು ದಿನಗಳ ಹಿಂದೆ ಅವರಿಗೆ ಬರೆದಿದ್ದ ಪತ್ರ ದತ್ತ ತಿರುಗಿತು. ಅದರಲ್ಲಿ ನಾನು 'ಸಂಪ್ರದಾಯ', 'ಸಮಕಾಲೀನ ಪ್ರಜ್ಞೆ' ಮೊದ ಲಾದ ಶಬ್ದಗಳನ್ನು ಬಳಸಿದ್ದೆ. ಕೆಲವು ಪ್ರಶ್ನೆಗಳನ್ನು ಮುಂದಿಟ್ಟಿದ್ದೆ. ಅದನ್ನು ಪ್ರಸ್ತಾಪಿಸಿ ವಿ. ಸೀ. ಎಂದರು.

"ನಮ್ಮ ವಿಚಾರದ ಜಗತ್ತಿನಲ್ಲಿ ಇಂದು ಬಹಳ ಗೊಂದಲವಿರುವುದು ನಾವು ಬಳಸುವ ಪದಗಳ ಅರ್ಥವನ್ನೂ ವ್ಯಾಪ್ತಿಯನ್ನೂ ನಿಷ್ಕೃಷ್ಟಗೊಳಿಸದೆ ಇರುವುದ ರಿಂದ. ಗಂಭೀರವಾಗಿ ವಿಷಯಗಳನ್ನು ಮಥಿಸುವಾಗಲಾದರೂ ಇದನ್ನು ಮಾಡ ಬೇಕು. ನನ್ನ ವಿಧಾನವಂತೂ ಇದು. ಮೊದಲು ನನ್ನ ವಿಷಯವ್ಯಾಪ್ತಿಯನ್ನು ಸೂಚಿಸಿ, ಎಲ್ಲೆಗಳ ಗೆರೆಗಳನ್ನು ಎಳೆದು ಬಳಸುವ ಪದಗಳ ಅರ್ಥವನ್ನು ಚರ್ಚಿಸಿ, ಖಚಿತಗೊಳಿಸಿ, ನನ್ನ ದೃಷ್ಟಿಯನ್ನು ಸೂಚಿಸಲು ಯತ್ನಿಸುತ್ತೇನೆ; ಅನಂತರ ಒಂದೊಂದು ಭಾಗವನ್ನು ಎತ್ತಿಕೊಂಡು, ವಿಷಯದ ಹಲವು ಮುಖಗಳನ್ನು ಚಿತ್ರಿಸಿ, ವಿವರಗಳನ್ನು ಕೊಡುತ್ತ ಹೋಗುತ್ತೇನೆ. ಅಲ್ಲಲ್ಲಿ ಚರಿತ್ರೆ, ತಾರತಮ್ಯ ವಿವೇಚನೆ ಬರುತ್ತವೆ, ಅನಿವಾರ್ಯವಾಗಿ. ಒಮ್ಮೊಮ್ಮೆ ಕೆಲವರು ಮಿತ್ರರು ಈ ಕ್ರಮವನ್ನು ಗುರುತಿಸದೆ, ನಿರೂಪಣೆ ಸ್ಪಷ್ಟವಾಗಿಲ್ಲ ಎಂದುಕೊಳ್ಳುವುದುಂಟು."

"ಮೊದಲು ನೀವು ಸಾಹಿತ್ಯದ ರಚನೆಗೆ ಕೈ ಹಾಕಿದುದು ಹೇಗೆ?"

"೧೯೨೨ ರಲ್ಲಿ ಬೊಂಬಾಯಿಯಲ್ಲಿ ಡೆಪ್ಯುಟಿ ಕಂಟ್ರೋಲರ್ ಆಫ್ ಕರೆನ್ಸಿ

ಕಚೇರಿಯಲ್ಲಿ ನೂರು ರೂಪಾಯಿ ಸಂಬಳದ ಮೇಲೆ ಕೆಲಸಕ್ಕಿದ್ದೆ. ಇಲಾಖೆಯಲ್ಲೆಲ್ಲ ಎಂ. ಎ. ಮಾಡಿದವರು, ಇನ್ನೊಬ್ಬರೇ ಹಿರಿಯರು ಎ. ವಿ. ವಿ. ಅಯ್ಯರ್ ಎನ್ನುವವರು ಕಲ್ಕತ್ತದ ಮುಖ್ಯ ಕಚೇರಿಯಲ್ಲಿದ್ದರು. ಆದುದರಿಂದ ಭವಿಷ್ಯವು ಚೆನ್ನಾಗಿತ್ತು. ಆಗ ಪ್ರಬುದ್ಧ ಕರ್ಣಾಟಕದಲ್ಲಿ ಭಾಸನ ಪ್ರತಿಮಾ ನಾಟಕವನ್ನು ಶ್ರೀ ಸೀತಾರಾಮಶಾಸ್ತ್ರಿಗಳು ಅನುವಾದ ಮಾಡುತ್ತಿದ್ದರು. ಅನುವಾದವೂ ಸೊಗಸಾಗಿತ್ತು. ಗೆಳೆಯರಾದ ಎ. ಆರ್. ಕೃಷ್ಣಶಾಸ್ತ್ರಿಗಳಿಗೆ, ಅದರ ಒಂದು ಕಂದ ಪದ್ಯದ ಅನುವಾದ ಮೂಲದ ಸರಳ ಸೌಂದರ್ಯವನ್ನು ಬಿಂಬಿಸದು,–'ಸೂರ್ಯ ಇವ ಗತೋ ರಾಮಃ' ಎಂಬ ಎರಡನೆಯ ಅಂಕದ ಮಾತು–ಎನ್ನುವ ಧಾಟಿಯಲ್ಲಿ ಕಾಗದ ಬರೆದೆ. ಇದನ್ನೇ ಲೇಖನವನ್ನಾಗಿ ಬರೆದುಕೊಡಿ ಎಂದು ಬರೆದರು. That dicided, almost twisted my fate ಎಂದು ಕಾಣುತ್ತದೆ. ಕೃಷ್ಣಶಾಸ್ತ್ರಿಗಳೂ ಇತರ ಹಿರಿಯರೂ 'ಕನ್ನಡಕ್ಕಾಗಿ ಒಂದಿಷ್ಟು ಕೆಲಸ ಮಾಡ ಬೇಕೆಂದಿದ್ದೇವೆ. ಇಲ್ಲೇ ಇದ್ದುಬಿಡಿ' ಎಂದರು. ನಾನು ಪುನಃ ಬೆಂಗಳೂರಿಗೆ ಬಂದಾಗ ನಿಂತುಬಿಟ್ಟೆ."

**ಅಂದು–ಇಂದು**

ವಿ. ಸೀ. ಮೊದಲಿನ ಕೆಲಸದಲ್ಲಿಯೇ ಉಳಿದಿದ್ದರೆ, ಎಷ್ಟು ಮೇಲಿನ ಪದವಿಗೆ ಹೋಗಬಹುದಾಗಿತ್ತೊ! ೧೯೨೨ರಲ್ಲಿ ನೂರು ರೂಪಾಯಿ ಸಂಪಾದಿಸುತ್ತಿದ್ದವರು, ಮೈಸೂರು ಸರಕಾರದಲ್ಲಿ ಕೆಲಸ ಸಿಕ್ಕಿ ಅದೇ ನೂರು ರೂಪಾಯಿ ಕಾಣುವ ಹೊತ್ತಿಗೆ ೧೯೨೮ ಆಯಿತು. ಅನಂತರವೂ ಅವರಿಗೆ ದೊರಕಬೇಕಾಗಿದ್ದ ಮನ್ನಣೆ ನೌಕರಿಯಲ್ಲಿ ದೊರೆಯಲಿಲ್ಲ. ಕನ್ನಡ ಜನ ಇವರನ್ನು ಸಾಹಿತ್ಯ ಸಮ್ಮೇಳನದ ಅಧ್ಯಕ್ಷಪೀಠಕ್ಕೆ ಆಹ್ವಾನಿಸಿ ತನ್ನ ಕೃತಜ್ಞತೆಯನ್ನು ಸಾಹಿತಿಗೆ ಅರ್ಪಿಸಿತು.

ವಿ. ಸೀ. ಎಂದರು: "ಪಾಠ ಹೇಳುವುದರಲ್ಲಿ ತುಂಬ ಸಂತೋಷವನ್ನು ಕಂಡೆ. ಆದರೆ ೧೯೪೭ರ ನಂತರ ವಿದ್ಯಾರ್ಥಿಗಳ ಮನೋಧರ್ಮ ಮಾರ್ಪಾಡಾಯಿತು. ಮೊದಲಿನ ಪ್ರತಿಕ್ರಿಯೆಯ ವೈಶಾಲ್ಯ ಇರುತ್ತಿರಲಿಲ್ಲ. ಆದರೆ ನನ್ನ ವಿಷಯದಲ್ಲಿ ಎಂದೂ ಗೌರವದಿಂದ ವಿಶ್ವಾಸದಿಂದ ನಡೆದುಕೊಂಡರು."

"ಉಪಾಧ್ಯಾಯನಾದವನು ತರುಣ ವರ್ಗದ ಮಧ್ಯದಲ್ಲಿಯೇ ಇರುತ್ತಾನೆ, ಅವರ ಮನೋಧರ್ಮ ಮತ್ತು ಮೌಲ್ಯಗಳು ಬದಲಾಗುತ್ತಿರುವುದನ್ನು ನಿರಂತರವಾಗಿ ಕಾಣುತ್ತಾನೆ."

"ನಿಮ್ಮ ಅಧ್ಯಾಪಕ ವೃತ್ತಿ ನಿಮ್ಮ ಸಾಹಿತ್ಯದ ಮೇಲೆ ಪ್ರಭಾವ ಬೀರಿದೆಯೆ?"

"ಯಾವುದಾದರೂ ಭಾವನೆ ಅಥವಾ ಯೋಚನೆ ನನ್ನಲ್ಲಿ ಉತ್ಕಟವಾದಾಗ ಅದನ್ನು ವಿದ್ಯಾರ್ಥಿಗಳೊಡನೆ ಹಂಚಿಕೊಂಡುಬಿಡುತ್ತಿದ್ದೆ. ಮೊದಲ ಉಕ್ತಿ ಅವರಿಗೆ ದತ್ತು. ಅಲ್ಲದೆ, ನನ್ನವರೆಗೂ ಬಂದ ತಿಳಿವಳಿಕೆ ಅವರಿಗೆ ತಿಳಿಸಿದರೆ ಅಲ್ಲಿಂದ ಮುಂದೆ ಅವರು ಯೋಚಿಸಲು ಅನುಕೂಲವಾದೀತು ಎನ್ನಿಸುತ್ತಿತ್ತು. ಜೊತೆಗೆ ನನ್ನ

ಮಾತಿಂದ ಅವರಲ್ಲಿ ಅತಿ ಅವ್ಯವಹಾರ ಬೆಳೆಯದಂತಾಗಲಿ ಎಂಬ ಎಚ್ಚರದಿಂದಿರ ಬೇಕು ಎನಿಸಿತ್ತು. ಈ ಸಂಗತಿ ನನ್ನ ಮಾತಿನ ಧಾರಾಳತೆಯನ್ನು ಮಿತಗೊಳಿಸಿತು. ಹೀಗಾಗಿ ಅದಕ್ಕೆ ಬೇರೆಯಾಗಿ ಅಭಿವ್ಯಕ್ತಿ ಕೊಡಲೇಬೇಕೆಂಬ ಇಚ್ಛೆಯು ಒತ್ತಡ ಪ್ರಾಯವಾಗುತ್ತಿತ್ತು. ನಾನು ಬರೆಯಬಹುದಾಗಿದ್ದ ಎಷ್ಟೋ ಕವನಗಳು ಅವತರಿ ಸದೆ ಉಳಿದುವು."

ಮೊದಲು ಗದ್ಯಕೃತಿಯಿಂದ ಸಾಹಿತ್ಯ ಪ್ರಪಂಚವನ್ನು ಪ್ರವೇಶಿಸಿದ ವಿ. ಸೀ. ಎಂದರು "ನಾವು ಬರೆಯಲು ಪ್ರಾರಂಭ ಮಾಡಿದಾಗ ಕನ್ನಡದಲ್ಲಿ ವಾಕ್ಯಗಳನ್ನು ರಚಿಸುವ ಉದಾಹರಣೆಗೆ ವಾಕ್ಯಗಳನ್ನು ತೊಡಗುವ ಮುಗಿಸುವ – ವಿಧಾನಗಳು ತೀರ ಮಿತವಾಗಿದ್ದುವು. ನಾವು ಭಾಷೆಯನ್ನು ಹೆಚ್ಚು flexible ಮಾಡಲು ಪ್ರಯತ್ನಿಸಬೇಕೆಂದುಕೊಂಡೆವು. 'ಪಂಪಾಯಾತ್ರೆ'ಯ ಮೊದಲ ವಾಕ್ಯವನ್ನು ಬರೆದದ್ದು ಪುಸ್ತಕ ಸಂಪೂರ್ಣವಾದ ಮೇಲೆ ಅಚ್ಚಿಗೆ ಕಳುಹಿಸುವಾಗ!" ತಮ್ಮ ಗದ್ಯಶೈಲಿ ರೂಪುಗೊಂಡ ವಿಧಾನವನ್ನು ವಿವರಿಸುತ್ತ, ಅರ್ಧವಿರಾಮ ಚಿಹ್ನೆಗಳು, parenthesisಗಳು ಸೇರಿಕೊಂಡು, ತಮ್ಮ ವಾಕ್ಯಗಳು ಅತ್ತ ಇತ್ತ ಹರಿಯು ತ್ತವೆ, ನೇರವಾಗಿ ಸಾಗುವುದಿಲ್ಲ ಎಂಬುದನ್ನು ಪ್ರಸ್ತಾಪಿಸಿ ವಿ. ಸೀ. ಹೇಳಿದರು, "ಓದುಗನಿಗೆ ಬರಹಗಾರನ ಮನಸ್ಸಿನ–ಉಸಿರು ಕತೆ ಕಾಣಿಸಬೇಕು, ವಾಣಿ ಕೇಳಿಸ ಬೇಕು. ಆದುದರಿಂದ ಸಂಭಾಷಣೆಯ ಹತ್ತಿರಕ್ಕೆ ಬರಹದ ಭಾಷೆಯನ್ನು ತರಲು ಪ್ರಯತ್ನಿಸಿದ್ದೇನೆ."

"ನೀವು ಕೆಲವು ಸಣ್ಣ ಕಥೆಗಳನ್ನು ಬರೆದವರು ಆ ಮಾಧ್ಯಮವನ್ನು ಬಿಟ್ಟೇ ಬಿಟ್ಟಿರಲ್ಲ, ಏಕೆ ?"

"ಅದಕ್ಕೆ ಎರಡು ಕಾರಣಗಳು : ಒಂದು ನನ್ನ ಬರಹದ ಮನೋಧರ್ಮ ಕಥನಕ್ಕೆ ಹೊಂದಿಕೊಂಡುದಲ್ಲ, ವಿಭಜನೆಯದು, ಚಿಂತನೆಯದು. ಎರಡನೆಯದಾಗಿ, ೧೯೩೧ ರಲ್ಲಿ ಕಾರವಾರ ಸಾಹಿತ್ಯ ಸಮ್ಮೇಳನದಲ್ಲಿ ನಾನು ಮಾಡಿದ ಭಾಷಣವನ್ನು ಆ ಮೇಲೆ ಬರೆದುಕೊಟ್ಟಾಗ, ಹಿರಿಯರೊಬ್ಬರು, 'ಕಥೆಗಳನ್ನು ಹರಟೆಗಳನ್ನು– ಹಾಳುಮೂಳು ಎಂಬುದು ಮಾತು–ನೂರು ಬರೆಯುವುದಕ್ಕಿಂತ ಇಂತಹವನ್ನು ಬರೆಯಬಾರದೆ?' ಎಂದರು. ನಾನು ಹಾಗೆ ನಡೆಯಬೇಕೆಂಬ ನಿರ್ಬಂಧವೇನೂ ಇರ ಲಿಲ್ಲ. ಆದರೆ ಅವರು ಹಿರಿಯರು, ನನಗೆ ಆತ್ಮೀಯರು, ಅವರ ಮಾತು ಮನಸ್ಸನ್ನೂ ಆ ಬಗ್ಗೆ ಮೊಂಡು ಮಾಡಿತು."

**ಯಾವುದು ಸಾಹಿತ್ಯ ?**

ಇದೇ ಕಾರಣದಿಂದ ಪ್ರಬಂಧ ಮಾಧ್ಯಮವನ್ನೂ ಬಹು ವರ್ಷಗಳ ಕಾಲ ಬಳಸ ಲಿಲ್ಲ. ೧೯೨೭–೨೭ರ ಹೊತ್ತಿಗೆ 'ಮೈಸೂರು ರುಮಾಲು', 'ಕಾಯಿಲೆಗಳು' ಇಂತಹ ಪ್ರಬಂಧಗಳನ್ನು ಬರೆದಿದ್ದರು.

"'ಆಗ್ರಹ' ನಾಟಕದಲ್ಲಿ ನೀವು ಮಹಾಭಾರತದ ಕಥೆಯನ್ನೆ ಅನುಸರಿಸಿದ್ದೀರಿ. 'ಶ್ರೀ' ಅವರ 'ಅಶ್ವತ್ಥಾಮನ್'ನಲ್ಲಿ ನಾಯಕನು ಸ್ವಹತ್ಯೆ ಮಾಡಿಕೊಂಡಂತೆ ನಿರೂಪಿಸಿದ್ದರಿಂದ ಎದ್ದ ಬಿರುಗಾಳಿ ನಿಮ್ಮ ಕಥಾನಿರೂಪಣೆಯನ್ನು ಪ್ರಭಾವಿಸಿತೆ ?"

"ನನ್ನ ಅಶ್ವತ್ಥಾಮ 'ಶ್ರೀ' ಅವರ 'ಅಶ್ವತ್ಥಾಮನ್'ಗಿಂತ ಬಹು ಕೀಳ. 'ಆಗ್ರಹ' ಅಶ್ವತ್ಥಾಮನ ಆಗ್ರಹವಲ್ಲ. ಸಂಯಮವಿಲ್ಲದ, ಕೆಡುಕನ್ನೆ ಮಾಡಲು ಹೊರಟ ಮೂರ್ಖ ಅಶ್ವತ್ಥಾಮನ ಮೇಲೆ ಕೃಷ್ಣನ ಆಗ್ರಹ. ಓದುಗರು ಮಹಾಭಾರತದ ಅಶ್ವತ್ಥಾಮನನ್ನೂ 'ಶ್ರೀ' ಅವರ ಅಶ್ವತ್ಥಾಮನನ್ನೂ ಹೋಲಿಸಿ ನೋಡಬೇಕೆಂಬುದು ನನ್ನ ಆಶಯವಾಗಿತ್ತು."

"ನೀವು ಸ್ವತಃ ಸಾಹಿತ್ಯ ರಚನೆ ಮಾಡಿದ್ದೀರಿ. ಸಾಹಿತ್ಯ ವಿಮರ್ಶೆಯನ್ನು ಬೆಳೆಸಿದ್ದೀರಿ. ಸಾಹಿತ್ಯದ ಮುಖ್ಯ ಲಕ್ಷಣ ಏನೆನ್ನಬಹುದು ? ಈ ಮಾತನ್ನು ಏಕೆ ಕೇಳುತ್ತೇನೆಂದರೆ, ಇಂಗ್ಲೆಂಡಿನಲ್ಲಿ ಐವತ್ತು ವರ್ಷಗಳ ಹಿಂದೆ ಇಲಿಯಟ್, ಆಡೆನ್ ಬರೆದ ಕಾವ್ಯ, ನಮ್ಮ ನವ್ಯ ಕಾವ್ಯ, ಈಚಿನ 'ಆಬ್ಸರ್ಡ್ ಥಿಯೆಟರ್'ನ ಕೃತಿಗಳು ಇತ್ಯಾದಿ ಎಲ್ಲವನ್ನೂ ತನ್ನ ವೃತ್ತದಲ್ಲಿ ಎಳೆದುಕೊಳ್ಳುವಂತಹ ವಿವರಣೆಯುಂಟೆ ಎಂಬ ದೃಷ್ಟಿಯಿಂದ. ಸಾಹಿತ್ಯ ಕೃತಿಯಲ್ಲಿ ಒಂದು significant experience–ಅರ್ಥವತ್ತಾದ ಅನುಭವ, ಮಹತ್ವದ ಅನುಭವ ಇರಬೇಕು. ಇಂತಹ ಅನುಭವದ ಅಭಿವ್ಯಕ್ತಿ ಸಾಹಿತ್ಯ ಎನ್ನಬಹುದೆ ?"

"Significant of what ? phil sophically significant ? of value ? substance ? vision ? attitude ? experience of life ? (ಯಾವ ರೀತಿಯಲ್ಲಿ ಮಹತ್ವದ್ದು ? ತಾತ್ತ್ವಿಕವಾಗಿಯೇ ? ಮೌಲ್ಯದಿಂದಲೆ ? ವಸ್ತುವಿನಿಂದಲೆ? ಕಾಣ್ಕೆಯಿಂದಲೆ? ಮನೋಧರ್ಮದಿಂದಲೆ? ಜೀವನದ ಅನುಭವದಿಂದಲೆ ?) ನನ್ನ ದೃಷ್ಟಿಯಲ್ಲಿ The will to form and urgency of expression is the elementary beginning of all art. The impact of heart on heart straight through words in a particular order....ಈ ಆರ್ಡರ್ ಯಾವುದು ಅದನ್ನು ಹೇಗೆ ಸಾಧಿಸಬೇಕು ಎನ್ನುವುದನ್ನು ವಿವರಿಸಲು ಸಾಧ್ಯವೇ ಇಲ್ಲ. ಸಾಹಿತ್ಯದ ಪರಿಣಾಮ ಅನುಭವವಾಗುತ್ತದೆ ಅಷ್ಟೇ" ವಿ.ಸೀ. ಯವರು 'ನಾ ನಿನ್ನ ಧ್ಯಾನದೊಳಿರಲು', 'ಗಿಳಿಯು ಪಂಜರದೊಳಿಲ್ಲ', ವರ್ಡ್ಸ್‌ವರ್ತ್‌ನ 'ಡೆಫೊಡಿಲ್ಸ್', 'ಮೈಕೆಲ್' ಇವುಗಳಿಂದ ಪಂಕ್ತಿಗಳನ್ನು ಉದ್ಧರಿಸಿದರು. ಯಶಸ್ವಿಯಾದ ಕವನದಲ್ಲಿ ಶಬ್ದಗಳ ಆಯ್ಕೆ ಮತ್ತು ಜೋಡಣೆಯ ಪವಾಡದ ನಿದರ್ಶನಗಳಾಗಿ ಕವಿ ಲಯವನ್ನು ಬಳಸಿಕೊಳ್ಳುತ್ತಾನೆ ಸಾಮಾನ್ಯವಾಗಿ. ಆದರೆ ಮುಕ್ತ ಛಂದಸ್ಸಿನಲ್ಲಿ ಅದೂ ಇಲ್ಲ. ಅದರದೂ ಲಕ್ಷ್ಯವೊಂದುಂಟು ಎನ್ನಿ. ಹದವಾಗಿ ನಿಷ್ಠುರವಾಗಿ ಸಾಧಿಸಿದರೆ ಭಾವದ ಪ್ರಾಮಾಣಿಕ ನಡೆ, ಸಾಲುಗಳ ಜೋಡಣೆಯಲ್ಲಿಯೇ ಅದು ಕಾಣಬಲ್ಲದು, ಆ ಆತ್ಮಸಾಕ್ಷಿ ಇದ್ದವನಿಗೆ."

"ಹಾಗಾದರೆ ವಿಮರ್ಶಕನ ಪಾತ್ರವೇನು ?"

"ವಿಮರ್ಶಕ ತನಗೆ ತೋರಿದ, ಲಭ್ಯವಾದ ಅರ್ಥ ಮೌಲ್ಯಗಳನ್ನು ಹೇಳಬಲ್ಲ. ಇಲ್ಲಿ ಮತ್ತೆ ಶಬ್ದಗಳನ್ನು ಖಚಿತವಾದ ಅರ್ಥದಲ್ಲಿ ಬಳಸುವುದರ ಅಗತ್ಯವನ್ನು ಕಾಣುತ್ತೇವೆ. ಒಂದು ಕೃತಿಯ ಅರ್ಥ ಇದು–ಅದು ಎಂದು ಹೇಳುತ್ತೇವೆ. ನಿಷ್ಕೃಷ್ಟ ವಾಗಿ ಅರ್ಥ ಯಾರು ಹೇಳಬಹುದು? ಒಬ್ಬನಿಗೆ ಕೃತಿಕಾರನಿಗೆ ಕಂಡ ಬೇರೆ ಬೇರೆ ಸಮಯಗಳಲ್ಲಿ ಬೇರೆ ಬೇರೆ ಅರ್ಥದ ಸ್ತರಗಳು ಕಾಣಬಹುದು. ಇಲಿಯಟ್‌ನಂತಹ ಕವಿಯೇ ತನ್ನ ಕೃತಿಯನ್ನೇ ಕುರಿತು, 'ಹೌದು, ಈ ಅರ್ಥವೂ ಸಾಧ್ಯ' ಎನ್ನ ಪಂತಾಗುತ್ತದೆ. ಅರ್ಥವೆಲ್ಲ ಅರ್ಥ ಮಾಡಿಕೊಂಡಂತೆ. ಇದರಿಂದಲೇ ನಾನು ಅರ್ಥ, ಮೌಲ್ಯ, ಸತ್ಯ, ವಾಸ್ತವಿಕ, ಇಂತಹ ಶಬ್ದಗಳನ್ನು ಬಳಸುವಾಗ ನಿಷ್ಕೃಷ್ಟತೆ ಬೇಕು ಎನ್ನುವುದು. ಭಾವನೆಯಲ್ಲಿ, ಹೇಳುವುದರಲ್ಲಿ, ಅರ್ಥಮಾಡಿಕೊಳ್ಳುವುದರಲ್ಲಿ ಇದೆ ಲ್ಲದರಲ್ಲಿ ಮಟ್ಟಗಳುಂಟು."

**ವಿ. ಸೀ. ಸಾಹಿತ್ಯದಲ್ಲಿ 'ಕಹಿ'**

ಇಲ್ಲಿಂದ ಮಾತು ಮತ್ತೆ ಅವರ ಕೃತಿಗಳತ್ತಲೆ ಹೊರಳಿತು. ನಾನು ಕೇಳಿದೆ: "ದ್ರಾಕ್ಷಿದಾಳಿಂಬೆ ಸಂಗ್ರಹದ ಹಿಂದಿನ ನಿಮ್ಮ ಸಂಕಲನಗಳಲ್ಲಿ ಕಹಿ ಇದೆ ಎಂದು ನನಗೆನ್ನಿಸಿದೆ. ಬೇಸರ ಇದಕ್ಕಿಂತ ಸರಿಯಾದ ಪದವೇನೊ. ಈ ಮನಃಸ್ಥಿತಿಗೆ ವೈಯಕ್ತಿಕ ಜೀವನದ ಅನುಭವಗಳು ಕಾರಣವೊ, ಸುತ್ತಮುತ್ತಲಿನ ಜೀವನದ ವಿಧಾನ ಕಾರಣವೊ ?"

"ಎರಡೂ. ದ್ರಾಕ್ಷಿ ದಾಳಿಂಬೆಯಲ್ಲಿನ ಕೃತಿಗಳೆಲ್ಲ ಅದು ಪ್ರಕಟವಾಗುವ ಸ್ವಲ್ಪ ಮೊದಲು ಬರೆದದ್ದಲ್ಲ. ಕೆಲವು ೧೯೨೭–೨೮ ರಲ್ಲಿಯೆ ಬರೆದಿದ್ದುವು. ನನ್ನ ಕವನಗಳಲ್ಲಿ ಕಹಿ ಇದೆ ಎಂದು ನನಗೆ ಎನ್ನಿಸುವುದಿಲ್ಲ. ವಿಷಾದವಿದೆ, ಹೌದು. ಇದರಲ್ಲಿ ಆಶ್ಚರ್ಯ ವೇನು ? ಸುತ್ತ ಕಾಣುವ ಸೋಲು, ಭಂಗ, ಕೆಟ್ಟತನ, ಸಣ್ಣತನ–so much of it that it's beyond the power of one man to set it right— ಒಬ್ಬ ಮನುಷ್ಯ ಸರಿಪಡಿಸಲಾಗದಷ್ಟು ಇರುವಾಗ, ವಿಷಾದವಾಗದೆ ಹೋಗುವುದು ಹೇಗೆ ? ಇನ್ನೆಷ್ಟು ಕಾಲ, ಇನ್ನೆಷ್ಟು ಕಾಲ ಎನ್ನಿಸುತ್ತದೆ. ಆದರೆ ಇದರಿಂದ ನಿಷ್ಕ್ರಿಯ ನಾಗಬೇಕು ಎಂದು ನನಗೆ ತೋರುವುದಿಲ್ಲ."

**ಆದಮ್ಯ ಆತ್ಮವಿಶ್ವಾಸ**

"ಸುತ್ತಲಿನ ಜೀವನದಲ್ಲಿ ದುಷ್ಟತನ, ಸಣ್ಣತನ ಎಲ್ಲ ಕಂಡೂ ಜೀವನ ಸ್ವೀಕಾ ರಾರ್ಹ, ಬಾಳು ಬದುಕಲಿಕ್ಕಾಗಿ ಎನಿಸುತ್ತದೆಯೆ ?"

"ಹೌದು, ಬಾಳಬೇಕು ಎನ್ನುವುದಕ್ಕೆ ನೂರು ಕಾರಣಗಳಿವೆ. ನನ್ನ ಮನಸ್ಸನ್ನು ಸೆಳೆಯುವ ನೂರು ವಸ್ತುಗಳಿವೆ ಇಲ್ಲಿ. ಅವುಗಳೊಂದಿಗೆ ನಾನು ಈ ಆವರಣದಲ್ಲಿಯೆ ಬಾಳಬೇಕು. ತನ್ನನ್ನು ಪ್ರೀತಿಸುವ ಜನ, ತಾನು ಪ್ರೀತಿಸುವ ಜನ, ತಾನು ಒಪ್ಪಿದ

ಧರ್ಮ, ಒಲಿದ ಆದರ್ಶ, ತಾನು ಮಾಡಬೇಕೆಂದುಕೊಂಡ ನೂರು ಕೆಲಸಗಳು, ತನ್ನನ್ನು ನೆಚ್ಚಿದವರು, ತನಗೆ ಸಂತೋಷ ಕೊಟ್ಟವರು–ಬಾಳನ್ನು ಸ್ವೀಕರಿಸುವುದಕ್ಕೆ ಎಷ್ಟು ಕಾರಣಗಳಿವೆ! ನಾಡು, ಅದರ ಚರಿತ್ರೆ ಅದರ ಅಗತ್ಯಗಳು, ನಮಗೆ ಇರಬಹುದಾದ ಎಲ್ಲ ಶಕ್ತಿ ಸಂಸ್ಕಾರಗಳಿಗೂ ಅವಕಾಶ ಕೊಟ್ಟ ಆವರಣ, ಸಂಸ್ಥೆ, ಅದೇ ಧಾತ್ರಿ, ಪ್ರೀತಿಗೆ ಕಾದಿರುವಾಗ ?"

ಅವರ ಒಂದು ಕವಿತೆಯ ಕೆಲವು ಸಾಲುಗಳು–ಬಾಳಿನ ಒಂದು ಅಂಗ–ಮುಖವನ್ನು ಸಂಭ್ರಮದಿಂದ ಹೊಗಳುವ ಸಾಲುಗಳು ನನ್ನ ಮನಸ್ಸಿನಲ್ಲಿ ಹಾದು ಹೋದವು :

**ಸ್ವರ್ಗದೊಳಗೀ ಸ್ನೇಹ ದೊರೆವುದೇನು ?**
**ಈ ಪರಿಯ ಸೌಹಾರ್ದ ಕೆಳೆಯ ವೈಭವವು ?**
**ಇಲ್ಲದಿರೆ ಎನಗಿಲ್ಲೆ ನೂರು ಜನ್ಮಗಳಿರಲಿ**
**ಎಲ್ಲ ಪರಿ ಮಮತೆಗಳ ಸತ್ಯ ಜೀವನವು**
**ಈ ಮಾಯೆ ಬಯಲಲ್ಲಿ ಸಿಂಗರದ ಖನಿ ಇಹುದು**
**ಬಳ್ಳಿಗಳು, ಹೂವುಗಳು, ಹಣ್ಣು ಪರಿಮಳವು**
**ಈ ಎಲ್ಲ ಹೂ ಹಣ್ಣು ಸವಿಕಾಂತಿಗಳ ಮೀರಿ**
**ಬೆಳಗುತಿದೆ ಎಲ್ಲವನು ಸ್ನೇಹ ಸುಮವು.**

'ಸಾಹಿತ್ಯ, ಸಂಪ್ರದಾಯ ಮತ್ತು ಹೊಸ ಮಾರ್ಗ'ದಲ್ಲಿ ವಿ. ಸೀ. 'ಇಂದಿನ ಜಗತ್ತಿನಲ್ಲಿ ನಾನೇಕೆ ಒಳ್ಳೆಯವನಾಗಿರಬೇಕು ?' ಎಂಬ ಪ್ರಶ್ನೆ ಏಳುತ್ತದೆ ಎಂದಿದ್ದಾರೆ. ಇದನ್ನು ನೆನಪಿಗೆ ತಂದುಕೊಟ್ಟು ನಾನು ಕೇಳಿದೆ, "ಈ ಪ್ರಶ್ನೆಗೆ ನಿಮ್ಮ ಉತ್ತರವೇನು ?"

"ನನ್ನ ಉತ್ತರ: ಒಳ್ಳೆಯವನಾಗಿರುವುದೇ ಮೂಲತಃ ಒಳ್ಳೆಯದು; ಇನ್ನೊಂದು ಮಾರ್ಗಕ್ಕಿಂತ ಒಳ್ಳೆಯತನದ ಮಾರ್ಗ ಶ್ರೇಷ್ಠವಾದದ್ದು, ಶುಚಿಯಾದದ್ದು, ವಿಶಾಲವಾದದ್ದು. ಮನುಷ್ಯನಾಗಿ ನನ್ನನ್ನು ನಾನು ಅರಿತುಕೊಳ್ಳಬೇಕಾದರೆ ನಾನು ಒಳ್ಳೆಯವನಾಗಿರಬೇಕು. ನನ್ನ ವಿದ್ಯಾಭ್ಯಾಸ, ನನ್ನ ದೇಶದ ಪರಂಪರೆ ಇವುಗಳಿಗೆ ಅನ್ಯಾಯ ಮಾಡದೇ ಇರಬೇಕಾದರೆ ನಾನು ಒಳ್ಳೆಯವನಾಗಿರಬೇಕು. ನನ್ನ ಮನುಷ್ಯತ್ವ ಪ್ರಕಾಶಗೊಳ್ಳಬೇಕಾದರೆ, ಫಲಿಸಬೇಕಾದರೆ, ಬೇರೆ ಮಾರ್ಗವಿಲ್ಲ."

**ಯಾವುದು ಭಾರತೀಯ ? ಏಕೆ ಭಾರತೀಯ ?**

ದೇಶದ ಪರಂಪರೆಯನ್ನು ಅವರು ಪ್ರಸ್ತಾಪಿಸಿದಾಗ, ಅವರ ಇನ್ನೊಂದು ಮಾತನ್ನು ನೆನಪಿಗೆ ತಂದೆ. "'ಕಂಡೊಡನೆ ಭಾರತೀಯವೆಂದು ಯಾರೂ ಗುರುತಿಸಬಹುದಾದ ಸ್ವರೂಪ ಉಳ್ಳದ್ದು, ಹೊಸತಾಗಿ ಇನ್ನೂ ನಿರ್ಮಾಣವಾಗಬೇಕಾಗಿದೆ', ಭಾರತೀಯ ಎಂದರೆ ಏನು ?"

"ಭಾರತೀಯ ಎಂದರೆ ಹಿಂದು ಎಂಬ ಮಾತನ್ನು ನಾನು ಒಪ್ಪುವುದಿಲ್ಲ. ಇವತ್ತಿನ ಭಾರತೀಯತನ ವಿಸ್ತಾರವಾದುದು. ನಮ್ಮ ನಿತ್ಯಜೀವನದಲ್ಲಿ-ಅದರ ಇಂದಿನ ಆಕಾಂಕ್ಷೆಗಳಲ್ಲಿ-ಭಾರತೀಯತನ ಏನಿದೆ? ಉಡುಪಿನ ರೀತಿಯೆ, ಕ್ರಾಪೆ, ನ್ಯಾಯವ್ಯವಸ್ಥೆಯೆ, ಪಾರ್ಲಿಮೆಂಟೆ, ತಂತ್ರಜ್ಞಾನವೆ? ಇನ್ನೂ ಎಲ್ಲರಿಗೂ ಅನ್ವಯಿಸುವ ಸಿವಿಲ್ ಕೋಡ್ ಮಾಡಲು ನಮ್ಮಿಂದ ಆಗಿಲ್ಲ. ದೇಶ ಒಂದನ್ನು ಬಿಟ್ಟರೆ ನಮ್ಮೆಲ್ಲರ ನಿಷ್ಠೆಯನ್ನು ಪಡೆದದ್ದು, ನಾವೆಲ್ಲ ಇದಕ್ಕಾಗಿ ಬದುಕುತ್ತೇವೆ, ಇದಕ್ಕಾಗಿ ಜೀವಕೊಡಲು ಸಿದ್ಧರಾಗಿದ್ದೇವೆ ಎನ್ನುವಂತಹುದು, ಎನ್ನಬೇಕಾದಂತಹುದು ಏನಿದೆ? ನಿಜವಾದ ಭಾರತೀಯತನದ ಜೀವಕಳೆ ನನಗೆ ಕಾಣಿಸುವುದು ಸತ್ಯಕಾಮ ಜಾಬಾಲನ ಕಥೆಯಲ್ಲಿ, ನಚಿಕೇತನ ಕಥೆಯಲ್ಲಿ, ಸಾವಿತ್ರಿಯ ಕಥೆಯಲ್ಲಿ--ನಿನ್ನ ತಂದೆ ಯಾರೋ ಕಾಣೆ ಎಂದು ಮಗನಿಗೆ ಹೇಳುವ ತಾಯಿ, ನನ್ನ ತಂದೆ ಯಾರೋ ಕಾಣೆ ಎಂದು ಗುರುವಿಗೆ ನುಡಿಯುವ ಹುಡುಗ, ಇದನ್ನು ಮೆಚ್ಚುವ ಗುರು ಇವರ ಕಥೆಯಲ್ಲಿ; ನನಗೆ ಬೇರೆ ಯಾವ ವೈಭವವೂ ಬೇಡ, ಜ್ಞಾನ ಬೇಕು ಎಂದು ಯಮನನ್ನೇ ಕೇಳುವ ಹುಡುಗನ ಕಥೆಯಲ್ಲಿ; ಸಾವಿಗಂಜದ ಪ್ರೇಮದ ಕಥೆಯಲ್ಲಿ. ಇದು ಭಾರತೀಯ ಸಂಸ್ಕೃತಿ. ಮತ್ತೆ ಇದನ್ನು ಪಡೆಯುವುದು ಹೇಗೆ ಎನ್ನುವುದೆ ಪ್ರಶ್ನೆ."

ಭಾರತದ ಸಂಸ್ಕೃತಿಯಿಂದ ಮಾತು ಸ್ವಾತಂತ್ರ್ಯವನ್ನು ಸಾಧಿಸಿದ ಮೇಲೆ ದೇಶ ನಡೆದುಬಂದ ದಾರಿ, ನಿರುದ್ಯೋಗದ ಸಮಸ್ಯೆ, ಬೇರೆ ದೇಶಗಳಲ್ಲಿ ಹೆಚ್ಚಿನ ವಿದ್ಯಾಭ್ಯಾಸ ಮಾಡಿ ಬಂದ ಯುವಕರ ಸಮಸ್ಯೆ ಇವುಗಳತ್ತ ಹೊರಳಿತು. ಯುವಕರಲ್ಲಿ ಅತೃಪ್ತಿ ಮೂಡುತ್ತದೆಯಲ್ಲವೆ ಎಂದೆ. ಈ ವಿಷಯ ವಿ. ಸೀ. ಅವರ ಮನಸ್ಸನ್ನು ಬಹಳ ಕಲಕಿದಂತೆ ತೋರಿತು.

"ಹೌದು, ಈ ಪ್ರಶ್ನೆಯನ್ನು ಎಷ್ಟು ಬಾರಿ ಕೇಳಿದ್ದೇನೆ: What has the country done for me that I should do anything for the country? ನನ್ನ ಉತ್ತರ: Well, if nothing else it has enabled you to be what you are and be and become what you are and ask the question."

....("ನಾನು ದೇಶಕ್ಕೆ ಏನಾದರೂ ಮಾಡಬೇಕೆನ್ನುವುದಕ್ಕೆ ದೇಶ ನನಗೆ ಮಾಡಿರುವುದೇನು?" ನನ್ನ ಉತ್ತರ: "ಸರಿಯಪ್ಪ, ಇನ್ನೇನೇ ಮಾಡದಿದ್ದರೂ, ನೀನು ಏನಾಗಿದ್ದೀಯೊ ಅದನ್ನು ಸಾಧ್ಯ ಮಾಡಿತಲ್ಲ, ಈ ಪ್ರಶ್ನೆಯನ್ನು ನೀನು ಕೇಳಲು ಸಾಧ್ಯವಾಗುವಂತೆ ಮಾಡಿತಲ್ಲ.")

ಮುಂದುವರಿದು ಅವರೆಂದರು: "ನೋಡಿ, ಏನು ಈ ದೇಶ, ೧೫೦-೨೦೦ ರೂಪಾಯಿ ಕೆಲಸ ಸಿಕ್ಕೋದು ಕಷ್ಟ. ಇಂಗ್ಲೆಂಡ್, ಅಮೇರಿಕಕ್ಕೆ ಹೋಗಿ ಬಂದವರಿಗೆ ಕೇಂದ್ರದ ಪೂಲಲ್ಲಿ ಮಹಾ ನಾಲ್ಕು ನೂರು ರೂಪಾಯಿ ಕೊಡ್ತಾರೆ ಎನ್ನಬಹುದು. ಸರ್ಕಾರ ನಿರುದ್ಯೋಗ ಸಮಸ್ಯೆಯನ್ನು ಪರಿಹರಿಸಲಿಲ್ಲ ಎನ್ನಬಹುದು. ಅದು ಅಷ್ಟು ಸುಲಭವಾದ, ಸಣ್ಣ ಪ್ರಶ್ನೆಯೆ? ನಮ್ಮ ಗ್ರಾಮೀಣ ಆರ್ಥಿಕ

ರಂಗದಲ್ಲಿ ಒಂದು ಸಂಸಾರದ ವರ್ಷದ ಆದಾಯ ಸರಾಸರಿ ೪೫೦ ರೂಪಾಯಿ. ಅಂದರೆ ಒಬ್ಬ ಮನುಷ್ಯನಿಗೆ ತಿಂಗಳಿಗೆ ಎಂಟು ಹತ್ತು ರೂಪಾಯಿ. ಇಂತಹ ದೇಶದಲ್ಲಿ ನಿಮಗೆ ತಿಂಗಳಿಗೆ ನಾಲ್ಕುನೂರು ರೂಪಾಯಿ ಕೊಟ್ಟರೆ ನೀವು ದೂರುವುದರ ನ್ಯಾಯ ಏನು ? ಅಮೇರಿಕದಲ್ಲಿ ಕೈತುಂಬ ಕೊಡುತ್ತಾರೆ, ನಿಜ; ಅಮೇರಿಕ ಸ್ವಲ್ಪವೂ ನೋವು ಪಡದೆ ಹತ್ತುಸಾವಿರ ಕೋಟಿ ಡಾಲರ್ ಕೊಡಬಲ್ಲದು. ನನಗೆ ಹೆಚ್ಚಿಗೆ ಸಂಬಳ ಬರಲಿಲ್ಲ ಎಂದು ಆಕ್ಷೇಪಿಸುವ ತರುಣ ತನ್ನನ್ನು ತಾನೆ ಈ ಪ್ರಶ್ನೆ ಕೇಳಿಕೊಳ್ಳಬೇಕು : ನನ್ನ ದೇಶದ ಕಲ್ಯಾಣಕ್ಕಾಗಿ ಅವರ ಆದಾಯ ಹೆಚ್ಚಿಸುವುದಕ್ಕಾಗಿ ನಾನೇನು ಮಾಡಿದ್ದೇನೆ ?"

## ಲೆಕ್ಕ ಹಾಕಿದ್ದೀರಾ?

ತರುಣರ ಅತೃಪ್ತಿಯ ಪ್ರಶ್ನೆ ಅವರನ್ನು ತುಂಬ ವ್ಯಗ್ರಗೊಳಿಸಿದಂತಿತ್ತು. ಅವರು ಹೇಳಿದರು: "ಹೌದು, ಬೇರೆ ದೇಶಕ್ಕೆ ಹೋಗಿ ವಿದ್ಯಾಭ್ಯಾಸ ಮಾಡಿಕೊಂಡು ಬಂದರೆ—ಬೇರೆ ಕೆಲಸ ಸಿಕ್ಕದಿದ್ದಾಗ—ದಾಹೋಪಶಮನಕ್ಕಾಗಿ—ಇಲ್ಲಿಕೊಡುವುದು ನಾಲ್ಕುನೂರೇ. ಅಷ್ಟು ಕೊಡುವುದೂ ಸುಲಭವಲ್ಲವಲ್ಲ! ಅಂಥ ಯೋಗ್ಯತೆ ದೊರಕಿಸಿಕೊಟ್ಟದ್ದೂ ಈ ದೇಶವಲ್ಲವೆ? ನೆಹ್ರೂ ಮುಂದಾಲೋಚನೆ ಮಾಡಿ 'ಸೈಂಟಿಸ್ಟ್ಸ್ ಪೂಲ್' ಒಂದನ್ನು ಮಾಡಿದ್ದರಿಂದ ಇಷ್ಟಾದರೂ ಆಯಿತು. ಆ ಒಬ್ಬ ಮನುಷ್ಯನ ದೂರದೃಷ್ಟಿಯಿಂದ ನಾಲ್ಕೈದು ಲಕ್ಷ ಬುದ್ಧಿವಂತ ತರುಣರು ಪ್ರಯೋಗಶಾಲೆಗಳಲ್ಲಿ, ರಾಷ್ಟ್ರೀಯ ವಿಸ್ತರಣ ವಿಭಾಗಗಳಲ್ಲಿ, ಅಕಾಡೆಮಿಗಳಲ್ಲಿ, ರಾಯಭಾರಿ ಕಚೇರಿಗಳಲ್ಲಿ ಹೇಗೊ ಅಂತು ನಡೆಸಿಕೊಂಡು ಹೋಗಲು ಸಾಧ್ಯವಾಯಿತು."

"ಕಳೆದ ಚುನಾವಣೆಯಲ್ಲಿ ವೋಟು ಮಾಡಿದವರು ೨೦ ಕೋಟಿ. ಇವರಲ್ಲಿ ಹೆಂಗಸರಿಗೆ ಉದ್ಯೋಗ ಕೊಡುವ ಯೋಜನೆ ಮಾಡುವುದೇ ಬೇಡ ಎಂದುಕೊಳ್ಳೋಣ. ಉಳಿದವರಲ್ಲಿ ಮುದುಕರಿದ್ದಾರೆ, ಉದ್ಯೋಗದಲ್ಲಿರುವವರಿದ್ದಾರೆ. ಸರ್ಕಾರ ಉದ್ಯೋಗದ ಅವಕಾಶ ಕಲ್ಪಿಸಬೇಕಾದದ್ದು ಒಂದೇ ಕೋಟಿಗೆ ಎಂದುಕೊಳ್ಳೋಣ. ಇವರಲ್ಲಿ ಪ್ರತಿಯೊಬ್ಬನಿಗೆ ತಿಂಗಳಿಗೆ ನೂರು ರೂಪಾಯಿ ವರಮಾನ ಬರುವ ಹಾಗೆ ಉದ್ಯೋಗ ಕಲ್ಪಿಸಿಕೊಡಬೇಕಾದರೆ, ವರ್ಷಕ್ಕೆ ೧೨,೦೦೦ ಕೋಟಿ—ಶೇಕಡ ೬ರ ರಂತೆ ಫಲ ಬಂದರೂ—೧೯೨,೦೦೦ ಕೋಟಿ ರೂಪಾಯಿಗಳ ಬಂಡವಾಳ ಬೇಕು. ಎಲ್ಲಿಂದ ಬರಬೇಕು ಇಷ್ಟು ಹಣ? ಈ ದೇಶದಲ್ಲಿ ಪ್ರತಿಯೊಬ್ಬನಿಗೂ ೧ ಪಾವು, ವರ್ಷಕ್ಕೆ ಒಂದು ಪಲ್ಲ ಅಕ್ಕಿ ಸಿಕ್ಕುವಂತಾಗಬೇಕಾದರೆ ೫೨೦೦ ಕೋಟಿ ರೂಪಾಯಿ ಬೇಕು. ಖಾಸಗೀ ವಲಯ ಏನು ಮಾಡೀತು? ಅದು ಹೂಡಿರುವ ಬಂಡವಾಳ ೫೦೦೦ ಕೋಟಿ ಇದ್ದೀತು. ಎಲ್ಲ ಸರಕಾರದ ಮೂಲಕ ಆಗಬೇಕು. ಜೊತೆಗೆ ಅಭಿವೃದ್ಧಿ ಕೆಲಸಗಳಿಗೆ ಹಣ ಬೇಕು. ಸಂರಕ್ಷಣೆಗೆ ಬೇಕು; ಎಲ್ಲಿದೆ ಇಷ್ಟು

ಹಣ? ಎಲ್ಲ ದೇಶಗಳೊಂದಿಗೆ ಸ್ನೇಹವಾಗಿರುವ ನೀತಿಯಿಂದ ಎಲ್ಲ ದೇಶಗಳ ತಾಂತ್ರಿಕಜ್ಞಾನ ನಮಗೆ ಲಭ್ಯವಾಗಿದೆ. ಎಷ್ಟು ಹಣದಿಂದ ಇದನ್ನು ನಾವು ಕೊಂಡುಕೊಳ್ಳಬಹುದಾಗಿತ್ತು? ಇತರರು ನೂರಿನ್ನೂರು ವರ್ಷಗಳಲ್ಲಿ ಸಾಧಿಸಿದ ವಿಜ್ಞಾನದ ಫಲ ನಮಗೆ ೨೦ ವರ್ಷಗಳಲ್ಲಿ ದೊರಕಿದೆ."

ಸ್ವಾತಂತ್ರ್ಯ ಬಂದ ಮೇಲೆ ತಕ್ಕಷ್ಟು ಪ್ರಗತಿಯಾಗಿಲ್ಲ ಎನ್ನುವ ಮಾತು ಅವರನ್ನು ತುಂಬ ಕಲಕಿದಂತೆ ತೋರಿತು. ಅವರೆಂದರು: "ಇದಕ್ಕೆ ಎಲ್ಲರೂ ತಮ್ಮ ತಮ್ಮ ರಂಗದಲ್ಲಿ ನ್ಯಾಯವಾಗಿ ನಡೆದುಕೊಳ್ಳಬೇಕು. ಇಪ್ಪತ್ತುಸಾವಿರ ಕೋಟಿ ರೂಪಾಯಿ ಬಂಡವಾಳಹಾಕಿ ಕೈಗಾರಿಕೆ ಪ್ರಾರಂಭಿಸುತ್ತೀರಿ ಎನ್ನಿ. ಒಂದು ಮುಷ್ಕರವಾದರೆ ಸಾಕು ಎಲ್ಲಕ್ಕೂ ಮುಷ್ಕರವೆ, ಧರಣಿಯೆ ಘೆರಾವೊಗಳೆ-ಎಲ್ಲ ಲಾಭವೂ ತೊಡೆದು ಹೋಗುತ್ತದೆ. ನಮಗೆ ಸಂಘಸ್ವಾತಂತ್ರ್ಯಬೇಕು, ಎಲ್ಲ ಸೌಲಭ್ಯಗಳು ಎಲ್ಲರಿಗೂ ಈಗ ಬೇಕು, ಮುಷ್ಕರಹೂಡುವ ಹಕ್ಕುಬೇಕು. ಇಂತಹ ಪರಿಸ್ಥಿತಿಯಲ್ಲಿ ಯಾವ ವ್ಯವಸ್ಥೆ ಯಶಸ್ವಿಯಾದೀತು? ರೈತನಿಗೆ ಕನಿಷ್ಠ ಬೆಲೆಯ ಭರವಸೆ ಕೊಡದಿದ್ದರೆ, ಅವನು ತನಗೆ ಬೇಕಾದಷ್ಟು ಮಾತ್ರ ಬೆಳೆಯುತ್ತೇನೆಂದರೆ ಅವನನ್ನು ಬಲಾತ್ಕಾರ ಮಾಡುವುದು ಹೇಗೆ, ಯಾರು? ಭರವಸೆ ಕೊಟ್ಟರೆ, ಬೆಲೆಗಳು ಇಳಿಯುವ ಹಾಗಿಲ್ಲ. ದೇಶದಲ್ಲಿ ಹಣ ಹೆಚ್ಚಾಗಿ, ಬೆಲೆ ಏರುತ್ತಿದೆ ಎನ್ನುತ್ತಾರೆ. ಕಷ್ಟಕ್ಕೆ ಬಂದಿರುವುದಕ್ಕೆ ಕಾರಣ ದೇಶದಲ್ಲಿ ಜನದ ಕೈಯಲ್ಲಿ ಹಣ ಹೆಚ್ಚಾಗಿದೆ ಎಂಬುದಲ್ಲ. ಬೆಲೆಗಳೊಡನೆ ಮಂಗನಾಟವಾಡಲು ಸಿದ್ಧರಿರುವಂಥವರ ಕೈಯಲ್ಲಿ ತುಂಬ ಹಣವಿರುವುದು. ಇದು ಹಣ ದುಬ್ಬರದಿಂದ ಅಲ್ಲವೆ? ಈ ದೇಶದಲ್ಲಿ ಚಲಾವಣೆಯಲ್ಲಿ ಇರುವ ಹಣ ಎಷ್ಟು? ೫೬ ಕೋಟಿ ಜನಕ್ಕೆ ೩೬೦೦ ಕೋಟಿ ರೂಪಾಯಿ ನಾಣ್ಯ–ನೋಟುಗಳು; ಬ್ಯಾಂಕ್ ಡಿಪಾಸಿಟ್ ವ್ಯವಹಾರದಲ್ಲಿ ೩೦೦೦ ಕೋಟಿ ಎನ್ನಿ. ಒಬ್ಬನಿಗೆ ೧೫೦ ರೂ. ಆದಂತಾಯಿತು. ಇಂಗ್ಲೆಂಡಿನಲ್ಲಿ ೬ ಕೋಟಿ ಜನಕ್ಕೆ ನಾಣ್ಯ–ನೋಟುಗಳು ೩೫೦ ಕೋಟಿ ಪೌಂಡು (೩೫೦ × ೧೮ ರೂಪಾಯಿಗಳು); ನಮ್ಮ ಬ್ಯಾಂಕ್ ವ್ಯವಹಾರಕ್ಕೆ ಮೂರು–ನಾಲ್ಕರಷ್ಟು ಬ್ಯಾಂಕ್ ವ್ಯವಹಾರ ಅಲ್ಲಿ. ಇಂಗ್ಲೆಂಡಿನ ರಾಷ್ಟ್ರೀಯ ಸಾಲ ಮೂರು ಸಾವಿರ ಕೋಟಿ ಪೌಂಡು ( × ೧೮ರೂ.ಗಳು): ಅದರ ಮೇಲಿನ ಬಡ್ಡಿ ಆರುನೂರು ಕೋಟಿ. ಜನಸಂಖ್ಯೆಯಲ್ಲಿ ನಾವು ಪ್ರಪಂಚದಲ್ಲಿ ಎರಡನೆಯವರು. ಹಣದ ಚಲಾವಣೆಯಲ್ಲಿ ಎಪ್ಪತ್ತನೆಯವರೊ ಎಂಭತ್ತನೆಯವರೊ! Too much money ಎಂದರೇನು? ತೆರಿಗೆ ಹಾಕಿದರೆ ಜನಕ್ಕೆ ಕೋಪ. ಬೇರೆ ದೇಶದಿಂದ ಸಾಲ ತಂದರೆ ಕೋಪ. ರಷ್ಯದಿಂದ ಸಾಲ ತಂದರೆ ಕೆಲವರಿಗೆ ಅಸಮಾಧಾನ, ಅಮೇರಿಕದಿಂದ ತಂದರೆ ಕೆಲವರಿಗೆ ಅಸಮಾಧಾನ. ಉದ್ಯೋಗ ಯಾರು, ಹೇಗೆ ಕಲ್ಪಿಸಬೇಕು?"

## ಕನ್ನಡದ ಮೇಲೆ ಹೊರಗಿನ ಪ್ರಭಾವ

ಈಚೆಗಿನ ವರ್ಷಗಳಲ್ಲಿ ದೇಶದ ಆರ್ಥಿಕ ವ್ಯವಸ್ಥೆ ಹಿಡಿದ ದಾರಿಯ ಮಾತಾದ

ಮೇಲೆ ಕನ್ನಡ ಸಾಹಿತ್ಯ ಸಾಗಿರುವ ರೀತಿಯ ಮಾತು ಬಂದಿತು. ವಿ. ಸೀ. ಒಂದು ಕಡೆ ಕನ್ನಡ ಸಾಹಿತ್ಯವನ್ನು ಕುರಿತು, 'ಮೊದಲಿನಿಂದಲೂ ಇದರ ಸಾಧನೆ, ಏಕೆ, ಎಲ್ಲ ಪ್ರದೇಶಗಳ ಸಾಹಿತ್ಯಸಾಧನೆ ಎಲ್ಲ ಅನ್ಯ ಸಾಹಿತ್ಯದಿಂದಲೇ ರೂಪಗೊಂಡದ್ದು, ಸ್ಫೂರ್ತಿ ಪಡೆದದ್ದು; ಈಗಲೂ ಹಾಗೆಯೇ' ಎಂದಿದ್ದಾರೆ. ಈ ಮಾತನ್ನು ನೆನಪು ಮಾಡಿಕೊಟ್ಟೆ. ಈ ಹೊರಗಿನ ಪ್ರಭಾವಗಳು ಆರೋಗ್ಯಕರವೆ? ಇವು ಇಲ್ಲಿನ ಸ್ವತಂತ್ರ ಬೆಳವಣಿಗೆಯನ್ನು ಕುಗ್ಗಿಸಬಹುದೆ, ಇಲ್ಲ ಪೋಷಿಸಬಹುದೆ? ಎಂದು ಕೇಳಿದೆ.

ಅವರೆಂದರು: "ಹಿಂದೆ ಕನ್ನಡ ಸಾಹಿತ್ಯದ ಮೇಲೆ ಸಂಸ್ಕೃತ, ಪರ್ಷಿಯನ್ ಸಾಹಿತ್ಯಗಳ ಪ್ರಭಾವವಿತ್ತು. ಈಗ ಇಂಗ್ಲಿಷ್ ಮತ್ತು ಇತರ ಸಾಹಿತ್ಯಗಳ ಪ್ರಭಾವ ಇದೆ. ಹಿಂದಿನ ಷೇಕ್ಸ್‌ಪಿಯರ್, ಇಬ್ಸೆನ್ ಹೋಗಲಿ ಇಂದು ಬೆಕೆಟ್, ಪಿಂಟರ್, ಇಯೊನೆಸ್ಕೊ ಇಂಥವರ ಪ್ರಭಾವ ಬೀಳುತ್ತಿದೆ. ಇಂದಿನ ಜಗತ್ತಿನಲ್ಲಿ ಇತರ ಪ್ರಭಾವದಿಂದ ಪೂರ್ತಿ ತಪ್ಪಿಸಿಕೊಳ್ಳಲು ಸಾಧ್ಯವೆ ಎನ್ನುವುದನ್ನು ಯೋಚಿಸಬೇಕು. ಪ್ರಭಾವವನ್ನು ಅರಗಿಸಿಕೊಂಡು ತಾನಾಗಿ ಉಳಿದು, ತನ್ನದೇ ಏನಾದರೊಂದು ಸಾಹಿತಿ ಹೇಳಬಲ್ಲನೆ ಎನ್ನುವುದು ಮುಖ್ಯ. ಮಾಸ್ತಿ, ಬೇಂದ್ರೆ, ಕಾರಂತ ಒಬ್ಬೊಬ್ಬರ ಬರಹಗಳನ್ನೂ ನೋಡಿ. ಅವರು ಬೇರೇನನ್ನಾದರೂ ಓದಿದಂತೆಯೆ ನಿಮಗನಿಸುವುದಿಲ್ಲ. ಆದರೆ ಪಾಶ್ಚಿಮಾತ್ಯ ಪ್ರಭಾವವಿಲ್ಲದೆ ಹೋಗಿದ್ದರೆ, ಅವರಲ್ಲಿ ಯಾರೂ ಈಗ ತಾವು ಬರೆದಿರುವ ಹಾಗೆ ಬರೆಯುತ್ತಿರಲಿಲ್ಲ. ಅವರಲ್ಲಿ ಯಾರ ಬರವಣಿಗೆಯನ್ನಾದರೂ ಒಬ್ಬ ಪಂಡಿತರ—ಅತಿ ಶ್ರೇಷ್ಠ, ಧೀಮಂತ ಪಂಡಿತರ—ಬರವಣಿಗೆಯೊಂದಿಗೆ ಹೋಲಿಸಿ ನೋಡಿ."

## ವಿರಾಮ ಬೇಡ

ಇಲ್ಲಿಂದ ಮಾತು ವಿ. ಸೀ.ಅವರ ಕೃತಿಗಳತ್ತ ಹರಿಯಿತು. ಅವರು ಹೇಳಿದರು: "ನನ್ನ ಕೃತಿಗಳಲ್ಲಿ ಶಾಂತಿ ಇಲ್ಲ, ಹೊಯ್ದಾಟ ಇದೆ ಎಂದು ಕೆಲವರು ಹೇಳಿದ್ದಾರೆ. ಹೌದು, ನನ್ನ ಮನಸ್ಸಿನಲ್ಲಿ ಶಾಂತಿ ಇಲ್ಲ. Rest and peace need not be objectives in life. ವಿರಾಮಶಾಂತಿಗಳು ಜೀವನದ ಧ್ಯೇಯಗಳಾಗಿರಬೇಕಾಗಿಲ್ಲ. ಈ ಲೋಕದಲ್ಲಿರುವವರೆಗೂ ಒಂದು ಕಾಲದಲ್ಲಿ ಶಾಂತಿ ಆದರ್ಶವಾಗಿರಲು ಸಾಧ್ಯವಿತ್ತು. ಇಷ್ಟು ಅನ್ಯಾಯ, ಗೊಂದಲ ಸುತ್ತ ಇರುವಾಗ ಯಾರಿಗಾಗಲಿ ಮನಶ್ಶಾಂತಿ ಹೇಗೆ ಸಾಧ್ಯ? ಪ್ರಜೆಯಾಗಿ, ಯೋಚನಾಶಕ್ತಿ ಇರುವ ಮನುಷ್ಯನಾಗಿ ನನಗಿರುವ ಹಕ್ಕು ಹೊಣೆಗಳನ್ನೆಲ್ಲ ಬಿಟ್ಟುಕೊಡಲು ಸಾಧ್ಯವೇನು? ಯುಧಿಷ್ಠಿರನು ತನ್ನ ತಮ್ಮಂದಿರಿಗೆ, ತನ್ನ ಹಿಂದೆ ಬಂದ ನಾಯಿಗೆ ಇಲ್ಲದ ಸ್ವರ್ಗ ತನಗೆ ಬೇಡ ಎಂದ. ರಂತಿದೇವನ ಕಥೆ, ವಿಪಶ್ಚತ್‌ಕಥೆ ಭಾಗವತದಲ್ಲಿ ಬರುತ್ತದೆ. ನನ್ನಲ್ಲಿ ರೆಸ್ಟ್‌ಲೆಸ್‌ನೆಸ್ ಉಂಟು, ಸ್ಯಾಡ್‌ನೆಸ್ ಉಂಟು; ಆದರೆ ನಿಸ್ಸಹಾಯಕತೆ, ನಿಷ್ಕ್ರಿಯತೆ

ಬರುವಂತಹ ವಿಷಾದವಿಲ್ಲ. ಜಿ.ಎಲ್. ಡಿಕಿನ್‌ಸನ್ ಒಬ್ಬ ವ್ಯಕ್ತಿಯನ್ನು ವರ್ಣಿಸುತ್ತಾ, 'unworldly without being saintly, sceptical without being paralysed' ಎಂದಿದ್ದಾನೆ. ಅಂಥ ಮಾತು ನನಗೆ ಮೆಚ್ಚು. ಟೈಮ್ಸ್ ಲೇಖನ ಒಂದರಲ್ಲಿ ಕೆಯ್ನ್ಸ್‌ನ ವಿಷಯ, ಆತ ತೀರಿಕೊಂಡಾಗ ಬರೆಯಿತು: 'ಅವನ ಆಸಕ್ತಿಗಳು ಯೋಜನೆಗಳು ಎಷ್ಟೊಂದು ಎಂದರೆ, ಅವನ ಜ್ಞಾನ ಎಷ್ಟು ಆಳ ಎಂದರೆ, ಅವನು ಜಗತ್ತಿನಲ್ಲಿ ಕೆಲಸ ಮಾಡುತ್ತಿರುವಾಗ ಅದು ಹೆಚ್ಚು ಗೊಂದಲಗೆಡಲು ಸಾಧ್ಯವೇ ಇಲ್ಲ ಎಂಬ ಭಾವನೆಯನ್ನು ಉಂಟುಮಾಡುತ್ತಿದ್ದ.' ಅಂಥ ಆತ್ಮವಿಶ್ವಾಸ ನನಗೆ ಮೆಚ್ಚು. ಬೇಕಾದುದು ನಿಷ್ಕ್ರಿಯ ವಿಷಾದವಲ್ಲ. ಕ್ರಿಯಾತ್ಮಕ ಸೃಜನ ಸದ್ಗುಣ. ನಮ್ಮ ಪಾಲಿಗೆ ಅದು ಬರಲಿಲ್ಲ ಇದು ವಿಷಾದಕರ."

**ಬೀಳ್ಕೊಂಡು ಹೊರಟೆ**

ವಿ. ಸೀ. ಅವರ ಮಾತುಗಳನ್ನು ಕುರಿತು ಯೋಚಿಸುತ್ತಿದ್ದ ನನಗೆ, ಒಳಗಿನ ರೇಡಿಯೊದಲ್ಲಿನ ಧ್ವನಿ, ರಾತ್ರಿ ಒಂಭತ್ತಕ್ಕೆ ಪ್ರಾರಂಭವಾಗುವ ವಾರ್ತಾಪ್ರಸಾರವೂ ಮುಗಿಯುತ್ತ ಬಂದಿತೆಂಬುದನ್ನು ನೆನಪು ಕೊಟ್ಟಿತು. ನಾನು ಕೇಳಬೇಕಾಗಿದ್ದ ಪ್ರಶ್ನೆಗಳು ಇನ್ನೂ ಇದ್ದುವು. ಆದರೆ ಇನ್ನು ಅವರಿಗೆ ತೊಂದರೆ ಕೊಡುವುದು ಸರಿಯಲ್ಲ ಎನಿಸಿ ಎದ್ದೆ. ಮತ್ತೆರಡು ನಿಮಿಷ ಆತ್ಮೀಯತೆಯಿಂದ ಮಾತನಾಡಿಸಿ ಬೀಳ್ಕೊಟ್ಟರು ಗುರುಗಳು. ನಾನು ಮನೆಯ ಕಡೆಗೆ ಹೆಜ್ಜೆ ಹಾಕಿದೆ. 'What has the country done for me ?' ಎನ್ನುವವರಿಗೆ ನನ್ನ ಉತ್ತರ: 'Well, if nothing else, it has enabled you to ask this question' ಎನ್ನುವ ಅವರ ಮಾತುಗಳು ಕಿವಿಯಲ್ಲಿ ಪ್ರತಿಧ್ವನಿಸುತ್ತಿದ್ದವು.

ಎಲ್. ಎಸ್. ಶೇಷಗಿರಿರಾವ್

# ವಿ. ಸೀ. – ನಾನು ತಿಳಿದಹಾಗೆ

ನಾನು ವಿ. ಸೀ. ಯವರನ್ನು ಮೊದಲು ಕಂಡದ್ದು ಮೈಸೂರಿನ ಸಾಹಿತ್ಯ ಸಮ್ಮೇಳನದಲ್ಲಿ. ೧೯೩೧ರಲ್ಲಿ. ಅಂದು ಅವರು ಯಾವ ಯಾವ ಬಣ್ಣದ ಯಾವ ಯಾವ ಬಗೆಯ ಉಡುಪುತೊಡಪನ್ನು ಧರಿಸುತ್ತಿದ್ದರೋ—ಮನೆಯ ಒಳಗೆ ಮತ್ತು ಮನೆಯ ಹೊರಗೆ-ಇಂದೂ ಅವೇ ಅವರ ಹೊರ ಸ್ವರೂಪವನ್ನು ನಮಗೆ ಪರಿಚಯ ಮಾಡಿಕೊಡುತ್ತವೆ; ಅದೇ ಅಚ್ಚ ಬಿಳಿಯ ಬಟ್ಟೆಯ ಜರಿಯಿಲ್ಲದ ಮೈಸೂರು ರುಮಾಲು (ತಮ್ಮ 'ಮೈಸೂರು ರುಮಾಲು' ಎಂಬ ತಿಳಿಹಾಸ್ಯದ ಪ್ರಬಂಧದಲ್ಲಿ ಅವರು ವರ್ಣಿಸಿರುವ ರುಮಾಲುಗಳ ಪ್ರಕಾರಗಳಲ್ಲಿ ಅವರದ್ದು ಯಾವ ಪ್ರಕಾರಕ್ಕೆ ಸೇರುತ್ತದೆಯೋ ಅದನ್ನು ಈಗ ತಿಳಿಯ ಹೇಳಲಾರೆ); ಅದೇ ಮುಚ್ಚು ಕೊರಳು ಪಟ್ಟಿಯ close–collared– ಕೆನೆಬಣ್ಣದ ಅಂಗಿ; ತೆಳ್ಳಗೆ ನಿರಿನಿರಿಯಾಗಿ ಚೆಲ್ಲಾಡುವ ಬಿಳಿಯ ಧೋತ್ರ; ಒಂದೇ ಮಾದರಿಯ ಚಪ್ಪಲಿಗಳು; ಅಂಗಿಯ ಮುತ್ತಿನಚಿಪ್ಪಿನ ಗುಂಡಿಗಳು ಕೂಡ ಬಹುಶಃ ಅವೇ. ನಿತ್ಯ ಪರಿವರ್ತನಶೀಲವಾದ ಈ ಜಗತ್ತಿನಲ್ಲಿ, ಗಳಿಗೆಗೊಂದು ಕ್ಷಣಕ್ಕೊಂದು ಎಂಬಂತೆ ಉಡುಪಿನ ಫ್ಯಾಷನ್ನುಗಳು ಜನಕ್ಕೆ ಗಾಳಹಾಕುವ ಈ ಲೋಕದಲ್ಲಿ, ಸುಮಾರು ಮೂವತ್ತರ ಹರೆಯದಲ್ಲಿ ಮೆಚ್ಚಿಕೊಂಡ ಪೋಷಾಕಿನ ಮಾದರಿಯಲ್ಲಿ ತಾವು ತೋರಿದ ನಿಷ್ಠೆಯನ್ನು ನಲ್ವತ್ತು ವರ್ಷ ಏಕಪ್ರಕಾರವಾಗಿ ಕಾಯ್ದುಕೊಂಡು ಬರಲು ಅದು ಯಾವ ಬಟ್ಟೆಯಂಗಡಿಯನ್ನು, ದರ್ಜಿಯನ್ನು ಗುತ್ತಿಗೆ ಹಿಡಿದಿದ್ದಾರೋ ನಾನು ಕಾಣೆ! ಉಡುಪು ಒಂದು ದೃಷ್ಟಾಂತ, ಅಷ್ಟೆ. ಅವರು ಮೆಚ್ಚಿ ಒಪ್ಪಿಕೊಂಡದ್ದು ಒಂದು ವಸ್ತುವಾಗಿರಬಹುದು. ಬಾಳಿನ ಒಂದು ನಂಬಿಕೆಯಾಗಿರಬಹುದು– ದ್ರಾಕ್ಷಿ ದಾಳಿಂಬೆ, ಲಾಲ್‌ಬಾಗ್ ಉದ್ಯಾನ, ಅದಕ್ಕೊಯ್ಯುವ 'ಕೆಂಪು ಸಾಲ್ಮರನ' ಹಾದಿ; ವೆಂಕಣ್ಣಯ್ಯ, ವೆಂಕಟಪ್ಪ, ಮಾಸ್ತಿ, ಡಿ.ವಿ.ಜಿ., ಕಾರಂತ ಇತ್ಯಾದಿ ಸಾಹಿತ್ಯೋಪಾಸಕರು; ಕುರುಡು ನಂಬಿಕೆಗಳಿಗೆ ಕೈ ಮುಗಿಯದೆ ಅಡಿಗಡಿಗೂ 'ಕಸ್ಮೈದೇವಾಯ ಹವಿಷಾವಿಧೇಮ' ಎಂದು ದಿಟ್ಟತನದಿಂದ ಪ್ರಶ್ನಿಸುವ, ವಿಚಾರಶೀಲವಾದರೂ ಶುಷ್ಕವೈಚಾರಿಕತೆಯಿಂದ ಆರ್ದ್ರತೆಯನ್ನು ಕಳೆದುಕೊಳ್ಳದ, ಹೃದಯವಂತಿಕೆಯಿಂದ ಕೂಡಿದ, 'ಸತ್ಯ–ಶಿವ–ಸುಂದರ' ಪ್ರಜ್ಞೆಯ

ಗಟ್ಟಿ ನೆಲದಲ್ಲಿ ಆಳವಾಗಿ ಬೇರುಬಿಟ್ಟ ಆಸ್ತಿಕ್ಯ—ಇದು ಯಾವುದೇ ಆದರೂ ಅದರಲ್ಲಿ ಅವರು ಇಟ್ಟ ನಿಷ್ಠೆ ಅಚಲ; ಅದು ಅವರು ತೊಟ್ಟ ವ್ರತ. ಕಡೆಗೆ, ಓದುವುದಕ್ಕೆ ಬರೆಯುವುದಕ್ಕೆ ಕುಳಿತುಕೊಳ್ಳುವ ರೀತಿ ಕೂಡ ಅದೇ. ಮೂವತ್ತು ವರ್ಷಗಳ ಹಿಂದೆ ಅವರನ್ನು ಅವರ ಸ್ವಂತ ಮನೆಯ ಅಭ್ಯಾಸದ ಕೋಣೆಯಲ್ಲಿ ನಾನು ಕಾಣುತ್ತಿದ್ದಾಗ ಹೇಗೆ ಒಂದು ಚಾಪೆಯ ಮೇಲೆ ಸುತ್ತಿದ ಹಾಸಿಗೆಯನ್ನೊರಗಿ ಓದಿ ಬರೆದು ಮಾಡುತ್ತಿದ್ದರೋ ತೀರ ಇತ್ತೀಚೆಗೆ ಅವರನ್ನು ನಾನು ಕಾಣ ಹೋದಾಗಲೂ ಹಾಗೆಯೇ ಓದುತ್ತಿದ್ದರು, ಬರೆಯುತ್ತಿದ್ದರು. ಒಂದು ಮೇಜು ಒಂದು ಕುರ್ಚಿ ಇವನ್ನು ಅವರು ಕೊಳ್ಳಲಾರರು ಎಂದಲ್ಲ; ಇವು ಅವರಿಗೆ ಒಗ್ಗಿ ಬಂದಿಲ್ಲ.

## ಇಂಗ್ಲಿಷಿನ ಮೂಲಕ ಕನ್ನಡ

ಈ ನಿಷ್ಠಾವಂತ ವ್ಯಕ್ತಿ, ಪ್ರೊ. ವಿ. ಸೀತಾರಾಮಯ್ಯನವರು-ಮೈಸೂರು ವಿಶ್ವವಿದ್ಯಾನಿಲಯದ ವಿಶ್ರಾಂತ ಪ್ರಾಧ್ಯಾಪಕರು, ಬಳಿಕ ಕೆಲವು ವರ್ಷ ಹೊನ್ನಾವರ ಕಾಲೇಜಿನ ಪ್ರಿನ್ಸಿಪಾಲ್ ಆಗಿದ್ದವರು. ವೃತ್ತಿಯಿಂದ ಅಧ್ಯಾಪಕರು ಎಂಬುದನ್ನು ಎಲ್ಲರೂ ಬಲ್ಲ ಸಂಗತಿ. ಆದರೆ ಅವರ ಪಾಠಪ್ರವಚನದ ವೈಖರಿ ಅನ್ಯಾದೃಶ ಎಂದು ಕೇಳಿ ಬಲ್ಲೆನಷ್ಟೆ. ೧೯೨೮ರಲ್ಲಿ ನಾನು ಮೈಸೂರಿನ ಇಂಟರ್‌ಮೀಡಿಯಟ್ ಕಾಲೇಜಿನ ಬದಲು ಇಲ್ಲಿನ ಇಂಟರ್‌ಮೀಡಿಯಟ್ ಕಾಲೇಜಿನ ವಿದ್ಯಾರ್ಥಿಯಾಗಿದ್ದಿದ್ದರೆ ಒಂದೆರಡು ವರ್ಷವಾದರೂ ಅವರು ನನ್ನ ಸಾಹಿತ್ಯ ಗುರುಗಳಾಗಿರುತ್ತಿದ್ದರು. ಇವರು ಕನ್ನಡ ಪಾಠವನ್ನು ಇಂಗ್ಲಿಷು ಮಾಧ್ಯಮದಲ್ಲಿ ಮಾಡುತ್ತಿದ್ದರು ಎಂದು ಪ್ರತೀತಿ! ಇದರಲ್ಲಿ ಸ್ವಲ್ಪ ಉತ್ಪ್ರೇಕ್ಷೆಯಿದ್ದಿರಬಹುದಾದರೂ, ಪಾಶ್ಚಾತ್ಯ ಸಾಹಿತ್ಯದಿಂದ ಪ್ರಭಾವಿತವಾದ ಸಾಹಿತ್ಯಕೃತಿಗಳ ಅರ್ಥಭಾವಗಳ ಸೂಕ್ಷ್ಮತೆಗಳನ್ನು (nuances) ಆಂಗ್ಲ ಸಾಹಿತ್ಯ ಕೃತಿಗಳನ್ನು ಆಸ್ಥೆಯಿಂದ ಚೆನ್ನಾಗಿಯೆ ವ್ಯಾಸಂಗ ಮಾಡುತ್ತಿದ್ದ ಅಂದಿನ ವಿದ್ಯಾರ್ಥಿವೃಂದಕ್ಕೆ ತಿಳಿಯ ಹೇಳಲು ಇಂಗ್ಲಿಷು ಭಾಷೆಯ ಪದ, ಪದಪುಂಜ, ವಾಕ್ಯಗಳನ್ನು ಅವರು ಬಳಸಿಕೊಳ್ಳುತ್ತಿದ್ದರು ಎಂಬುದು ದಿಟ. ಅವರ ಸತ್ತ್ವಪೂರ್ಣ ಬೋಧನೆಯನ್ನು ಕೇಳಲು ಇತರ ತರಗತಿಗಳವರೂ ಅವರ ತರಗತಿಗಳಿಗೆ ಬಂದು ಕುಳಿತುಕೊಳ್ಳುತ್ತಿದ್ದರು ಎಂದು ಅವರ ಶಿಷ್ಯರು ಕೆಲವರು ನನಗೆ ಹೆಮ್ಮೆಯಿಂದ ತಿಳಿಸಿದ್ದಾರೆ. ವಿ. ಸೀ.ಯವರ ಮಟ್ಟಿಗೆ, ಈ ಪಾಠಕ್ರಮದ ಔಚಿತ್ಯ ಅನೌಚಿತ್ಯಗಳ ಪ್ರಶ್ನೆಯೇ ಏಳದು. ಏಕೆಂದರೆ, ಆ ರೀತಿ ಪಾಠ ಹೇಳುತ್ತಿದ್ದವರು ಅವರೊಬ್ಬರೇ; ಅದನ್ನು ವಿದ್ಯಾರ್ಥಿಗಳು ಮೆಚ್ಚಿಕೊಂಡಿದ್ದರು. ಅವರು ಹಾಗೆ ಇಂಗ್ಲಿಷಿನಲ್ಲಿ ಪಾಠಹೇಳುತ್ತಿದ್ದಕ್ಕೆ ಕಾರಣ, ಅವರ ಇಂಗ್ಲಿಷ್ ಭಾಷಾ ವ್ಯಾಮೋಹವಲ್ಲ; ಖಂಡಿತ ಅಲ್ಲ. ಆಚಾರ್ಯ ಬಿ.ಎಂ.ಶ್ರೀ., ಪ್ರೊಫೆಸರ್ ವೆಂಕಣ್ಣಯ್ಯ, ಪ್ರೊಫೆಸರ್ ಎ. ಆರ್. ಕೃ., ಡಿ.ವಿ.ಜಿ., ಎಂ. ಆರ್. ಶ್ರೀ., ಬಿ. ವೆಂಕೋಬರಾವ್.

ಈ ಮಿತ್ರರ ಬಳಗ, (ಅಂದಿನ ಮೈಸೂರು ಸಂಸ್ಥಾನದಲ್ಲಿ) ಕನ್ನಡದ ಮುನ್ನಡೆಗೆ ಮುಂಚೂಣಿಯಲ್ಲಿ ನಿಂತು ದುಡಿಯುತ್ತಿದ್ದ ಬಳಗಕ್ಕೆ ಸೇರಿದ್ದವರು ವಿ. ಸೀ. ಅವರಲ್ಲಿ ಎಲ್ಲರಿಗಿಂತ ಕಿರಿಯರು. ಕನ್ನಡದ ಕಟ್ಟೊಲವು. ಕನ್ನಡ ಇಂಗ್ಲಿಷ್ ಭಾಷೆಗಳಲ್ಲಿ ಅವರು ಗಳಿಸಿಕೊಂಡಿದ್ದ ಆಳವಾದ ಪಾಂಡಿತ್ಯ. ಮೈಸೂರಿನ ಶಾರದಾ ವಿಲಾಸ ಕಾಲೇಜಿನಲ್ಲಿ ಅಧ್ಯಾಪಕರಾಗಿದ್ದುಕೊಂಡು ಅವರು ಪಡೆದಿದ್ದ ಬೋಧನಾ ಸಾಮರ್ಥ್ಯ—ಇವನ್ನೆಲ್ಲಾ ಗಮನಿಸಿಯೇ, ಅವರು ಕನ್ನಡ ಎಂ. ಎ. ಪದವೀಧರರಲ್ಲದಿದ್ದರೂ ವಿಶ್ವವಿದ್ಯಾನಿಲಯದ ಅಧಿಕಾರಿಗಳು ಅವರನ್ನು ಕನ್ನಡದ ಅಧ್ಯಾಪಕರಾಗಿ ಆಯ್ಕೆ ಮಾಡಿದ್ದು, ತೀ.ನಂ.ಶ್ರೀ.ಯವರೊಂದಿಗೆ. ಅವರು ಮೈಸೂರಿನಲ್ಲುಳಿದರು; ಇವರು, ೧೯೨೮ರಲ್ಲಿ, ಮೈಸೂರನ್ನು ಬಿಟ್ಟು ಇಲ್ಲಿಗೆ ಬಂದರು.

## ಉತ್ತಮ ಸಂಪ್ರದಾಯಕ್ಕೆ ಮೇಲ್ಪಂಕ್ತಿ

ನನ್ನ ವಿದ್ಯಾರ್ಥಿದಶೆ ಮುಗಿಯುವವರೆಗೆ ನನಗೆ ವಿ. ಸೀ.ಯವರ ಪರಿಚಯ ಬಹುಮಟ್ಟಿಗೆ ಪರೋಕ್ಷ. ಪ್ರತ್ಯಕ್ಷ ಪರಿಚಯ ೧೯೩೪ರಲ್ಲಿ. ಪರಿಚಯ ಮಾತ್ರವಲ್ಲ, ವಿಶ್ವಾಸ ಮೈತ್ರಿಗಳ ಲಾಭ, ಸಲಹೆ, ಸಹಾಯ, ಸಹಾನುಭೂತಿ, ಪ್ರೋತ್ಸಾಹಗಳ ಪರಮ ಪ್ರಯೋಜನ—ಇವು ಮೊದಲಿಟ್ಟಿದ್ದೂ ಆಗಲೆ. ಆ ವರ್ಷ ನಾನು ಕನ್ನಡ ಸಾಹಿತ್ಯ ಪರಿಷತ್ತಿನ ಸಹಾಯಕ ಕಾರ್ಯದರ್ಶಿಯಾಗಿ ನೇಮಕಗೊಂಡು, ಅಲ್ಲಿ ಇದ್ದಷ್ಟೂ ಕಾಲವೂ ಅವರು ಗೌರವ ಕೋಶಾಧಿಕಾರಿಯಾಗಿದ್ದರು. ಹಣಕಾಸಿನ ಲೆಕ್ಕಪತ್ರಗಳ ವಿಚಾರದಲ್ಲಿ ಅವರು ನನ್ನ ಮೇಲಧಿಕಾರಿಗಳು. ಆಗ ಪರಿಷತ್ತಿನಲ್ಲಿ ಡಿ. ವಿ. ಜಿ. ಅವರ ಶಿಷ್ಟಪಾಲನೆಯ ಅಧಿಕಾರದ ಕಾಲ; ಇಂಥ ಲೆಕ್ಕದ ಪಟ್ಟಿ ಈ ಹೊತ್ತಿಗೆ ಆಗಬೇಕೆಂದರೆ ಆ ಹೊತ್ತಿಗೆ ಸಿದ್ಧವಾಗಲೇಬೇಕು! ಆಗ ತಾನೆ ಕನ್ನಡ ಎಂ. ಎ. ಮಾಡಿಕೊಂಡು, ಸಾಹಿತ್ಯ ಕಲಾಪ್ರಪಂಚಗಳ ಕನಸಿನ ಲೋಕದಲ್ಲಿ ವಿಹರಿಸುತ್ತಿದ್ದ ತರುಣ, ಹಣಕಾಸಿನ ನಿಷ್ಠುರನೀರಸ ಲೆಕ್ಕಾಚಾರ ಪ್ರಪಂಚದಲ್ಲಿ ಮಂತ್ರಿಪದವಿ ನಿರ್ವಹಿಸುವ ಸಾಮರ್ಥ್ಯ ಹೊಂದಿದ್ದ ದಕ್ಷ ಉಪಾಧ್ಯಕ್ಷರ ಸಮ್ಮುಖದಲ್ಲಿ—ಸೈ ಎನ್ನಿಸಿಕೊಳ್ಳುವುದಾದರೂ ಸಾಧ್ಯವೆ? ನನ್ನಲ್ಲಿ ವಿ. ಸೀ. ಅವರ ಕರುಣೆ, ಸಹಾಯಬುದ್ಧಿ ಎಷ್ಟು ಅಪರಿಮಿತ! ತೀರ ಮೊದಮೊದಲಂತೂ, ಸಂಬಳ ತೆಗೆದುಕೊಳ್ಳುತ್ತಿದ್ದವನು ನಾನು, ಕೆಲಸ ಮಾಡುತ್ತಿದ್ದವರು ಅವರು. ‘ಹಣಪ್ರಪಂಚ’ ದ ವಿ. ಸೀ. ಅವರಿಗೆ ಪರಿಷತ್ತಿನ ಹಣಕಾಸಿನ ವ್ಯವಹಾರ ಎಷ್ಟು ಮಾತ್ರದ್ದು? ಅರ್ಥಶಾಸ್ತ್ರ ವಿಶಾರದ ಪ್ರೊ. ಎನ್. ಎಸ್. ಸುಬ್ಬರಾಯರ ಪರಮ ಆಪ್ತಶಿಷ್ಯರಲ್ಲಿ ಇವರೊಬ್ಬರು ಎಂದು ಕೇಳಿಬಲ್ಲೆ. ಕನ್ನಡ, ಇಂಗ್ಲಿಷ್, ಸಂಸ್ಕೃತ ಬಿಟ್ಟರೆ, ಅರ್ಥಶಾಸ್ತ್ರ, ರಾಜ್ಯಶಾಸ್ತ್ರಗಳು ಇವರ ಮೆಚ್ಚಿನ ವ್ಯಾಸಂಗ ವಿಷಯಗಳು—ಇಂದಿಗೂ ಕೂಡ; ಆ ಶಾಸ್ತ್ರಗಳಲ್ಲಿ—ಇಂಗ್ಲಿಷ್ ಸಾಹಿತ್ಯ, ಪಾಶ್ಚಾತ್ಯ ಸಾಹಿತ್ಯ ವಿಮರ್ಶೆ, ಕಾವ್ಯ ಮೀಮಾಂಸೆ ಇವುಗಳಲ್ಲಿ ಹೇಗೋ ಹಾಗೆ—ಅವರ ಪಾಂಡಿತ್ಯ ಪರಿಶ್ರಮಗಳು ತಲ

ಸ್ಫೂರ್ತಿ ಮಾತ್ರವಲ್ಲ; ಇಂದಿಗೂ up to date. 'ಹಣಪ್ರಪಂಚ', 'ಕಾನೂನು', 'ಭಾರತ ರಾಜ್ಯಾಂಗ ರಚನೆ' ಮುಂತಾದವು ಇವರ ಶಾಸ್ತ್ರಪಾಂಡಿತ್ಯದ ಫಲಿತಗಳಾದರೆ, ಸಾಹಿತ್ಯ ವಿಮರ್ಶೆಗಳಲ್ಲಿ ಅರ್ಥ ಮತ್ತು ಮೌಲ್ಯ, ಹಾಗೂ 'ಸಾಹಿತ್ಯ-ಸಂಪ್ರದಾಯ ಮತ್ತು ಹೊಸ ಮಾರ್ಗ' ಇವು ಇವರ ಸೂಕ್ಷ್ಮ ವಿಮರ್ಶಪ್ರಜ್ಞೆಯ ಪ್ರಮಾಣ ಗ್ರಂಥಗಳು. ಅವರು ಕನ್ನಡದ ಕರೆಗೆ ಮನತೆತ್ತು (ಬೆಲೆಯನ್ನೂ ತೆತ್ತಿದ್ದಾರೆ) ಕನ್ನಡ ತಾಯ ಸೇವೆಗೆ ನಿಂತರು ಹೊರತಾಗಿ, ಅವಕಾಶ ಕೂಡಿಬಂದು ಅವರು ಇಷ್ಟಪಟ್ಟಿದ್ದರೆ ಅರ್ಥಶಾಸ್ತ್ರದ, ರಾಜ್ಯಶಾಸ್ತ್ರದ ಪ್ರಾಧ್ಯಾಪಕರಾಗಬಹುದಾಗಿತ್ತು. ಆಗಲಿಲ್ಲ ಆದರೂ ತಾವು ಒಲಿದ ಶಾಸ್ತ್ರಗಳನ್ನು ಮರೆಯದೆ, ಕನ್ನಡದ ನಿಷ್ಠೆಯನ್ನು ಕೈಬಿಡದೆ, ಆ ಶಾಸ್ತ್ರಗಳಲ್ಲೂ ಕೆಲವು ಉದ್ಗ್ರಂಥಗಳನ್ನು ರಚಿಸಿ, ಕನ್ನಡದಲ್ಲಿ ಶಾಸ್ತ್ರಗ್ರಂಥ ರಚನೆಯಲ್ಲಿ ಉತ್ತಮ ಸಂಪ್ರದಾಯಕ್ಕೆ ಮೇಲ್ಪಂಕ್ತಿಯಾಗಿದ್ದಾರೆ.

**ಸಿದ್ಧಕವಿ**

ಆದರೆ ಕನ್ನಡ ಲೋಕದಲ್ಲಿ ಅವರು ಪ್ರಸಿದ್ಧರಾಗಿರುವುದು 'ಗೀತೆಗಳು', 'ನೆಳಲು ಬೆಳಕು', 'ದೀಪಗಳು', 'ದ್ರಾಕ್ಷಿ ದಾಳಿಂಬೆ', 'ಹೆಜ್ಜೆಪಾಡು'-ಈ ಕವಿತಾ ಸಂಕಲನಗಳ ಕವಿ ಎಂದು; 'ಸೊಹ್ರಾಬ್-ರುಸ್ತುಂ' ನಾಟಕದ ಕರ್ತೃ ಎಂದು; 'ಮೈಸೂರು ರುಮಾಲಿ'ನಂತಹ ಶ್ರೇಷ್ಠ ಹರಟೆಗಳ ಹರಟೆಗಾರ ಎಂದು. ಅವರ ಸಾಹಿತ್ಯಸೃಷ್ಟಿ ಅನೇಕ ಪ್ರಕಾರಗಳಲ್ಲಿ ಹರವಿಕೊಂಡಿದ್ದರೂ, ಸಿದ್ಧಿಯನ್ನು ಕಂಡಿರುವುದು ಅವರ ಕವಿತಾ ರಚನೆಗಳಲ್ಲಿ: ಕವಿಯೆಂದೇ ಅವರು ಕೀರ್ತಿವಂತರು ಕನ್ನಡ ಜನಕ್ಕೆ ಸುಪರಿಚಿತರು. ಈ ಕಾರಣದಿಂದಲೇ ಅವರು ಮೊದಲು ಕಾರವಾರ ಸಾಹಿತ್ಯ ಸಮ್ಮೇಳನದ ಕವಿಗೋಷ್ಠಿಗೆ ಅಧ್ಯಕ್ಷರು. ಅವರು ಮನೆಮಾತಾಗಿರುವುದು, ಕನ್ನಡ ನಾಡಿನ ಮನೆಮನೆಯ ಹೆಣ್ಣು ಹತ್ತು ಕರುಳನ್ನು ಮಿಡಿದಿರುವ, ಮಿಡಿಯುವ ಶಕ್ತಿಯುಳ್ಳ, 'ಮನೆತುಂಬಿಸುವ' ಹಾಡಿನಿಂದ. ಗೇಯಾಂಶವುಳ್ಳ ಇವರ ಕವಿತಾ ರಚನೆಗಳನ್ನು ಕುರಿತು ಎರಡು ಮಾತು ಹೇಳಲೇಬೇಕು. ಶ್ರೀನಿವಾಸರು 'ಬಿನ್ನಹ'ದಲ್ಲಿ ಹೇಗೋ ಹಾಗೆ ಇವರು 'ಗೀತಗಳು' ಸಂಕಲನದ ರಚನೆಗಳನ್ನು ಗೀತಗಳನ್ನಾಗಿಯೇ ಮಾಡಿದರು. ಅವು ಬರಿಯ ಗೀತೆಗಳಲ್ಲ; ಹಾಡುವುದಕ್ಕೆಂದೇ ರಾಗ ತಾಳಬದ್ಧವಾಗಿ ಬರೆದಿರುವ ಭಾವಗೀತಗಳು. ಇವು ಹಾಡಿದರೆ ಗೀತ; ಓದಿದರೆ ಭಾವಗೀತ. ಈ ಬಗೆಯ ಗೀತಗಳು ಅವರ ಇತರ ಸಂಕಲನಗಳಲ್ಲಿಯೂ ಕಾಣಬರುತ್ತವೆ. ಹೀಗೆ, ಹೊಸಗನ್ನಡದ ಕವಿತೆಗೆ ಗೀತದ ಬೆಲೆಯನ್ನು ವಿಶೇಷವಾಗಿ ಅಳವಡಿಸಿದ ಅಗ್ರ ಪ್ರಮುಖರಲ್ಲಿ ಇವರು ಒಬ್ಬರು. ಈ ಗೀತರಚನೆಯ ಸಂಪ್ರದಾಯ ತರುವಾಯದ ಗೀತರೂಪ ಪ್ರಕಾರಕ್ಕೆ ದಾರಿ ಮಾಡಿಕೊಟ್ಟಿತು ಎಂದರೆ ತಪ್ಪಾಗದು. ಅವರ ಗೀತ

ಗಳ ಸವಿಕಟ್ಟಿನ ಹಿಂದೆ ಸಂಗೀತ ಕಲಾಭಿಜ್ಞ ವಿ. ಸೀ. ಬಹು ಜನರ ಹೊರನೋಟಕ್ಕೆ ಕಾಣದೆ ಹುದುಗಿ ಕುಳಿತಿದ್ದಾರೆ.

**ಕಲಾಭಿಜ್ಞ**

ವಿ. ಸೀ. ಯವರ ಗ್ರಂಥಗಳಲ್ಲಿ, ವಿಶೇಷವಾಗಿ ಅವರ ಕವನ ಸಂಕಲನಗಳಲ್ಲಿ, ಕಂಡೂ ಕಾಣದಂತೆ ಓಜೆಗೊಂಡಿರುವ ಒಂದು ವಿಶಿಷ್ಟ ಗುಣ ಎಂದರೆ ಅವರ ಕಲಾಭಿರುಚಿ, ಕಲಾಭಿಜ್ಞತೆ. ಈ ಲಕ್ಷಣ ಆಂತರಿಕ ಮಾತ್ರವಲ್ಲ; ಬಾಹ್ಯಕೂಡ. ಅವರ ಗೀತ–ಕವನಗಳ ರೀತಿ ರಚನೆ; ನಾದಿ ನಾದಿ ಶೋಧಿಸಿ ಶೋಧಿಸಿ ಪುಟವಿಟ್ಟು ಪುಟವಿಟ್ಟು ಕೃತಿಯ ಒಡಲಿಗೆ ಎರಕಹೊಯ್ದ ಭಾವಧಾರೆ; ಆಯ್ದು ಆಯ್ದು ತೂಗಿತೂಗಿ ಹದವರಿತು ಹುದುಗೊಳಿಸಿದ ನಯನುಡಿಗಳು; ಶಬ್ದಾಲಂಕಾರಗಳಿಗೂ ಪ್ರಾಸಾನುಪ್ರಾಸಗಳಿಗೂ ಮನಸೋಲದೆ, ಆದರೆ ತಾವಾಗಿ ಸಹಜವಾಗಿ ಬೈಗುಗೆಂಪಿನಂತೆ ಭಾವದೊಡನೆ ಮೂಡಿ ಬಂದಾಗ ಅವಕ್ಕೆ ಬಹಿಷ್ಕಾರ ಹಾಕದೆ, ಸರಳ ಶೈಲಿಯಲ್ಲಿಯೇ ಬನಿಯನ್ನೂ ಬಿಗಿಯನ್ನೂ ಚೆಲುವನ್ನೂ ಸಾಧಿಸಬೇಕೆಂಬ ಕಲಾಪ್ರಜ್ಞೆ, ಇದರಲ್ಲಿ ಸಾಧಿಸಿರುವ ಸಿದ್ಧಿ; ಗೀತಧಾಟಿಯನ್ನು ಬಿಟ್ಟ ಇತರ ಕವನಗಳಲ್ಲಿ, ಅತಿರೇಕಕ್ಕೆ ಹೋಗದೆ ಹೊಸ ಹೊಸ ಲಯ ಗತಿ ಗಮಕಗಳನ್ನು ಮೂಡಿಸಿ ನಡೆಸಬೇಕೆಂಬ ಪ್ರಯೋಗ ಕೌಶಲ–ಇವೆಲ್ಲ ವಿ. ಸೀ.ಯ ನುಡಿಕಲೆಯ ಬಲ್ಮೆಯನ್ನು ಕನ್ನಡಿಸುತ್ತವೆ. ಮೊದ ಮೊದಲಿನ ದಿನಗಳಲ್ಲಿ, ತಮ್ಮ ಕವಿತಾ ಗ್ರಂಥಗಳನ್ನು ತಮ್ಮ ಕಲಾಭಿರುಚಿಗೆ ತಕ್ಕಂತೆ ಅತ್ಯುತ್ಕೃಷ್ಟ ರೀತಿಯಲ್ಲಿ ಅಚ್ಚು ಮಾಡಿಸಬೇಕೆಂಬುದು ಅವರ ವೃತ್ತಿ. ಅವರೇ ಹೊರತಂದ ಪುಸ್ತಕಗಳ ಒಳಮಾಟ ಹೊರಮಾಟಗಳನ್ನು ನೋಡಿದರೆ ಅವರ ಕಲಾವ್ರತನಿಷ್ಠೆ ಪುಸ್ತಕ ನಿರ್ಮಾಣ ಕಲೆಯ ಗಂಧವಿಲ್ಲದವನಿಗೂ ಗೋಚರಿಸೀತು. ಸಾಲದ ಹೊರೆಯನ್ನು ಹೆಚ್ಚಿಸಿಕೊಂಡಿದ್ದಾರೆ ಕಲೆಯ ತೃಪ್ತಿಗಾಗಿ. ಪುಸ್ತಕದ ಮುಖಚಿತ್ರವನ್ನು ನನ್ನಿಂದ, ಕಾರಂತರ ಕೈಯಿಂದ, ವೆಂಕೋಬರಾಯರ ಕಡೆಯಿಂದ ಬರೆಸಿಕೊಂಡಿದ್ದಾರೆ. ಚಿತ್ರ ಯಾರದ್ದೇ ಆಗಿರಲಿ, ಅವರ ಹಿಂದೆ ಅಡಗಿರುವುದು ವಿ. ಸೀ. ಅವರ ಕಲಾದೃಷ್ಟಿ: ಅವರ ಅಭಿಜಾತ ಅಭಿರುಚಿ. ಆಗಿನ ದಿನಗಳಲ್ಲಿ ಕೆಲವು ಮಂದಿ ಕಲಾಭಿಮಾನಿಗಳಿಗೆ ಮಾತ್ರ ಗೊತ್ತಿದ್ದ ಕರ್ನಾಟಕದ ಜಗತ್ಪ್ರಸಿದ್ಧ ಕಲಾವಿದ ಕೆ. ವೆಂಕಟಪ್ಪನವರ ಪ್ರಸಿದ್ಧ ಚಿತ್ರಗಳ ಪ್ರತಿ ಚಿತ್ರಗಳನ್ನು ತಮ್ಮ ಮೊದಲ ಕವಿತಾಗ್ರಂಥ 'ಗೀತಗಳ'ಲ್ಲಿ ಪ್ರಕಾಶಪಡಿಸಿ, ಅವರ ಕಲೆಯ ಹಿರಿಮೆಯನ್ನು ಮೊತ್ತಮೊದಲು ಕನ್ನಡ ಲೋಕಕ್ಕೆ ಪರಿಚಯ ಮಾಡಿ ಕೊಟ್ಟವರು ವಿ. ಸೀ. ವೆಂಕಟಪ್ಪನವರ ಅನುಮೋದನೆ ಪಡೆಯುವುದೆಂದರೇ ಒಂದು ದೊಡ್ಡ ಸಾಹಸ; ಗೌರೀಶಂಕರಾರೋಹಣ! ಕೇವಲ ಎರಡು ಮೂರು ಪ್ರತಿ ಚಿತ್ರಗಳ ಪ್ರಕಟನೆ ಅಷ್ಟೆ-ಎಂದು ಬಹು ಸಾಮಾನ್ಯ ವಿದ್ಯಮಾನವಾಗಿ ತೋರುತ್ತದೆ ಇಂದಿನ ಅನಭಿಜ್ಞ ಸಾಮಾನ್ಯರಿಗೆ. ಆದರೆ ಅದರ ಹಿಂದೆ ಕಲಾಭಿಜ್ಞ ಕಲಾಭಿಮಾನಿ ಕಲಾವಿಮರ್ಶಕ ವಿ. ಸೀ. ಯ ವ್ಯಕ್ತಿತ್ವದ ಒಂದು ಮುಖದ ಚರಿತ್ರೆ ಅಡಗಿದೆ.

## ರಸ ವಿಮರ್ಶಕ

ಅವರ ಅನೇಕ ಕಾವ್ಯವಿಮರ್ಶೆಗಳಲ್ಲಿ ಚಿತ್ರಕಲಾ ಪ್ರಪಂಚದ (ಹಾಗೂ ಸಂಗೀತ ಲೋಕದ) ಪರಿಭಾಷೆಯನ್ನು ಬಲ್ಲವರು ಗುರುತಿಸಬಹುದು. ದೇಶ ವಿದೇಶಗಳ ಚಿತ್ರಕಲಾ ಪ್ರಪಂಚದಲ್ಲಿ ಅವರು ಅರಿಯದ ಸಂಪ್ರದಾಯ ಪಂಥಗಳಿಲ್ಲ, ಹೆಸರಿಲ್ಲ. ಪಾಶ್ಚಾತ್ಯ ಚಿತ್ರಕಲಾ ಪ್ರಪಂಚದಲ್ಲಿ ನಡೆದಿರುವ ಕ್ರಾಂತಿಗಳೂ ಪ್ರಯೋಗಗಳೂ ತಂತ್ರವಿಧಾನಗಳೂ ಇವರ ಅರಿವಿನ ಎಲ್ಲೆಯೊಳಗೆ ಎಡೆ ಕಾಣದೆ ಇಲ್ಲ. ಆಂಗ್ಲ ಸಾಹಿತ್ಯದ 'ನವ್ಯಕಾವ್ಯ'ದ ಮೇಲೆ ನವ್ಯ ಚಿತ್ರಕಲೆಯ ಪ್ರಭಾವ ಒಂದು ಮಟ್ಟಿಗೆ ಉಂಟು ಎಂದು ತಿಳಿದವರು ಹೇಳುತ್ತಾರೆ. ಅಂತೆಯೇ ಮನಶ್ಶಾಸ್ತ್ರದ ಪ್ರಭಾವ. ಈ ಕಲಾ ಪ್ರಕಾರಗಳ 'ಅಭುಕ್ತ ಮೂಲೆ'ಗಳ ಒಳಹೊರ ತಿರುವುಗಳ ಕವಲುಗಳನ್ನೆಲ್ಲ ಹೊಕ್ಕು ಬಳಸಿ ಪರಿಚಯ ಮಾಡಿಕೊಂಡಿರುವ ವಿರಳ ವಿಮರ್ಶಕ-ಕವಿಗಳಲ್ಲಿ ಇವರೊಬ್ಬರು. ಇವರ ಆಂಗ್ಲ ನವ್ಯಕಾವ್ಯ ಪರಿಶ್ರಮ ದೀರ್ಘಕಾಲಿಕವಾದುದು, ಆಳವಾದುದು; ಮೇಲಾಗಿ ಸಹಾನುಭೂತಿಯಿಂದ ಕೂಡಿದ್ದು. ಕಾವ್ಯನಿರ್ಮಾಣ ವಿಷಯದಲ್ಲಿ ತಮ್ಮ 'ಸ್ವಧರ್ಮ'ವನ್ನು ತ್ಯಜಿಸದೆ ಅವರು, 'ನವ್ಯಧರ್ಮ' ದೀಕ್ಷೆಯನ್ನು ಪಡೆದ ಕೆ.ಎಸ್. ನರಸಿಂಹಸ್ವಾಮಿಯಂಥ ಕವಿಗಳಿಗೆ ಉತ್ತೇಜನ ಕೊಟ್ಟಿದ್ದಾರೆ. ಅವರ ಕೃತಿಗಳಿಗೆ ತೆರೆದ ಮನಸ್ಸಿನಿಂದ ತಮ್ಮ ಸಹೃದಯತೆಯ ಮಡಿಲಿನಲ್ಲಿ ಇಂಬುಗೊಟ್ಟಿದ್ದಾರೆ. ಇದರಿಂದ ಪ್ರಾಚೀನ ಅರ್ವಾಚೀನ ನವ್ಯ ಎಂಬ ಹೆಸರು ಪಟ್ಟಿಗಳಿಗೆ ಸಲ್ಲದ ಬೆಲೆ ಕೊಡದೆ, ನಿಜವಾದ ಕಾವ್ಯದ 'ಧಾತು'ವನ್ನು (ಇದು ಅವರಿಗೆ ಪ್ರಿಯವಾದ ಮಾತು) ಗುರುತಿಸಬಲ್ಲ ಪ್ರಜ್ಞಾವಂತ ರಸಜ್ಞರು ಅವರು ಎಂದು ನನ್ನ ನಂಬಿಕೆ. ಪಾಶ್ಚಾತ್ಯ ಕಾವ್ಯಮೀಮಾಂಸೆಯನ್ನೂ ಭಾರತೀಯ ಕಾವ್ಯಮೀಮಾಂಸೆಯನ್ನೂ ತೌಲನಿಕವಾಗಿ, ಆಳವಾಗಿ, ವ್ಯಾಸಂಗ ಮಾಡಿರುವ ಕೆಲವೇ ಮಂದಿ ವಿದ್ವಾಂಸರಲ್ಲಿ ಇವರು. ಕವಿಗಳೂ ಆದ್ದರಿಂದ, ಸಮಕಾಲೀನ ಸಾಹಿತ್ಯವೇ ಆಗಲಿ ಪ್ರಾಚೀನ ಸಾಹಿತ್ಯವೇ ಆಗಲಿ, ವಿಮರ್ಶೆಯಲ್ಲಿ ಇವರು ತಳೆಯುವ ಧೋರಣೆ ಹೊಗಳಿಕೆ ತೆಗಳಿಕೆಗಳ ಅತಿರೇಕಕ್ಕೆ ಹೋಗದೆ ಸಮತೋಲವನ್ನು ಕಾಯ್ದುಕೊಳ್ಳುತ್ತದೆ; ವಿಮರ್ಶೆಯ ತತ್ತ್ವನಿಷ್ಠೆಯನ್ನು ಬಿಟ್ಟುಕೊಡದೆ, ಕೃತಿಯ ಲೋಪದೋಷಗಳನ್ನು ನಯವಾಗಿ ತಿಳಿಸುವ ಕುಶಲತೆ ಇವರಿಗೆ ಸಿದ್ಧಿಸಿದೆ. ವಿ.ಸೀ.ಯವರ ಕಾವ್ಯವಿಮರ್ಶೆ ಮೊದಮೊದಲು 'ಪ್ರಬುದ್ಧ ಕರ್ಣಾಟಕ'ದಲ್ಲಿ ಕನ್ನಡದಲ್ಲಿ ಕಾಣಿಸಿಕೊಂಡು, ತರುವಾಯ ಅದು ಇಂಗ್ಲಿಷಿನಲ್ಲಿ ಹಿಂದೂ, ಇಂಡಿಯನ್ ಪಿ. ಇ. ಎನ್. ಮುಂತಾದ ಆಂಗ್ಲ ಪತ್ರಿಕೆಗಳ ಮೂಲಕ ಬೆಳೆಯುತ್ತಿದ್ದು ಕನ್ನಡಸಾಹಿತ್ಯದ ಸ್ವರೂಪವನ್ನು ವಿಶಾಲ ಲೋಕಕ್ಕೆ ಸಮುಚಿತ ರೀತಿಯಲ್ಲಿ ವಿಸ್ತೃತಪಡಿಸಿಕೊಡುವ ಕಾರ್ಯದಲ್ಲಿ ಹಿರಿಯ ಪಾತ್ರವನ್ನು ವಹಿಸಿದೆ. ಅನೇಕರು ಮಾಡಲಾಗದಿದ್ದ ಕಾರ್ಯವನ್ನು ಅವರು ದಕ್ಷತೆಯಿಂದ ಮಾಡಿದ್ದು ಮಾತ್ರವಲ್ಲ, ಈ ಲೇಖಕನನ್ನೂ ಒಳಗೊಂಡು ಕೆಲವು ಕಿರಿಯ ಮಿತ್ರರನ್ನು ಆ ಕಾರ್ಯಕ್ಕೆ ಹೂಡಿ ವಿಮರ್ಶೆಯ ಸಂಪ್ರ

ದಾಯುವೊಂದನ್ನು ಬೆಳೆಸಿದ್ದಾರೆ. ಕನ್ನಡಸಾಹಿತ್ಯ ಈಗ ತಕ್ಕಮಟ್ಟಿನ ಅಭಿವೃದ್ಧಿಯನ್ನೂ ವ್ಯಾಪ್ತಿಯನ್ನೂ ಕೀರ್ತಿಯನ್ನು ಪಡೆದಿದ್ದರೆ, ಅದಕ್ಕಾಗಿ ಇಂಗ್ಲಿಷಿನ ಮೂಲಕ ಸಫಲ ಪ್ರಾರಂಭಿಕ ಕೃಷಿ ಮಾಡಿದ ಇಬ್ಬರು ಮೂವರಲ್ಲಿ ವಿ. ಸೀ. ಪ್ರಮುಖರು. ಇದಕ್ಕಾಗಿ ಕನ್ನಡಿಗರು ಅವರಿಗೆ ವಿಶೇಷವಾಗಿ ಕೃತಜ್ಞರಾಗಿರಬೇಕು. ನಿರ್ಮತ್ಸರತೆ, ವಿಶಾಲದೃಷ್ಟಿ, ಸಹೃದಯತೆ, ಕಾವ್ಯದಲ್ಲಿ ಸಾರ್ವಕಾಲಿಕ ಮೌಲ್ಯಗಳ ಸುಪ್ರಜ್ಞೆ–ಇವು ಅವರ ಕಾವ್ಯ ವಿಮರ್ಶನ ಪದ್ಧತಿಯ ಜೀವಂತಲಕ್ಷಣಗಳು. 'ಅಶ್ವತ್ಥಾಮನ್' ಮತ್ತು 'ಶಾಕುಂತಲ'ದಲ್ಲಿ ಕಾವ್ಯವಿಮರ್ಶೆಗೆ ಅವರು ತೋರುವ ವೈದುಷ್ಯವನ್ನೂ ನಿಶಿತಮತಿಯನ್ನೂ ಸ್ವತಂತ್ರದೃಷ್ಟಿಯನ್ನೂ ನಿಚ್ಚಳವಾಗಿ ಕಾಣಬಹುದು. ಈಗ ಕೆಲವು ವರ್ಷಗಳ ಹಿಂದೆ ಬೆಂಗಳೂರಿನ ಇಂಡಿಯನ್ ಇನ್‌ಸ್ಟಿಟ್ಯೂಟ್ ಅಫ್ ವರ್ಲ್ಡ್ ಕಲ್ಚರ್ ಸಂಸ್ಥೆಯಲ್ಲಿ ಜಗತ್‌ಪ್ರಸಿದ್ಧ ಆಂಗ್ಲ ವಿಮರ್ಶಕ ಐ.ಎ. ರಿಚರ್ಡ್ಸ್ ಅವರ ಭಾಷಣಕ್ಕೆ ಅಧ್ಯಕ್ಷಪೀಠವನ್ನಲಂಕರಿಸಲು ಅಧಿಕಾರ ಸಂಪನ್ನತೆ ಪಡೆದಿರುವವರು ಯಾರು ಎಂಬ ಹುಡುಕಾಟದಲ್ಲಿ ಆಂಗ್ಲ ಪ್ರಾಧ್ಯಾಪಕರು ಯಾರೂ ಎಣಿಕೆಗೆ ಬಾರದೆ ವಿ. ಸೀ. ಆಹ್ವಾನಿತರಾದದ್ದು ಅವರ ಸಾಮರ್ಥ್ಯಕ್ಕೆ ಒಂದು ನಿದರ್ಶನ.

## ತೆರೆಯ ಮರೆಯಲ್ಲಿ

ವಿ. ಸೀ.ಯವರ ಕನ್ನಡ ನಾಡಿನ ಯಾತ್ರೆ 'ಪಂಪಾಯಾತ್ರೆ'ಯಿಂದ ಮೊದಲಾಯಿತೆನ್ನಬೇಕು. 'ಪಂಪಾಯಾತ್ರೆ' ಕೃತಿಯಲ್ಲಿ ಸವಿರಾದ ಹಾಸ್ಯ ಮತ್ತು ಕನ್ನಡದೊಲವು ತುಂಗಭದ್ರೆಗಳಂತೆ ಸಂಗಮಿಸಿವೆ. ಇಂಥ ಹತ್ತಾರು 'ಯಾತ್ರೆ'ಗಳು ನ್ಯಾಯವಾಗಿ ಇವರ ಲೇಖನಿಯಿಂದ ಸಾಗಬೇಕಾಗಿತ್ತು–ಅಷ್ಟು ನಿರಂತರವಾಗಿ ವ್ಯಾಪಕವಾಗಿ ನಾಡು ಸುತ್ತಿದ್ದಾರೆ. ಬಿ.ಎಂ.ಶ್ರೀ., ಡಿ.ವಿ.ಜಿ., ಮಾಸ್ತಿ ಇವರೊಂದಿಗೆ ಬೆಂಬಲವಾಗಿ ಬಲಗೈಯಾಗಿ ನಾಡನ್ನೆಲ್ಲ ಸುತ್ತಿ ಕನ್ನಡಸಾಹಿತ್ಯ ಪ್ರಚಾರ ಕಾರ್ಯದಲ್ಲಿ ಪಾಲುಗೊಂಡಿದ್ದಾರೆ; ತನಿಯಾಗಿ ಅದೆಷ್ಟುವೇಳೆ ಉಪನ್ಯಾಸ ಪ್ರವಾಸಗಳನ್ನು ಕೈಗೊಂಡಿದ್ದಾರೋ ಅದರ ಲೆಕ್ಕ ಬಹುಶಃ ಅವರಿಗೇ ಗೊತ್ತಿಲ್ಲ. ಅಬ್ಬರ ಆಡಂಬರ ಪ್ರಚಾರ ಯಾವುದೂ ಇಲ್ಲದೆ ನಿಸ್ಸ್ವಾರ್ಥವಾಗಿ ದುಡಿಯುವುದು ಅವರ ಜಾಯಮಾನ. ಪರಿಷತ್ಪತ್ರಿಕೆ, ಪ್ರಬುದ್ಧಕರ್ಣಾಟಕದ ಸಂಪಾದಕರಾಗಿ ಅವರು ದುಡಿದದ್ದನ್ನು ಲೋಕ ಬಲ್ಲದು; ಬಿ. ಎಂ. ಶ್ರೀ.ಯವರು, ಬಿ. ವೆಂಕೋಬರಾಯರು ಕನ್ನಡನುಡಿಯ ಸಂಪಾದಕರಾಗಿದ್ದಾಗ ಹಿಂದೆ ನಿಂತು ದುಡಿದದ್ದನ್ನು ಲೋಕ ಕಾಣದು.

'ಓದು, ಬರಹದ ಶತ್ರು 'ಎಂದು (ತಮಗೂ ಅನ್ವಯಿಸುವಂತೆ) ತೀ.ನಂ.ಶ್ರೀ. ಆಗಾಗ್ಗೆ ಹೇಳುತ್ತಿದ್ದುದುಂಟು. ಈ ಮಾತು ವಿ. ಸೀ. ಅವರಿಗೂ ಚೆನ್ನಾಗಿ ಹೊಂದುತ್ತದೆ. ವಿ. ಸೀ. ಅವರ ಓದುಗಾರಿಕೆ ಅಷ್ಟು ವಿಸ್ತಾರವಾದದ್ದು, ವೈವಿಧ್ಯಪೂರ್ಣವಾದದ್ದು. ಇಷ್ಟರ ಜೊತೆಗೆ, ಅವರ ಅಭಿರುಚಿಯ ವಿಷಯಗಳೋ! ನೃತ್ಯ, ಸಂಗೀತ, ಚಲನಚಿತ್ರ, ನಾಟಕ. ಚಿತ್ರಕಲೆ, ಉದ್ಯಾನವಿಹಾರ. ಮುಂತಾದ ಅನೇಕ

ಕಲಾಮಯ ಜೀವನ ಕ್ಷೇತ್ರಗಳು ಅವರ ಬದುಕನ್ನು ಹಂಚಿಕೊಂಡಿವೆ. ಈ ಮಧ್ಯೆ ಅವರ ಬರಹ, ಅದು ಕೂಡ ಕಡಿಮೆಯಲ್ಲ, ಜೊಳ್ಳು–ಪೊಳ್ಳು ಯಾವುದೂ ಇಲ್ಲ–ಎಷ್ಟು ಬಂದೀತು. ಎಂತು ಸಾಗೀತು? ಬರಹಗಾರ ವಿ. ಸೀ.ಯನ್ನು ಧ್ರುವಪ್ರದೇಶಗಳಲ್ಲಿ ಹರಿಯುವ ಹಿಮಪ್ರವಾಹದಲ್ಲಿ ತೇಲುವ ಮಂಜುಗಡ್ಡೆಗಳಿಗೆ ಹೋಲಿಸಬಹುದು. ಕಂಡು ತೇಲುವ ಭಾಗಕ್ಕಿಂತ ಕಾಣದೆ ಮುಳುಗಿರುವ ಭಾಗ ಹೆಚ್ಚು. 'Much of V. Si. consists in what he has not written.' ಎರಡು ಅರ್ಥಗಳಲ್ಲಿ ಇದು ನಿಜ; ಒಂದು, ಅವರು ಮನಸ್ಸು ಮಾಡಿದ್ದರೆ ಬರೆದಿರುವುದರ ಹತ್ತುಮಡಿ ಬರೆಯಬಹುದಾಗಿತ್ತು. ಇನ್ನೊಂದು, ಅವರ ವ್ಯಕ್ತಿತ್ವದ ಕೆಲವಂಶ ಅವರ ಬರಹಗಳಲ್ಲಿ ಹೊಮ್ಮಿದ್ದರೆ ಇನ್ನು ಕೆಲವಂಶ ಅವರ ಉಡುಪುತೊಡಪು, ಸ್ನೇಹ, ಸೌಜನ್ಯ, ಮಾತುಗಾರಿಕೆಯ ಸೊಗಸು, ಸತ್ತ್ವ, ಬದುಕಿನ ನೇಮನಿಷ್ಠೆ ಇವುಗಳಲ್ಲಿ ಹಾಗೆ ಹೀಗೆ ಮಿಂಚುತ್ತದೆ. ಹೊರಕ್ಕೆ ಹೇಗೂ ತೋರಗೊಡದೆ ಇರುವ ಅವರ ವ್ಯಕ್ತಿತ್ವದ ಬಹ್ವಂಶವನ್ನು ಪರಿಚಯ ಮಾಡಿಕೊಡುವುದಾದರೂ ಹೇಗೆ? ಬಹುಶಃ ಆ ಅಜ್ಞಾತಭಾಗ ಲಾಲ್‌ಬಾಗಿನ ಪ್ರತಿಯೊಂದು ಮರ ಗಿಡ ಬಳ್ಳಿಗೂ ಗೊತ್ತಿದ್ದರೂ ಇರಬಹುದು.

ಇಂಥ ರಸಜೀವಿ, ಭಾವಜೀವಿ, ಕಲಾಜೀವಿ, ವಿದ್ವಾಂಸ, ವಾಗ್ಮಿ, ವಿಮರ್ಶಕ, ಮಿಗಿಲಾಗಿ ಕವಿ–ಇಂಥವರ ಸಾರಸ್ವತ ಸೇವೆಯನ್ನು ನಾಡು ಗುರುತಿಸಿ ೧೯೫೫ರಲ್ಲಿಯೇ ಕುಮಟದ ಸಾಹಿತ್ಯ ಸಮ್ಮೇಳನದ ಅಧ್ಯಕ್ಷರಾಗಿ ಆಯ್ದು ಗೌರವಿಸಿತು. ಎಪ್ಪತ್ತೈದರಲ್ಲಿ ಕಾಲಿರಿಸಿರುವ ಅವರಿಗೆ ಇನ್ನೂ ಸಾಹಿತ್ಯ ಅಕೆಡೆಮಿಯ ಪ್ರಶಸ್ತಿ ಗೌರವ ದೊರೆಯದಿರುವುದು ಅವರು ವರ್ಷಕ್ಕೊಂದರಂತೆ ಪುಸ್ತಕವನ್ನು ಬರೆದು ಪ್ರಕಟಿಸದ ತಪ್ಪೋ, ಸಾಹಿತ್ಯ ಅಕೆಡೆಮಿಯ ಪ್ರಶಸ್ತಿ ವಿತರಣೆಯ ನಿಯಮಾವಳಿಯ ನ್ಯೂನತೆಯೋ, ಸಂಬಂಧಪಟ್ಟ ಬಲ್ಲವರು ವಿಚಾರಮಾಡಬೇಕು.

ಎಂ. ವಿ. ಸೀತಾರಾಮಯ್ಯ

# ವಿ. ಸೀ. - ಒಂದು ನೋಟ

ಶ್ರೀ ವಿ. ಸೀ. ಅವರಿಗೆ ಇದೇ ಅಕ್ಟೋಬರ್ ಎರಡರಂದು ಎಪ್ಪತ್ತುನಾಲ್ಕು ವರ್ಷ ತುಂಬಿ, ಎಪ್ಪತ್ತೈದನೆಯ ವಯಸ್ಸಿನಲ್ಲಿ ಅವರು ಕಾಲಿರಿಸುತ್ತಿರುವುದು, ಈ ಸಂದರ್ಭದಲ್ಲಿ ಅವರಿಗೆ ಒಂದು ಸಂಭಾವನಾ ಗ್ರಂಥವನ್ನು ಅರ್ಪಿಸಿ ಸನ್ಮಾನಿಸಲಿರುವುದು, ಅವರ ಅಭಿಮಾನಿ ವರ್ಗಕ್ಕೆಲ್ಲ ಸಂತೋಷದ ಸಂಗತಿ. ಸುಮಾರು ೧೦-೧೨ ವರ್ಷದಿಂದ ವಿ. ಸೀ. ಅವರನ್ನು ಹತ್ತಿರದಿಂದ ನಾನು ಕಾಣುತ್ತ ಬಂದಿದ್ದೇನೆ; ಆದರೂ ಅವರನ್ನು ಅರ್ಥ ಮಾಡಿಕೊಂಡಿದ್ದೇನೆ ಎಂಬ ವಿಶ್ವಾಸ ನನಗಿಲ್ಲ. ಅವರ ಮನೆಯವರೆಲ್ಲರ ಸ್ನೇಹ, ಪ್ರೀತಿ, ವಿಶ್ವಾಸ ನನಗೆ ದೊರಕಿವೆ. ಈ ೫-೬ ವರ್ಷಗಳಲ್ಲಿ ವಿ. ಸೀ. ಅವರ ಲೇಖನ ಕಾರ್ಯದಲ್ಲಿ ಅವರು ಹೇಳಿ ಬರೆಸಿದುದನ್ನು ಬರೆದುಕೊಳ್ಳುವ, ಬರೆದುಕೊಂಡುದನ್ನು ಅವರು ತಿದ್ದಿಕೊಟ್ಟ ಬಳಿಕ ಅಚ್ಚು ಪ್ರತಿಯೊಂದನ್ನು ತಯಾರಿಸಿಕೊಡುವ ಸುಯೋಗ ನನಗೆ, ನನ್ನ ಸೋದರನಿಗೆ ಒದಗಿದೆ. ಇದರಿಂದ ಅವರಿಗೆ ಎಷ್ಟು ಪ್ರಯೋಜನವಾಗಿದೆಯೋ, ಇಲ್ಲವೋ ತಿಳಿಯೆ. ಆದರೂ ನನ್ನ ಲೋಪಗಳನ್ನು ಮನ್ನಿಸಿ, ಒಂದೇ ಸಮನೆಂಬಂತೆ ಪ್ರೇಮವನ್ನು ತೋರಿಸುತ್ತಿರುವುದು ಅವರಲ್ಲಿ ನನಗೆ ಇರುವ ಗೌರವವನ್ನು ಹೆಚ್ಚಿಸಿದೆ. ಎಲ್ಲಕ್ಕಿಂತ ಹೆಚ್ಚಾಗಿ ಅವರಿಂದ ನನಗೆ ದೊರಕಿರುವ, ದೊರಕುತ್ತಿರುವ, ಸಾಹಿತ್ಯ ಮತ್ತು ಜೀವನದ ಶಿಕ್ಷಣ ನನ್ನ ಬದುಕಿನ ದಾರಿಯನ್ನು ಗುರುತಿಸಿಕೊಳ್ಳಲು ಮಾರ್ಗದರ್ಶಿಯಾಗಿದೆ. ನಮ್ಮಿಬ್ಬರ ನಡುವೆ ಸುಮಾರು ಅರ್ಧ ಶತಮಾನದಷ್ಟು ವಯಸ್ಸಿನ ಅಂತರ ಇದ್ದರೂ ಅದನ್ನು ಅವರು ಮರೆತು, ಪ್ರೀತಿಯಿಂದ ಅವರ ಮನೆಯವರಲ್ಲೊಬ್ಬನೆಂಬಂತೆ ಆತ್ಮೀಯತೆಯಿಂದ ನಡಸಿಕೊಳ್ಳುತ್ತಿರುವುದು ನನ್ನ ಪಾಲಿನ ಭಾಗ್ಯ. ಅವರ ವಿಶ್ವಾಸವನ್ನು ವರ್ಣಿಸುವುದು ಹೇಗೆ? 'The affections are more reticent than the passions and their expression more subtle' ಎನ್ನಲೆ? ಅದನ್ನು ಅನುಭವಿಸಿಯೇ ತಿಳಿಯಬೇಕು.

## ೨

ಡಿ. ಜೀ. ಅವರ ನೇರ ಪರಿಚಯ ನನಗೆ ಆಗುವ ಮೊದಲು ಅವರ ಒಬ್ಬಿಬ್ಬರು ಮಕ್ಕಳೊಡನೆ ಸಂಪರ್ಕವಿತ್ತು. 1961ರಲ್ಲೊ ಅಥವಾ 1962ರಲ್ಲೊ ಮೈಸೂರು ರಾಜ್ಯ ಸಂಗೀತ ನಾಟಕ ಅಕಾಡೆಮಿಯ ವಾರ್ಷಿಕ ಪ್ರಶಸ್ತಿ ಪ್ರದಾನ ಸಮಾರಂಭ ಬೆಂಗಳೂರಿನ ಪುರಭವನದಲ್ಲಿ ನಡೆದಾಗ ಡಿ. ಜೀ. ಅವರನ್ನು ಮೊದಲ ಬಾರಿಗೆ ನಾನು 'ಕಂಡೆ'. ನಾಗೇಂದ್ರರಾಯರು, ಗಂಗೂಬಾಯಿ ಹಾನಗಲ್, ಹಾರಾಡಿ ರಾಮ, ದೇವೇಂದ್ರಪ್ಪ ಮುಂತಾದ ಕಲಾವಿದರನ್ನು ಪ್ರಶಸ್ತಿಯೊಂದಿಗೆ ಗೌರವಿಸುವುದಿತ್ತು. ಅಂದಿನ ಸಮಾರಂಭಕ್ಕೆ ಸಚಿವರೊಬ್ಬರು ಆಗಮಿಸಿದ್ದರು. ಡಿ. ಜೀ. ಅಧ್ಯಕ್ಷತೆ ವಹಿಸಿದ್ದರು. ಪ್ರಶಸ್ತಿ ಪ್ರದಾನ ಕಾರ್ಯಕ್ರಮ ಕೊನೆಗೊಂಡ ಮೇಲೆ ಅಧ್ಯಕ್ಷರು ಸಣ್ಣ ದನಿಯಲ್ಲಿ ತಮ್ಮ ಭಾಷಣವನ್ನು ಆರಂಭಿಸಿದರು. ತಾವು ಹುಡುಗರಾಗಿದ್ದಾಗ ಒಮ್ಮೆ ನಾಗೇಂದ್ರರಾಯರು ಪಾತ್ರ ವಹಿಸಿದ್ದ 'ಗುಲೇಬಕಾವಲಿ' ನಾಟಕವನ್ನು ನೋಡಿಕೊಂಡು ಮಾರನೆಯ ದಿನ ಹೊಸಕೋಟೆಗೋ ಸೂಲಿಬೆಲೆಗೋ ನಡೆಯು ಬಂದು ಕೆಸರು ತುಂಬಿದ್ದ ರಸ್ತೆಯಲ್ಲಿ ತಮ್ಮ ಹಳ್ಳಿಗೆ ಹಿಂದಿರುಗುತ್ತಿದ್ದಾಗ ರಾಯರ ನಟನಾಚಾತುರ್ಯ ಮತ್ತು ಆ ನಾಟಕದಲ್ಲಿ ಅವರ ನೃತ್ಯದ ಸೊಗಸು ಇವರ ಕನಸು ಕಾಣುತ್ತ ಕಾಲು ಜಾರಿ ಬಿದ್ದು ಬಿಳಿಯ ವಸ್ತ್ರಗಳ ತುಂಬೆಲ್ಲ ಕೆಸರು, ಮಣ್ಣು ಮೆತ್ತಿಸಿಕೊಂಡು ಮನೆ ತಲುಪಿದುದನ್ನು ರಸವತ್ತಾಗಿ, ನಿರುದ್ವೇಗದಿಂದ ಬಣ್ಣಿಸಿದರು. ಆದರೆ ಪ್ರಶಸ್ತಿಯ ಪ್ರಸಂಗಕ್ಕೆ ಬಂದಾಗ ಇದ್ದಕ್ಕಿದ್ದಂತೆ ಭಾವವಶರಾಗಿ ಮಾತನಾಡಲಾರಂಭಿಸಿದರು. ಅಕಾಡೆಮಿಯವರು ಕೊಡುವ ಸಂಭಾವನೆ ಅಲ್ಪ; ಸರ್ಕಾರದ ಪ್ರೋತ್ಸಾಹದಿಂದ ಜೀವನ ನಡೆಯುವುದು ದುಸ್ಸಾಧ್ಯವಾಗಿದೆ; ಕಲೆ ಬೆಳೆಯಬೇಕಾದಲ್ಲಿ ಜನತೆ ಮತ್ತು ಸರ್ಕಾರ ಮುಂದೆ ಬಂದು ಅವರನ್ನು ಪ್ರೋತ್ಸಾಹಿಸಿದಲ್ಲಿ ಮಾತ್ರ ಅತ್ಯುತ್ತಮ ಕಲಾಕೃತಿಗಳು ಜನತೆಯ ಪಾಲಿಗೆ, ನಾಡಿಗೆ ದೊರಕುವುವು ಎಂದರು. ಉತ್ತಮ ಸಾಹಿತ್ಯ ಹುಟ್ಟಲಿಲ್ಲ, ನಿರ್ಮಾಣವಾಗಿಲ್ಲ ಎನ್ನುತ್ತಾರೆ ಹಲವರು; ಸರ್ಕಾರ ಮುಂದೆ ಬಂದು ಅಚ್ಚಾದ ಪ್ರತಿ ಪುಟಕ್ಕೆ ಒಮ್ಮೆಗೇ ಹತ್ತು ರೂಪಾಯಿ ಕೊಡುತ್ತೇವೆನ್ನಲಿ, ಎಂಥ ಸಾಹಿತ್ಯ ಬೇಕೋ ಅಂಥ ಸಾಹಿತ್ಯ ಏಕೆ ಸೃಷ್ಟಿಯಾಗುವುದಿಲ್ಲ ನೋಡೋಣ, ಎಂದು ಸವಾಲು ಹಾಕಿದರು. ಹಣವಿಲ್ಲ ಎಂಬ ಕಾರಣ ಸಲ್ಲದು; ಸರ್ಕಾರಕ್ಕೆ ಎಷ್ಟಕ್ಕೂ ಇದೆ: ಒಂದು ಸೂಚನೆ ತನ್ನದು: ರಸೀತಿ ಸ್ಟಾಂಪು ರಾಜ್ಯ ಸರ್ಕಾರಗಳಿಗೆ ಸೇರಿದ್ದು; ಅವನ್ನು ಇಪ್ಪತ್ತು ರೂಪಾಯಿನ ಮೇಲಿನ ಎಲ್ಲ ಸಂದಾಯಕ್ಕೂ ಹತ್ತು ಪೈಸೆ ಮಾತ್ರ ಹಾಕುತ್ತಿದ್ದೇವೆ. ನೂರಕ್ಕೆ ಇಷ್ಟರಂತೆ ಎಂದೊ, ವರಮಾನ ತೆರಿಗೆಯಂತೆ ಮಟ್ಟಗಳ ಲೆಕ್ಕದಲ್ಲಿಯೊ ಹೆಚ್ಚು ಎತ್ತಿದರೆ ಒಂದು ಕೋಟಿ ರೂಪಾಯಿ ಉತ್ಪತ್ತಿಯಾಗುತ್ತದೆ; ಅವನ್ನು ಕಲೆಯ

ಪ್ರೋತ್ಸಾಹಕ್ಕೆ ಮೀಸಲಿಡಬಹುದು ಎಂದರು. ಬಂದಿದ್ದ ಸಚಿವರು ಸಂತೋಷಪಡಲಿಲ್ಲ. ಸುಮಾರು ೨೦–೨೫ ನಿಮಿಷಗಳ ನಿರರ್ಗಳ ಭಾಷಣ ಅಂದಿನದು.

ಅಂದು ಕಂಡ ವಿ. ಸೀ. ಯವರ ಚಿತ್ರ ಕಣ್ಣಿಗೆ ಕಟ್ಟಿದಂತಿದೆ. ತೀಡಿ ಕಚ್ಚೆ ಹಾಕಿ ಉಟ್ಟಿದ್ದ ಬೆಳ್ಳನೆಯ ಪಂಚೆ, ಮುಚ್ಚುಕುತ್ತಿಗೆಯ ಪ್ರಿನ್ಸ್ ಕೋಟು, ತಲೆಯ ಮೇಲೆ ಗಂಜಿ ಇಳಿಸಿ ಸುತ್ತಿದ್ದ ಮೈಸೂರು ಮಾದರಿಯ, ಆದರೆ ಜರತಾರಿ ಇಲ್ಲದ ರುಮಾಲು, ಅಂತಃಕರಣ ಬೀರುವಂತಿದ್ದ, ಹೊಳೆವ ಕಣ್ಣು; ಒಂದು ಕಪ್ಪು ಕಟ್ಟಿನ ಕನ್ನಡಕ–ಇವು ಅಂದಿನ ಉಡುಗೆ–ತೊಡುಗೆ. ಅದು ಅವರ ದಿನಸಾಧಾರಣ ವೇಷ–ಭೂಷಣ ಎಂದು ಬಹು ದಿನಗಳ ನಂತರವೇ ನನಗೆ ತಿಳಿದುದು. ಸಮಾರಂಭ ಮುಗಿದ ಮೇಲೆ ಅವರು ನಮ್ಮನ್ನೂ ತಮ್ಮೊಡನೆಯೇ ಮನೆಗೆ ಕರೆದೊಯ್ದರು.

ಈ ಮುಂಚೆ ಅವರ ಮನೆಯ ಸಮೀಪವೇ ವಾಸಿಸುತ್ತಿದ್ದು ಆಗಾಗ ಅವರನ್ನು ಕಂಡ ನೆನಪಿದೆಯಾದರೂ ನನಗೆ ಅವರ ಪರಿಚಯವಾಗಲಿ, ಅವರ ವ್ಯಕ್ತಿತ್ವದ ಸ್ವರೂಪವಾಗಲಿ ತಿಳಿದಿರಲಿಲ್ಲ. ವಾರಕ್ಕೆ ನಾಲ್ಕೈದು ದಿನ ತಪ್ಪದೆ ಸಂಜೆಯ ವಾಯು–ವಿಹಾರಕ್ಕೆಂದು ಎಡಕ್ಕೆ ಶ್ರೀ ಕೆ. ಎಸ್. ನರಸಿಂಹಸ್ವಾಮಿ, ಬಲಕ್ಕೆ ದಿ. ಮೋಟಗಾನಹಳ್ಳಿ ಸುಬ್ರಹ್ಮಣ್ಯ ಶಾಸ್ತ್ರಿಗಳು, ನಡುವೆ ರುಮಾಲು ಧರಿಸದೆ ತುಂಬು ತೋಳಿನ ಷರ್ಟ್, ಮೇಲೊಂದು ಶಲ್ಯ ಅಥವಾ ಉತ್ತರೀಯ ಹೊದೆದು, ವಾಕಿಂಗ್ ಸ್ಟಿಕ್ ಅಥವಾ ಛತ್ರಿ ಹಿಡಿದ ವಿ. ಸೀ.—ಈ 'ತ್ರಿಮೂರ್ತಿ'ಗಳನ್ನು ದಿಟ್ಟಿಸಿದ್ದೇನೆ. ಮುಂದಿನ ಕೆಲವು ದಿನಗಳಲ್ಲಿ ಒಮ್ಮೆ ಶ್ರೀ ಕಾರಂತರು, ಶ್ರೀ ಮಾಸ್ತಿಯವರು, ಶ್ರೀ ಅ. ನ. ಕೃ. ಅವರ ಮನೆಗೆ ಬಂದಾಗ ಪುನಃ ಕುತೂಹಲದಿಂದ ವಿ. ಸೀ. ಯವರನ್ನು ಅವರ ಕೋಣೆಯ ಕಿಟಕಿಯ ಹೊರಗಿಂದ ಇಣುಕಿ ನೋಡಿದ್ದುಂಟು. ಆದರೆ, ಮೇಲಿನ ಘಟನೆ ನಡೆದ ಎಷ್ಟೋ ದಿನಗಳ ತರುವಾಯವೇ ವಿ.ಸೀ. ಅವರ ನಿಜವಾದ ಪರಿಚಯವಾದುದು. ಅದು ಇಂದಿನವರೆಗೂ ನಡೆದುಕೊಂಡು ಬಂದಿರುವುದು ನನ್ನ ಪುಣ್ಯ.

## ೩

ದಿನನಿತ್ಯದ ಬದುಕಿನಲ್ಲಿ ವಿ. ಸೀ. ಸರಳರು. ಇದು ಅವರ ಬದುಕಿನ ಎಲ್ಲ ವ್ಯವಹಾರಗಳಲ್ಲಿಯೂ ಎದ್ದುಕಾಣುವ ವಿಶೇಷ ಲಕ್ಷಣ. ಬೆಳ್ಳಗಾಗಿ ಒಗೆದ ತೆಳ್ಳನೆಯ ಪಂಚೆ ಉಟ್ಟು, ಮೇಲೊಂದು ಬಿಳಿಯ, ತೆಳುವಾದ ಅರೆತೋಳಿನ ಮಲ್ ಬನಿಯನ್ ತೊಟ್ಟು, ತಮ್ಮ ಪ್ರತ್ಯೇಕ ಕೋಣೆಯಲ್ಲಿ ಗೋಡೆಗೆ, ಅಥವಾ ಅದರ ಕಿಟಕಿಯ ಕೆಳಭಾಗದಲ್ಲಿ ಇರುವ ಹಾಸಿಗೆಯ ಸುರುಳಿಗೆ ಒರಗಿಕೊಂಡೊ, ಹಾಸಿರುವ ಚಾಪೆಯ ಮೇಲೆ ಕಾಲುಚಾಚಿಯೊ, ಅರೆಮಡಿಚಿಯೊ ಕುಳಿತಿರುವ, ಮಲಗಿರುವ, ಅವರನ್ನು

ಮೊದಲ ಬಾರಿಗೆ ಕಾಣುವ ಯಾರಿಗೇ ಆಗಲಿ ವಿಸ್ಮಯವಾಗುತ್ತದೆ. ಅವರ ಎಡಬಲಗಳಲ್ಲಿ ಕೋಣೆಯ ತುಂಬೆಲ್ಲ ಪುಸ್ತಕ ತುಂಬಿರುವ ಕಪಾಟುಗಳು. ಅವುಗಳಲ್ಲಿ ಬೇರೆ ಬೇರೆ ವಿಷಯಕ್ಕೆ ಅನುಗುಣವಾಗಿ ವಿಂಗಡಿಸಿ ಎರಡು ಸಾಲುಗಳಲ್ಲಿ ಜೋಡಿಸಿಟ್ಟಿರುವ ನಾಲ್ಕಾರು ಭಾಷೆಯ ಪುಸ್ತಕಗಳು. ಇನ್ನೊಂದರ ಮೇಲೆ ಇತ್ತೀಚಿನ ವಿದೇಶೀ ವಾರ ಪತ್ರಿಕೆಗಳು. ಸುತ್ತಲ ಗೋಡೆಯ ಮೇಲೆ ಅಲ್ಲಲ್ಲಿ ತೂಗು ಹಾಕಿರುವ ಕೆಲವು ಕಲಾವಿದರ ಚಿತ್ರಗಳು, ಛಾಯಾಚಿತ್ರಗಳು. ಬೀರು ಒಂದರ ಮೇಲೆ ರೇಡಿಯೊ. ಅದಕ್ಕೆ ಹತ್ತಿರದಲ್ಲಿ ಹಾಕಿರುವ ಒಂದು ಬೀಟೆಮರದ ಕುರ್ಚಿ—ಕಾಲೇಜ್ ದಿನಗಳಲ್ಲಿ ನಾಲ್ಕೈದು ವರ್ಷ ಅವರಿಗೆ ಮೈಸೂರಲ್ಲಿ ಆಶ್ರಯವಿತ್ತಿದ್ದ ಶ್ರೀ ರಾಯರ ನೆನಪಿನ ಕೊಡುಗೆ. ನೆಲದ ಮೇಲೆ ಅವರು ಕೂರುವೆಡೆಯಲ್ಲಿ ಹಾಸಿರುವ ಒಂದು ಚಾಪೆಯ ಸರಿಗೆ ಅಗಲವಾಗಿ ಹಾಸಿದ ಇನ್ನೊಂದು ಚಾಪೆ ಅಥವಾ ಜಮಖಾನೆ—ಮನೆಗೆ ಬರುವವರಿಗಾಗಿ. ಇಷ್ಟೇ ವಿ. ಸೀ. ಅವರ ಪ್ರಪಂಚ. ಈ ನಾಲ್ಕು ಗೋಡೆಗಳ ನಡುವಣ ಸೀಮೆಯಲ್ಲಿ ಕುಳಿತೇ ಅವರು ವಿಶಾಲ ಹೊರಪ್ರಪಂಚದಲ್ಲಿ ಎಲ್ಲೆಲ್ಲಿ ಏನೇನು ನಡೆಯುತ್ತಿದೆ–ರಾಜಕೀಯ, ಆರ್ಥಿಕ, ಸಾಮಾಜಿಕ, ಸಾಹಿತ್ಯಕ ಜಗತ್ತಿನಲ್ಲಿ–ಎಂಬುದನ್ನು ಅರಿಯಲು, ಅರಿತು ಅದರೊಡನೆ ಬೆರೆಯಲು ಪ್ರಯತ್ನಿಸುತ್ತಿರುತ್ತಾರೆ. ಅವರ ಗಮನ ಎಲ್ಲೆಡೆಯೂ ಹರಿಯುತ್ತಿರುತ್ತದೆ. ಸುತ್ತಲ ಆ ಜಗತ್ತಿನಲ್ಲಿ ಕಾಣುವ ಚೆಲುವನ್ನೆಲ್ಲ ಸೆರೆಹಿಡಿಯಲು, ಎದೆಯಲ್ಲಿ ತುಂಬಿಟ್ಟುಕೊಳ್ಳಲು ಅರಿಯಲು ಸರ್ವದಾ ಯತ್ನಿಸುತ್ತಿರುವ ಆ ಜೀವ ಬದುಕಿನ ಅವಿರತ ವ್ಯವಹಾರವನ್ನು ಅರ್ಥಮಾಡಿಕೊಳ್ಳಲು ತೊಡಗಿರುತ್ತದೆ. ತಮ್ಮ ಅನುಭವವನ್ನು ಅಂತರಂಗದಲ್ಲಿ ಮೆಲುಕುತ್ತಿರುತ್ತಾರೆ ಮಾತ್ರವಲ್ಲ, ಇತರರಿಗೂ ಕೇಳಿಸುತ್ತಿರುತ್ತಾರೆ.

ವಿ. ಸೀ. ಅವರ ದಿನಚರಿಯೂ ಅಷ್ಟೇ ಸರಳ. ಸಾಮಾನ್ಯವಾಗಿ ಆರಕ್ಕೆ ಮುಂಚೆಯೇ ಎದ್ದು, ಕಾಫೀ ಕುಡಿದು, ದಿನಪತ್ರಿಕೆಗಳ ಮೇಲೆ ಕಣ್ಣಾಡಿಸಿ, ಸ್ನಾನ ಮುಗಿಸುವ ಹೊತ್ತಿಗೆ ಗಂಟೆ ಎಂಟಾಗಿರುತ್ತದೆ. ಇಂಗ್ಲಿಷ್ ವಾರ್ತಾಪ್ರಸಾರ ಕೇಳಿಯಾದ ಮೇಲೆ ಅವರ ದಿನದ ಸಾಹಿತ್ಯಕ ಬದುಕು ಆರಂಭವಾಗುತ್ತದೆ. ಸಾಮಾನ್ಯವಾಗಿ ಪ್ರತಿದಿನ ತಪ್ಪದೆ ಎಂಟೂವರೆಯಿಂದ ಹತ್ತು–ಹತ್ತೂವರೆಯವರೆಗೆ ಬರೆದುಕೊಳ್ಳುವವರು ಇದ್ದರೆ–ಇನ್ನೂ ಅರ್ಧಗಂಟೆ ಹೆಚ್ಚು ಆಗಬಹುದು–ಏನಾದರೂ ಹೇಳಿ ಬರೆಸುತ್ತಾರೆ. ನಡುವೆ ಬರುವ ಎಷ್ಟೋ ಮಂದಿಯೊಡನೆ ಹತ್ತಾರು ನಿಮಿಷಗಳ ಸಂಭಾಷಣೆ; ಜೊತೆಯಲ್ಲಿ ಬೆಳಗಿನ ಅಲ್ಪೋಪಹಾರ, ಅಷ್ಟರಲ್ಲಿ ಹನ್ನೊಂದು ಗಂಟೆ. ಮೈಮೇಲೊಂದು ಷರ್ಟ್ ಧರಿಸಿ, ಹೆಗಲ ಮೇಲೆ ಒಂದು ಉತ್ತರೀಯವನ್ನು ಹಾಕಿಕೊಂಡು, ಕೈಯಲ್ಲಿ ಛತ್ರಿ–ಮಳೆಯಿರಲಿ, ಇಲ್ಲದಿರಲಿ–ಅಥವಾ ವಾಕಿಂಗ್ ಸ್ಟಿಕ್ ಹಿಡಿದು ಮನೆಯಿಂದ ಹೊರಬಿದ್ದರೆ, ಚಾಮರಾಜಪೇಟೆ ಮೂರನೆಯ ರಸ್ತೆಯಲ್ಲಿ ಎಡಕ್ಕೆ ತಿರುಗಿ ರಾಮೇಶ್ವರ ದೇವಸ್ಥಾನ. ಕನ್ನಡ ಸಾಹಿತ್ಯ ಪರಿಷತ್ತು, ಸಿಟಿ ಇನ್ಸ್ಟಿಟ್ಯೂಟ್ ದಾಟಿ ಗಾಯನ ಸಮಾಜದ ಮುಂದಿರುವ ಎತ್ತರದ ಸಾಲುಮರಗಳ

ರಸ್ತೆಯಲ್ಲಿ ನೇರ ಈ ಕೊನೆಯಿಂದ ಆ ಕೊನೆಯವರೆಗೆ ನ್ಯಾಷನಲ್ ಕಾಲೇಜಿನ ತನಕ ನಡೆದು, ಪುನಃ ಅದೇ ರಸ್ತೆಯಲ್ಲಿ ಸಾವಧಾನವಾಗಿ ಹಿಂದಿರುಗುವುದು ದಿನನಿತ್ಯದ ವಾಡಿಕೆ. ಹಿಂದೆ ದಿನಕ್ಕೆ ಎರಡು ಸಲವೆಂಬಂತೆ ಲಾಲ್‌ಬಾಗಿಗೆ ಹೋಗಿ ಬರುವ ರೂಢಿ ಈಚೆಗೆ ತಪ್ಪಿ ಹೋಗಿದೆ. ಅಪರೂಪಕ್ಕೆ ಆಗೊಮ್ಮೆ ಈಗೊಮ್ಮೆ ದಿಕ್ಕು ಬದಲಾಯಿಸಿ ಚಿಕ್ಕಪೇಟೆಯ ಕಡೆಗೊ ಮಾರುಕಟ್ಟೆಯವರೆಗೊ ಹೋಗಿ ಬರುವುದೂ ಉಂಟು. ಆದರೂ ಸಾಮಾನ್ಯವಾಗಿ ಈ ಹೊತ್ತುಗಳಲ್ಲಿ ಈ ಸಾಲುಮರಗಳ ರಸ್ತೆಯಲ್ಲಿ ಮೆಲ್ಲ ಮೆಲ್ಲನೆ ಚಲಿಸುತ್ತಿರುವ ಈ ವ್ಯಕ್ತಿಯನ್ನು ಯಾರೂ ತಪ್ಪದೆ ಕಾಣಬಹುದು. ಬಿಸಿಲು, ಗಾಳಿ, ಬೆಳಕು, ಹಸಿರು–ಎಲ್ಲವೂ ಇವರಿಗೆ ಪ್ರಿಯ; ಅಪ್ಯಾಯಮಾನವಾದವು. ಉರಿ ಬಿಸಿಲಲ್ಲಿ ಮಧ್ಯಾಹ್ನ ಕೈಕೊಳ್ಳುವ ಅವರ ವಾಕಿಂಗನ್ನು ಕುರಿತು ಜನ ತಮಾಷೆ ಮಾಡಿರುವುದುಂಟು. ಬೆಳಗಿನ ಈ ಪಯಣದಲ್ಲಿ ಅವರು ಸಾಮಾನ್ಯವಾಗಿ ಏಕಾಂಗಿ ಯಾಗಿ ಹೋಗುವರು. ದಾರಿ ಸವೆಸಲು ಹೆಜ್ಜೆ ಹಾಕುತ್ತಿರುವಂತೆಯೇ ಅವರ ಮನಸ್ಸು ಬಿಡುವಿಲ್ಲದೆ ಏನನ್ನಾದರೂ ಕುರಿತಂತೆ ಚಿಂತನೆ ನಡೆಸುತ್ತಿರುತ್ತದೆ. ವ್ಯಾಯಾಮದ ಜೊತೆಗೇ ನಿರ್ದಿಷ್ಟ ವಿಷಯ ಪರಿಶೀಲನೆಗೆ, ಚಿಂತನೆಗೆ ಅನುಕೂಲ ಆವರಣವನ್ನು ಅವಕಾಶವನ್ನು ಅದು ಕಲ್ಪಿಸುತ್ತದೆಂದು ಅವರೇ ಹೇಳುತ್ತಾರೆ.

ಬಿಸಿಲೇರಿದಂತೆ ಕಂಡಾಗ ಅಥವಾ ಆಯಾಸ ತೋರಿದಾಗ ಹಿಂದಿರುಗುವುದು. ಮನೆ ಸೇರಿದ ಮೇಲೆ ಹತ್ತು ನಿಮಿಷ ವಿಶ್ರಾಂತಿ; ಊಟ; ಅನಂತರ ಮನೆಯ ಮುಂಬಾಗಿಲಿನಿಂದ ಕಾಂಪೌಂಡ್ ಗೇಟಿನವರೆಗೆ ಶತಪಥ ಅಥವಾ ಕಲ್ಲು ಹಾಸಿನ ಮೇಲೆ ಸ್ವಲ್ಪ ಹೊತ್ತು ಕುಳಿತಿರುವುದು. ಪುನಃ ಕೋಣೆಯೊಳಗೆ ಚಾಪೆಯ ಮೇಲೆ ಯಥಾಸ್ಥಿತಿ. ವಾರ್ತಾಪ್ರಸಾರ ಶ್ರವಣ. ಅದಾದ ಮೇಲೆ ವ್ಯಾಸಂಗ. ಅಕ್ಕಪಕ್ಕ ಅರ್ಧ ಓದಿಟ್ಟಿದ್ದ ಲಿಸನರುಗಳೊ, ಇಕಾನಮಿಸ್ಟ್ ಸಂಚಿಕೆಗಳೊ, ಟೈಮ್ಸ್ ಲಿಟರರಿ ಸಪ್ಲಿಮೆಂಟುಗಳೊ, ಇಕನಾಮಿಕ್ ಜರ್ನಲ್ಲೊ, ಯಾವುವಾದರೂ ಗ್ರಂಥಗಳೊ ಅವರನ್ನು ಕರೆಯುತ್ತವೆ. ಮೂರು ಗಂಟೆಯ ಹೊತ್ತಿಗೆ ಒಂದು ಕಪ್ ಟೀ ಕುಡಿದು ವ್ಯಾಸಂಗ ಮುಂದುವರಿಸುವುದುಂಟು; ಇಲ್ಲವೇ ಪ್ರೂಫ್ ಇದ್ದರೆ ತಿದ್ದುವುದು; ಪತ್ರ ಬರೆಯುವುದು, ಲೇಖನದ ಕರಡಚ್ಚು ತಿದ್ದುವುದು; ಯಾರಾದರಿದ್ದರೆ ಯಾವು ದಾದರೂ ತಕ್ಷಣದ ಸಾಹಿತ್ಯಕ ಲೇಖನವನ್ನೊ ಕೃತಿಯ ವಿಭಾಗವನ್ನೊ ಬರೆಸು ವುದು; ಅದೂ ಇಲ್ಲವಾದರೆ ಬಂದು ಹೋಗುವವರೊಡನೆ ಮಾತುಕತೆ. ಒಟ್ಟಿನಲ್ಲಿ ಒಂದು ನಿಮಿಷವೂ ವ್ಯರ್ಥವಾಗದು–ನಿವೃತ್ತ, ವಿಶ್ರಾಂತ ಜೀವನದ ಮಧ್ಯ ದಲ್ಲಿಯೂ.

ಸಂಜೆ ಆರರ ಹೊತ್ತಿಗೆ ಪುನಃ ಆಕಾಶವಾಣಿಯ ವಾರ್ತಾ ಶ್ರವಣ. ಬಳಿಕ ಆಹ್ವಾನವಿದ್ದಲ್ಲಿ ಯಾವುದಾದರೊಂದು ಉತ್ತಮ ನಾಟಕ, ಸಂಗೀತ, ನೃತ್ಯ, ಕಲಾ ಪ್ರದರ್ಶನ–ಇತ್ಯಾದಿ ಇದ್ದಲ್ಲಿ ಹೋಗುವುದು; ಒಮ್ಮೊಮ್ಮೆ ಸ್ನೇಹಿತರ ಮನೆಗೆ. ಸಭೆಗಳಿಗೆ ಅಧ್ಯಕ್ಷತೆ ವಹಿಸಲು, ಭಾಷಣ ನಡೆಸಿಕೊಡಲು ಹೆಚ್ಚು ಬೇಡಿಕೆ, ಒತ್ತಾಯ

ಆಗಾಗ್ಗೆ ಒಡಗಿ ಬರುತ್ತಿದ್ದರೂ ಸಾಮಾನ್ಯವಾಗಿ ಎ. ಸೀ. ಒಪ್ಪಿಕೊಳ್ಳುವುದಿಲ್ಲ. ವಯಸ್ಸು, ಅಭ್ಯಾಸಗಳ ವಿವರಣೆ ನೀಡಿ ನಿವಾರಿಸಿಕೊಳ್ಳುತ್ತಾರಾದರೂ ಅಗತ್ಯವಾಗಿ ಒಪ್ಪಿಕೊಳ್ಳಲೇಬೇಕಾಗಿ ಬಂದು, ಹಾಗೆ ಒಪ್ಪಿಕೊಂಡಾಗ ಕರೆದವರ ಕಾಲಕ್ಕೆ ಸರಿಯಾಗಿ ಹೋಗಿ ನೆರವೇರಿಸಿಕೊಡುವುದು ಪದ್ಧತಿ. ಅಥವಾ, ಯಾವುದಾದರೂ ಉತ್ತಮ ಇಂಗ್ಲಿಷ್ ಚಲನಚಿತ್ರವಿದ್ದಲ್ಲಿ ಅದನ್ನು ನೋಡುವುದು. ಇಷ್ಟಾದರೂ ಇವೆಲ್ಲ ಅಪರೂಪದ ಕಾರ್ಯಕ್ರಮಗಳು. ತಪ್ಪದೆ ನಿರಂತರವಾಗಿ ನಡೆಯುವ ಸಂಜೆಯ ಕಾರ್ಯಕ್ರಮ ಎಂದರೆ ಬೆಳಗಿನಂತೆಯೇ ಇನ್ನೊಮ್ಮೆ ವಾಯುವಿಹಾರ. ಇದ್ದರೆ ಒಬ್ಬರೊ ಇಬ್ಬರೊ ಹಿರಿಯ–ಕಿರಿಯ ಸ್ನೇಹಿತರು; ಬಂದರೆ ಮಕ್ಕಳಲ್ಲೊಬ್ಬರು–ಅಪರೂಪಕ್ಕೆ–ಜೊತೆಗೆ; ಇಲ್ಲವಾದರೆ ತಾವೊಬ್ಬರೇ. ಎಂದಿನಂತೆ ಗಾಯನ ಸಮಾಜದ ಮುಂದಿನ ಸಾಲು ಮರದ ರಸ್ತೆಯಲ್ಲಿ ಹೊರಟು ಸಜ್ಜನರಾಯರ ಸರ್ಕಲ್ ಸುತ್ತುವರಿದು ಅಥವಾ ಅದನ್ನು ಹ್ರಸ್ವ ಮಾಡಿ ಹಾರ್ಡಿಂಗ್ ರಸ್ತೆಯಲ್ಲಿ ನ್ಯಾಷನಲ್ ಕಾಲೇಜ್ ಹಾಸ್ಟೆಲ್ ಹಿಂದೆ ಉತ್ತರಾದಿಮಠದ ರಸ್ತೆಯಲ್ಲಿ ಹೋಗಿ ಕಾಲೇಜ್ ಮೈದಾನದಲ್ಲಿ ನೆಲದ ಮೇಲೆ ಸ್ವಲ್ಪ ಹೊತ್ತು ಕುಳಿತು, ಶಂಕರಮಠದ ರಸ್ತೆ ಹಿಡಿದು ಚಾಮರಾಜಪೇಟೆ ತಮ್ಮ ಮನೆ ತಲಪುವುದು. ರಾತ್ರಿಯ ಊಟ; ವಾರ್ತಾಪ್ರಸಾರ ಶ್ರವಣ; ವ್ಯಾಸಂಗ, ಟಿಪ್ಪಣಿ ಮಾಡುವಿಕೆ ಇತ್ಯಾದಿ. ಅದೂ ಇದೂ ಓದುತ್ತಿರುವುದು. ಒಳ್ಳೆಯ ಸಂಗೀತ, ಭಾಷಣ, ನಾಟಕ ಇದ್ದಲ್ಲಿ ರೇಡಿಯೊ ಕಾರ್ಯಕ್ರಮ ಕೇಳುವುದು; ಕೆಲವು ಕ್ಷಣ ಕಲ್ಲು ಹಾಸಿನ ಮೇಲೆ ಕುಳಿತಿರುವುದು; ವಿಶ್ರಾಂತಿ.

ಸ್ಥೂಲವಾಗಿ ಇದು ಅವರ ತಪ್ಪದ ದಿನಚರಿ. ವರ್ಷ ಎಪ್ಪತ್ತೈದರಲ್ಲಿ ಅವರ ಜೀವನ ಶ್ರದ್ಧೆ ಇಷ್ಟೂ ಕಡಿಮೆಯಾಗಿಲ್ಲ. ಅವರನ್ನು ಕಾಣುವ ಯಾರಿಗೇ ಆಗಲಿ, ಎ. ಸೀ. ಒಂದು ಉತ್ಸಾಹದ ಚಿಲುಮೆಯಂತಿದ್ದಾರೆ—ನಡೆ, ನುಡಿ, ವ್ಯವಹಾರಗಳಲ್ಲಿ–ಎಂದೇ ಅನ್ನಿಸುತ್ತದೆ. ಎ. ಸೀ. ಅವರ ಕಣ್ಣು ಮನಸ್ಸು ಹೃದಯಗಳನ್ನು, ದೃಷ್ಟಿ ರೀತಿ ಮನೋಧರ್ಮಗಳನ್ನು ಕಾಣಿಸಲು ಮೇಲ್ಕಾಣಿಸಿದ ಈ ದಿನಚರಿಯ ಕೆಲವಂಶಗಳನ್ನು ವಿಸ್ತರಿಸಬೇಕೆನ್ನಿಸುತ್ತದೆ. ಹತ್ತಿರದಿಂದ ಕಾಣುವಾಗಷ್ಟೆ ಅವರ ರುಚಿ, ಪಕ್ಷಪಾತ, ನಯಸೂಕ್ಷ್ಮತೆ ದೃಷ್ಟಿ ಗೋಚರವಾಗುತ್ತವೆ.

## ೪

ಅವರ ಕೋಣೆಯನ್ನು ಹೊಕ್ಕವರಿಗೆ ಮೊದಲು ಕಣ್ಣಿಗೆ ಹೊಡೆಯುವುದು ಅವರ ಪುಸ್ತಕ ಭಂಡಾರ. ವೈಯಕ್ತಿಕ ಪುಸ್ತಕ ಸಂಗ್ರಹಣೆ ವಿದೇಶೀಯರ 'ಹಾಬಿ' ಎನ್ನುವುದಕ್ಕಿಂತಲೂ 'a part and parcel of life' ಎನ್ನುವುದುಂಟು. ಸ್ವಂತ ಪುಸ್ತಕ ಸಂಗ್ರಹವನ್ನಿರಿಸಿಕೊಳ್ಳುವವರು ಇಂದು ಕಡಿಮೆಯಾಗುತ್ತಿದ್ದಾರೆ. ಎ. ಸೀ.

ಅವರ ತಲೆಮಾರಿನವರಲ್ಲಿ ಆ ಅಭ್ಯಾಸ ಉಳಿದುಬಂದಿದೆ. ಎಷ್ಟೋ ಮಂದಿ ಹಿರಿಯರ ಮನೆಗಳಲ್ಲಿ ಸ್ವಂತ ಗ್ರಂಥ ಸಂಪತ್ತಿಯನ್ನು ಇಟ್ಟುಕೊಂಡಿರುವುದನ್ನು ಕಂಡಿದ್ದೇನೆ. ಓದಲರ್ಹವಾದ ಪುಸ್ತಕ ಕೊಂಡು ಸಂಗ್ರಹಿಸಲೂ ಯೋಗ್ಯವಾದುದು, ಎಂಬ ಅಭಿಪ್ರಾಯದವರು ವಿ. ಸೀ. ಅವರ ಗ್ರಂಥ ಸಂಪತ್ತಿ ದೊಡ್ಡದು. ಅವರ ಒಂದು ದೌರ್ಬಲ್ಯದಿಂದಾಗಿ – ಇದನ್ನು ದೌರ್ಬಲ್ಯವೆನ್ನಬೇಕೊ, ಗುಣವಿಶಿಷ್ಟತೆ ಎನ್ನಬೇಕೊ ಅರಿಯೆ – ಅವರ ಸಂಗ್ರಹದ ಸಂಖ್ಯೆಯಲ್ಲಿ ಅರ್ಧಕ್ಕರ್ಧ ಪುಸ್ತಕಗಳು ಈಗ ಅವರಿಂದ ದೂರವಾಗಿ ಬೇರೆ ಎಲ್ಲೆಲ್ಲಿಯೊ ಯಾರು ಯಾರಲ್ಲಿಯೊ ನೆಲಸಿವೆ! ತಾವು ಓದಿದಾಗ, ಓದುತ್ತಿರುವಾಗ ತಮಗೆ ಚೆನ್ನವೆಂದು, ಹೊಸತೆಂದು, ರುಚಿಸಿದುದನ್ನು ತಮ್ಮಲ್ಲಿಗೆ ಬರುವವರಿಗೆ, ಕಲೆ ಸಾಹಿತ್ಯದ ಒಲುಳ್ಳವರಿಗೆ ಓದಿ ತೋರಿಸುವ ಅಭ್ಯಾಸ ಅವರದು. ತಮಗೆ ಮೆಚ್ಚುಗೆಯಾದುದು ಅವರಿಗೂ ಆಗಬಹುದು ಎಂಬುದಕ್ಕಿಂತ ಹೆಚ್ಚಾಗಿ ತಮಗೆ ಉತ್ತಮವೆನಿಸಿದುದು ಇತರರ ಕಣ್ಣಿಗೂ ಕಿವಿಗೂ ಬೀಳಲಿ, ಆ ಕಡೆ ಅವರು ದೃಷ್ಟಿ ಹರಿಸುವಂತಾಗಲಿ ಎಂಬುದು ಅವರ ಉದ್ದೇಶ. ಅದರ ಬಗೆಗೆ ಆಳವಾಗಿ ತಿಳಿದುಕೊಳ್ಳಬೇಕು, ಪೂರ್ಣವಾಗಿ ಆ ಗ್ರಂಥವನ್ನೇ ಓದಬೇಕು ಎಂದು ಬಯಸಿ ಅಂಥ ಪುಸ್ತಕಗಳನ್ನು ಪತ್ರಿಕೆಗಳನ್ನು ಅವರು ಆಸಕ್ತರಿಗೆ ಕೊಡುವುದುಂಟು. ಹಾಗೆ ಕೊಂಡೊಯ್ದವರಿಂದ ಎಷ್ಟೋ ಪುಸ್ತಕಗಳು ಹಿಂದಕ್ಕೆ ಬಾರದೆ ಹೋಗುವುದೂ ಉಂಟು. ಇದರಿಂದಾಗಿ ವಿ. ಸೀ. ಅವರಿಗೆ ಅವರ ಉಪಯೋಗಕ್ಕೆ ಬೇಕಾಗುವಾಗ ಆ ಪುಸ್ತಕಗಳು ದೊರೆಯದೆ ಹೋಗುವುದರ ಜೊತೆಗೆ ಅವು ಶಾಶ್ವತವಾಗಿ ಅವರ ಪಾಲಿಗೆ ಇಲ್ಲವಾಗುತ್ತವೆ. ಹೀಗಾಗಿ ಅವರ ಸಂಗ್ರಹ ಅರ್ಧಕ್ಕರ್ಧ ಕರಗಿ ಹೋಗಿದೆ ಎಂದು ಕೇಳಿ ಬಲ್ಲೆ. ಅನೇಕ ಸಲ ಬೇರೆ ಲೈಬ್ರರಿಗಳಿಂದ, ಇನ್ನಿತರ ಎಡೆಗಳಿಂದ ಅವರು ಎರವಲು ತಂದ ಪುಸ್ತಕಗಳೂ ಹಾಗೆ 'ಕಾಣೆ'ಯಾಗಿ ಪುಸ್ತಕದ ಬೆಲೆಯನ್ನು ವಿ. ಸೀ. ತೆರಬೇಕಾಗಿ ಬಂದಿರುವುದನ್ನೂ ತೆತ್ತಿರುವುದನ್ನೂ ಕಂಡಿದ್ದೇನೆ. ಇದು ಹಾಗಿರಲಿ : ವಿ. ಸೀ. ಅವರ ಪುಸ್ತಕ ಸಂಗ್ರಹದ ವೈಶಿಷ್ಟ್ಯವೆಂದರೆ ಅದರ ವಿಂಗಡಣೆ, ಅದರ ಜೋಡಣೆಯಲ್ಲಿನ ಅಚ್ಚುಕಟ್ಟು, ಒಪ್ಪ ಓರಣ. ಸಾಹಿತ್ಯ– ಇಂಗ್ಲಿಷ್, ಕನ್ನಡ, ಸಂಸ್ಕೃತ, ಬಂಗಾಳಿ ;– ಅವರಲ್ಲಿ ಗದ್ಯ, ಪದ್ಯ, ನಾಟಕ, ವಿಮರ್ಶೆ ; ರಾಜ್ಯಶಾಸ್ತ್ರ ; ಅರ್ಥಶಾಸ್ತ್ರ ; ದರ್ಶನ ವೇದಾಂತಕ್ಕೆ ಸಂಬಂಧಿಸಿದುವು; ಕಲೆ ಸಂಗೀತಕ್ಕೆ ಸಂಬಂಧಿಸಿದ ವಿಮರ್ಶನ ಗ್ರಂಥಗಳು – ಹೀಗೆ ಬೇರೆ ಬೇರೆಯಾಗಿ ವಿಂಗಡಿಸಿಟ್ಟುಕೊಂಡಿರುವುದು ಒಂದು ಸಂಗತಿಯಾದರೆ ಕುಳಿತೆಡೆಯಿಂದಲೇ ಅವರು ಕೈ ಚಾಚಿದರೆ ಬೇಕೆನಿಸಿದ ಪುಸ್ತಕ ಅನಾಯಾಸವಾಗಿ ಕೈಗೆ ಸಿಗುವಂತೆ, ದೃಷ್ಟಿಗೆ ಕಾಣಸಿಗುವಂತೆ ಜೋಡಿಸಿಟ್ಟುಕೊಂಡಿರುವುದು–ಅಂಥ ಕಡೆಯೇ ಅದು ಇದೆ, ಅಂಥದೇ ಬಣ್ಣದ ಬೈಂಡಿನ ಪುಸ್ತಕ ಅದು ಎಂದೂ ನೆನಪಿಸಿಕೊಂಡಿರುತ್ತಾರೆ– ಅವರ ಪುಸ್ತಕ ಭಾಂಡಾರದ ವೈಶಿಷ್ಟ್ಯ. ಪುಸ್ತಕಗಳು ಅಸ್ತವ್ಯಸ್ತವಾಗಿ ಎಲ್ಲೆಂದರಲ್ಲಿ ಬಿದ್ದಿದ್ದರೆ ಅಥವಾ ನೋಡಬೇಕೆನಿಸಿದ ಪುಸ್ತಕ ಕೈಗೆಟುಕದಾಗಿದ್ದರೆ. ವಿ. ಸೀ. ಅವರ

ಮನಸ್ಸಿಗೆ ಪೀಡೆ. ಇಂಥ ಒಪ್ಪ ಓರಣ, ಅಚ್ಚುಕಟ್ಟುಗಳನ್ನು ಅವರು ತಮ್ಮ ಎಲ್ಲ ವ್ಯವಹಾರಗಳಲ್ಲಿಯೂ ಬಯಸುತ್ತಾರೆ; ತಮ್ಮ ಮಟ್ಟಿಗೆ ಪಾಲಿಸಿಕೊಂಡು ಬಂದಿದ್ದಾರೆ; ಇದನ್ನು ಅವರ ಜೀವಲಕ್ಷಣ ಎನ್ನಬಹುದು.

ಎರಡನೆಯ ಸಂಗತಿ: ಅವರ ವಾರ್ತಾ ಶ್ರವಣ ಮತ್ತು ದೈನಂದಿನ ಪತ್ರಿಕೆಗಳು ಹಲವನ್ನು ಓದುವ ಅಭ್ಯಾಸ. ಪ್ರತಿದಿನ 3-4 ದಿನಪತ್ರಿಕೆಗಳನ್ನಾದರೂ ಓದದೆ, ಅವರ ದಿನ ಮುಗಿಯುವುದೇ ಇಲ್ಲ! ದಿನಕ್ಕೆ ಪ್ರಸಾರವಾಗುವ 3-4 ಸಲವೂ ಇಂಗ್ಲಿಷ್ ವಾರ್ತೆಗಳನ್ನು ಆಕಾಶವಾಣಿಯಿಂದ, ರಾತ್ರಿ ಬಿ.ಬಿ.ಸಿ. ಇಂದ ಕೇಳದಿದ್ದರೆ ಅವರಿಗೆ ಏನೋ ಕಳೆದುಕೊಂಡಂತೆ. ಆ ಹೊತ್ತು ಬಂದಿತೆಂದರೆ ಏನೇ ಬರೆಸುತ್ತಿರಲಿ, ಚರ್ಚಿಸುತ್ತಿರಲಿ–ಅವರ ಗಮನ, ಧ್ಯಾನ ಅತ್ತ. ಮುಖ್ಯ ಸಂಗತಿಗಳಿರಲಿ, ಇಲ್ಲದಿರಲಿ 'ನ್ಯೂಸ್' ಕೇಳುವವರೆಗೆ ಅವರಿಗೆ ಸಮಾಧಾನವಿರುವುದಿಲ್ಲ. ಎರಡನೆಯ ಮಹಾ ಯುದ್ಧದ ಕಾಲದಲ್ಲಿ ಬಿ.ಬಿ.ಸಿ., ವಿ.ಓ.ಎ. ಇತ್ಯಾದಿ ಪ್ರಮುಖ ರೇಡಿಯೊ ಕೇಂದ್ರಗಳಿಂದ ಪ್ರಸಾರವಾಗುತ್ತಿದ್ದ ಚರ್ಚಿಲ್, ಮುಸ್ಸೊಲೆನಿ, ಹಿಟ್ಲರ್ ಮುಂತಾದ ನಾಯಕರ ಭಾಷಣಗಳನ್ನು, ಸಾಹಿತ್ಯ ಸಂಗೀತ ಕಲೆಗಳಿಗೆ ಸಂಬಂಧಿಸಿದ ಉಪನ್ಯಾಸಗಳನ್ನು, ಖ್ಯಾತ ಸಂಗೀತಗಾರರ ಸೊನಾಟ–ಸಿಂಫನಿಗಳನ್ನು ಕೇಳಲು ನಡುರಾತ್ರಿಗೆ ಎದ್ದು, ತಮ್ಮಲ್ಲಿ ರೇಡಿಯೊ ರಿಸೀವಿಂಗ್ ಸೆಟ್ ಇಲ್ಲದಿದ್ದಾಗ ಶ್ರೀ ಕೆ. ವಿ. ಅಯ್ಯರ್‌ರಂಥ ಸ್ನೇಹಿತರ ಮನೆಗಳಿಗೆ ಹೋಗಿ, ಅವರು ಕೇಳಿ ಹಿಂದಿರುಗುತ್ತಿದ್ದರಂತೆ. ಒಳಹೊರ ಪ್ರಪಂಚದಲ್ಲಿ ಏನೇನು ನಡೆಯುತ್ತಿದೆ ಎಂಬುದನ್ನು ಪ್ರತಿಕ್ಷಣ ತಿಳಿಯಲು ಅವರಿಗೆ ಎಷ್ಟು ಕುತೂಹಲ, ಅವರ ಮನಸ್ಸು ಅದಕ್ಕಾಗಿ ಎಷ್ಟು ಹಾತೊರೆಯುತ್ತದೆ ಎಂಬುದಕ್ಕೆ ಇದೊಂದು ನಿದರ್ಶನ. ಈಚೆಗೆ ಹೊನ್ನಾವರದಲ್ಲಿ ನಾಲ್ಕು ವರ್ಷ ನೆಲಸಬೇಕಾಗಿ ಬಂದಿದ್ದಾಗ ಮೊದಲ ಕೆಲವು ತಿಂಗಳು ರೇಡಿಯೊ ಸೆಟ್ ಇಲ್ಲದೆ, ಸಕಾಲಕ್ಕೆ ದಿನಪತ್ರಿಕೆಗಳು ಅಲ್ಲಿಗೆ ತಲುಪದೆ ಇದ್ದಾಗ ತಾವು ಅನುಭವಿಸಿದ ನಷ್ಟ ಹೆಚ್ಚಿನದು ಎಂದು ಅವರು ಹೇಳಿದ್ದಾರೆ. ಜಗತ್ತಿನ ದಿನನಿತ್ಯದ ಬದಲಾವಣೆಗಳನ್ನು ಗುರುತಿಸುವುದರ ಜೊತೆಗೆ ಒಂದು ವಿಷಯದ ಹತ್ತಾರು ನೆಲೆಗಳನ್ನು, ಸ್ವರೂಪಗಳನ್ನು ಅರಿಯಲು ಅದು ಸಹಾಯಕ ಎನ್ನುತ್ತಾರೆ.

ಅವರ ಟೀ ಸೇವನೆಯ ಬಗೆಗೆ ಒಂದು ಪುರಾಣವೇ ಇದೆ. (ಡಾ. ಬಿ.ಜಿ.ಎಲ್. ಸ್ವಾಮಿ ತಮ್ಮ 'ಪಂಚಕಲಶಗೋಪುರ'ದಲ್ಲಿ ವಿ. ಸೀ. ಅವರ ವ್ಯಕ್ತಿಚಿತ್ರದಲ್ಲಿ ಇದನ್ನು ಬಹು ಸ್ವಾರಸ್ಯವಾಗಿ ಬಣ್ಣಿಸಿದ್ದಾರೆ.) ವಿದೇಶೀಯರಂತೆ ಒಂದು ಟ್ರೇಯಲ್ಲಿ ಪಿಂಗಾಣಿ ಟೀ ಪಾತ್ರೆಗಳು: ಒಂದರಲ್ಲಿ ಹಾಲು; ಸಕ್ಕರೆ; ಕಪ್ಪು ಸಾಸರುಗಳು: ಬೆರಸಲು ಚಮಚ ಮತ್ತು ಇತರ ಪರಿಕರಗಳು. ಒಬ್ಬರೇ ಇದ್ದಾಗಲೂ ಶಕ್ಯವಿದ್ದಾಗ ಈ ಕ್ರಮ ತಪ್ಪದು. ಟ್ರೇ ಬಂದ ಮೇಲೆ ಕ್ರಮವಾಗಿ ಅಚ್ಚುಕಟ್ಟಾಗಿ ಪಿಂಗಾಣಿ ಪಾತ್ರೆಗಳನ್ನು ಕಪ್ಪು ಸಾಸರುಗಳನ್ನು ಜೋಡಿಸಿ, ಬಟ್ಟಲುಗಳಿಗೆ ತಾವೇ ಡಿಕಾಕ್ಷನ್ ಸುರಿದು ಒಂದನ್ನು ತಾವಿಟ್ಟುಕೊಂಡು, ಇನ್ನೊಂದನ್ನು ನಮ್ಮತ್ತ ಸರಿ

'ಹಾಲು, ಸಕ್ಕರೆ ಹಾಕಿಕೊಳ್ಳಿ' ಎನ್ನುವರು. ಮೊದಲ ಸಲಕ್ಕೆ ತಾವು ಅರ್ಧ ಬಟ್ಟಲಿನಷ್ಟು ಡಿಕಾಕ್ಷನ್ ಸುರಿದುಕೊಂಡು ಸಕ್ಕರೆ ಹಾಕಿಕೊಂಡು ಚೆನ್ನಾಗಿ ಕಲಕಿ ಹಾಲು ಹಾಕಿಕೊಳ್ಳದೆಯೇ ಸೇವಿಸಿ, ಮಿಕ್ಕುದಕ್ಕೆ ಒಂದೊ ಎರಡೊ ಚಮಚೆ ಹಾಲು ಹಾಕಿಕೊಂಡು ನಿಧಾನವಾಗಿ ಗುಟುಕು ಗುಟುಕಾಗಿ ಸೇವಿಸುವುದು. ಯಾವುದ ರಲ್ಲಿಯೂ ಅವಸರ, ಆತುರ ಇಲ್ಲ. ಸಕ್ಕರೆ ಹೆಚ್ಚಾದರೆ 'ಪಾನಕವಾಯಿತು'; ಡಿಕಾ ಕ್ಷನ್ ಹೆಚ್ಚಾದರೆ 'ಗೊಜ್ಜಾಯಿತು'; ಹಾಲು ಹೆಚ್ಚಾದರೂ 'ಹಾಲು-ಟೀ' ಹೋಗಿ 'ಹಾಳು-ಟೀ' ಆಯಿತು ಎನ್ನುವರು. ಯಾವುದರಲ್ಲಿಯೂ ಮಿತಿಯುಸ್ಸು ಮೀರ ದಂತೆ, ಎಲ್ಲವೂ ರುಚಿಸುವಂತೆ, ಹಿತವಾಗಿ ಮಿತವಾಗಿ ಎಲ್ಲವನ್ನೂ ಬೆರಸಿ ಸೇವಿ ಸುವ ಅವರ ರೀತಿ ವಿಧಾನ ಈ ಪುರಾಣಕ್ಕೆ ಅವಕಾಶ ಕೊಟ್ಟಿದೆ.

ವಿ. ಸೀ. ಅವರೊಡನೆ ವಿಚಾರ ವಿನಿಮಯ ಮಾಡುವಾಗಲೂ ಅದೇ ಭಾವನೆ ಯುಂಟಾಗುತ್ತದೆ. ಅವರ ಪರಿಚಯವಾಗುವುದಕ್ಕೆ ಮೊದಲು ಅವರಲ್ಲಿ ನಾವು ದೂರದಿಂದ ಗುರುತಿಸುವ ಒಂದು ಬಗೆಯ ಗಾಂಭೀರ್ಯ ಪರಿಚಯವಾದ ಕೆಲವು ನಿಮಿಷಗಳಲ್ಲಿಯೇ ತೇಲಿಹೋಗಿರುತ್ತದೆ. ವಯಸ್ಸು, ಅನುಭವ, ತಿಳುವಳಿಕೆಯ ಅಂತರ ಹೆಚ್ಚಿನದಾದರೂ, ಯಾವ ಬಗೆಯ ಸಂಕೋಚವನ್ನೂ ಇರಿಸಿಕೊಳ್ಳದೆ, ಕಿರಿತನ ಸಹಜವಾದ ದುಡುಕನ್ನೂ ಅರೆತಿಳಿವಳಿಕೆಯುನ್ನೂ ಅಪಕ್ವತೆಯನ್ನೂ ಮನ್ನಿಸಿ, ಆದರೆ ಅದನ್ನು ಎಲ್ಲಿಯೂ ಕಾಣಿಸದೆ, ನಮ್ಮ ಕಣ್ಣು ತೆರೆಸಬಲ್ಲರು. ಅವರೊಡನೆ ಸಂಭಾಷಿಸುವುದೆಂದರೆ ಬೇರೊಂದು ಪ್ರಪಂಚದಲ್ಲಿ ವಿಹರಿಸುವುದೆಂಬಂತೆ. ಯಾವ ವಿಷಯವನ್ನಾದರೂ ಎತ್ತಿ ಆ ಬಗ್ಗೆ ಲಘುವಾಗಿ ಒಂದು ಮಾತು ನುಡಿದು ಕುಳಿತರೆ ಸಾಕು, ಆ ವಿಷಯಕ್ಕೆ ಸಂಬಂಧಿಸಿದ ಎಲ್ಲವನ್ನೂ ಹೇಳಿ, ಅಷ್ಟು ಸಾಲದು ಎಂಬಂತೆ ಬೇರೆ ವಿಷಯಗಳಿಗೂ ಸಂಬಂಧ ಕಲ್ಪಿಸಿ, ತಾವು ಹೇಳಿದುದನ್ನು ಸಮರ್ಥಿಸಲೆಂಬಂತೆ ಆಗಾಗ ತಮ್ಮ ಪುಸ್ತಕದ ಬೀರುಗಳಿಂದ ನಾಲ್ಕಾರು ಪುಸ್ತಕ ಹೊರತೆಗೆದು ಇಂಥದೇ ಕಡೆ, ಯಾವುದೋ ಬಲ-ಎಡ ಪುಟದಲ್ಲಿಯೇ ಇವನು ಹೀಗೆ ಹೇಳಿದ್ದಾನೆ ಎಂದು ಹೇಳಿ, ಪುಟ ತೆರೆದು ಓದಿ ತೋರಿಸಿ ನಮ್ಮ ಮನಸ್ಸಿನ ಸಂದೇಹವನ್ನು ನಿವಾರಣೆ ಗೊಳಿಸುವಂತೆ ವಿಷಯದ ವಿವರಣೆ ನೀಡಬಲ್ಲರು. ಸ್ಮರಣಶಕ್ತಿ ಕುಂದುತ್ತಿದೆ ಎಂದು ಹೇಳುತ್ತಿರುವ ಈಗಲೂ ಅವರು ಬರಿಯ ಸ್ಮೃತಿಶಕ್ತಿಯಿಂದಲೇ ಉದಾಹರಿಸುವ ವಾಕ್ಯಗಳು, ಪದ್ಯಪಂಕ್ತಿಗಳು, ಶಬ್ದಜಾಲ ನಮ್ಮನ್ನು ವಿಸ್ಮಯಗೊಳಿಸುತ್ತವೆ. ಆಡುವ ಮಾತು, ಚರ್ಚಿಸುವ ವಿಷಯ ಯಾವುದಾದರೂ ಆಯಿತು; ರಾಜಕೀಯ ವಾಗಲಿ, ಆರ್ಥಿಕವಾಗಲಿ, ಸಾಮಾಜಿಕವಾಗಲಿ, ಕಲೆ ಸಾಹಿತ್ಯ ಸಂಗೀತ ಪ್ರಪಂಚಕ್ಕೆ ಸಂಬಂಧಿಸಿದ್ದಾಗಲಿ, ಮತಧರ್ಮ-ವೇದಾಂತಗಳನ್ನು ಕುರಿತದ್ದಾಗಲಿ-ಎಲ್ಲವೂ ಅವರ ಚರ್ಚೆಗೆ ಒಳಪಡತಕ್ಕವೇ. ಅವರ ಮಾತು ಕೇಳುತ್ತ ಕುಳಿತರೆ ಸಾಕು. ವಿಷಯಕ್ಕೆ ಸಂಬಂಧಿಸಿದ ಹತ್ತಾರು ಮುಖಗಳು ಕಣ್ಮುಂದೆ ಕಟ್ಟಿದಂತಾಗುತ್ತದೆ.

ಕೇಳಿದ ಮೇಲೆ ಹಟವಾಗಿ ತಮ್ಮ ಅಭಿಪ್ರಾಯವೇ ಸರಿ ಎನ್ನದವರಿಗೆ ಪುನಃ ಅವನ್ನು ವಿಚಾರಿಸಿಕೊಳ್ಳಬೇಕು ಎನ್ನಿಸುತ್ತದೆ.

ಸಂಭಾಷಣೆಗೆ ತೊಡಗಿದಾಗ ತಾವು ಕಂಡ ಹಿರಿಯರ, ವಿದ್ವಾಂಸರ, ಸ್ನೇಹಿತರ ಎಷ್ಟೋ ಅನುಭವಗಳನ್ನು ತಿಳಿಸುತ್ತಾರೆ, ಉದಾಹರಿಸುತ್ತಾರೆ; ಅವರ ಗುಣಶೀಲಗಳಲ್ಲಿನ ದೊಡ್ಡತನವನ್ನು ನೆನೆಯುತ್ತಾರೆ. ಆ ಬಳಗ ಸಣ್ಣದಲ್ಲ; ಸಂಖ್ಯೆಯಲ್ಲಿ, ಹಿರಿಮೆಯಲ್ಲಿ ಎರಡರಲ್ಲಿಯೂ ದೊಡ್ಡದು. ಸರ್ ಎಂ. ವಿ., ರೈ.ಅ. ಶ್ರೀನಿವಾಸ ಶಾಸ್ತ್ರಿಗಳು, ಬೆಳ್ಳಾವೆ ವೆಂಕಟನಾರಣಪ್ಪನವರು, ಎಸ್. ಎಸ್. ಸುಬ್ಬರಾಯರು, ಬಿ. ಎಂ. ಶ್ರೀ. ಅವರು, ವೆಂಕಣ್ಣಯ್ಯನವರು, ಪಂಜೆಯವರು, ಪೈ ಅವರು, ರಾಧಾಕೃಷ್ಣನ್ ಅವರು, ಪ್ರೊ. ಎಂ. ಹಿರಿಯಣ್ಣನವರು, ಎಂ. ಆರ್. ಶ್ರೀನಿವಾಸ ಮೂರ್ತಿಗಳು, ಎ. ಆರ್. ಕೃಷ್ಣಶಾಸ್ತ್ರಿಗಳು, ಸಿ. ಆರ್. ರೆಡ್ಡಿ, ಟೇಟ್, ರಾಲೊ, ಮೆಕಿಂಟಾಷ್, ಮೆಟ್‌ಕಾಫ್ ಮೊದಲಾದವರು—ಈ ಹೆಸರುಗಳು ಆ ಬಳಗದಲ್ಲಿ ಕೆಲವು ಮಾತ್ರ. ಒಬ್ಬರಂತೆ ಇನ್ನೊಬ್ಬರಲ್ಲ – ವ್ಯಕ್ತಿತ್ವ, ಸಾಧನೆ, ಗುಣಶೀಲ, ಹಿರಿಮೆಗಳಲ್ಲಿ; ಆದರೂ ಎಲ್ಲರೂ ಉನ್ನತ ವ್ಯಕ್ತಿತ್ವದವರು. ಇಂಥವರೊಡನೆ ಸಂಪರ್ಕ, ಸಾಹಚರ್ಯದಿಂದ ತಮಗೆ ಆದ ಉಪಕಾರ ಸಾಮಾನ್ಯವಾದುದಲ್ಲ; 'ಎಷ್ಟು ಬಗೆಯ quality ಇರಬಲ್ಲದು; ಎಷ್ಟು ಬಗೆಯ levels of quality ಇರಬಲ್ಲದು ಎಂದು ತಿಳಿಯುವಂತಾಯಿತು; that itself was a great education for me' ಎಂದು ವಿ. ಸೀ. ಅವರನ್ನು ಕೃತಜ್ಞತೆಯಿಂದ ಸ್ಮರಿಸುತ್ತಾರೆ. ಅವರ ಬಗೆಗೆ ವಿ. ಸೀ. ಮಾತನಾಡುವಾಗೆಲ್ಲ ಒಂದು ಆತ್ಮೀಯತೆ, ಅಂತಃಕರಣ ಮತ್ತು ಸೌಮನಸ್ಯಗಳು ವಿಶೇಷವಾಗಿ ಎದ್ದು ಕಾಣುತ್ತವೆ. ಈಗಿನ ಹಿರಿಯರಲ್ಲಿ ಅವರಿಗೆ ತುಂಬಾ ಪೂಜ್ಯರಾಗಿರುವವರು ಶ್ರೀ ಡಿ. ವಿ. ಗುಂಡಪ್ಪನವರು, ಶ್ರೀ ಮಾಸ್ತಿಯವರು ಮತ್ತು ಶ್ರೀ ರಾಳ್ಳಪಲ್ಲಿ ಅನಂತಕೃಷ್ಣಶರ್ಮರು. ವಿ. ಸೀ. ಅವರಿಗೆ ಈ ಮೂವರಲ್ಲಿ ಇರುವ ಗೌರವ, ಆದರ, ಅಭಿಮಾನಗಳಿಗೆ ಮೇರೆಯಿಲ್ಲ. "ಇಂಥವರ ಹತ್ತಿರ ಮಾತನಾಡುವುದು ಎಂದರೆ ಅದೇ ಒಂದು Education–ಬೇರೆ ಪ್ರಪಂಚದಲ್ಲಿ ಇದ್ದಂತೆ ಎನಿಸುತ್ತದೆ; it is a glory. ಇಂಥವರಿಗೆ ತಿಂಗಳಿಗೆ ಒಂದು ಸಾವಿರ ರೂಪಾಯಿ ಸರ್ಕಾರ ಕೊಟ್ಟು, 'ಇನ್ನೇನೂ ಮಾಡ್ಬೇಡಿ ನೀವು, ನಿಮ್ಮ ಹತ್ತಿರ ಬಂದವರೊಡನೆ ಮಾತಾಡ್ತಿರಿ' ಎಂದರೆ ಸಾಕು; that itself will be culture and education. ಇವರ ಒಬ್ಬೊಬ್ಬರ ಪ್ರಭಾವ ಒಂದೊಂದು ವಿಶ್ವವಿದ್ಯಾನಿಲಯದ ಪ್ರಭಾವಕ್ಕೆ ಸಮ" ಎಂದು ಪದೇ ಪದೇ ಹೇಳುವ ವಿ. ಸೀ. ಆ ಮಾತಿಗೆ ತಾವೂ ಉದಾಹರಣೆಯಾಗಬಲ್ಲರು. ಅವರೊಂದಿಗೆ ಸಂಭಾಷಿಸುವಾಗ 'We have entered a universe that only answers to its own laws, supports itself, internally coheres and has a new standard of truth' ಎಂಬ ಬಗೆಯ ಅನುಭವವಾಗುತ್ತದೆ.

ಐದಾರು ದಶಕಗಳ ತಮ್ಮ ಅವಿರತ ಸಾಹಿತ್ಯಕ ಬದುಕಿನಲ್ಲಿ ವಿ. ಸೀ. ಎಷ್ಟೋ ಮಂದಿ ಕಿರಿಯ ಸಾಹಿತಿಗಳಿಗೆ ಮಾರ್ಗದರ್ಶಿಯಾಗಿದ್ದಾರೆ; ಉತ್ಸಾಹದ, ಉತ್ತೇಜನದ ದಾರಿಗಾಣ್ಕೆಯಾಗಿದ್ದಾರೆ; ಸ್ಫೂರ್ತಿಯ ನೆಲೆಯಾಗಿದ್ದಾರೆ. "ಕಿರುವನಿಯ ಕಣ್ಮಣಿಗೆ ಇವರೊಲುಮೆಯ ತವರು." ಇವರ ಗೆಳೆಯರಲ್ಲಿ ಸರ್ವಶ್ರೀ ಗೋಕಾಕ್, ಬೇಂದ್ರೆ, ಕುವೆಂಪು, ಕೆ. ವಿ. ಅಯ್ಯರ್, ಶಿವರಾಮ ಕಾರಂತ, ರಾಜರತ್ನಂ, ಶ್ರೀರಂಗ, ರಾಶಿ, ನರಸಿಂಹಸ್ವಾಮಿ ಮುಂತಾದ ಅನೇಕ ಇಂದಿನ ಪ್ರಮುಖ ಸಾಹಿತಿಗಳು ಸೇರಿದ್ದಾರೆ. 'ಶ್ರೀ'ಯವರ 'ಅಶ್ವತ್ಥಾಮನ್', ಕೈಲಾಸಂ ಅವರ 'ಹಾಸ್ಯ ಸಂಮಿತ' ನಾಟಕಗಳು, ಗೋಕಾಕರ 'ಸಮುದ್ರ ಗೀತೆಗಳು' ಮತ್ತು ರಾಜರತ್ನಂ ಅವರ 'ರತ್ನ' ಮತ್ತು 'ನಾಗ'ನ ಪದಗಳು—ಇವನ್ನು ವಿ. ಸೀ. ಅವರಷ್ಟು ಮೆಚ್ಚಿ ಎಲ್ಲೆಡೆ ಉಲ್ಲೇಖಿಸಿರುವವರು ಕನ್ನಡದಲ್ಲಿ ಮತ್ತಾರೂ ಇಲ್ಲವೆನ್ನಬೇಕು. ಅವರ ಅಭಿಪ್ರಾಯದಲ್ಲಿ ಈ ನಾಲ್ಕೂ ಕೃತಿಗಳು ಆಧುನಿಕ ಕನ್ನಡ ಸಾಹಿತ್ಯದಲ್ಲಿ, ಹೊಸ ಕವಿತೆಯಲ್ಲಿ, ತೆರೆದ ನಾಲ್ಕು ಹೆದ್ದಾರಿಗಳು. ಇನ್ನೊಂದು ಗಮನಾರ್ಹ ಸಂಗತಿ ಎಂದರೆ 'ಮೈಸೂರು ಮಲ್ಲಿಗೆ'ಯಂಥ ಪ್ರಣಯಪ್ರಪಂಚದ, ಕೋಮಲ ಮನಸ್ಸಿನ ಭಾವುಕ ಕವಿ ಶ್ರೀ ಕೆ. ಎಸ್. ನ. ಅವನ್ನು 'ಶಿಲಾಲತೆ', 'ಮನೆಯಿಂದ ಮನೆಗೆ'ಗಳಂಥ ನವ್ಯ ಮನೋಧರ್ಮದ ಪ್ರತೀಕವೆನಿಸುವ ಕೃತಿಗಳ ಜ್ವಲಂತ ಕವಿಯಾಗಿ ಪರಿವರ್ತಿಸಿದ ಪ್ರಭಾವಗಳಲ್ಲಿ ವಿ. ಸೀ. ಅವರದೂ ಒಂದು. ಇದನ್ನು ಸ್ವಯಂ ಕೆ. ಎಸ್. ನ. ಅವರೇ ಒಪ್ಪುತ್ತಾರೆ.

ಆಧುನಿಕ ಸಾಹಿತ್ಯದಲ್ಲಿ ನವ್ಯತೆಗೆ ಮೊದಲು ಆಕರ್ಷಿತರಾಗಿ ಅದಕ್ಕೆ ಒಲಿದು, ಪ್ರೀತಿವಿಶ್ವಾಸಗಳಿಂದ ಅಭ್ಯಸಿಸಿ, ಕನ್ನಡದಲ್ಲಿಯೂ ಅಂಥದು ಬರಬೇಕೆಂದು ಹಾರೈಸಿದವರಲ್ಲಿ ವಿ. ಸೀ. ಮೊದಲನೆಯವರು. ಇಂಗ್ಲಿಷ್ ಮತ್ತು ಯೂರೋಪಿಯನ್ ಸಾಹಿತ್ಯವನ್ನು ಆಳವಾಗಿ ಅಭ್ಯಾಸ ಮಾಡಿರುವ ಕೆಲವೇ ಕನ್ನಡ ಸಾಹಿತಿಗಳಲ್ಲಿ ವಿ. ಸೀ. ಒಬ್ಬರು. ಕಳೆದ ಶತಮಾನದ ಕೊನೆಯ ದಶಕದಲ್ಲಿ ಆರಂಭವಾದ ಈ ನವ್ಯತೆಯ ಪ್ರಾಚುರ್ಯ ಈ ಶತಮಾನದ ಆರು-ಏಳನೆಯ ದಶಕದಲ್ಲಿ ಯಾವ ಮಜಲಲ್ಲಿ ನಿಂತಿದೆ, ಅದರ ಸೋಲು ಗೆಲವುಗಳೇನು ?— ಎಂಬುದನ್ನು ಅವರು ಬಲ್ಲರು. ಈ ನಡುವಣ ಅವಧಿಯಲ್ಲಿ ಹೊರಬಿದ್ದಿರುವ ಎಲ್ಲ ಮುಖ್ಯ ಸಾಹಿತ್ಯ ಕೃತಿಗಳನ್ನೂ ಅವರು ಅಭ್ಯಾಸ ಮಾಡಿದ್ದಾರೆ. ಅಂತೆಯೇ ಕನ್ನಡದಲ್ಲಿ ಅವರು ನವ್ಯ ಸಾಹಿತ್ಯವನ್ನೂ ಸ್ವಾಗತಿಸಿದ್ದಾರೆ. ಅನಿಯತ ಮುಕ್ತ--ಛಂದದಲ್ಲಿ ಹಲವು ಕವಿತೆಗಳನ್ನೂ ಅವರು ರಚಿಸಿದ್ದಾರೆ. ಕಾಲಕಾಲಕ್ಕೆ ಅದರ ಜಾಡು, ಬೆಳವಣಿಗೆ, ಒಲವು, ಪ್ರವೃತ್ತಿಗಳನ್ನು ಕುರಿತು ವಿಮರ್ಶಿಸಿದ್ದಾರೆ. ಇಷ್ಟಾದರೂ ನವ್ಯಸಾಹಿತ್ಯವನ್ನು ಕುರಿತಂತೆ ಅವರಿಗೆ ಒಲವಿಲ್ಲ—ಎಂಬ ಅಭಿಪ್ರಾಯ ಅಲ್ಲಲ್ಲಿ ಕೇಳಿಬರುವುದುಂಟು.

ವಿ. ಸೀ. ಅವರ ಅಸಹನೆ ನವ್ಯತೆಯನ್ನು ಕುರಿತಂತೆ ಅಲ್ಲ; ನವ್ಯತೆ ಎಂಬ ಹೆಸರಿನಲ್ಲಿ ನಮ್ಮ ದೇಶದ ಭಾಷಾ ಸಾಹಿತ್ಯಗಳಲ್ಲಿ ಹುಟ್ಟಿಕೊಳ್ಳುತ್ತಿರುವ ಕೃತಿಗಳ ಅರುಚಿ, ಅಶುಚಿ, ಅಪಕ್ವತೆಯನ್ನು ಕುರಿತುದು ಅವರ ಟೀಕೆ. ಮೇಧಾವಿಗಳೆನಿಸಿಕೊಂಡವರೂ ಜಾಳಾಗಿ, ಸಡಿಲವಾಗಿ ಮುಂದುವರಿಯುತ್ತಿರುವುದನ್ನು ಕಂಡು ಈ ಬಗೆಯ 'prostitution of talent and intelligence' ಅನ್ನು ಕುರಿತು ಮರುಕ. ಇಂಥವರ ಕೈಯಲ್ಲಿ ಕಾಲೇಜುಗಳ ವಿದ್ಯಾರ್ಥಿಗಳು ಸಿಕ್ಕಿದ್ದಾರೆ ಎಂಬುದು ಅವರಿಗೆ ವ್ಯಥೆ. 'They could achieve better things than this dirt and filth' ಎಂಬುದು ಅವರ ಆಕ್ಷೇಪ. 'Dirt, filth ಎಲ್ಲಿಲ್ಲ, ಎಂದಿರಲಿಲ್ಲ?'— ಎಂಬುದು ಅವರ ಪ್ರಶ್ನೆ.

ಇನ್ನೂ ಹಲವು ಬಗೆಯ 'ಬಂಧುಕೃತ್ಯ'ಗಳನ್ನು ವಿ. ಸೀ. ಹಲವಾರು ಸಾಹಿತಿಗಳಿಗೆ, ಸಾಹಿತಿಗಳಲ್ಲದವರಿಗೆ ಕೈಕೊಂಡಿರುವುದುಂಟು. ಸಮಕಾಲೀನ ಸಾಹಿತ್ಯ ಕೃತಿಗಳನ್ನು ಅವಲೋಕಿಸಬೇಕಾಗಿ ಬಂದಾಗ ಕಟುವಾಗಿ ವಿಮರ್ಶಿಸದೆ ಗುಣಗ್ರಹಣ ದೃಷ್ಟಿಯುಳ್ಳವರಾಗಿ ನಾಲ್ಕು ಒಳ್ಳೆಯ ಮಾತನ್ನು ಬರೆದು ಉತ್ತೇಜಿಸಿದ್ದಾರೆ; ಹಲವರ ಕೃತಿಗಳನ್ನು ಅಚ್ಚಿಗೆ ಅಣಿಮಾಡಿಕೊಟ್ಟಿದ್ದಾರೆ; ಪ್ರಕಟಿಸಲು ಪ್ರಕಟನಕಾರರಿಗೆ ಪರಿಚಯಿಸಿದ್ದಾರೆ; ಪ್ರೂಫ್ ತಿದ್ದಿ ಕೊಟ್ಟಿದ್ದಾರೆ (ಹಾಗೆ ತಿದ್ದಿದ್ದನ್ನು ಹಿಂದಿರುಗಿ ಕಳಿಸಲು ಕೈಯಿಂದ ತೆತ್ತಿರುವ ಅಂಚೆವೆಚ್ಚ ಸಣ್ಣ ಮೊತ್ತದ್ದೇನಲ್ಲ!); ಉತ್ತಮವಾದ್ದನ್ನು ಇಂಗ್ಲಿಷಿಗೆ ಭಾಷಾಂತರಿಸಿ ಹೊರನಾಡವರಿಗೆ ಪರಿಚಯ ಮಾಡಿಕೊಟ್ಟಿದ್ದಾರೆ; ಅನೇಕ ವೇದಿಕೆಗಳಲ್ಲಿ ಅವನ್ನು ಮೆಚ್ಚಿ ನುಡಿದಿದ್ದಾರೆ, ಬರೆದಿದ್ದಾರೆ; ಬಹುಮಾನ,ಪುರಸ್ಕಾರಗಳಿಗೆ, ವಿಶ್ರಾಂತಿವೇತನ ನೀಡಿಕೆಗೆ ಸಂಘ, ಸಂಸ್ಥೆ, ಅಕಾಡೆಮಿ, ಸರ್ಕಾರಗಳಿಗೆ ಶಿಫಾರಸು ಮಾಡಿದ್ದಾರೆ; ಸತ್ಕಾರ, ಗೌರವಾರ್ಪಣೆ ಇತ್ಯಾದಿ ನಡೆಸಲು ಪ್ರೋತ್ಸಾಹಿಸಿದ್ದಾರೆ. ಇದು ಸಾಮಾನ್ಯ ಉಪಕಾರವಲ್ಲ.

ನಾಡು ನುಡಿ ಸಂಸ್ಕೃತಿಗಳ ರಾಯಭಾರಿಯಂತೆ ಮೊದಲಿಂದ ವಿ. ಸೀ. ಶ್ರಮಿಸುತ್ತಿರುವ ಸಂಗತಿ ಸರ್ವವಿದಿತ. ಕನ್ನಡವನ್ನು ಕೇಳುವವರಿಲ್ಲದೆ ತಾತ್ಸಾರದಿಂದ ಕಾಣುತ್ತಿದ್ದ ಕಾಲದಲ್ಲಿ ಸ್ವಂತ ವೆಚ್ಚದಿಂದ ಮೈಸೂರು ರಾಜ್ಯದ ಮೂಲೆ ಮೂಲೆಗಳಲ್ಲಿ ಮಾತ್ರವಲ್ಲದೆ ನೆರೆಹೊರೆಯ ಪ್ರಾಂತಗಳಲ್ಲಿಯೂ ಸುತ್ತಾಡಿ ಪ್ರಚಾರೋಪನ್ಯಾಸಗಳನ್ನು ಕೊಟ್ಟು, ಸ್ನೇಹವರ್ಗವನ್ನು ಕಟ್ಟಿ, ಅಭಿಮಾನವನ್ನು ಬೆಳಸಿ ಕನ್ನಡಕ್ಕೊಂದು ಸ್ಥಾನಮಾನವನ್ನು ದೊರಕಿಸಿದ್ದಾರೆ. ಮದರಾಸಿನ 'ಹಿಂದೂ' ಪತ್ರಿಕೆಗೆ ಹತ್ತು–ಹನ್ನೆರಡು ವರ್ಷಕಾಲ ಪ್ರತಿವಾರ ತಪ್ಪದಂತೆ ನಿರಂತರವಾಗಿ ಕಾವ್ಯಾವಲೋಕನಕಾರರಾಗಿದ್ದ ವಿ. ಸೀ. ಕನ್ನಡ ಕೃತಿಗಳನ್ನು ಕೃತಿಕಾರರನ್ನು ಹೊರನಾಡವರಿಗೆಲ್ಲ ಪರಿಚಯ ಮಾಡಿಕೊಟ್ಟಿದ್ದಾರೆ. ನೆರೆಹೊರೆಯ ನಾಡುಗಳಿಂದ, ವಿದೇಶದಿಂದ ಬೆಂಗಳೂರಿಗೆ ಬಂದ ಸಾಹಿತಿಗಳು ಕಲೆಗಾರರು ವಿದ್ವಾಂಸರನ್ನು ಮನೆಗೆ ಆಮಂತ್ರಿಸಿ ಹತ್ತಿರದ ಹತ್ತು ಮಂದಿ ಮಿತ್ರರನ್ನು ಆಸಕ್ತಿಯುಳ್ಳವರನ್ನು ನೆರಸಿ ಪರಿಚಯ

ಮಾಡಿಕೊಡುವುದಲ್ಲದೆ ಅವರ ವಿಚಾರಧಾರೆಯನ್ನು ಅಭಿಪ್ರಾಯವನ್ನು ಕೇಳುವ ಅವಕಾಶ ಕಲ್ಪಿಸಿದ್ದಾರೆ. 5–6 ಸಂಪುಟಗಳಲ್ಲಿರುವ ಮಹಾಮಹೋಪಾಧ್ಯಾಯ ಡಾ॥ ಪಿ. ವಿ. ಕಾಣೆ ಅವರ 'ಭಾರತೀಯ ಧರ್ಮಶಾಸ್ತ್ರದ ಇತಿಹಾಸ' ಕೃತಿಯನ್ನು ಒಂದು ಸಂಪುಟ ಗಾತ್ರಕ್ಕೆ ಸಂಗ್ರಹಿಸಿ, ದೇಶದ ಎಲ್ಲ ಭಾಷೆಗಳಲ್ಲಿ ಅನುವಾದಿಸಿ, ಸರ್ಕಾರ ಸುಲಭ ಬೆಲೆಗೆ ದೊರಕಿಸುವಂತೆ ಮಾಡುವುದರ ಮೂಲಕ ಭಾರತೀಯ ಧರ್ಮ ಸಂಸ್ಕೃತಿಗಳ ತಿಳಿವಳಿಕೆಯನ್ನು ಎಲ್ಲರಿಗೆ ದೊರಕಿಸಿ ಕೊಡಬೇಕು ಎಂಬುದು ವಿ. ಸೀ. ಬಹುಕಾಲದಿಂದ ಕಾಣುತ್ತ ಬಂದಿರುವ ಕನಸುಗಳಲ್ಲಿ ಒಂದು. ಈ ಕನಸನ್ನು ನನಸಾಗಿಸಲು ಅವರು ಕೈಕೊಂಡಿರುವ ಪ್ರಯತ್ನ ಒಂದೆರಡಲ್ಲ. ಡಾ॥ ಕಾಣೆಯವರ ಅನುಮತಿಯನ್ನೂ ದೊರಕಿಸಿಕೊಂಡಿದ್ದಾರೆ. ಭಾರತೀಯ ಜ್ಞಾನಪೀಠ, ರಾಜ್ಯ–ಕೇಂದ್ರ ಸಾಹಿತ್ಯ ಅಕಾಡೆಮಿಗಳಂಥ ಸಂಘ ಸಂಸ್ಥೆಗಳಿಗೆ, ವಿಶ್ವವಿದ್ಯಾನಿಲಯಗಳಿಗೆ, ರಾಜ್ಯ–ಕೇಂದ್ರ ಸರ್ಕಾರಗಳ ಮಂತ್ರಿ ಮಹೋದಯರುಗಳಿಗೆ ವಿ. ಸೀ. ಬರೆದ ಪತ್ರಗಳಿಗೆ, ಮಾಡಿದ ಮನವಿಗಳಿಗೆ ಲೆಕ್ಕವಿಲ್ಲ. 'ದೊರೆಯುವರೆಗೆ ದೂರು' ಎಂಬಂತೆ ಕೊನೆಗೆ ಡಾ॥ ರಾಧಾಕೃಷ್ಣನ್ ಅವರು ಅಧ್ಯಕ್ಷರಾಗಿದ್ದಾಗ, ಅವರ ಗಮನಕ್ಕೂ ಇದನ್ನು ತಂದುದುಂಟು. ಆದರೂ ವಿ. ಸೀ. ಅವರ ಬಯಕೆ ಇನ್ನೂ ಈಡೇರ ದಾಗಿರುವುದು ದೇಶದ ಜನತೆಯ ಪಾಲಿಗೆ ದೊಡ್ಡ ನಷ್ಟವಾಗಿದೆ.

೬

ಬೆರಳು, ಮೊಳಕೈ ಮೇಲಿನ ಸ್ವಾಸ್ಥ್ಯ ಕುಂದಿ ವಿ. ಸೀ. ಯವರಿಗೆ ಹೇಳಿ ಬರೆಯಿಸುವ ಅಭ್ಯಾಸ ಬಂದಿದೆ. ಮೊದಮೊದಲ ದಿನಗಳಲ್ಲಿ ಗೆಳೆಯರಾದ ಶ್ರೀ ಎಸ್. ಮಂಜುನಾಥ್, ಶ್ರೀ ಸತ್ಯನಾರಾಯಣ, ರಾ. ವೆಂ. ಶ್ರೀನಿವಾಸ, ಶ್ರೀ ಕೆ. ರಾಜಾರಾವ್ ಮುಂತಾದವರೂ, ಅನಂತರದ ಕಾಲಗಳಲ್ಲಿ ಶ್ರೀ ಎಸ್. ಆರ್. ರಾಮಸ್ವಾಮಿ ಹಾಗೂ ವಿ. ಸೀ. ಅವರ ಮಕ್ಕಳೂ, ಅವರು ಹೊನ್ನಾವರದಲ್ಲಿದ್ದಾಗ ಗೆಳೆಯ ಶ್ರೀ ಕೆ. ಎಸ್. ಕಲ್ಲಾಪುರ್ ಅವರೂ ವಿ. ಸೀ. ಅವರಿಗೆ ಆ ಬಗೆಯ ನೆರವು ನೀಡಿದ್ದಾರೆ. ಈಚೆಗೆ ಅವನ್ನು ಬರೆದುಕೊಂಡು, ಬರೆದುದನ್ನು ತಿದ್ದಿಕೊಟ್ಟಾಗ ಅಚ್ಚಿನ ಮನೆಯವರ ಸೌಲಭ್ಯಕ್ಕೆ ಅಚ್ಚು ಪ್ರತಿಯೊಂದನ್ನು ತಯಾರಿಸುವ ಭಾಗ್ಯ ನನ್ನದಾಗಿದೆ. ಸರ್ ಎಂ. ವಿ. ಅವರ ಜೀವನ ಚರಿತ್ರೆ, ಪುರಂದರದಾಸರು, ಸತ್ಯ ಮತ್ತು ಮೌಲ್ಯ, ಸೀಕರಣೆ, ವಾಲ್ಮೀಕಿ ರಾಮಾಯಣ, ಶಾಕುಂತಲ ವಿಮರ್ಶೆಯ ಇಂಗ್ಲಿಷ್ ಅನುವಾದ, ಮಹಾಕವಿ ಪಂಪ ಕೃತಿಯ ಕನ್ನಡ ರೂಪಾಂತರ, ಭಾರತದ ಐವರು ಮಾನ್ಯರು (ಇಂಗ್ಲಿಷ್), ಮಹನೀಯರಲ್ಲಿ ಕೆಲವು ಭಾಗ, ಡಾ॥ ಡಿ. ವಿ. ಜಿ.ಯವರನ್ನು ಕುರಿತ ವ್ಯಕ್ತಿಚಿತ್ರ – ಕಾವ್ಯವಿಮರ್ಶೆ, ಕಾಲೇಜ್ ದಿನಗಳು ಇತ್ಯಾದಿ ಪಲ

ವನ್ನೂ ಮತ್ತು ಅಸಂಖ್ಯ ಬಿಡಿ ಲೇಖನಗಳನ್ನೂ–ವಿವಿಧ ವಿಷಯವಲ್ಲಿ–ಬರೆಯಿಸು ತ್ತಿದ್ದಾಗ ಅವರೊಡನೆ ಆ ಕೆಲಸದಲ್ಲಿ ಕಳೆದ ಪ್ರತಿದಿನವೂ ನನ್ನ ಪಾಲಿಗೆ ಒಂದು ಅವಿಸ್ಮರಣೀಯ ಅನುಭವವಾಗಿದೆ. ಆ ಒಂದೆರಡು ಗಂಟೆಯಲ್ಲಿಯೂ ಬಹುಪಾಲು ಸಮಯ ವಿಚಾರ ವಿನಿಮಯಕ್ಕೆ, ಹೇಳಿ ಬರೆಸುವ ವಿಷಯಕ್ಕೆ ನೇರ ಸಂಬಂಧಿಸದ ಚರ್ಚೆಗೆ, ಅಥವಾ ಅದಕ್ಕೆ ಪೂರಕವಾಗಿ ಅವರು ಎಂದೊ ಎಲ್ಲೊ ಓದಿದುದನ್ನು ನನಗೆ ಓದಿ ತೋರಿಸುವುದಕ್ಕೇ ವೆಚ್ಚವಾಗುತ್ತದೆ. ಇದರಿಂದಾಗಿ ಅವರು ಹೇಳಿ ಬರೆಸುವ ವಿಷಯ ಪಲವೇಳೆ ಅಲ್ಲಲ್ಲಿಗೇ ನಿಲ್ಲುವುದುಂಟು. 'ನನ್ನದೇನು ಮಹಾ, ಹಾಳಾಗಲಿ ಬಿಡಿ' ಎಂದೊ, 'ಇದಿಲ್ಲದೆ ಹೋದರೆ ಯಾವ ದೇವರು ಅಳುತ್ತಾರೆ? ಯಾರಿಗೆ ಯಾವ ನಷ್ಟ?' ಎಂದೊ, 'ಬಿಟ್ಟಲ್ಲೇ ಬಿದ್ದು ವಿಠಲಾಚಾರ್ಯ ಪುರಾಣ ಎಂಬಂತೆ ನನ್ನ ಬರವಣಿಗೆ, ಅದಕ್ಕೇನಂತೆ, ನಿಲ್ಲಿಸಿ ಪರವಾಗಿಲ್ಲ' ಎಂದೊ ಹೇಳಿ, ತಾವು ಬರೆಸುತ್ತಿದ್ದುದನ್ನು ಅಲ್ಲಿಗೇ ನಿಲ್ಲಿಸಿ, ಯಾವುದೊ ಒಂದು ಮಾತನ್ನೊ ಉಕ್ತಿಯನ್ನೊ ಭಾವವನ್ನೊ ವಿಷಯದ ನೆಲಸನ್ನೊ ಎತ್ತಿಕೊಂಡು ಮಾತು ಬೆಳಸಿ, ಅದರ ಪೂರ್ವಾಪರಗಳನ್ನು ವಿವರಿಸಿ, ಆ ಬಗೆಗೆ ಯಾರು ಯಾರು ಹೇಗೆ ಅಭಿಪ್ರಾಯ ಸೂಚಿಸಿದ್ದಾರೆ, ಅವರಲ್ಲಿ ಇವರ ಸಮ್ಮತಿ ಯಾವುದಕ್ಕೆ, ಏಕೆ–ಎಂದು ತಿಳಿಸಿ, ಯಾವುದೊ ಪುಸ್ತಕದಿಂದಲೊ ಅಥವಾ ಪತ್ರಿಕೆಯಿಂದಲೊ ಹೆಚ್ಚಿನ ಮಾಹಿತಿಯನ್ನು ಓದಿ ತೋರಿಸಿ, ಆ ಬರವಣಿಗೆಯ ಗುಣಪ್ರಶಂಸೆಗೆ ತೊಡಗಿ, ಪುನಃ ಮೊದಲು ಹೇಳಿ ಬರೆಸುತ್ತಿದ್ದಲ್ಲಿಗೆ ಹಿಂದಿರುಗಿ ಬರುವ ಹೊತ್ತಿಗೆ ಸುಮಾರು ಮುಕ್ಕಾಲು ಗಂಟೆಯೇ ಸರಿದಿರುತ್ತದೆ. ಆದರೆ, ಅದೆಷ್ಟು ಬೇಗ ಹಾಗೆ ಸರಿಯಿತು ಎಂಬುದರ ಅರಿವು ಸಹ ಮೂಡದಷ್ಟು ರಸಮಯವಾಗಿ, ರಂಜಿತವಾಗಿ ಮಾತು ಸಾಗಿರುತ್ತದೆ. ಇದರಿಂದ ಅವರ ಕೆಲಸ ಕುಂಠಿತವಾದರೂ ವಿಷಯದ, ವಸ್ತುಸತ್ವದ ಅದೆಷ್ಟು ಮುಖಗಳು, ಸೃಷ್ಟಿ, ರೀತಿ, ನೀತಿ, ವ್ಯತ್ಯಾಸಗಳು, ಇತಿಮಿತಿಗಳು, ಅರ್ಥವೌಲ್ಯಗಳು ದೃಗ್ಗೋಚರವಾಗಿ, ಒಟ್ಟು ಜ್ಞಾನಪ್ರಪಂಚದ ಆಳವಿಸ್ತಾರ ಉನ್ನತಿಗಳ ಪರಿಚಯ ನನಗಾಗುವಂತಾಗಿ ಒಂದು ಮಹೋಪಕಾರವೇ ಆಗುತ್ತಿರುತ್ತದೆ. ವಿಷಯದ ಬಹುಮುಖ ದರ್ಶನವೇ ಕಣ್ಮುಂದೆ ಕಟ್ಟಿದಂತಾಗುತ್ತದೆ. ರಾಮಾಯಣ, ಪಂಪ, ಶಾಕುಂತಲ ಇವೇ ಮೊದಲಾದ ಅವರ ವಿಮರ್ಶನ ಕೃತಿಗಳ ರೂಪಾಂತರ ಕಾರ್ಯದಲ್ಲಿ ನೆರವಾದಾಗ ವಾಲ್ಮೀಕಿ, ಪಂಪ ಮತ್ತು ಕಾಳಿದಾಸರ ಕಾವ್ಯಗಳ ಪೂರ್ತಿ ಪರಿಚಯವನ್ನೇ ಅವರು ಒದಗಿಸಿದರೆನ್ನಬೇಕು. ಆ ಕೃತಿಗಳಲ್ಲಿ ಅವರು ಹೆಜ್ಜೆಹೆಜ್ಜೆಗೂ ಕಾಣಿಸಿದ ಅರ್ಥವೌಲ್ಯ, ಪಾತ್ರಗಳ ಹಿರಿಮೆ, ರಚನಾ ಸುಭಗತೆ, ಉಕ್ತಿವಿಲಾಸ, ಛಂದೋವೈವಿಧ್ಯ, ಪದಲಾಲಿತ್ಯ, ಕಾವ್ಯಸೌಂದರ್ಯ– ಇವನ್ನು ವ್ಯಕ್ತಪಡಿಸುವ ಅವರ ರೀತಿ ನನ್ನ ನುಡಿಗೆ ನಿಲುಕದ್ದು; ಅನುಭವದ ಸವಿನೆನಪು ಮರೆಯಲಾಗದ್ದು.

ವಿ. ಸೀ. ಅವರು ಹೇಳಿ ಬರೆಸುವ ವಿಧಾನವೂ ಒಂದು ಕಲೆಗಾರಿಕೆಯೇ. ಅವರ

ಸಿದ್ಧಿ 'ದೈವಾನುಗ್ರಹ'ದಿಂದ ಎನ್ನಬಹುದು; ದೈವವಾದದಲ್ಲಿ ನಂಬಿಕೆ ಇಲ್ಲದೆ ಜನ್ಮಾಂತರಗಳಲ್ಲಿ ವಿಶ್ವಾಸವಿದ್ದಲ್ಲಿ ಯಾವುದೊ 'ಪೂರ್ವ ಜನ್ಮದ ಸಂಸ್ಕಾರ'ದಿಂದ ಸಿದ್ಧಿಸಿದುದು ಎನ್ನಬಹುದು. ಇವೆರಡು ವಾದದಲ್ಲಿಯೂ–ಇವೆರಡು ಮಾತ್ರವೇಕೆ? ಮಾನವತೆಯೊಂದನ್ನು ಬಿಟ್ಟು ಇನ್ನಾವುದರಲ್ಲಿಯೂ–ಅವರಿಗೆ ಗಟ್ಟಿ ವಿಶ್ವಾಸವಿಲ್ಲ ವೆಂಬುದು ನನಗೆ ತಿಳಿದಿರುವ ಸಂಗತಿಯೇ. ಆದರೂ ಅವರ ಆ ಕಲೆಗಾರಿಕೆಯನ್ನು ಕಂಡಾಗ ಬೇರೆ ಹೇಗೆ ನಿರ್ದೇಶಿಸುವುದೊ ತಿಳಿಯದಾಗುತ್ತದೆ. ಸಾಮಾನ್ಯವಾಗಿ ಬೆಳಿಗ್ಗೆ ಒಂದು–ಒಂದೂವರೆ ಗಂಟೆಯ ಕಾಲ, ಸಂಜೆ ಇನ್ನಷ್ಟು ಹೊತ್ತು ಅವರು ಹೇಳಿ ಬರೆಸುವುದು ಪದ್ಧತಿ. ವಿಷಯ ಯಾವುದಾದರೂ ಆಗಬಹುದು. ಬರೆದು ಕೊಳ್ಳಲು ಕುಳಿತರೆ ಸಾಕು, ಯಾವುದೇ ಪೂರ್ವಸಿದ್ಧತೆ, ಅಭ್ಯಾಸ, ವ್ಯಾಸಂಗ, ಚಿಂತನೆಗಳೂ ಇಲ್ಲದೆ ತಕ್ಷಣದ ಸ್ಫೂರ್ತಿಯಿಂದ ಎಂಬಂತೆ ವಿ. ಸೀ. ಪುಟಗಟ್ಟಲೆ ಹೇಳಿ ಬರೆಸಲು ತೊಡಗುತ್ತಾರೆ! ಏರಿಲ್ಲದೆ ತಗ್ಗಿಲ್ಲದೆ, ಅಡೆತಡೆಯಿಲ್ಲದೆ, ಒಂದೇ ದನಿ ಯಲ್ಲಿ ಸುಸ್ಪಷ್ಟವಾಗಿ, ಕ್ರಮವಾಗಿ, ಸುವ್ಯವಸ್ಥಿತವಾಗಿ ಬರೆಯಿಸುವುದನ್ನು ಬರೆದು ಕೊಳ್ಳುವಾಗೆಲ್ಲ ನಾನು ವಿಸ್ಮಯಗೊಂಡಿದ್ದೇನೆ; ಅವರ ಆ ಅದ್ಭುತ ಸೃಜನಶೀಲ ತೆಗೆ, ಸ್ಮೃತಿಶಕ್ತಿಗೆ ಅಚ್ಚರಿಗೊಂಡಿದ್ದೇನೆ: ಅವರಲ್ಲಿ ಎಷ್ಟು ವಿಷಯ ಸಂಗ್ರಹ ವಾಗಿದೆಯೊ ಎನ್ನುವಷ್ಟು, ಅವರ ತಲೆ ಒಂದು ವಿಶ್ವಕೋಶವೇ ಆಗಿದೆಯೊ ಎನ್ನುವಷ್ಟು.

'ಬಂದಾಗ ನೀ ಬರುವೆ
ಹೋದಾಗ ಹೋಗುವೆ
ನಿನ್ನ ಮೇಲಧಿಕಾರ
ವಿಲ್ಲವೆನಗೆ'

ಎಂದು ಅವರೇ ಕಾವ್ಯದೇವಿಯನ್ನು ಕುರಿತು ಹಾಡಿದ್ದಾರಾದರೂ ತಮ್ಮ ಆ ಮಾತಿಗೆ ತಾವೇ ಅಪವಾದ ಎಂಬಂತಿದ್ದಾರೆ. ತಾವು ಬರೆಸಲಿರುವ ಲೇಖನ ಅಥವಾ ಕೃತಿಯ ಬಗೆಗೆ ಯೋಚಿಸಲಾಗಲಿ, ಅಭ್ಯಾಸ ನಡೆಸಲಾಗಲಿ ಸಮಯವಾದರೂ ಯಾವಾಗ ?– ವಾಯುವಿಹಾರಕ್ಕೆಂದು ಹೊರಟಾಗಿನ ಒಂದೆರಡು ಗಂಟೆಗಳ ಅವಧಿ ಯನ್ನು ಬಿಟ್ಟರೆ – ಎಂಬುದು ಇಂದಿಗೂ ನನಗೆ ಪ್ರಶ್ನಾರ್ಥಕವಾಗಿಯೇ ಉಳಿದಿದೆ. ಎಲ್ಲವನ್ನೂ ಬಲ್ಲವರಿಗೆ, ಬಲ್ಲುದನ್ನು ತಿಳಿಯಹೇಳುವ ಕಲೆಯನ್ನು ಸಾಧಿಸಿಕೊಂಡವ ರಿಗೆ ಅಂಥ ಪೂರ್ವಸಿದ್ಧತೆಯಾದರೂ ಏಕೆ ಬೇಕು ? ನುಡಿವಾಗ, ನಡೆವಾಗ, ಕುಳಿ ತಾಗ, ನಿಂತಾಗ–ಅಷ್ಟೇಕೆ ತಮ್ಮ ಬದುಕನ್ನೇ ಆಲೋಚನೆಗೆ, ಕಲೆ ಸಾಹಿತ್ಯಗಳಿಗೆ ಮುಡಿಪು ಮಾಡಿಕೊಂಡವರಲ್ಲವೆ ಅವರು ?–ಎನಿಸುತ್ತದೆ. ಇದನ್ನು ದೈವಾನುಗ್ರಹ ಎನ್ನದೆ ಬೇರೆ ಏನೆಂದು ನಿರ್ದೇಶಿಸಬಹುದು ?

ಅವರು ಹೇಳಿ ಬರೆಸುವುದರ ಬಗೆಗೆ ಸಂಬಂಧಿಸಿದಂತೆ ಇನ್ನೊಂದು ಸಂಗತಿ ಯನ್ನು ತಿಳಿಸಲೇಬೇಕೆನ್ನಿಸುತ್ತದೆ. ಒಂದು–ಒಂದೂವರೆ ಗಂಟೆ ಬೆಳಿಗ್ಗೆ ಅಥವಾ ಸಂಜೆ

ನನ್ನ ಅಥವಾ ನನ್ನ ಸಹೋದರನ ನೆರವು ಅವರಿಗೆ ದೊರೆಯುತ್ತಿದೆ. ಶನಿವಾರ–ಭಾನುವಾರಗಳಂಥ ಬಿಡುವಿನ ದಿನಗಳಲ್ಲಿ ಇನ್ನೊಂದರ್ಧ ಗಂಟೆ ಹೆಚ್ಚಿನ ಅವಕಾಶ ದೊರೆಯುವುದು. ಈ ಅವಧಿಯಲ್ಲಿಯೇ ಅವರ ಎಲ್ಲ ಸಾಹಿತ್ಯಕೃಷಿ ನಡೆಯಬೇಕು. ಮುಂದುವರಿಯಬೇಕು. ಅದರಲ್ಲಿ ಮೊದಲ ಐದು ಹತ್ತು ನಿಮಿಷ ಲೋಕಾಭಿರಾಮ ಸಂಭಾಷಣೆ; ಆನಂತರ ಹಿಂದಿನ ದಿನ ನಿಲ್ಲಿಸಿದ್ದಲ್ಲಿಂದ ಮುಂದಕ್ಕೆ ಹೇಳಿ ಬರೆಸಲು ತೊಡಗುತ್ತಾರೆ. 5–10 ಸಾಲು ಅಥವಾ ಹೆಚ್ಚೆಂದರೆ ಒಂದು ಪುಟ ಹೇಳಿ ಬರೆಸುವಷ್ಟರಲ್ಲಿ ಒಳಗಿನಿಂದ ಬೆಳಗಿನ ಉಪಾಹಾರ, ಕಾಫಿ ಸಿದ್ಧವಾಗಿ ಬರುತ್ತದೆ. ಶ್ರೀಮತಿಯವರ ಪ್ರವೇಶವಾದೊಡನೆಯೇ 'ಷುರುವಾಯ್ತಲ್ಲಪ್ಪ ಇನ್ನು' ಎಂದು–ನನಗೆ ಮಾತ್ರ ಕೇಳಿಸುವಂತೆ–ನುಡಿದು, ಶ್ರೀಮತಿಯವರನ್ನು ಪ್ರಸನ್ನಗೊಳಿಸುವ ಸಂಭಾಷಣೆಗೆ ಮನಸ್ಸು ಕೊಡುತ್ತಾರೆ. (ಶ್ರೀಮತಿಯವರ ಆರೋಗ್ಯಸ್ಥಿತಿ ಈಚೆಗೆ ಅಷ್ಟಕ್ಕಷ್ಟೇ ಆಗಿರುವುದು ಅವರಿಗೆ ದೊಡ್ಡ ಕೊರಗಿನ, ಯೋಚನೆಯ ಸಂಗತಿಯಾಗಿದೆ.)

ಮಾತು ಮುಗಿಯುವ ವೇಳೆಗೆ ತಿಂಡಿ ತಿಂದು ಕಾಫಿ ಕುಡಿದಾಗಿರುತ್ತದೆ. ಹಿಂದೆ ಬರೆಸುತ್ತ ಹೇಳಿ ನಿಲ್ಲಿಸಿದ್ದ ಕೊನೆಯ ಸಾಲನ್ನೊ ಶಬ್ದವನ್ನೊ ಅವರೇ ನೋಡದಿದ್ದರೂ ಯಥಾವತ್ತಾಗಿ ಇನ್ನೊಮ್ಮೆ ಹೇಳಿ—ಅದು ಹೇಗೆ ನೆನಪಿರಿಸಿಕೊಂಡಿರುತ್ತಾರೊ !—'ಏನಾಗಿತ್ತಪ್ಪ?' ಎಂದು ಪ್ರಶ್ನಿಸುತ್ತಾರೆ. 'ಅಷ್ಟೇ, ಅಲ್ಲಿಗೇ ನಿಂತಿತ್ತು' ಎಂದು ಆ ಸಾಲನ್ನೊ ಪದವನ್ನೊ ಓದಿದರೆ, 'ಹೌದೆ, Good' ಎಂದುಕೊಂಡು 'ಮುಂದಕ್ಕೇನು, ನನ್ನ ತಲೆ, ಅಷ್ಟೆ!' ಎನ್ನುತ್ತಾರೆ ಅರೆನಗುತ್ತ. ಅಂಗೈಯಿಂದ ಒಮ್ಮೆ ತಲೆಯ ಹಿಂಭಾಗವನ್ನು ಸವರಿಕೊಂಡು, ಅಥವಾ ಒಂದೆರಡು ಕ್ಷಣ ಕಣ್ಣೆರಡನ್ನೂ ಮುಚ್ಚಿಕೊಂಡು ಹುಬ್ಬಿನ ನಡುವೆಯ ಮೂಗಿನ ಮೇಲುತುದಿಯನ್ನು ಕೈಬೆರಳೆರಡರ ನಡುವೆ ಒತ್ತಿ ಹಿಡಿದು ಮುಂದುವರಿಸುತ್ತಾರೆ. ಮುಂದಿನ ಹತ್ತು ಹದಿನೈದು ನಿಮಿಷ ನದಿಯಲ್ಲಿ ನೀರು ಹರಿವಂತೆ ಒಂದೇ ಗತಿಯಲ್ಲಿ ಬರೆಸುತ್ತಾ ಹೋಗುತ್ತಾರೆ. ಅಷ್ಟರಲ್ಲಿ ಯಾವುದಾದರೊಂದು ಪದ. ವಾಕ್ಯ ಹೇಳುತ್ತಿದ್ದರೆ ಅದರ ಸೆಳೆಗೆ ಸಿಕ್ಕುತ್ತಾರೆ. ಅಲ್ಲಿಗೊಂದು ಅಲ್ಪವಿರಾಮ. ಆ ಪದ ಅಥವಾ ವಾಕ್ಯದ ವ್ಯಾಖ್ಯಾನ ಮೊದಲಾಗುತ್ತದೆ. ಉದಾ. ಕು ಸು ಮೆ ಯು ಳ್ಳ ದ್ದು (ನಿಂಬೆಯಲ್ಲಿನಂತೆ); 'ಈಳಿ' ಇರುವುದರಿಂದಲೇ ಕಿತ್ತೀಳೆ, ನೇರೀಳೆ, ಪೇರೀಳೆ, ಹೇರೀಳೆ ಎಂದಾಗಿರುವುದು. ಬ್ರಹ್ಮಾಂಡ, ವಿಶ್ವ, ಜಗತ್ತು, ಪ್ರಪಂಚ, ಲೋಕ, ಸಂಸಾರ ಎಂಬವೊ ಧೀರ, ಶೂರ, ಅಘಟ, ಪರಾಕ್ರಮಿ. ಸಾಹಸಿ ಎಂಬವೊ (ಬೇರೆ ಬೇರೆ ಅರ್ಥವ್ಯಾಪ್ತಿಯುಳ್ಳದ್ದು;) ಅವುಗಳ ಅರ್ಥಗಳನ್ನು ನಿಶ್ಚಯಿಸಿಕೊಳ್ಳಬೇಕು; ಪದಗಳ ಅರ್ಥವ್ಯಾಪ್ತಿ ತಿಳಿಯದೆ ಅವನ್ನು ಉಪಯೋಗಿಸಬಾರದು–ಎನ್ನುವರು. ಅಥವಾ, ಇನ್ನೇನೊ ನೆನಪು; ಅದಕ್ಕೆ ಸಂಬಂಧಿಸಿದಂತೆ ಅನುಭವದ ಸುರುಳಿ.... ಇದಾದ ಮೇಲೆ ಪುನಃ ಬರೆಸುವಿಕೆ ಮುಂದುವರಿಯುತ್ತದೆ.

ಅಷ್ಟರಲ್ಲಿ ಯಾರಾದರೂ ಪರಿಚಿತರೊ ಅಪರಿಚಿತರೊ ಆಗಮಿಸುತ್ತಾರೆ. 'ಬನ್ನಿ'

ಎಂದು ನುಡಿದು ಸ್ವಾಗತಿಸಿ ಅವರು ಬಂದ ಬಗೆಗೆ ವಿಚಾರಣೆ; ನನ್ನತ್ತ ತಿರುಗಿ 'ಒಳಗೆ ಒಂದು ಲೋಟಾ ಕಾಫಿ ಏನಾದರೂ ಇದೆಯೇನು ವಿಚಾರಿಸಿ' ಎಂದು ಪಿಸುನುಡಿದು, ಅಥವಾ ಅವರ ಮಕ್ಕಳಲ್ಲಿ ಯಾರನ್ನಾದರೂ ಕರೆದು, ಅಥವಾ 'ನೋಡೂ........' ಎಂದು ಶ್ರೀಮತಿಯವರನ್ನು ಕೂಗಿಯೊ. ತಾವೇ ಒಂದು ನಿಮಿಷ ಎದ್ದು ಒಳಗೆ ಹೋಗಿ ಬಂದೊ ಸಂಭಾಷಣೆಗೆ ತೊಡಗುವುದು. ಆ ಸಂಭಾಷಣೆ ಕೆಲವೇಳೆ 5–10 ನಿಮಿಷಕ್ಕೆ ಮುಗಿಯುವುದುಂಟು; ಇಲ್ಲವಾದರೆ ಒಂದು ಗಂಟೆಯವರೆಗೆ ಮುಂದು ವರಿಯುವುದೂ ಉಂಟು. ಜೇಗ ಮುಗಿದರೊ: 'Continuity ಹೋಯ್ತಲ್ಲಪ್ಪ' ಎಂದು ನುಡಿದು ಬೋಳುತಲೆಯ ಹಿಂಭಾಗವನ್ನು ಕೈಯಿಂದ ಸವರಿಕೊಳ್ಳುತ್ತ ಕಳಚಿಕೊಂಡ ಕೊಂಡಿಯನ್ನು ಹೊಸದಾಗಿ ಸೇರಿಸುವ ಪ್ರಯತ್ನ: dictation ಪ್ರಾರಂಭಿಸುವುದು. ಪ್ರಾರಂಭಿಸಿದ ಹತ್ತು ನಿಮಿಷದಲ್ಲಿ ನನ್ನ ಅಂದಿನ ಅಲ್ಲಿಯ ಸಮಯಕ್ಕೆ ಮುಕ್ತಾಯ ಒದಗಿ ಬಂದಿತೆಂಬಂತೆ ಜೀವನೋಪಾಯಕ್ಕಾಗಿ ಅವಲಂಬಿ ಸಿರುವ ನನ್ನ ಕೆಲಸಕ್ಕೆ ಹೊತ್ತಾಗುತ್ತದೆ; ಇನ್ನೇನು ಆ ಬಗೆಗೆ ಅವರಿಗೊಮ್ಮೆ ಸೂಚನೆ ನೀಡಬೇಕು ಎಂದುಕೊಳ್ಳುತ್ತಿರುವಂತೆಯೇ ಅವರೇ ಅರಿತವರಂತೆ "ನಿಮಗೆ ಹೊತ್ತಾಯ್ತೇನೊ; time ಎಷ್ಟಾಯ್ತು; ನಿಲ್ಲಿಸಿ; Get along", ಎಂದು ಮುಕ್ತಾಯ ಹಾಡುವುದು. ಹಾಗಿಲ್ಲದೆ, ಬಂದವರು ತುಂಬ ಹೊತ್ತು ಸಂಭಾಷಣೆಗೆ ತೊಡಗುವರೆಂದು ತಿಳಿದರೊ ಹತ್ತು ನಿಮಿಷ ಕಾದು, ಬರೆಸುತ್ತಿದ್ದುದನ್ನು ಅಲ್ಲಿಗೇ ಆ ದಿನ ನಿಲ್ಲಿಸುವುದು. ಮತ್ತೆ ಬರೆವಣಿಗೆ ಮುಂದುವರಿಯುವುದು ಮಾರನೆಯ ದಿನವೇ. ಅಥವಾ, ಮೂರನೆಯ ದಿನ. ಮೂರನೆಯ ದಿನ. ಅಥವಾ, ಬಂದದಿನ, ಬರೆದುಕೊಳ್ಳಲು ಕುಳಿತ ದಿನ ಮುಂದುವರಿಯುತ್ತದೆ. ಮುಖ್ಯ ಸಂಗತಿ ಎಂದರೆ, ಹಾಗೆ ತಪ್ಪಿಸಿಕೊಂಡುದಕ್ಕಾಗಲಿ, ಅವರ ಬರವಣಿಗೆ ಅದರಿಂದ ಅರ್ಧಕ್ಕೆ ನಿಂತು ದಕ್ಕಾಗಲಿ ಈ 8–10 ವರ್ಷಗಳಲ್ಲಿ ಒಂದು ದಿನವಾದರೂ ಅವರು ಪ್ರಶ್ನಿಸಿಲ್ಲ, ವಿಚಾರಿಸಿಲ್ಲ, ಗೊಣಗಿಲ್ಲ; ಬದಲಾಗಿ, 'I am exploiting you people; I have no right to do so' ಎನ್ನುತ್ತಿರುತ್ತಾರೆ. ಕ್ರಮ ತಪ್ಪದಂತೆ ದಿನವೂ ಬರುತ್ತಿದ್ದು ಯಾವ ಸುದ್ದಿಯೂ ಇಲ್ಲದೆ ಅನಿರೀಕ್ಷಿತವಾಗಿ ನಾಲ್ಕೈದು ದಿನಕ್ಕೂ ಹೆಚ್ಚು ತಪ್ಪಿಸಿ ಕೊಂಡ ಕೆಲವು ಸಂದರ್ಭಗಳಲ್ಲಿ ಆರೋಗ್ಯ ಸರಿಯಿಲ್ಲವೇನೊ ಎಂದುಕೊಂಡು, ಎಷ್ಟೋ ಸಲ ಯಾರ ಕೈಲಾದರೂ ಹೇಳಿಕಳುಹಿಸಿ ವಿಚಾರಿಸುತ್ತಾರೆ. ಅಥವಾ, ವಾಯುವಿಹಾರದ ಸಮಯದಲ್ಲಿ ಐದು ನಿಮಿಷ ವಿಶ್ವಾಸ ನಡೆಸಿ ಮನೆಯವರೆಗೂ ಬಂದು ಆರೋಗ್ಯ ವಿಚಾರಿಸಿ, ಎರಡು ನಿಮಿಷ ಕುಳಿತಿದ್ದು, ತಮ್ಮ ಅನಿರೀಕ್ಷಿತ ಆಗಮನದಿಂದಲೇ ನನ್ನಲ್ಲಿ ಧೈರ್ಯೋತ್ಸಾಹಗಳನ್ನು ತುಂಬಿ ಹೋಗಿರುವುದುಂಟು. ಇದು ಎಷ್ಟೋ ಸಲ ನನ್ನನ್ನು ನನ್ನ ಸೋಮಾರಿತನ, ಆಲಸ ಸ್ವಭಾವಗಳಿಗಾಗಿ ನಾಚುವಂತೆ ಮಾಡಿದೆ.

ಹೀಗೆ ಹೇಳಿ ಬರೆಸುವ ಅಭ್ಯಾಸವಿಟ್ಟುಕೊಂಡಿರುವುದರಿಂದ ವಿ. ಸೀ. ಅವರ

ಲೇಖನಗಳಲ್ಲಿ, ಸಾಹಿತ್ಯ ಕೃತಿಗಳಲ್ಲಿ ಆಗೊಮ್ಮೆ ಈಗೊಮ್ಮೆ ನ್ಯೂನತೆಗಳು ಕಾಣಿಸಿ ಕೊಂಡಿರುವುದುಂಟು. ಅವರೇ ಹೇಳುವಂತೆ ಹಲವೇಳೆ 'Continuity' ಇಲ್ಲದೆ ಹೋಗುವುದುಂಟು; ವಿಷಯದ ನೆಲಸು ಮತ್ತು ನಿರೂಪಣೆಯಲ್ಲಿ ಹಾಳತ, ಅಡಕ ಬಾರದೆ ಹೋಗುವುದುಂಟು; ಜಾಳು ಕಾಣಿಸಿಕೊಳ್ಳುವುದುಂಟು; ಪುನರುಕ್ತಿಗಳು ಕಾಣಿಸಿಕೊಳ್ಳುವುದುಂಟು; ವಿಷಯ ಕಲಸಿಕೊಳ್ಳುವುದೂ, ಕೆಲವೇಳೆ ಅನವಶ್ಯಕವಾಗಿ ಅಥವಾ ಪ್ರಮಾಣ ತಪ್ಪಿ ಬೆಳೆಯುವುದುಂಟು. ಬರೆಸಿದುದು ಪೂರ್ಣವಾದ ಮೇಲೆ ಅಚ್ಚಿನ ಮನೆಗೆ ಕಳುಹಿಸುವ ಮೊದಲು ಎಚ್ಚರಿಕೆಯಿಂದ ಲೇಖನವನ್ನು ಎರಡೆರಡು ಬಾರಿ ಪರಿಶೀಲಿಸಿದರೂ ಆ ಬಗೆಯ ಹೆಚ್ಚಿನ ಶ್ರಮ ಬೇಕಾಗುತ್ತದೆ. ಆ ಶ್ರಮವನ್ನು ಅದು ಅವರಿಗೆ ಒದಗಿಸುವುದರ ಜೊತೆಗೆ ಎಷ್ಟೇ ಎಚ್ಚರಿಕೆಯಿಂದ ಪರಿಶೀಲಿಸಿದರೂ ದೋಷಗಳು ಅಲ್ಲಲ್ಲಿ ಉಳಿದುಬಿಡುವುದುಂಟು. ಸಾಲದುದಕ್ಕೆ ಹೇಳಿ ಬರೆಸುವಾಗ ಕೆಲವೊಮ್ಮೆ ಸರಿಯಾಗಿ ಕೇಳಿಸದೆಯೊ, ಅರ್ಥವಾಗದೆಯೊ, ಗೊತ್ತಾಗದೆಯೊ, ವೇಗವಾಗಿ ಬರೆದುಕೊಳ್ಳಬೇಕಾದಾಗ ಕೈತಪ್ಪಿಯೊ ಶಬ್ದಗಳು, ಸಾಲುಗಳು ಬಿಟ್ಟು ಹೋಗುವುದುಂಟು; ತಪ್ಪಾಗುವುದುಂಟು. ಇದರಿಂದಾಗಿ ರಚನೆ ಶಿಥಿಲವಾಗುವುದೂ ಉಂಟು. ತಿದ್ದಿಕೊಟ್ಟ ನಂತರ ಉತ್ತಮ ಪ್ರತಿ ತಯಾರಿಕೆಯ ಘಟ್ಟದಲ್ಲಿಯೂ ನನ್ನ ಅರೆ ತಿಳಿವಳಿಕೆಯಿಂದಾಗಿ ಎಷ್ಟೋ ದೋಷಗಳು ನುಸುಳಿಕೊಳ್ಳುವುದುಂಟು. ಇಷ್ಟೆಲ್ಲ ತ್ರಾಸದ ಜೊತೆಗೆ ಉತ್ತಮ ಪ್ರತಿ ತಯಾರಿಸುವುದರಲ್ಲಿ ಆಗಾಗ ಅನವಶ್ಯವಾದ ತಡೆಯೊದಗುವುದೂ ಉಂಟು. ಅವರ ಒಂದೆರಡು ಕೃತಿಗಳ ಉತ್ತಮ ಪ್ರತಿ ತಯಾರಿಸಲು 2–3 ವರ್ಷಗಳಿಗಿಂತ ಹೆಚ್ಚಿಗೆ ಕಾಲ ತೆಗೆದುಕೊಂಡರೂ ಇನ್ನೂ ಮುಗಿಸಿ ಕೊಡಲಾಗದಿದ್ದರೂ ಇದುವರೆಗೆ ಒಂದು ದಿನವಾದರೂ ಆ ಬಗೆಗೆ ಅವರು ಒಂದು ಮಾತನ್ನಾದರೂ ಕಟುವಾಗಿ ನುಡಿಯದಿರುವುದು, ಅನಾದರದಿಂದ ಕಾಣದೆ ಒಂದೇ ಬಗೆಯ ಪ್ರೀತಿವಿಶ್ವಾಸಗಳಿಂದ ಕಾಣುತ್ತಿರುವುದನ್ನು ನೆನೆದು ಏನೆಂದು ಹೇಳುವುದು ?

## ೭

ವಿ. ಸೀ. ಅವರು ಹೊನ್ನಾವರದ ಕಾಲೇಜಿನಲ್ಲಿ ಪ್ರಿನ್ಸಿಪಲ್ ಆಗಿದ್ದಾಗ ಕಡಲ ತಡಿಯಲ್ಲಿರುವ ಆ ಊರಿನಲ್ಲಿ ಅವರೊಡನೆ ಹತ್ತು ದಿನ ಉಳಿಯುವ, ಕಳೆಯುವ ಅವಕಾಶ ಉಂಟಾಗಿತ್ತು. ಅಂಥ ಸೌಂದರ್ಯೋಪಾಸಕರೊಡನೆ ಅಲ್ಲಿನ ನಿಸರ್ಗ ರಮಣೀಯತೆಯನ್ನು ಕಾಣುವ, ಕಂಡು ಆನಂದಿಸುವ, ಅಲ್ಲಿಂದ ಗೋಕರ್ಣ ಕಾರವಾರಗಳನ್ನು ನೋಡಿ ಬರುವ ಸುಯೋಗ ಅದು. ಶ್ರೀ ಕಾರಂತರ ಅಭಿನಂದನ ಸಮಾರಂಭಕ್ಕೆಂದು ಉಡುಪಿಗೆ ಹೋದಾಗ ಅವರ ಜೊತೆಗೆ ನಾನೂ ಹೋಗಿದ್ದೆ.

ಘಟ್ಟ ಸಾಲಿನ ರಸ್ತೆಯಲ್ಲಿ ಹೆಜ್ಜೆ ಹೆಜ್ಜೆಗೂ ಆ ಸ್ಥಳ ತಮಗೆ ಚಿರಪರಿಚಿತ ಎಂಬಂತೆ ವಿವರಣೆ ನೀಡುತ್ತ, ಉಡುಪಿಯಿಂದ ಮಣಿಪಾಲ, ಕಾರ್ಕಳ–ಹಿಂದಿರುಗುವಾಗ ಆಗುಂಬೆ, ಭದ್ರಾಜಲಾಶಯಗಳನ್ನು ಕಾಣಿಸಿದುದೂ ಮರೆಯಲಾಗದ್ದು. ಒಂದೆರಡು ಸಲ ಮೈಸೂರಿಗೆ ಯಾವುದೊ ಉತ್ಸವ ಸಂದರ್ಭಗಳಲ್ಲಿ ಹೋದಾಗ ಜೊತೆಯಲ್ಲಿ ಕರೆದೊಯ್ದು ಅಲ್ಲಿಯ ಹಲವಾರು ಗಣ್ಯ ಸಾಹಿತಿ ಮಿತ್ರರಿಗೆ ಪರಿಚಯ ಮಾಡಿಸಿದರು; ಅದಕ್ಕಿಂತ ಹೆಚ್ಚಾಗಿ ವೀಣೆ ಶೇಷಣ್ಣನವರು ವಾಸಿಸುತ್ತಿದ್ದ ಮನೆ, ವೆಂಕಟಪ್ಪನವರ ಕಲಾನಿಕೇತನ, 1919–20 ರಲ್ಲಿ ಟಾಗೋರರು ಮೈಸೂರಿಗೆ ಬಂದಿದ್ದಾಗ ನಿಷಾದ್‌ಬಾಗಿನಲ್ಲಿ ಭಾಷಣ ಮಾಡಿದ್ದ ಸ್ಥಳ, ಅದಕ್ಕೆ ಸಂಬಂಧಿಸಿದ ಒಂದು ಹಾಸ್ಯ ಘಟನೆ, ಅವರನ್ನು ಇಳಿಸಿದ್ದ ಬಂಗಲೆ, ಅವರೂ ಮಿತ್ರರೂ ನಡೆಸಿದ ಸಂಭಾಷಣೆ, ವರದಾಚಾರ್ಯರು ನಾಟಕಗಳನ್ನಾಡುತ್ತಿದ್ದ ಸ್ಥಳ, ವಾಸುದೇವಾಚಾರ್ಯರಲ್ಲಿ ಇವರು ಮತ್ತು ಇವರ ಸ್ನೇಹಿತರು ಹೊಸೂರು ಸೀತಾರಾಮಯ್ಯನವರೂ ಸಂಗೀತ ಕಲಿಯುತ್ತಿದ್ದ ಸ್ಥಳ, ಆ ಕಲಿಕೆಗೆ ಸಂಬಂಧಿಸಿದ ಮತ್ತು ಅದನ್ನು ನಿಲ್ಲಿಸಬೇಕಾಗಿ ಬಂದ ಪ್ರಸಂಗಗಳು, ತಾವು–ಎ.ಆರ್. ಕೃ., ಮತ್ತು ತಾವು–ಟಿ. ಎಸ್. ವೆಂಕಣ್ಣಯ್ಯನವರು ವಾಯುವಿಹಾರಕ್ಕೆ ಹೋಗುತ್ತಿದ್ದ ರಸ್ತೆಗಳು. ಸಂಭಾಷಿಸುತ್ತ ಕುಳಿತಿರುತ್ತಿದ್ದ ಜಾಗಗಳು. ರತ್ನಿ ಜಿಗುರು ವೀಳೆಯದೆಲೆ ಮಾರುತ್ತಿದ್ದ ಸ್ಥಳ, 'ಕಾಲೇಜ್ ದಿನಗಳ'ಲ್ಲಿ ಬರುವ ಇನ್ನಿತರ ಘಟನೆಗಳ ಪ್ರಸ್ತಾವನೆ, ನಡೆದ ಸ್ಥಳಗಳು ಇವನ್ನೆಲ್ಲಾ ತೋರಿಸಿದರು. ಆ ಮೂಲಕ ಅವರ ಮೈಸೂರಿನ ನೆನಪುಗಳು ಮರುಕಳಿಸಿದವು, ಆ ವಿವಿಧ ರಾಗರಂಜನೆಗಳ ಪ್ರಪಂಚ ಕಣ್ಮುಂದೆ ಕಟ್ಟಿಸಿದರು. 'ಕಾಲೇಜ್ ದಿನಗಳ'ಲ್ಲಿನ ಕೊನೆಯ ನಾಲ್ಕು ಪುಟಗಳನ್ನು (ಪುಟ 246–50) ಓದುವಾಗೆಲ್ಲ–ಓಹ್, ಎಂಥ ಕಾವ್ಯಮಯ ಗದ್ಯ ಅದು! ಹಾಗೆ ಬರೆಯಲೂ ಸಾಧ್ಯವೆ?–ಅವರು ಮೈಸೂರಿನಲ್ಲಿ ತೋರಿಸಿ ವಿವರಿಸಿದುವೆಲ್ಲ ನೆನಪಾಗಿ ಯಾವುದೊ ಕನಸಿನ ಲೋಕದಲ್ಲಿ ವಿಹರಿಸುತ್ತಿರುವಂತೆ ಇಂದಿಗೂ ಭಾಸವಾಗುತ್ತದೆ. ಇವೆಲ್ಲಕ್ಕಿಂತ ಹೆಚ್ಚಾಗಿ, ವಿ. ಸೀ. ಅವರನ್ನು ಅವರ ಕಾಲೇಜ್ ದಿನಗಳ ಕಾಲದಲ್ಲಿ ಸಾಕಿ ಸಲಹಿದ ಶ್ರೀ ನೀಲಕಂಠರಾಯರ ಮನೆಗೆ ಅವರ ಜೊತೆಯಲ್ಲಿ ಹೋದುದು, ಶ್ರೀಮತಿ ಲಕ್ಷ್ಮಮ್ಮನವರನ್ನು ವಿ. ಸೀ. ಅವರಿಂದ 'ಸಾಕ್ಷಾತ್ ಅನ್ನಪೂರ್ಣೆ–ಭೂದೇವಿ ಎರಡೂ: ತಾಳ್ಮೆಯಲ್ಲಿ ಸ್ಥೈರ್ಯದಲ್ಲಿ ಭೂತಾಯಿ' ಎನಿಸಿ ಕೊಂಡ ಆ ತಾಯಿಯನ್ನು–ಕಂಡುದು, ಈ ಮಗನನ್ನು ಕಂಡು ಮಾತು ಹೊರಡದೆ ಆ ತಾಯಿ ವ್ಯಕ್ತಪಡಿಸಿದ ಪ್ರೀತಿವಾತ್ಸಲ್ಯಗಳು, ಅವರನ್ನು ಕುರಿತು ಇವರ ಗೌರವ ಆದರ–ಇವನ್ನು ಕಣ್ಣಾರೆ ಕಂಡು ನನ್ನದೇ ಮನಸ್ಸು, ಹೃದಯ ಆರ್ದ್ರವಾದ್ದು ಅವಿಸ್ಮರಣೀಯ ಅನುಭವ. ಈಚೆಗೆ ರಾಮದುರ್ಗ, ಮುಧೋಳ, ಜಮಖಂಡಿ, ಬಿಜಾಪುರ, ಬಾದಾಮಿಗಳಿಗೆ ಹೊರಟಾಗಲೂ ನಾನು ಜೊತೆಗೆ ಹೋಗಿದ್ದೆ. ಶ್ರೀ ಇನಾಂದಾರರೂ ಸೇರಿ ನಾವು ಮೂವರು. ಕನ್ನಡನಾಡಿನ ಆ ಇತಿಹಾಸ ಪ್ರಸಿದ್ಧ ಸಂಪದ್ಭರಿತ ಹೃದ್ಭಾಗಗಳನ್ನು ತೋರಿಸಿದ್ದು, ಬಿಜಾಪುರದ ಅಪೂರ್ಣ 'ಬಾರಾ

ಕಮಾನ್' ಮುಂದೆ ಖಿನ್ನರಾಗಿ ನಿಂತು "I have much love for this piece; it is just like our own lives. All our life is unbuilt like this. Very ambitions, ever unfulfilled...." ಎಂದು ನುಡಿದುದೂ ನನ್ನ ನೆನಪಿನಲ್ಲಿದೆ. ಶ್ರೀ ರಾವ್ ಬಹಾದ್ದೂರರ ಮನೆಯಲ್ಲಿ ದೊರೆತ ವಿಜಯದಶಮಿಯ ಅಮೃತ-ಭೋಜನ, ಅಷ್ಟೇ ರುಚಿಕರವಾಗಿದ್ದ ಶ್ರೀ ರಾವ್ ಬಹಾದ್ದೂರ್-ವಿ. ಸೀ., ಇನಾಂದಾರ್ ಇವರ ಸಂಭಾಷಣೆ, ಹಾಗೆಯೇ ಶ್ರೀ ಜೋಶಿ ದಂಪತಿಗಳ ಆತಿಥ್ಯ, ಅಷ್ಟೇ ನೆಲೆಯಾಗಿ ನಿಂತಿರುವ ಅವರ ಮನೆ ತಾರಸಿಯ ಮೇಲೆ ನಕ್ಷತ್ರ ತುಂಬಿದ್ದ ಬಾನನ್ನು ನೋಡುತ್ತ ಬೆಳುದಿಂಗಳ ರಾತ್ರಿಯಲ್ಲಿ ಎಲ್ಲ ಒಟ್ಟಾಗಿ ಬಹುಹೊತ್ತಿನವರೆಗೆ ನಡೆಸಿದ ಸಾಹಿತ್ಯ-ವಿಮರ್ಶೆ-ಬದುಕಿನ ಅನುಭವಗಳ ನೆನಪುಗಳನ್ನು ಕುರಿತ ಸಂಭಾಷಣೆ-ಇವೆಲ್ಲ ನೆನೆದಷ್ಟೂ ರಸಸ್ಯಂದಿಯೇ. ಈ ಒಂದೊಂದರ ಬಗೆಗೂ ಬೇಕಾದಷ್ಟು ಬರೆಯಬಹುದು. ಇದು ಬರಿಯ ಭಾವುಕತೆಯೆ? Sentimentalityಎ? ನನ್ನ ಮಟ್ಟಿಗೆ ಹೇಳುವುದಾದರೆ, ಈ ಭಾವುಕತೆಯಿಂದ ನನಗೆ ದೊರೆತಿರುವ ಸಂತೋಷ, ಆತ್ಮವಿಶ್ವಾಸ ಅಪಾರವಾದ್ದು. ಒಂದು ದೃಷ್ಟಿಯಿಂದ ನೋಡಿದರೆ ಬದುಕೆಲ್ಲ ಒಂದು ಬಗೆಯ ಭಾವುಕತೆಯೋ, ಸೆಂಟಿಮೆಂಟಾಲಿಟಿಯೋ ಅಲ್ಲವೆ? ಅದರಿಂದಲೇ ಬದುಕಿಗೆ ಒಂದು ಬೆಲೆ ಬರುತ್ತದೆನ್ನಿಸುತ್ತದೆ.

## ೮

ಹತ್ತಿರದಿಂದ ವಿ. ಸೀ.ಯವರನ್ನು ಕಾಣುತ್ತಿರುವ ನನಗೆ ಅವರ ಮಾನವೀಯ ವ್ಯಕ್ತಿತ್ವ ನೂರಾರು ಸಂದರ್ಭಗಳಲ್ಲಿ ಬೆಳಗಿದುದನ್ನು ಕಾಣುವ ಅವಕಾಶ ದೊರೆತಿದೆಯಾದರೂ ಅವರನ್ನು ಕುರಿತು ಬರೆಯುವಾಗೆಲ್ಲ ತೊಡಕೊಂದು ಎದುರಾಗುತ್ತದೆ: ಎಲ್ಲಿಂದ ಆರಂಭಿಸುವುದು, ಎಲ್ಲಿಗೆ ಕೊನೆಗೊಳಿಸುವುದು! ಯಾವುದನ್ನು ಹೇಳುವುದು, ಯಾವುದನ್ನು ಬಿಡುವುದು; ಯಾವುದನ್ನು ಹೇಗೆ ಹೇಳಿದರೆ ಸರಿಯಾದೀತು, ತೂಕ ತಪ್ಪದಾದೀತು ಅಥವಾ ಅಪಚಾರವಾಗಲಾರದು ಎಂಬುದೇ ತಿಳಿಯದಾಗುತ್ತದೆ. ಆದ್ದರಿಂದ ಅವರನ್ನು ಕುರಿತಂತೆ ಬರೆಯುವುದು ಸುಲಭದ ಕೆಲಸವಲ್ಲ. ನನಗೆ ತಿಳಿದ ಹಾಗೆ ಒಂದೆರಡು ಅಂಶಗಳನ್ನು ಕುರಿತು ಮಾತ್ರ ಬರೆದಿದ್ದೇನೆ, ಅಷ್ಟೆ.

ಎಂ. ವಿ. ಪ್ರೇಮಕುಮಾರ್

# ವಿ. ಸೀ. ಕಾವ್ಯದ ಹೆಜ್ಜೆಪಾಡು

ಕನ್ನಡದಲ್ಲಿ ಭಾವಗೀತೆಯ ಸ್ವರೂಪ ಇನ್ನೂ ಖಚಿತಗೊಳ್ಳುವ ಮೊದಲೇ ಹೊಸ ಕವಿತೆಗೆ ಮನಸ್ಸು ತೆತ್ತ ಹಿರಿಯ ತಲೆಮಾರಿನ ಕವಿಗಳಲ್ಲಿ ವಿ. ಸೀ. ನಡುವೆಯ ಕಾಲದವರು. ಆಚಾರ್ಯ ಶ್ರೀಯವರ ಶಿಷ್ಯರಾಗಿ ಅವರ ಪ್ರತ್ಯಕ್ಷ ಪ್ರಭಾವದಲ್ಲಿ ಸ್ಫೂರ್ತಿಪಡೆದು ಕಾವ್ಯರಚನೆಯಲ್ಲಿ ತಮಗೆ ಸಹಜವಾದ ನೇರವಾದ ಹಾದಿಯನ್ನು ಹಿಡಿದು ಧೀರವಾಗಿ ನಡೆದವರು. ವಿಷಯ, ರೀತಿ, ಛಂದಸ್ಸುಗಳಲ್ಲಿ ಯಾವುದೇ ಅತಿರೇಕಕ್ಕೆ ಹೋಗದೆ, ಆ ಕಾಲದ ಪ್ರವೃತ್ತಿಗೆ, ಮನೋಭಾವಕ್ಕೆ ತಕ್ಕಂತೆ ಒಂದು ನಿರ್ಬಂಧದಲ್ಲಿಯೇ ಒಳಮನದ ತಿಳಿವನ್ನೂ ಶುಚಿಯನ್ನೂ ಅದಕ್ಕೆ ಧಾರೆಯೆರೆದವರು. ನಾಡು–ನುಡಿಯ ಅಭಿಮಾನವನ್ನು ಹೃದಯದಲ್ಲಿ ತುಂಬಿಕೊಂಡು, ವಿಚಾರದ ಸಂದೇಹ–ಸಂಕಲ್ಪಗಳಿಗೂ ಎಡೆಗೊಟ್ಟು, ಭಾವದಷ್ಟೇ ಗೀತಕ್ಕೂ ಪ್ರಾಧಾನ್ಯ ನೀಡಿ ತಮ್ಮ ಕಾವ್ಯದ ಧಾಟಿಯನ್ನೂ ಧೋರಣೆಯನ್ನೂ ಕಂಡುಕೊಂಡವರು. ಈ ಜೀವನ ದಲ್ಲಿಯ ನೋವು, ನಿರಾಶೆ, ಪ್ರೀತಿ, ಔದಾರ್ಯ, ಸ್ನೇಹ, ಕರುಣೆ ಮೊದಲಾದ ಭಾವ ಗಳಿಗೆ ಅವರ ಕಾವ್ಯ ಆತ್ಮೀಯವಾಗಿ ನುಡಿಗೊಟ್ಟಿತು. ನಿಸರ್ಗದ ನೂರು ಚೆಲುವನ್ನೂ, ಬಲವನ್ನೂ, ಬಣ್ಣವನ್ನೂ ತನ್ನ ಕಣ್ಣಗೊಂಬೆಯಲ್ಲಿ ಹಿಡಿದು ನಿಲ್ಲಿಸಿತು. ಬೇರೆ ಬೇರೆ ಭಾಷೆಯ ಆಳವಾದ ಸಾಹಿತ್ಯಾನುಭವ ಹಾಗೂ ಸಂಸ್ಕಾರಗಳು ಇಲ್ಲಿಯ ಭಾವ ಭಾಷೆ ಗಳನ್ನು ತಿದ್ದಿ ಹದಗೊಳಿಸಿದವು. ಹೀಗೆ ವಿವೇಚನೆ, ಸದಭಿರುಚಿ, ರಸಿಕತೆ, ಮೃದು ಸಂಸ್ಕಾರಗಳ ಹಾದಿಯಲ್ಲಿ ಸಾಗಿರುವ ವಿ. ಸೀ. ಯವರ ಕಾವ್ಯದ ಹೆಜ್ಜೆ ಪಾಡನ್ನು ಗುರುತಿಸುವ ಪ್ರಯತ್ನ ಈ ಚಿಕ್ಕ ಸಮೀಕ್ಷೆಯ ಉದ್ದೇಶವಾಗಿದೆ.

೧೯೩೧ ರಿಂದ ೧೯೭೨ರ ವರೆಗಿನ ಅವಧಿಯಲ್ಲಿ 'ಗೀತಗಳು', 'ದೀಪಗಳು', 'ನೆಳಲು ಬೆಳಕು', 'ದ್ರಾಕ್ಷಿದಾಳಿಂಬೆ', 'ಹೆಜ್ಜೆಪಾಡು' ಹಾಗೂ–'ಅರಲು ಬರಲು' ಈ ಆರು ಸಂಗ್ರಹಗಳಲ್ಲಿ ವಿ. ಸೀ.ಯವರ ಕಾವ್ಯಕೃಷಿ ಬೆಳೆದುಬಂದಿದೆ. ಮೊದಲಿನ ಮೂರು ಸಂಗ್ರಹಗಳು ನಾಲ್ಕೈದು ವರ್ಷಗಳ ಅವಧಿಯಲ್ಲಿಯೇ ಪ್ರಕಟವಾಗಿದ್ದರೆ ಉಳಿದುವಕ್ಕೆ ಹತ್ತು ಹತ್ತು ವರ್ಷಗಳ ಅಂತರವಿದೆ. ಮೊದಲ ಸಂಗ್ರಹದಲ್ಲಿ ಕಂಡು ಬಂದ ಕಾವ್ಯಗುಣಗಳೇ ಒಂದೆರಡು ಹೊಸ ಅಂಶಗಳೊಂದಿಗೆ ಇನ್ನುಳಿದವುಗಳಲ್ಲಿಯೂ

ಪಡೆದುಕೊಂಡು ಒಂದೊಂದರಲ್ಲಿಯೂ ಒಂದೆರಡು ಉನ್ನತ ಮಟ್ಟದ ಕೃತಿಗಳನ್ನು ಕನ್ನಡದ ಉತ್ತಮ ಭಾವಗೀತೆಗಳ ಸಾಲಿನಲ್ಲಿ ನಿಲ್ಲಿಸಿವೆ.

**ಹೊಸ ಚೇತನದ ಗೀತಗಳು**

ಹೊಸ ಕಾಲದ ಚೈತನ್ಯದಿಂದ ಸಂವೇದನಗೊಂಡು, ಬಸಿಗೊಳ್ಳುತ್ತಿರುವ ಭಾಷೆಯಲ್ಲಿ ಸಂಗೀತಕ್ಕೂ ಓಲೈಸಿ, ಸ್ವತಂತ್ರವಾಗಿ ಹೊಮ್ಮಿರುವ ಹಲವಾರು ಕವಿತೆಗಳು 'ಗೀತಗಳು' ಸಂಗ್ರಹದಲ್ಲಿವೆ. ಕೆಲವೆಡೆಗಂತೂ ರಾಗ, ಧಾಟಿಗಳಿಗೆ ಹೆಚ್ಚಿನ ಮಹತ್ವವನ್ನು ಕವಿ ಕೊಟ್ಟಿರುವಂತೆ ತೋರುತ್ತದೆ. ಅದನ್ನು ಕೆಲಮಟ್ಟಿಗೆ ಬದಿಗಿರಿಸಿದರೂ ಕವಿ ಹೃದಯದ ತುಡಿತವನ್ನೂ, ಮನದ ಮಿಡಿತವನ್ನೂ ಓದುಗನ ಹೃದಯಕ್ಕೆ ಮುಟ್ಟಿಸುವಲ್ಲಿ ಕೆಲವು ಪದ್ಯಗಳು ಯಶಸ್ವಿಯಾಗಿವೆ. ಶ್ರೀಯವರು ಮುನ್ನುಡಿಯಲ್ಲಿ ಹೇಳಿದಂತೆ "ಭಾಷೆಯಲ್ಲಿ ಒಂದು ಬಗೆಯ ಸರಳತೆ ಓಜಸ್ಸು ಗಾಂಭೀರ್ಯ ತುಂಬಿದೆ." ಹಳಗನ್ನಡ ಹಾಗೂ ನಡುಗನ್ನಡದ ಕೆಲವು ಪದಗಳನ್ನು ತಕ್ಕ ಸಂದರ್ಭದಲ್ಲಿ ಉಪಯೋಗಿಸಿ ಅವುಗಳ ಜೀವಶಕ್ತಿಯನ್ನು ಎತ್ತಿ ಹಿಡಿದಿದ್ದಾರೆ. ಸಂಸ್ಕೃತ ಪದಗಳನ್ನೂ ಶೈಲಿಗೆ 'ಬಿಗಿಪೊಂದುವಂತೆ' ಬಳಸಲಾಗಿದೆ. ಲಂಬಾಣಿಯ ವೇಷಭೂಷೆಯಲ್ಲಿ ಹೊಳೆಯುವ ಕನ್ನಡಿ ಹರಳುಗಳಂತೆ ಅಚ್ಚಗನ್ನಡ ಅಲ್ಲಲ್ಲಿ ತಳತಳಿಸಿ ಒಟ್ಟು ಶೈಲಿಯ ಸೊಗಸನ್ನು ಹೆಚ್ಚಿಸಿದೆ.

ನಿಸರ್ಗದ ರಮ್ಯ-ರುದ್ರ ದರ್ಶನ, ಪ್ರೇಮದ ಕೋಮಲ ಕಾಮನೆಗಳು, ಋತುಗಳ ರಿಂಗಣ, ಧರ್ಮದ ನೆಲಸು, ದೈವಭಕ್ತಿ, ವಿಚಾರಶಕ್ತಿಯ ತಾಕಲಾಟ, ಸಂದೇಹ ಇತ್ಯಾದಿ ವಿಷಯಗಳನ್ನು ಕಾವ್ಯವಸ್ತುವಾಗಿ ಪರಿವರ್ತಿಸುವಲ್ಲಿ ಕವಿಯ ಸೂಕ್ಷ್ಮವಾದ ಮನೋಧರ್ಮ ವ್ಯಕ್ತವಾಗಿದೆ. ಮಾನವ ಹೃದಯದ ಭಾವ ಭಾವಾಂತರಗಳೇ ಇಲ್ಲಿಯ ಆವೇಶ ಸಾಮಗ್ರಿಯಾಗಿದೆ. ಒಳಮನದ ತುಮುಲಗಳು, ಚಿಂತೆ-ಕಳವಳಗಳು ಅರಕೆ-ಅಸಮಾಧಾನಗಳು, ನಚ್ಚು-ಮೆಚ್ಚುಗಳು, ಕೋರಿಕೆ-ಹಾರೈಕೆಗಳು ಹಲವು ಹನ್ನೊಂದು ಬಗೆಯಲ್ಲಿ ಅಭಿವ್ಯಕ್ತಗೊಂಡಿವೆ ಇಲ್ಲಿಯ ಪದ್ಯಗಳಲ್ಲಿ.

ಪೊಂದಲಾರದ ಸುಖಕೆ ನೊಂದು ಬಳಲುವವೇಕೊ
ಸಂದ ಸಂತಸಕೊಲಿದು ಮೈಗೊಡೆವಿದೇಕೊ

(ಪ್ರಶ್ನೆ)

ಎಂದು ಶಾಂತಿ ಕಾಣದೆ ತೊಳಲುವ, ಚಿತ್ರವಾಗಿರುವ ಜಗದ ವ್ಯಾಪಾರವನ್ನು ಕಂಡು ಕವಿಯ ಮನಸ್ಸು ವ್ಯಾಕುಲಗೊಂಡಿದೆ. ತೀರ ಕಾಣದ ಪಯಣದ ರೂಪಕದಲ್ಲಿ ಜೀವನದ ದುರ್ಭರತೆಯನ್ನು ಅನುಭವಿಸಿಯೂ 'ಯಾನ'ದಲ್ಲಿ 'ಅಂಬಿನಂದದಿ ನೇರ ಗುರಿಯನರಸಿ' ಮುಂಬರಿಯುವ ನಂಬಿಕೆಯನ್ನು ದೃಢಗೊಳಿಸಿದೆ. ಆದರೂ ಉನ್ನತಿಯನ್ನು ದೊರಕಿಸುವ ಆಸೆ ಭರವಸೆಗಳನ್ನು ಕಳೆದುಕೊಂಡ ಮನಃಸ್ಥಿತಿಯನ್ನು 'ಸಮಭೂಮಿ'ಯ ಸರ್ವಸಾಮಾನ್ಯತೆಯ ಸಂಕೇತದಲ್ಲಿ ನಿವೇದಿಸಿ,

ಎನ್ನ ವಕ್ಷದ ಮೇಲೆ ಸುಳಿವ ಗಾಳಿಗಳೆಲ್ಲ
ಖಿನ್ನತೆಯ ತೋರಿ ಬಿಸುಸುಯ್ಯುತಿಹವು

('ಸಮಭೂಮಿ')

ಎಂಬಲ್ಲಿ ನೈರಾಶ್ಯಭಾವ ಪರಿಣಾಮಕಾರಿಯಾಗಿ ಮೂಡಿದೆ.

ತೀರದ ಒಲವಿನಾಸೆ, ಪ್ರೇಮದ ಕಾತರ, ಸರಸದ ಸೌಖ್ಯ, ಕೆಳೆಯ ವೈಭವಗಳು 'ಚಿತ್ತ', 'ನಿಲ್ಲಿಸಮ್ಮ', 'ಅಳಿಸದ ನೆನಪು', 'ಸ್ನೇಹ' 'ಉಂಗುರರವ ಕೇಳಿ' ಮುಂತಾದ ಪದ್ಯಗಳಲ್ಲಿ ಸುಂದರವಾಗಿ ಮೂಡಿಬಂದಿವೆ. 'ಬೇಟೆ'ಯಲ್ಲಿ ಹುಡುಕಾಟ ಮುಟ್ಟಾಟ ತಕ್ಕ ಛಂದದಲ್ಲಿ ಅಭಿವ್ಯಕ್ತಿ ಪಡೆದಿವೆ. ಈ ಬಗೆಯ ಪದ್ಯಗಳಲ್ಲಿ ಕೆಲವೆಡೆ ಭಾವ ಸಾಂದ್ರತೆ ಸಾಲದೆನಿಸಿದರೂ ಅತೃಪ್ತಿಯನ್ನುಂಟುಮಾಡುವುದಿಲ್ಲ. ಶೈಲಿ ಭಾವಾನು ಸಾರಿಯಾಗಿ ರೂಪುಗೊಳ್ಳುತ್ತದೆ. ಮೃದುವಾದ ಸಂಸ್ಕಾರಗಳಿಂದ ಹದಗೊಂಡ ಚಿತ್ತ ತನ್ನ ತನಿಸೊಂಪನ್ನು ಅಲ್ಲಲ್ಲಿ ಬೀರಿದೆ:

ವೈಶಾಖದ ಸೊಬಗಿನಂತೆ
ಪೈರ್ಗರುಕೆಯ ಹಸುರಿನಂತೆ
ಕಾರ್ತಿಕದಾ ಚಂದ್ರನಂತೆ
ಫಲಗಾಲದ ತುಂಬಿನಂತೆ ಮೆರೆ ಮೆರೆವುದು ಚಿತ್ತವು

('ಚಿತ್ತ')

ಬರಿಮಾಯೆಯೆಂದು ಇಹವನ್ನು ದೂಡದೆ ಅದು ಮಾನವನ ಮೂಲ ಬಲ ವಾಗಿರುವುದನ್ನೂ, ಸಂಸಾರಸಾರ–ಸರ್ವಸ್ವವಾಗಿರುವುದನ್ನೂ ಮನಗಂಡು 'ಸ್ವರ್ಗ ದೊಳಗೀ ಸ್ನೇಹ ದೊರೆವುದೇನು' ಎಂದು ಕವಿ ಕೇಳುತ್ತಾರೆ. 'ಇಲ್ಲದಿರೆ ಎನಗಿಲ್ಲೆ ನೂರು ಜನ್ಮಗಳಿರಲಿ' ಎಂದುಕೊಳ್ಳುತ್ತಾರೆ. ಇರದಿರುವ ಬೇರೊಂದನ್ನು ಹುಡು ಕುತ್ತಾ ಹೊಯ್ದಾಡಿ ಭಂಗವಡೆದು ಫಲವೇನು?

ವಿ. ಸೀ.ಯವರ ಕಾವ್ಯದ ಮತ್ತೊಂದು ಪ್ರಮುಖ ವಸ್ತು ಪ್ರಕೃತಿ. ನಿಸರ್ಗದ ಸೌಮ್ಯ, ಭಯಂಕರ ಮುಖಗಳೆರಡರಿಂದಲೂ ಸ್ಫೂರ್ತಿಯನ್ನು ಪಡೆದು ಅದರ ಜೀವಶಕ್ತಿಯಿಂದ ಭಾವ ಅಲ್ಲಲ್ಲಿ ಪುಷ್ಟಿಗೊಂಡಿದೆ. ಋತುಗಳ ರಿಂಗಣದಲ್ಲಿ ಇಳೆಯ ವಿಭವಗಳೆಲ್ಲ ಮೊಳೆತು ಬೆಳೆಯುವುದನ್ನೂ, ಅವುಗಳ ಕಾಂತಿ, ಸಿಂಗರ, ಬೆಡಗು ಗಳನ್ನೂ, ಕಣ್ತುಂಬ ಕಂಡ ಹಿಗ್ಗು ಇಲ್ಲಿ ಸೂರೆಗೊಂಡಿದೆ:

ಹೃದಯದಾಸೆಗಳೆಲ್ಲ ಫಲಿತವಾಗುವ ಕಾಲ
ಮೃದು ಹೃದಯ ಕುಸುಮಗಳು ಅರಳ್ವ ಕಾಲ

('ಮಧುಮಾಸ')

ಎಂದು ಮನಸ್ಸಿನ ಮುದವನ್ನು ನಾಲ್ಕೂ ಕಡೆಗೆ ಹಂಚುವಲ್ಲಿ,

ಕುದಿವ ಪ್ರಾಯವು ಪೋಗಿ ಅದಿರ್ಮುಪ್ಪು ಬಂದಿಹುದು
ಮೊನೆಮುಳ್ಗಳುಳಿದಿಹವು ಸುಮರಾಜಿ ಹೋಗಿ

('ಹೇಮಂತ ಸಾಮ್ರಾಜ್ಯ')

ಎಂದು ಕಳೆದುಹೋದ ಸುಮಸುಖದ ನೆನಪಿನ ಮುಳ್ಳನ್ನು ನಾಟಿಸುವಲ್ಲಿ,

ಕಾಲಾಗ್ನಿ ರುದ್ರನ ಫಾಲದಲ್ಲುರಿವಾತ
ಮೂಲೋಕ ಸೌಂದರ್ಯ ಸೌಖ್ಯದಾತ

('ಸೂರ್ಯ')

ಎಂದು ಋತುಧರ್ಮವನ್ನು ನಡೆಸುವಾತನನ್ನು ಕೃತಜ್ಞತೆಯಿಂದ ಬಣ್ಣಿಸುವಲ್ಲಿ,

ಭೀಷಣ ವರ್ಷಧಾರೆ! ಕಾರ್ಮುಗಿಲ ಸಿಡಿರೋಷ!
ದಿಗ್ಭಿತ್ತಿಯೊಡೆವಂತೆ ವಜ್ರ ನಿರ್ಘೋಷ!
ಬೇಸಗೆಯ ತೇಜಃಪ್ರಭಾವದಿಂ ಬಸಿರ್ವೊತ್ತ
ಶ್ರಾವಣದ ದುರ್ದಮ್ಯ ಮೇಘಮಾಲೆ!

('ಮುಂಗಾರು')

ಎಂದು ಮುಂಗಾರಿನ ಭಯಂಕರ ಸೌಂದರ್ಯವನ್ನು ನಮ್ಮ ಇಂದ್ರಿಯಗಳು ಅನುಭವಿಸುವಂತೆ ಚಿತ್ರಿಸುವಲ್ಲಿ ಅವರ ಶೈಲಿ ಸಮರ್ಥವಾಗಿ ಕೆಲಸ ಮಾಡಿದೆ. ಆದರೆ ಇಂಥಲ್ಲೆಲ್ಲ ಕವಿ ಪ್ರಕೃತಿಯನ್ನು ದೂರದಿಂದ ವರ್ಣಿಸುವಂತಿದೆ. ನಿಸರ್ಗದೊಡನೆ ಮಾನವನ ಬದುಕಿನ ಹಾಸುಹೊಕ್ಕು, ಜೀವರಸದ ಕೊಡುಕೊಳ್ಳುವಿಕೆ, ಆತ್ಮೀಯತೆ ಅಷ್ಟಾಗಿ ಇಲ್ಲಿ ಕಾಣುವುದಿಲ್ಲ. ಈ ದೃಷ್ಟಿಯಿಂದ 'ಕಾರಂಜಿಕೆರೆ ದಾರಿ' ಯಶಸ್ವಿಯಾದ ಸುಂದರ ಕವಿತೆ :

ಕೊಳದ ಹೃದಯದಲ್ಲಿ ಹುದುಗಿ
ಎಮಗೆ ತಿಳಿಯದಾಳದಿಂದ
ಮಿರುಗಿ ಮಿರುಗಿ ತಾರೆ ಲೋಕ ಕರೆಯುತಿರುವುದು;

ಇಂಥ ಕೆಲವು ನುಡಿಗಳಲ್ಲಿ ಪ್ರಕೃತಿಯೊಡನೆ ಹೊಂದಿ ಬಲಿದ ಹೃದಯಭಾವವನ್ನೂ, ಇಬ್ಬರಲ್ಲಿಯೂ ಮಿಡಿಯುವ ಒಂದು ಜೀವದಾತ್ಮಭಾವದ ಬೆಳವಣಿಗೆಯನ್ನೂ ಕಾಣಬಹುದು.

'ಬ್ರಹ್ಮರಥ', 'ಅರ್ಧನಾರೀಶ್ವರ', 'ಪ್ರಳಯ ತಾಂಡವ'ಗಳಲ್ಲಿ ಆಯಾ ವಸ್ತುವಿನ ಮನೋಹರವಾದ ವಿವರವಾದ ಗುಣಗಾನವಿದೆ. 'ಪ್ರಳಯ ತಾಂಡವ'ದಲ್ಲಿ ಭಾವ ಭಾಷೆಗಳ ಅನುರೂಪ ಹೊಂದಾಣಿಕೆಯಿದೆ. ಭೈರವ ಲೀಲಾ ಪ್ರಸಂಗದಲ್ಲಿ ಮೆರೆವ ಉನ್ಮಾದದಾನಂದವನ್ನೂ ಅಚ್ಚರಿಯನ್ನೂ ತಾಂಡವ ಗತಿಯನ್ನೂ ಕವಿ ಸೊಗಸಾಗಿ ಸೆರೆಹಿಡಿದಿದ್ದಾರೆ ಮುಂದಿನ ಸಾಲುಗಳಲ್ಲಿ :

ವಿಶ್ವವ ಪೊರೆಯುವ ಚಿಂತೆಯ ತೊರೆದು,
ಸುಸ್ಮಿತ ವದನದೊಳೆಲ್ಲವನಗಿದು,
ಸುಸ್ವರ ಲಯ ತಾನಗಳನುವಿಡಿದು,
ಭಸ್ಮ ಲೇಪದ ಮೈಸಿರಿಯನು ಬೆಳಗುವ ಅಚ್ಚರಿಯಾನಂದ!

ದೇಶದ ದುರ್ಗತಿಯನ್ನು ನೆನೆದು ಕೈಕಟ್ಟಿಕೊಂಡು ಕೂಡದೆ ಹೊಸ ಸಂಕಲ್ಪಕ್ಕೆ,

ಪ್ರಯತ್ನಕ್ಕೆ ನಾಡಿನೇಳ್ಗೆಗೆ ಜನಮನವನ್ನು ಎಚ್ಚರಿಸುವ ವಿವೇಕಯುತವಾದ ವೀರ ವಾಣಿ 'ಏಳಿ', 'ದುಂದುಭಿ', 'ತಾಯಿದೇವಿ' ಕವಿತೆಗಳಲ್ಲಿ ಮೊಳಗುತ್ತದೆ. ದೃಢ ವನ್ನೂ ಸೆಣಸನ್ನೂ ಸಹಜವಾಗಿ ಇವು ಹೊರಹೊಮ್ಮಿಸುತ್ತವೆ. ನಯನವ್ರುರುಗಳಂತೆ ಗುಡುತನವನ್ನೂ ಕೆಚ್ಚನ್ನೂ ವೀ. ಸೀ.ಯವರ ಶೈಲಿ ಮೆರೆಯಬಲ್ಲುದು.

ಮೊಳಗು ! ಮೊಳಗು ದುಂದುಭಿಯೆ !
ನಿದ್ರೆ ಸಾಕಿನ್ನೇಳಿರೆಂದು ಎಚ್ಚರಿಸು–

('ದುಂದುಭಿ')

ಬರಿಯ ಹುಂಬತನದ ಅಭಿಮಾನವಲ್ಲವಿದು; ವಿಚಾರವನ್ನು ಕೆರಳಿಸಿ ಕರ್ತವ್ಯದ ಎಚ್ಚರವನ್ನು ಹುಟ್ಟಿಸುವಂತಹದು :

ಹುಟ್ಟಿಸಿದ ದೇವನೆಂತೊ ಪೊರೆಯುವನೆಂಬ
ಕಷ್ಟಗಳನಿತ್ತವನೆ ಪರಿಹರಿಪನೆಂಬ
ಸೃಷ್ಟಿ ಸಮಯದಿ ಬರೆದ ಹಣೆಯಬರಹವಿದೆಂಬ
ನಷ್ಟಸತ್ತ್ವರ ತತ್ತ್ವದೂಡಿಬಿಡಿರೇಳಿ.

('ಏಳಿ')

ಧರ್ಮ, ದೇವರು ಇತ್ಯಾದಿ ವಿಷಯಗಳಲ್ಲಿ ಕವಿಯ ವೈಚಾರಿಕ ಪ್ರತಿಕ್ರಿಯೆ ಕೆಲವು ಕವಿತೆಗಳಲ್ಲಿ ಒಡಮೂಡಿದೆ. ಮನಸ್ಸಿಗೂ ಮಾತಿಗೂ ಕೂಡಿಯೆ ಇವು ಸಾಣೆ ಹಿಡಿದು ಸಂದೇಹಗಳನ್ನು ಕೆರಳಿಸುತ್ತವೆ; ಪ್ರಶ್ನೆಗಳನ್ನು ನಿಲ್ಲಿಸುತ್ತವೆ–ಹಳೆಯ ಕಾಲದ ದೇವರುಗಳು ಅಳಿದುಹೋಗುವ ಕಾಲ ಬರುತ್ತಿರುವುದನ್ನು ಕವಿ ಕಂಡಿದ್ದಾರೆ :

ಇಳಿದಿಹುದು ಕಡುಸಿಡಿಮು ನೆಳಲೊಂದು ಮೇಲಿಂದ
ಅಳಿಸಿ ಹೋಗುತಲಿಹವು ಅವರ ಮೂರ್ತಿಗಳೂ.

'ಪೋಪವರ ಪದವಿಗಳಿಗಿನ್ನಾರು ಬಂದಪರೊ' ಎಂದು ವಿಚಾರವಂತನ ಮನಸ್ಸು ಆಲೋಚನೆಗೆ, ಪರೀಕ್ಷೆಗೆ, ವಿಮರ್ಶೆಗೆ ತೊಡಗುತ್ತದೆ :

ಇಲ್ಲದಿರೆ ಬೇರಾವ ದೇವರೇ ಬಾರರೊ
ಇಲ್ಲದೊಂದಕೆ ಹೆಸರನಿತ್ತು ಕರೆಯುವೆವೊ
ಇಲ್ಲದಿರೆ ಮಾನವನ ಸುಗುಣವೇ ದೈವವೊ
ಎಲ್ಲಿಗೂ ಹರಿಯದಿಹ ಸಂಶಯವೆ ಕೊನೆಯೊ !

('ಕಸ್ಮೈದೇವಾಯ')

ಎಂಬ ಸತ್ಯದ ಸೋದನ ದೀವಿಗೆ ಮನಸ್ಸಿನ ನಾಲ್ಕೂ ಮೂಲೆಯನ್ನು ಬೆಳಗುತ್ತದೆ. ನಿಜವಾದ ದೈವ ಮಾನವತೆಯಲ್ಲಿರುವುದನ್ನೂ ಕವಿ ಇಲ್ಲಿ ಪರ್ಯಾಯವಾಗಿ ಸೂಚಿಸಿ ದಂತಿದೆ. ಆದರೆ ದೈವೀಶಕ್ತಿಯನ್ನು ಕವಿ ಅಲ್ಲಗಳೆಯದೆ ಅವರ ಕರುಣೆಯನ್ನು ಕಂಡು ಕೊಂಡು ಮರಣದಿಂದಲೆ ಉಳಿವ ಹೀರಿ ಬೆಳೆಯುವ ಚೇತನವನ್ನು ಗುರುತಿಸಿದ್ದಾರೆ. ಜೀವನದ ಕ್ಲೇಶಕಷ್ಟಗಳು ಒಡಲನ್ನು ದಹಿಸುತ್ತಿರುವಾಗ ಅರಿಯದೆ ಕರೆಯುವ

ಅಮೃತಧಾರೆಯು ಕ್ಷೇಮಕಾರಿಯು ದರ್ಶನದಲ್ಲಿ ಕವಿಯು ನಂಬಿಗೆ ಉಳಿದಿದೆ. ಬಾರಿ ಬಾರಿಗೆ ಕರುಣೆ ಬೇಡುವ ದೈನ್ಯ ಅಲ್ಲಿಲ್ಲ. ಆದರೂ ಏರುತ್ತಿರುವ ಬೇಗೆಗಳನ್ನು, ಊರುತ್ತಿರುವ ಸಂಶಯುಗಳನ್ನು ದೂರಗೈಯಲು ಆ ಶಕ್ತಿಯನ್ನು ಆಹ್ವಾನಿಸುತ್ತಾರೆ. ಅನುಭವೈಕವೇದ್ಯವಾದ ಆ ತಂದೆಯು ಧ್ವನಿ ಆಗೀಗ ಕಿವಿಗೆ ಬಿದ್ದಿದೆ; ಕಳವಳವನ್ನು ಹರಿಸಿದೆ :

ಹಲಬಾರಿ ಕೇಳಿಹೆನು ! ಮೋಡಗಳ ಮಧ್ಯದಿಂ
ಮೊಳಗಿ ಮಾರ್ದನಿಗೊಡುವ ನಿನ್ನ ದನಿಯು
ಬಳಲಿ ನಿದ್ರಿಸುತಿರುವ ನೆನವುಗಳ ಮೀಂಟುತ್ತೆ
ಕಳವಳದ ಕನಸುಗಳ ಹರಿಸುತಿಹುದ.

('ಕ್ಷೇಮಕಾರಿ')

'ಮೊರೆ', 'ನೈವೇದ್ಯ', 'ಪ್ರಾರ್ಥನೆ' ಈ ಪದ್ಯಗಳಲ್ಲಿ ಆರ್ತಭಾವ ಚೆನ್ನಾಗಿ ಪ್ರತಿಬಿಂಬಿಸಿರುವುದಲ್ಲದೆ ನೊಂದ ಮನಸ್ಸಿಗೆ ಅವು ನೆಮ್ಮದಿಯನ್ನೂ ನೀಡಬಲ್ಲವು. ಎಲ್ಲ ಭರವಸೆಯನ್ನೂ ಅವನಲ್ಲೇ ನೆಲಸಿ, ಭ್ರಾಂತಿಗಳನ್ನು ನಿಲ್ಲಿಸುವಂತೆ, ಎಲ್ಲ ಕರ್ಮಗಳನ್ನೂ ಅವನೆಡೆಗೆ ನಡೆಸುವಂತೆ, ಮನದ ಎಲ್ಲ ಶಕ್ತಿಭಕ್ತಿಗಳನ್ನು ಧರ್ಮದಲ್ಲಿ ಹೂಡುವಂತೆ, ನಿಜವೆಂದು ಅರಿತಿದ್ದನ್ನು ನಡೆಸಲು ಧೈರ್ಯವನ್ನೂ, ನಿಶ್ಚಲ ನಿಶ್ಚಯುಗಳನ್ನು ನೀಡುವಂತೆ ಕೋರುವಲ್ಲಿ ಬರಿಯ ಅಸಹಾಯಕತೆ, ದೈನ್ಯ, ಮುಗ್ಧ ಭಕ್ತಿಯಿರದೆ ಮಾನವತೆಯು ನಿರಂತರ ಮೊರೆಯಿದೆ; ಬಾಳನ್ನು ನಿಜದ ನೇರಕ್ಕೆ ನಡೆಯಿಸುವ ಧೀರತೆಯಿದೆ.

ವಿ. ಸೀ. ಕಾವ್ಯದ ಮುಖ್ಯ ಗುಣಗಳನ್ನೆಲ್ಲ 'ಗೀತಗಳು' ಒಳಗೊಂಡು ಒಂದು ಮಹತ್ವದ ಸಂಕಲನವೆನಿಸಿದೆ. ಈ ಅಂಶಗಳೇ ಮುಂದಿನ ಸಂಗ್ರಹದಲ್ಲಿಯೂ ಬಲಿತು ಬೆಳೆದುಬರುವುದನ್ನು ಕಾಣುತ್ತೇವೆ. ಅಲ್ಲಲ್ಲಿ ಒಂದೆರಡು ಹೆಚ್ಚಿನ ಬಣ್ಣಗಳೂ ದನಿಗಳೂ ಸೇರಿ ಕಳೆಗೊಂಡಿರುವಂತೆ ಕಂಡರೂ, ಮೂಲಧಾತು ಈ ಸಂಕಲನದ್ದೇ.

ಮನದ ಸಂತಸ ವೇಗದೊಳಗೆದ್ದು ಮುಳುಗುತ್ತ
ಲನುನಯದಿ ರಸ ರಾಗಪೂರ್ಣವಾಗಿ
ದನಿಯೊಳಗೆ ದನಿ ಸೇರಿ ತನಿಗೊಂಡು ಮೆರೆವಂತೆ
ಮನದಾಳವನ್ನಳೆದ ಮನ ಸೋಲುವಂತೆ

'ವೀಣಾಗಾನ'ದ ದಿವ್ಯ ಮಾಧುರ್ಯವನ್ನು ಹೀಗೆ ಮೈತುಂಬಿ, ಎದೆ ತುಂಬಿ ಅನುಭವಿಸಿ ಅಭಿವ್ಯಕ್ತಿಗೊಳಿಸಿದ ವಿ. ಸೀ.ಯವರ ಸಂಗೀತ ಸಂಸ್ಕಾರ ಇಲ್ಲಿಯ ಗೀತಗಳಲ್ಲೆಲ್ಲಾ ಕಂಡುಬರುತ್ತದೆ. ಆದರೆ ಸೂಕ್ಷ್ಮವಾದ ಮಾತಿನಿಂದ ಧ್ವನಿ ತರಂಗಗಳನ್ನೆಬ್ಬಿಸಬಲ್ಲ ಗುಣವಾಗಲಿ, ಭಾವವನ್ನು ಭಟ್ಟಿಯಿಳಿಸಿ ಕೊಡಬಲ್ಲ ರೂಪಕ ಶಕ್ತಿಯಾಗಲಿ ಇಲ್ಲಿ ಅಷ್ಟಾಗಿ ಕಾಣಿಸದು.

**ಬಗೆಯನುದ್ದೀಪಿಸುವ 'ದೀಪಗಳು'**

'ಗೀತಗಳ'ನ್ನು ಕೊಟ್ಟ ಎರಡು ವರ್ಷದಲ್ಲಿಯೇ ಕವಿ 'ದೀಪಗಳ'ನ್ನು ಬೆಳಗಿಸಿದ್ದಾರೆ. ಯಾವುದೋ ಆಸೆ, ಗುರಿ, ಉತ್ಸಾಹ, ನಂಬಿಕೆ, ಶ್ರದ್ಧೆ—ಇವು ಇಲ್ಲಿ ಕವಿಯ ಮನಸ್ಸನ್ನು ಆಳುತ್ತಿವೆ. ನೋವು ನಿರಾಶೆಗಳ ಮಧ್ಯದಲ್ಲಿಯೂ ಆಶೆಯ ದೀಪವನ್ನು ಎತ್ತಿ ಹಿಡಿದು ಬಾಳಿನಲ್ಲಿ ಎಲ್ಲೋ ಹುದುಗಿದ ಸೌಖ್ಯ, ಸಹನೆ, ಕರುಣೆ, ಒಲವುಗಳ ಮೇಲೆ ಬೆಳಕು ಚೆಲ್ಲಿದ್ದಾರೆ. ನಾಡೂ, ಜನವೂ ಮೇಲ್ಮೆಯನ್ನು ಸಾಧಿಸಬೇಕಾದರೆ ಮನಸ್ಸಿನ ಔದಾರ್ಯ ಹೆಚ್ಚಬೇಕು :

ಮಾನವನೆತ್ತರ ಆಗಸದೇರಿಗೆ ಏರುವವರೆಗೂ ಬೆಳೆದೇವು;
ಮಾನವ ಹೃದಯಕೆ ವಿಶ್ವವಿಶಾಲತೆ ಹಾಯುವವರೆಗೂ ಹಾದೇವು
('ವಿಶ್ವಾಸ')

ಎಂಬ ಆತ್ಮ ವಿಶ್ವಾಸ ಬಲಿಯಬೇಕು. ಆಯಾ ಕಾಲಕ್ಕೆ ತಕ್ಕ ಹೊಸ ವಿಶ್ವಾಸವನ್ನು ತೊಟ್ಟು ಹಿರಿಮೆಯ, ಚೆಲುವಿನ ಆದರ್ಶವನ್ನು ಈ ಲೋಕದಲ್ಲಿಯೇ ಅರಳಿಸಬಹುದು :

ಬಾಳನು ಶೋಧಿಸಿ ಶುಚಿಯನು ಬೆಳೆದರೆ
ಇಹವೇ ಅರಳದೆ ಪರವಾಗಿ ?

ಎಂದು ಕವಿ ಕೇಳುತ್ತಾರೆ. ಪರಕ್ಕಾಗಿ ಪರದಾಡದೆ ಇಹ ಜೀವನದ ಶುಚಿಯನ್ನು ಬೆಳೆಸಿಕೊಂಡರೆ ಇಲ್ಲಿಯೇ ಸ್ವರ್ಗವನ್ನು ನಿರ್ಮಿಸಬಹುದಲ್ಲ, ಅದರದೇ ಏನು ಹೆಚ್ಚು ? ಎಂಬುದು ಕವಿಯ ನಿಲುಮೆ.

'ಪ್ರಾರ್ಥನೆ', 'ಹರಸು ತಾಯಿ' ಇವು ದೇಶಾಭಿಮಾನವನ್ನು ಉಕ್ಕಿಸುವ ನಾಡಗೀತೆಗಳು. ಸ್ವಾತಂತ್ರ್ಯ ಪೂರ್ವದ ನಮ್ಮ ನಾಡಿನ ಸ್ಥಿತಿಗತಿಯನ್ನು ಮನದಂದು ಬಿಡುಗಡೆಯ ಭರವಸೆಯನ್ನು ಹುಟ್ಟಿಸುವ ಸ್ಫೂರ್ತಿದಾಯಕ ಗೀತಗಳಿವು :

ನಿನ್ನ ನಾಡೀ ನಾಡು, ನಿನ್ನ ಮಕ್ಕಳು ನಾವು
ಎಮ್ಮನ್ನು ನೀ ನಡೆಸು ದಿಗ್ವಿಜಯಕೆ
('ಪ್ರಾರ್ಥನೆ')

ಎಂದು ಶಿವನಲ್ಲಿ ಅವನ ಗುಣಗಳನ್ನೆಲ್ಲ ಆಹ್ವಾನಿಸಿ, ಭಾರತೀಯ ಬಿಡುಗಡೆಗೆ ನಮ್ಮನ್ನು ನಡೆಸುವಂತೆ, ನಾಳೆ ಹುಟ್ಟುವ ಮಕ್ಕಳಿಗಾದರೂ ಈ ನಾಡು ಸ್ವಾತಂತ್ರ್ಯ ಸ್ವರ್ಗದಂತಾಗುವಂತೆ ಪ್ರಾರ್ಥಿಸಿಕೊಳ್ಳಲಾಗಿದೆ.

ಸಾಗರದ ಆಳಕ್ಕೆ ಅಡಿಯೂರಿ ಮೇಲೆದ್ದು
ಧವಳಗಿರಿಗೇರಿರುವ ಪಸಿಯ ನೋಡಾ !
ನಿನ್ನ ಕೀರುತಿ ಕಳಸ ಗೌರಿಶಂಕರದೆದುರು
ಮೇರುಗಿರಿಯಲಿ ನಟ್ಟ ವಿಭವ ನೋಡಾ !
('ಹರಸು ತಾಯಿ')

ಸ್ವಾತಂತ್ರ್ಯ ಸಂಗ್ರಾಮಕ್ಕೆ ಕನ್ಯಾಕುಮಾರಿಯಿಂದ ಗೌರೀಶಂಕರದವರೆಗೆ ಈ ನಾಡಿನ ಜನವೆಲ್ಲ ಗಂಡು, ಹೆಣ್ಣು, ಕುಲ, ಮತ, ಎನ್ನದೆ ಸಿದ್ಧರಾಗಿ ಧ್ವಜವೆತ್ತಿ ನಡೆದಾಗ ಆ ದಿವ್ಯ ಸ್ಫೂರ್ತಿಯಲ್ಲಿ ಭಾರತಭಾಗ್ಯೇಶ್ವರಿಯ ದರ್ಶನವನ್ನು ಮಾಡಿಸುತ್ತದೆ ಈ ಕವಿತೆ.

ಒಲವು ಸೂಸುವ ಒಂದೆರಡು ಪದ್ಯಗಳೂ ಇಲ್ಲಿವೆ. ಪತಿ ಊರಲ್ಲಿಲ್ಲದ ದೂರ ವಿರುವಾಗಿನ ಮಡದಿಯ ಮನದ ಕಾತರ, ಚಿಂತೆ, ಬೇಸರಗಳನ್ನು, ನಿರ್ಮಲ ಪ್ರೇಮ ವನ್ನು 'ಮಡದಿ'ಯಲ್ಲಿ ನವುರಾಗಿ ಚಿತ್ರಿಸಲಾಗಿದೆ. 'ನಾಟ್ಯಾನುಕರಣ' ತನ್ನ ಎಲ್ಲ ಸಿಂಗಾರದೊಡನೆ, ಬಳುಕಾಟದೊಡನೆ ಪದಗಳನ್ನು ನರ್ತಿಸಿ ತೋರುವ ಚೆಲುವಾದ ಕವಿತೆ :

ಧಿತ್ತೊಂಗ ಝಣುತೋಂಗ
ಧಿತ್ತೈತ–ತಕತೈತ
ತದ್ಧಿಮಿ–ಧಿಮಿಕಿಟ್ಟ–ಕಿಟತೋಂತ

ಹೀಗೆ ತಕ್ಕ ಛಂದದಲ್ಲಿ ಹೆಜ್ಜೆ ಹಾಕಿ ಒಯ್ಯಾರದ ಗತಿಯಲ್ಲಿ ಕುಣಿಯುತ್ತದೆ ಇಲ್ಲಿ ಕವಿತೆ. 'ನಗುವ ಚಂದ್ರ'ದಲ್ಲಿ

ನೀರೆ ಎಮ್ಮೀ ಮುನಿಸ ನೋಡಿ
ಬೆಳ್ಳಿ ಚಂದ್ರನು ನಗುವನು—
ನೂರು ದೇಶದಿ ನೂರು ಕಾಲದಿ
ಕಂಡು ಬಂದಿಹೆನೆಂಬನು.

ಎನ್ನುವಲ್ಲಿ ಕಂಡೂ ಕಾಣದ ಹಾಗೆ ಹಣಿಕುವ ವ್ಯಂಗ್ಯ ಕವಿತೆಯ ಭಾವವನ್ನು ಬೆಳಗಿ ಸಿದೆ. 'ಎರಡು ಬಾಳ್ಗಳು ಬೆಳೆವ ಹರುಷದಿ ಇಳೆಯ ಹರುಷವು ಬೆಳೆಯದೆ ?' ಎಂದು ಒಲಿದ ಬಾಳಿನಲ್ಲಿ ಜಗತ್ತಿನ ಸುಖ ಅಡಗಿರುವುದನ್ನು ಸುಂದರವಾಗಿ ಸೂಚಿಸಲಾಗಿದೆ.

ಜೀವನದಲ್ಲಿ ಒದಗುವ ಕೆಲವೊಂದು ಸನ್ನಿವೇಶಗಳನ್ನು ಒಂದು ವಿಶೇಷ ರೀತಿ ಯಲ್ಲಿ ಪ್ರತಿಬಿಂಬಿಸಿ ತೋರಿಸುವ ಕೌಶಲ ಇವರಿಗಿದೆ. ಅದರಲ್ಲೂ ಕರುಣಾಪೂರ್ಣ ಸನ್ನಿವೇಶಗಳನ್ನು ಅಂತಃಕರಣ ಕಲಕುವಂತೆ ಈ ಕವಿ ಚಿತ್ರಿಸಬಲ್ಲರು. 'ಮೃಗಶಾಲೆಯ ಸಿಂಹಗಳು', 'ಸ್ಮಶಾನದಲ್ಲಿ' ಹಾಗೂ 'ಮನೆ ತುಂಬಿಸುವುದು' ಈ ದಿಸೆಯಲ್ಲಿ ತುಂಬ ಯಶಸ್ವಿಯಾದ ಕವಿತೆಗಳು. ನರರ ಅಂಕೆಯಲ್ಲಿ ಸಿಕ್ಕು ಮೃಗಶಾಲೆಯಲ್ಲಿ ಬಂದಿಯಾಗಿ ರುವ ಸಿಂಹ ಸಿಂಹಿಣಿಯರು ದಾಸ್ಯಕ್ಕೊಳಗಾದ ಸ್ವಾಭಿಮಾನಿಗಳ ಮನಸ್ಸಿನ ಸಂಕಟದ ಪ್ರತೀಕಗಳಂತೆ ಕವಿಗೆ ಕಂಡುಬರುತ್ತವೆ. ಸ್ವಾತಂತ್ರ್ಯದ ಸಹಜಾಭಿಲಾಷೆ ಈ ಕವಿತೆ ಯಲ್ಲಿ ಹೃದಯಸ್ಪರ್ಶಿಯಾಗಿ ಮೂಡಿದೆ. ಸಿಂಹ ಸಿಂಹಿಣಿಯರು ತಮ್ಮ ಮುಗ್ಧ ಮರಿಗಳನ್ನು ಕುರಿತು

ಕಾಡುಗಳ ಕಾಣದಿಹ
ಈ ಚಿಣ್ಣ ಹಸುಳೆಗಳು
ನಾಯಿಮರಿಗಳ ತೆರದಿ ಸುಖದಿಂದಿವೆ

('ಮೃಗಶಾಲೆಯ ಸಿಂಹಗಳು')

ಎನ್ನುವಲ್ಲಿ ವ್ಯಂಗ್ಯ ಬೆರೆತ ಕರುಣೆ ಅತ್ಯಂತ ಪರಿಣಾಮಕಾರಿಯಾದುದು. ಇಲ್ಲಿ ಮೂಡಿರುವ ಪ್ರತಿಯೊಂದು ವಿವರಗಳೂ ಸಜೀವವಾಗಿದ್ದು ಕಥನ ಸಂದರ್ಭವೂ ಧ್ವನಿಪೂರ್ಣವಾಗಿ ಇಡಿಯ ಸನ್ನಿವೇಶದ ಕಾವ್ಯತ್ವವನ್ನು ಪ್ರೋಷಿಸಿ ಗುರಿ ಮುಟ್ಟಿಸಿವೆ.

'ಸ್ಮಶಾನದಲ್ಲಿ'ಯ ಸ್ಥಾಯೀಭಾವ ಶೋಕ. ಚಿತೆಯ ಮೇಲೆ ಗಂಡನ ಶವ, ಅನಾಥೆಯಾದ ಸತಿ, ಗೋಳಾಡುವ ಬಂಧುಗಳು, ಪ್ರಕೃತಿಯು ಬಿಮ್ಮೆನ್ನುವ ಮೌನ ಒಂದೊಂದು ದೃಶ್ಯವೂ ಸಾವಿಗೆ ಕಾಣಿಕೆಯೀಯುವಂತಿವೆ.

ಚಳಿಯಲ್ಲಿ ಮಳೆಯಲ್ಲಿ
ಮಂಜಿನಲಿ ಮೋಡದಲಿ
ಕತ್ತಲಲಿ ಹಗಲಲ್ಲಿ ಮಸಣವುರಿದಿಹುದು

ಎಂಬ ಸಾಲುಗಳಲ್ಲಿ ಸಾವಿನ ನಿತ್ಯ ನಿರಂತರತೆ ಒತ್ತಿ ಮೂಡಿದೆ. ಇಂಥ ದಾರುಣ ದುಃಖದ ಸನ್ನಿವೇಶದಲ್ಲಿ

ಕರ್ಮ ಕರೆವುದು ಹೋಗಿ
ಧರ್ಮ ಕರೆವುದು ಹೋಗಿ
ಅಳುವ ಮಕ್ಕಳ ನೋಡಿರೆತ್ತಿಕೊಳಹೋಗಿ

ಎಂದು ಕವಿ ನುಡಿದಾಗ, ಇಡಿಯ ಕವಿತೆಗೆ ಒಂದು ತಿರುವು ಬಂದು, ತಾಯಿಯ ಕರ್ತವ್ಯ ಕರ್ಮವನ್ನು ಅರಿವಿಗೆ ತಂದುಕೊಡುವುದರ ಮೂಲಕ ಬದುಕಿನ ಸಾತತ್ಯ ವನ್ನು ಚಿತ್ತದಲ್ಲಿ ಕೆತ್ತಿದಂತಾಗುತ್ತದೆ. ಇಂಥ ರಸನಿರ್ಮಾಣದಲ್ಲಿ ವಿ. ಸೀ. ಅವರ ಕಾವ್ಯಕಲೆ ತನ್ನ ಸಿದ್ಧಿಯನ್ನು ತೋರಿಸಿದೆ. ಇದೇ ರೀತಿ, ಆದರೆ ಬೇರೊಂದು ಸನ್ನಿ ವೇಶದಲ್ಲಿ, 'ಮನೆ ತುಂಬಿಸುವುದು' ಕವಿತೆ ಪಡೆದಿರುವ ರಸಸಿದ್ಧಿ ಅಪೂರ್ವವಾದುದು. ಮುದ್ದಿನಿಂದ ಬೆಳೆಸಿದ ಮಗಳನ್ನು ಮೊದಲ ಸಲ ಪತಿಯ ಮನೆಗೆ ಕಳುಹಿಸಿಕೊಡುವ ಸಂದರ್ಭದಲ್ಲಿ ತಂದೆ ತಾಯಿಗಳ ಹೃದಯದಲ್ಲುಂಟಾಗುವ ಕಲಮಲವನ್ನು ಕರುಣ ರಸ ಉಕ್ಕುವಂತೆ ಅತ್ಯಂತ ಸಮರ್ಥವಾದ ರೀತಿಯಲ್ಲಿ ಅಭಿವ್ಯಕ್ತಿಗೊಳಿಸಲಾಗಿದೆ. ಇಲ್ಲಿಯ ಒಂದೊಂದು ಪದ, ಒಂದೊಂದು ಉಕ್ತಿ ವಾತ್ಸಲ್ಯ ರಸದಲ್ಲಿ ಅದ್ದಿ ತೆಗೆದಂತೆ ರಸಪೋಷಣೆಯನ್ನೊದಗಿಸಿ ಕರುಳನ್ನು ಕರಗಿಸುತ್ತವೆ. ಕವಿ ಜೀವನಾನುಭವವನ್ನು ನಿವೇದಿಸಿಕೊಳ್ಳುವ ರೀತಿ ಅಡಿದ್ದನ್ನೆಲ್ಲ ಕಾವ್ಯವಾಗುವಂತೆ ಮಾಡಿದೆ.

ಬಾಳ ಹೆದ್ದಾರಿಯನ್ನು ಹಿಡಿದೆತ್ತಿ ತೋರುವ 'ಅಭೀಃ' ಕವಿತೆ ಹೇಡಿತನವನ್ನು ಹೊಡೆದೋಡಿಸಿ ವೀರ ಸಂಜೀವನವನ್ನು ಮೂಡಿಸುವ, ಆತ್ಮ ಪ್ರತ್ಯಯವನ್ನು ಬೆಳೆ

ಸುವ ನಿರ್ಭಯದ ಮಂತ್ರ. ವೇದದ ವೀರವಾಣಿಯನ್ನು ನೆನೆದು ಆ ತೇಜ, ಸತ್ತ್ವ, ಸ್ಫೂರ್ತಿಗಳನ್ನು ಪುನಃ ಮನಸ್ಸಿನಲ್ಲಿ ಬಿತ್ತುವ ತುತ್ತೂರಿ. ಭಾವದ ಕಾವು, ಬುದ್ಧಿಯ ಪ್ರಖರತೆ, ಭಾಷೆಯ ಸಂವಹನ ಶಕ್ತಿ—ಮೂರೂ ಸಮನ್ವಯಗೊಂಡ ಪ್ರಭಾವಶಾಲಿಯಾದ ಕವಿತೆಯಿದು :

ಯಜ್ಞ ಶಾಲೆಗಳಿಂದ ಬಲಿಯಿಂದ ಸೆರೆಯಿಂದ
ತೊಂಡು ಮಲೆತೆಲ್ಲವನು ತುಳಿದತ್ತಣಿಂದ
ಕಲ್ಲು ಗಾಣಗಳಿಂದ ಸಿಲುಬೆಗಳ ನೋವಿಂದ
ವಿಷಪಾತ್ರೆಯೊಡಲಿಂದ ಸುಡುವುರಿಯ ಮಡಿಲಿಂದ
—ಅಭೀಃ! ಅಭೀಃ! ಅಭೀಃ! ಎಂಬ ನುಡಿಯೇಳುತಿದೆ.

ಮಾನವನ ಅದಮ್ಯ ಸತ್ತ್ವವನ್ನು ದಿವ್ಯಕ್ಕೆ ಗುರಿಮಾಡಿದಾಗ ಅದು ಇನ್ನಷ್ಟು ಉಜ್ವಲಗೊಂಡು ಸಕ್ರಿಯವಾಗಿ ಪ್ರಕಾಶಕ್ಕೆ ಬರುವುದನ್ನು ಕವಿಯ ಐತಿಹಾಸಿಕ ಪ್ರಜ್ಞೆ ಎತ್ತಿತೋರಿಸುತ್ತಿದೆ. ಇಲ್ಲಿಯ ಪೌರುಷವಾಣಿ ಮಾನವತೆಯ ಪ್ರೇಮವನ್ನೂ, ಕೆಚ್ಚನ್ನೂ ಕೂಡಿಯೆ ಅಸ್ಥಿಗತ ಮಾಡಿಕೊಂಡು ನಾಡಿಯನ್ನು ನಡೆಸುವ ಸಾಮರ್ಥ್ಯವನ್ನು ಪಡೆದಿದೆ. ಹೀಗೆ 'ದೀಪಗಳ'ಲ್ಲಿ ಬೆಳಗುವ ಕವಿಯ ಭಾವಾಭಿವ್ಯಕ್ತಿಯಲ್ಲಿ ವಿಚಾರದ ಬತ್ತಿ ಹೊಸೆದು ಹುರಿಗೊಂಡಿದೆ. ಮೃದುವಾದ ಭಾವಸಂಸ್ಕಾರ ತನ್ನ ತನಿಬೆಳಕನ್ನು ನೀಡಿದೆ. ಸ್ವಚ್ಛವಾದ ಶೈಲಿಯ ಸೊಬಗು ಅದಕ್ಕೆ ತೈಲವೆರೆದಿದೆ. 'ಮಹಾತ್ಮ'ನಲ್ಲಿ ವ್ಯಕ್ತವಾಗಿರುವ

ಅಶುಭದೊಡಲಲಿ ಶುಭವ ಹಿಂಡುತ್ತೆ ಹೀರುತ್ತೆ
ಶುಭದ ಸಾರವನೆರೆದು ಬೆಳೆಸುವ

ಮನೋಧರ್ಮ, ಶುಚಿ ಬಾಳಿನ ಕಾಣ್ಕೆ ಈ ಸಂಗ್ರಹದ ಮೌಲ್ಯವನ್ನು ಹೆಚ್ಚಿಸಿದೆ.

**'ನೆಳಲು—ಬೆಳಕಿ'ನ ಹಾಡು—ಪಾಡು**

"ಮನಸ್ಸಿನ ಒಂದು ಸ್ಥಿತಿ, ಒದಗಿದ ಯಾವುದೊ ಸನ್ನಿವೇಶ, ಬಲಿದ ಒಂದು ಆವರಣ, ಬಂದ ಒಂದು ಬೇಸರ, ಹುರುಡು, ವಿಜೃಂಭಣ, ಆವೇಗ, ಸಂದೇಹ, ಸೊರಗು" ಮುಂತಾದುವುಗಳ ಸೂಕ್ಷ್ಮವಾದ ಆದರೆ ಸರಳವಾದ ಚಿತ್ರಣ ವಿ. ಸೀ. ಅವರ ಭಾವಗೀತೆಗಳ ಪ್ರಧಾನವಾದ ಕಾವ್ಯಕರ್ಮ. ಬಾಳೆಗಂಬ, ಮಾವಿನೆಳಚಿಗುರು, ಬಿರಿವ ತಾವರೆಗಳ ಸಿಂಗಾರ ಸಡಗರದ ಜೊತೆಗೆ 'ಬಾಳಕಾವಣದಲ್ಲಿ ಸೋವ ಅರುಳು ಮರುಳ'ನ್ನೂ ಇವರ ಕಾವ್ಯ ಅಲ್ಲಲ್ಲಿ ಕಾಣಿಸುತ್ತದೆ.

ಹಿಂದಿನ 'ನಾಟ್ಯಾನುಕರಣ'ದ ಲಾಲಿತ್ಯಕ್ಕೂ ಇಲ್ಲಿಯ 'ಕಾಲನಟ'ನ ಹಾಸುಬೀಸಿಗೂ ಹೋಲಿಸಿ ನೋಡಿದರೆ ಇದರ ಕಾವ್ಯ ಕಲೆಯ ಬೀಸು ಬೆಡಗು ಒಡೆದು ಕಾಣುತ್ತದೆ. ನರ್ತನ ಕಲೆ ಇಲ್ಲಿಯ ಕಾವ್ಯಸ್ಫೂರ್ತಿಗೆ ರಸದ ಸೆಲೆಯಾಗಿ ನಿಂತಿದೆ :

ಶ್ರಾವಣಕ್ಕೆ ಕನಲಿ ನೀರು ಕಡಲ ಕಾಣದಾಳದಿಂದ
ಅಬ್ಬರಿಸುವ ರವವ ಕೇಳಿ ಮದಿಸಿದಾನೆ—
ಘೋರ್ಗರೆಯನು ಎಮ್ಮ ಕಿವಿಗೆ ಹರಿಸುತಾನೆ

('ಕಾಲನಟ')

ಇವೇ ಮೊದಲಾದ ಸಾಲುಗಳಲ್ಲಿ 'ಹೊಸತು ಕಾಲಪುರುಷ'ನ ದರ್ಶನ ಮಾಡಿಸುತ್ತಾರೆ ಕವಿ.

ಪ್ರೇಮದ ಸುಖಸಂಭ್ರಮಗಳಲ್ಲಿಯೂ ಎಲ್ಲಿಯೋ ಮಿಡಿಯುವ ನೋವಿನ ಒಳದನಿಯನ್ನು ಪ್ರಕೃತಿಯ ಚಿತ್ರದೊಂದಿಗೆ ಮೂಡಿಸುವಲ್ಲಿ ಇವರ ಕೆಲವು ಪ್ರೇಮಗೀತೆಗಳು ಪರಿಣಾಮಕಾರಿಯಾಗಿವೆ.

ಇಂದು ಮಾಗಿಯು ಮುಗಿವ ಮುನ್ನವೆ
ನಗುವ ಬೇಸಗೆ ಬಂದಿದೆ
ಕಾಮನಂಬಿನ ಕೆಳೆಯ ರಂಗುಗಳೆಲ್ಲವನ್ನೂ ತಂದಿದೆ

ಎಂದು ಪ್ರಾರಂಭವಾಗುವ 'ಸೆಳೆ' ಕವಿತೆ ಉದ್ದಕ್ಕೂ ತನ್ನ ಛಂದೋಬಂಧದಲ್ಲಿ ಮೋಹನದ ಬಿಸುಪನ್ನು ಕಾಯ್ದುಕೊಂಡಿದೆ. 'ಕಣ್ಗೆ ರೂಪವು ಇಳಿವ ಮುನ್ನವೆ ಎದೆಗೆ ಪ್ರೇಮವು ಹರಿಯಿತು', 'ಬಂಡು ತುಂಬಿದ ಇಂದಿನೊಡಲನು ಹಿಂಡಿ ಕೆಳೆಯನು ಕಡೆವೆ ಬಾ' ಇವೇ ಮುಂತಾದ ಮಾತುಗಳಲ್ಲಿ ಅದಮ್ಯ ಬಯಕೆಯ 'ಕುದಿವ ನಾಡಿಯ ನೆತ್ತರೋಟ'ವನ್ನು ಕಾಣುತ್ತೇವೆ. ಮನವು ಬೇರೊಬ್ಬನಿಗೆ ಈ ಮೊದಲೇ ಸೂರೆಹೋಗಿ ಎದೆಯ ಸಂತಸದ ಕಾವು ಕುಗ್ಗಿಹೋದ ಇನ್ನೊಂದು ಹೆಣ್ಣನ್ನು ಮತ್ತೊಬ್ಬ ಕೈಹಿಡಿದಾಗ, ಅವನ ಪ್ರೇಮ ಋಣ ಹೊರೆಯಾಗಿ ಆ ಹೆಣ್ಣಿನ ಮೊದಲ ಮೋಹದ ತೆರೆದ ಮನಸ್ಸಿನ ಮಾತು 'ಬೇಡ' ಕವಿತೆಯಲ್ಲಿ ಮನಸ್ಸನ್ನು ಮುದುಡಿಸುತ್ತದೆ. 'ಅಗಲಿಕೆ' ಒಂದು ದೃಷ್ಟಿಯಲ್ಲಿ 'ಮಡದಿ' ಕವಿತೆಗೆ ಸಂವಾದಿಯಾಗಿ ನಿಲ್ಲುವಂಥದು. ಕೆಲ ದಿನ ನಲ್ಲೆಯಿಂದ ಅಗಲಿ ಇರುವ ಸಂದರ್ಭದಲ್ಲಿ ಪತಿಯ ಬಾಳನ್ನು ಕವಿದು ಅಬ್ಬರಿಪ ಶೂನ್ಯ ಇಲ್ಲಿ ಚೆನ್ನಾಗಿ ಚಿತ್ರಿತವಾಗಿದೆ.

ಇದ್ದಾಗ ಕಾಣಿಸವು ಕೆಳೆಯು ಸೊಗಸು!
ಕಣ್ಗೆ ಹಾಯವು ಬೆಲೆಯು ಸವಿಯು ಮೃದುವು
ಇನಿಸು ದೂರಕೆ ಸರಿದು ಕಿರುಗಾಲ ಕಾಣದಿರೆ
ಸೊರಗಿ ಹಾತೊರೆಯುವದು ಬಯಕೆ ತೆರೆದು

ಎಂಬ ಅನುಭವದಲ್ಲಿ ಜೀವನದ ಸತ್ಯ ಸೊಗಸಾಗಿ ಒಡಮೂಡಿದೆ. ರಾಮನಿಗಾಗಿ ಕಾದು ನಿಂತ 'ಶಬರಿ' ಗೀತ

ಬಂದಾನೊ ಬಾರನೊ ಓ
ಕಂಡಾನೋ ಕಾಣನೋ ಓ
ಎಂದೆಂದು ಜಪಿಸಿ ತಪಿಸಿ
ಶಂಕಾತುರಂಗಳೂರಿ

ನುಡಿ ಸೋತ ಬಡವರ ಮೂಕಪ್ರೇಮದ ಚಿತ್ರವಾಗಿಯೂ ಮನಸ್ಸಿನಲ್ಲಿ ನಿಲ್ಲುವಂತೆ ಎಸಗಿರುವದು ಕವಿಯ ದೃಷ್ಟಿವಿಶೇಷ.

'ಗೀತಗಳ'ಲ್ಲಿಯ 'ಮುಂಗಾರು' ಹಾಗೂ ಈ ಸಂಗ್ರಹದ 'ಮುಂಗಾರಿಗೆ' ಕವಿತೆಗಳನ್ನು ಹೋಲಿಸಿ ನೋಡಿದಾಗ ಋತುಗಳಿಗೂ ಮಾನವನ ಬದುಕಿಗೂ ಇರುವ ಜೀವಸೌಗಂಧವನ್ನು ಎರಡನೆಯ ಕವಿತೆ ಮನೋಜ್ಞವಾಗಿ ಚಿತ್ರಿಸಿದೆ. ಮೊದಲ ಕವಿತೆಯಲ್ಲಿಯ ಆವೇಶ ಇಲ್ಲಿ ಆಲೋಚನೆಯಾಗಿ, 'ಎಲ್ಲ ಬೆಳಸಿಗು ರಸವನಿಡುತ' ಬರುವ ಆಕಾಂಕ್ಷೆ ಇಲ್ಲಿ ತನಿಗೊಂಡಿದೆ. ಬಾಳ ತಿಳಿವನ್ನು ಅರಗಿಸಿಕೊಂಡ ಕವಿಯ ಇಲ್ಲಿಯ ಜೀವನ ದೃಷ್ಟಿಯನ್ನು ನೋಡಿ :

ನಿಮ್ಮಬ್ಬರದ ಕೂಗು ಗುಡುಗಿ ನಡುಗಿಸುತಿರಲು
ಸಂತಸವ ತಂದಾವು ಆ ಭಯಗಳೂ
ನಿಮ್ಮ ಸಿಡುಕಿನ ಸಿಡಿಲು ಸುಟ್ಟು ಉರಿಸುತಲಿರಲು
ಮೇಲನೊಳ್ಪನು ನೆನೆದು ಮನ ನಲಿವುದು.

ಅದೇ ರೀತಿ 'ಮಧುಮಾಸ' ಇಲ್ಲಿಯ 'ಲಾಲ್‌ಬಾಗ್'ನಲ್ಲಿ ಬೀಡುಬಿಟ್ಟು ಕಣ್ಣಿಗೂ ಮನಕ್ಕೂ ಅನುಭವಕ್ಕೂ ಇನ್ನಿಷ್ಟು ಸಮೀಪವಾಗಿ ಅದರ ಸವಿಯನ್ನೂ ಬೆಡಗನ್ನೂ ಮೈತುಂಬಿಕೊಂಡ ಸಜೀವ ವಿವರಗಳಲ್ಲಿ ಕವಿ ಸೂರೆಗೊಂಡಿದ್ದಾರೆ. ಆದರೆ ಅದೇ ಚೈತ್ರದ ಸೊಬಗು ಮನದ ಶಿಶಿರವನ್ನು ಕಳೆಯದೆ, ಎದೆಯ ವೇದನೆಯನ್ನು ತೀರಿಸದ ಒಂದು ಮನಸ್ಥಿತಿಯನ್ನು, ನಿರಾಶೆಯನ್ನು 'ವರುಷ ಹೋಯಿತು' ಕವಿತೆ ಹಾಡಿನಲ್ಲಿ ಸರಳಗೊಳಿಸಿದೆ.

ಮನಸ್ಸಿಗೆ ಬಿಗುವನ್ನೂ, ವೀರ ಭರವಸೆಯನ್ನೂ ಕೋರುವ 'ಜೇಡಿಕೆ'ಯಲ್ಲಿ ಕವಿಯ ಮನೋಧರ್ಮ ಎಂದಿನಂತೆ ಪ್ರಗತಿಪರವಾಗಿದೆ :

ನಯವು ನುಣುಪು ಸವಿಯು ಮೆಲುಪು ಬೇಸರಾಯಿತು, ನಿಲ್ಲಿಸಿ ;
ಹಿರಿಯ ರಾಗದ ಮದವ ಕೆರಳಿಸಿ ಗಂಡು ತಾನವ ಮೊಳಗಿಸಿ.

ಧೈರ್ಯವನ್ನು ಮುರಿಯದ ಬಾಳುವಾಸೆಯನ್ನು ಮೆರೆಸಲು ಜೀವನದ ಎಲ್ಲ ಬಗೆಯ ಅನುಭವ, ಬದುಕಿನ ಎಲ್ಲ ಬಗೆಯ ಸಂತಸ ಅವಶ್ಯವೆಂದು ಕವಿ ಸೂಚಿಸಿದ್ದಾರೆ.

'ನೆಳಲು ಬೆಳಕಿ'ನ ಪದ್ಯಗಳಲ್ಲಿ ಕೆಲವೆಡೆ ಕವಿಯ ವಿಚಾರಗಳು ಸರಳ ಹೇಳಿಕೆಗಳಾಗಿದ್ದರೂ ದ್ವಂದ್ವಗಳನ್ನು ಮೀರಿ ನಿಂತ ಒಂದು ನೆಲೆಯಲ್ಲಿ ಬಾಳನ್ನು ನಿರೀಕ್ಷಿಸುವ ಗುಣ ಇಲ್ಲಿ ಮನಸ್ಸನ್ನು ಹಿಡಿಯುತ್ತದೆ. ಜೀವನಾನುಭವ ಗಟ್ಟಿಗೊಂಡು ಬೀಜಗಾಳುಗಳನ್ನು ಹಿಡಿದಿಡಲು ಹವಣಿಸುವಂತಿದೆ :

ಹಸುರು ಹೊನ್ನಾಗುತಿದೆ ಗದ್ದೆ ಪಯಿರು ;
ಹಾಲು ತುಂಬುತೆ ತೆನೆಗೆ ಕಾಳ ಬಲಿಸುತಿದೆ.

('ಬದುಕು')

ಎಂದು ಗೈಮೆಯ ಗರಿಮೆ ಗುಣಗಾನವನ್ನು ಕೇಳಿಸಿ, ಬಿಡುಗಡೆಯ ಹೊಸ ಬಾಳು

ಹೂ ಬಿಡುತ್ತಿರುವುದನ್ನು ಸೂಚಿಸಿ, ಇದೇ ಇಹ, ಪರ, ಇದೇ ಸೌಭಾಗ್ಯ ಎಂದು ತುಂಬುಬಾಳಿನ

ಓ ಮಗುವೆ, ಓ ಪ್ರಿಯಳೆ ಓ ನನ್ನ ಸಖಿರೇ
ಬನ್ನಿ, ಬಾಳ್ಗಡಲಲ್ಲಿ ಮಿಂದು ಮುಳುಗಿ.

ಅದರ ಸವಿಯನ್ನೆಲ್ಲ ಅನುಭವಿಸಿ ಆನಂದಿಸಲು ಕವಿ ಕರೆ ನೀಡಿದ್ದಾರೆ.

### ಮಾಗಿ ಬಾಗಿದ 'ದ್ರಾಕ್ಷಿ-ದಾಳಿಂಬೆ'

ವಿ.ಸೀ.ಯವರ ಕಾವ್ಯ ತನ್ನ ಕಲೆಗಾರಿಕೆಯಲ್ಲಿ ಮಾಗಿ ರಸದುಂಬಿದ ಪರಿಯನ್ನು 'ದ್ರಾಕ್ಷಿ ದಾಳಿಂಬೆ' ಸಂಗ್ರಹದ ಕೆಲವು ಕವಿತೆಗಳಲ್ಲಿ ಕಾಣುತ್ತೇವೆ. ಕಾವ್ಯವಸ್ತು ಹಿಂದಿನ ಸಂಗ್ರಹಗಳಲ್ಲಿ ಕಂಡಹಾಗೆಯೇ. ಆದರೆ ಹದಗೊಂಡ ಚಿತ್ತಸಂಸ್ಕಾರ, ಶುಭ್ರವಾದ, ಉದಾರವಾದ ಮನೋಧರ್ಮ, ಅಪರದೇ ಆದ ಪ್ರಾಮಾಣಿಕ ಭಾವವ್ಯಂಜನ, ಆ ವಿಷಯಗಳಿಗೆ ನಿತ್ಯನೂತನತೆಯನ್ನು ತಂದುಕೊಟ್ಟಿವೆ. "ಯಾವ ಪ್ರಕರಣಗಳಲ್ಲಿ ಆಗಲಿ ಮುನ್ನಡೆ ಹೊರಪ್ರಪಂಚಕ್ಕೆ ಎಷ್ಟು ಸೇರಿದುದೊ ಅಷ್ಟೇ ಅಂತಃಪ್ರವೃತ್ತಿಗಳ ಪರಿಶುದ್ಧಿಗೂ ಸೇರಿದುದು. ಮನುಷ್ಯನ ಮೂಲ ಸತ್ತ್ವಕ್ಕೆ ಸಂಬಂಧಿಸಿದುದು" ಎಂದು ಮುನ್ನುಡಿಯಲ್ಲಿ ಹೇಳಿದ ಮಾತು ಲಕ್ಷಿಸತಕ್ಕುದು. ಇಂಥ ಅಂತಃಪ್ರವೃತ್ತಿಗಳ ಪರಿಶುದ್ಧಿಯಲ್ಲಿ ಸಹಜತೆ, ಆರ್ದ್ರತೆ, ಶುಚಿಯಾಸೆ, ಆ ಬಗ್ಗೆ ಪಕ್ಷಪಾತ, ಶ್ರದ್ಧೆಗಳನ್ನು ಕವಿ ಇಟ್ಟುಕೊಂಡು ಬೆಳಸಿಕೊಂಡು ಬಂದಿದ್ದಾರೆ. ಅದರ ಕಾವನ್ನು, ಗುಣವನ್ನು, ಶಕ್ತಿಯನ್ನು ಇಲ್ಲಿಯ ಹಲವು ಪದ್ಯಗಳು ಹೊರ ಹೊಮ್ಮಿಸುತ್ತವೆ.

'ಅಭೀಃ' ಕವಿತೆಯ ಛಂದಸ್ಸಿನ ಒಡಲಿನಿಂದಲೇ ಮುಕ್ತಛಂದವೊಂದು ಮೈದಾಳಿ ಬೀಸುಗಾಲಿನಿಂದ ಮುನ್ನುಗ್ಗಿದೆ 'ಗಡಿ ದಾಟು' ಕವಿತೆಯಲ್ಲಿ. ಭಾರತದ ಜನತೆ ತನ್ನ ಬಿಡುಗಡೆಗೆ ನಡೆಸಿದ ಸತ್ಯಾಗ್ರಹ ಸಮರದಲ್ಲಿ ಮೆರೆದ ಪೌರುಷ ಪರಾಕ್ರಮ ಉತ್ಸಾಹ ಗಳ ಸತ್ತ್ವಪೂರ್ಣ ಚಿತ್ರವನ್ನು ಇಲ್ಲಿ ಕಂಡರಿಸಲಾಗಿದೆ. ಜೊತೆಯಲ್ಲಿ ಅದರ ಆಶೋತ್ತರಗಳನ್ನೂ ತೆನೆಗಟ್ಟಿದ ಬೆಳಸನ್ನೂ, ಕನಸನ್ನೂ ಚೌಕಟ್ಟಿನಲ್ಲಿ ಕೂಡಿಸ ಲಾಗಿದೆ. ಇದರ ಛಂದೋಗತಿಯಲ್ಲಿಯೂ ಕವಿ ಹೊಸ ಬಾವುಟವನ್ನು ನಿಲ್ಲಿಸಿದ್ದಾರೆ.

ಎಪ್ಪೊಲವಿನ ಹೊಂದೇರ ಸಿಂಗರದಲ್ಲಿ ನಾಡ ಹಿರಿದೇವಿ ಭಾರತಿಯನ್ನು ಮೈ ತುಂಬಿ ಮನತುಂಬಿ ಬರಮಾಡಿಕೊಳ್ಳುವ ಗೀತೆ 'ಕಾಯಿ ಮೊಗ್ಗು'. ನಮ್ಮ ಕನ್ನಡ ನಾಡಿನ ಹಿರಿಮೆ, ಗರಿಮೆಗಳನ್ನು, ವೀರಸಿರಿಯನ್ನು, ಘನತೆಯನ್ನು 'ಕನ್ನಡ ನಾಡು' ಮುಕ್ತಕಂಠದಿಂದ ಸಾರುತ್ತದೆ. 'ಬೀಳ್ಕೊಡುಗೆ'ಯಲ್ಲಿ ಗೆಳೆತನದ ಸವಿ 'ಒಂದು ಜನ್ಮಕ್ಕೆ ಸಾಲುವ ಹರುಷ'ವನ್ನು ಹಿಡಿದಿಟ್ಟುಕೊಂಡಿದೆ.

'ನಟ್ಟ ಕೂದಲಿಸಂತೆ ನಿಲ್ಲುವ' ಚೆಲುವೆಯೊಬ್ಬಳ ಬೆಡಗು-ಭ್ರಮೆ, ಕೆಣಕು ಕೆಲೆತಗಳನ್ನು 'ನೀನಾರೆ ?' ಕವಿತೆ ಬಣ್ಣಿಸುತ್ತದೆ. 'ಕೊಲುವ ಮೋಹದ ಬೆರಗೆ,

ಸೆರಗೆ' ಎಂಬ ಉದ್ಗಾರ ಸಾರ್ಥಕವಾಗಿದೆ. ಪರಸ್ಪರರ ಮನಸ್ಸನ್ನು, ರೀತಿ ನಡತೆಯನ್ನು ಅರಿತಿರದಿದ್ದರೂ ಓರಿಯರ ಬಯಕೆಗೆ ಬಾಗಿ ಪಯಣ ಹೊರಟ ಸತಿಪತಿಗಳ ದಾಂಪತ್ಯದ ದೃಢತೆ 'ಸಪ್ತಪದಿ'ಯಲ್ಲಿ ಮೂಡಿವೆ. ಒಬ್ಬರ ಗುಣಕ್ಕೆ ಇನ್ನೊಬ್ಬರು ಸೋಲುವ, ಕುಂದಿಗೆ, ಕೊರತೆಗೆ ಕೆರಳದೆ ಸಹನೆ ಕವಿಯುವ ದಾಂಪತ್ಯಧರ್ಮದ ಸಾತ್ವಿಕತೆ, ಮಧುರ ಪ್ರೇಮ ಅದರ ಮೌಲ್ಯಗಳಾಗಿವೆ.

ದಿನದಿನವೂ ಮೆಚ್ಚನು ಬಳಸುತೆ
ದಿನವೂ ಹತ್ತಿರ ಸರಿಯುವೆವು.
ದಿನವೂ ಹೊಸಗುಣದಾಕರ್ಷಣದಲಿ
ಒಲವಿನ ಕಾಣಿಕೆ ಸಲಿಸುವೆವು

ಎನ್ನುವಲ್ಲಿ ದಂಪತಿಗಳ ಒಲವಿನ ಸಹಜ ಬೆಳವಣಿಗೆಯನ್ನೂ, ಬಂಧುರತೆಯನ್ನೂ ನುಡಿಸಲಾಗಿದೆ. ಇವರ ಬಾಳು ಹೂಬಿಟ್ಟರೆ ಎಲ್ಲರ ಮೊಗವೂ ಅರಳುತ್ತದೆ. ಇವರ ನಗುವು ತುಂಬಿ ತುಳುಕಿದರೆ ಎಲ್ಲಾ ತೆನೆಗಳೂ ಹಾಲಿಡುತ್ತವೆ. ಹೀಗೆ ಇವರ ಸಂಸಾರ ಸುಖದಲ್ಲಿ ಲೋಕದ ಸುಖವೂ ಅಡಗಿದೆ ಎನ್ನುವುದನ್ನು ಕವಿ ಸುಂದರವಾಗಿ ಧ್ವನಿಸಿದ್ದಾರೆ. ಇಂಥ ದಂಪತಿಗಳ ಅಗಲಿಕೆಯ ಅನುತಾಪ 'ವಿರಹಿಯಲ್ಲಿ' ಸಹಜ ಸುಂದರವಾಗಿ ಅಭಿವ್ಯಕ್ತಿಗೊಂಡಿದೆ. 'ಎಲ್ಲಿರುವಿರಿ, ಓ, ದೂರದಿ ಚೆಲ್ಲಿಹ ಬೆಳುದಿಂಗಳಲಿ' ಎಂಬ ಸತಿಯ ಹೃದಯಕಾತರ ಇರುಳಿನ ವಾತಾವರಣವನ್ನೆಲ್ಲ ಸ್ಪಂದಿಸಿ ತೋರುತ್ತದೆ :

ಏನಿದ್ದರೆ ಏಬಂಡವೂ ನೀವಿದ್ದರವೆಲ್ಲ
ನೀವಿಲ್ಲದ ಸೌಭಾಗ್ಯಗಳೇನಿದ್ದರು ಸಲ್ಲ.

ಎಂಬ ಮಾತಿನಲ್ಲಿ ಆಕೆಯ ಸತೀಧರ್ಮ ಹೊಳಪುಗೊಂಡಿದೆ.

ಮಗು ಬೆಳೆಯುತ್ತಿರುವಾಗಲೇ ತಾಯಿ ನೀಡುವ ಹಿತೋಪದೇಶ 'ತಾಯ ಬಯಕೆ'ಯಲ್ಲಿ ವಾತ್ಸಲ್ಯಪೂರ್ಣವಾಗಿ ಬಂದಿದೆ. ಜಗದ ಎಲ್ಲ ಪುಣ್ಯಗಳು ಮಗುವಿನ ಬೆನ್ನಲ್ಲಿ ನಿಂತು ಅವನ ಗೆಲವಿಗೆ ಬಲವನೂಡಿ ಕಾಪಿಡಲಿ ಎಂಬ ಹಾರೈಕೆ ಅವಳದು. 'ಅಂಜದಿರು ಸೋಲದಿರು ಇರವ ಹಳಿದು' ಎಂಬ ಸತ್ತ್ವವನ್ನು ಮಗುವಿನ ಮನಸ್ಸಿನಲ್ಲಿ ಬೆಳೆಸುವ ಸಂಸ್ಕೃತಿ ಅವಳದಾಗಿದೆ. ಅದೇ ರೀತಿ 'ತಂದೆ ಹರಕೆ' ಕವಿತೆ ಮಕ್ಕಳ ಬಗ್ಗೆ ತಂದೆಯ ಮನೋಭಾವವನ್ನು ಪ್ರತಿಬಿಂಬಿಸುತ್ತದೆ. ತಾನು ಗಳಿಸಿದ ಪುಣ್ಯ, ಕೀರುತಿ ಅವರ ಬದುಕಿಗೆ ಬೆರೆಯಲೆಂದೂ, ತನ್ನ ಆಸೆಯ ಕನಸು ಕಾಂಕ್ಷೆಯನ್ನು ಅವರು ರೂಢಿಸಿ ಬಳಸಲಿ ಎಂಬುದೂ ಅವನ ಬಯಕೆ; ಹೆರರ ನೋವಿಗೆ ಕರಗುವ ಗುಣವನ್ನು ಅವರು ಮೆರೆಯಬೇಕು. ತಲೆಗೆ ತಲೆಯಾಗಿ ಹಬ್ಬಿ ವಂಶ ಬೆಳೆಯಲಿ ಎಂದು ತಂದೆ ಆಶಿಸುತ್ತಾನೆ.

ನನ್ನ ದಿಬ್ಬಣವವರ ಭುಜದಲಿ
ಮಸಣ ಸೂಡಿಗೆ ನಡೆಯಲಿ.

ಎಂಬ ಅವನ ಆಶೆಯಲ್ಲಿ ಬಾಳಿನ ತೃಪ್ತಿಯೂ ಅಡಗಿದೆ.

'ಹರುಷ ಬಾರದು ಬಾರದು' ಎಂದು ಹಾಡಿದ ಎದೆಯ ವೇದನೆ 'ಸವೆದ ಹರುಷ' ಕವಿತೆಯಲ್ಲಿ ಹತ್ತಾರು ಮುಖಗಳನ್ನು ಪಡೆದು ಬಾಳಿನ ತೊಳಲಾಟವನ್ನು ಕರುಣಾಪೂರ್ಣವಾಗಿ ಚಿತ್ರಿಸುತ್ತದೆ. ಕೊಲ್ಲುವ ಅಲಗು ಒಂದು ಲೇಸು ಆದರೆ

ಇಲ್ಲಿ ದಿನನಿಶಿಯೆಲ್ಲ ಮನೆಯಲಿ
ಕೊಂದು ಕೊಲ್ಲದ ಕೊಲೆಯಿದೆ

ಎಂಬುದನ್ನು ಕವಿಯು ಒಳಗಣ್ಣು ಕಂಡಿದೆ. ಬೆಳೆವ ಬಾಳಿನ ಬಯಕೆಗೆ ಕುಳಿ ತೋಡುವ ನಡೆಗಳೂ ಇಲ್ಲಿವೆ. ವಿಷ, ಬೆಂಕಿ, ಅಲಗು, ಗಾಣ, ಕುದಿವ ಎಣ್ಣೆ, ಸೀಸೆ, ಸಿಲುಬೆ, ಮೊಳೆಗಳೂ ಇದಕ್ಕೆ ಸಾಟಿಯಲ್ಲವೆನ್ನುತ್ತದೆ ಆ ನೊಂದ ಮನಸ್ಸು. ಬರಿಯ ಉಸಿರು ಹೊತ್ತರೆ ಸಾಲದು.

ನಾಡ ನಲಿಸುವ ಜೀವ ಬಾಳ ನಗಿಸುವ ಜನವು
ಹುಟ್ಟಿ ಮೆರೆಯುವವರೆಗು ಬದುಕು ಬದುಕೆ ?

('ಹಿನ್ನೋಟ')

ಎಂದು ಕವಿ ಕೇಳುತ್ತಾರೆ. ಜಗತ್ತೆಲ್ಲ ಸಿರಿ ತೊಟ್ಟು ಬದುಕುತ್ತಿರುವಾಗ ನಾವು ವಿರಸ ನಿಶ್ಚೇತನದಲ್ಲಿ ಜೋತಿರುವ ಸ್ಥಿತಿ ಅವರ ಮನಸ್ಸನ್ನು ಕಲಕಿದೆ. ಹಾಗೆಯೇ ನಿಷ್ಕಾರಣವಾದ ವೇದನೆ 'ಏಕೊ' ಕವಿತೆಯಲ್ಲಿ ಚಿಂತನೆಗೆ ತೊಡಗಿದೆ.

'ಶತಂ ಜೀವೇಮ ಶರದಃ' ಕವಿತೆಯಲ್ಲಿ ನಮ್ಮ ದೇಶದ ಪ್ರಾಚೀನ ಸಂಸ್ಕೃತಿಯ ಹಿನ್ನೆಲೆಯಲ್ಲಿ ಜೀವನದ ಸುಖ ಸಂತೋಷಗಳ ದರ್ಶನ ಮಾಡಿಸಿ, ಸದ್ಯದ ಸ್ಥಿತಿಯಿಂದ ಮೇಲೆದ್ದು ಈ ನಾಡು ಎಚ್ಚರಗೊಳ್ಳುವದೆಂದು ? ಭವ್ಯ ಬಾಳನ್ನು ಎಂದು ಬಾಳೀತು ಎಂಬ ಒಳಮನದ ಕಳಕಳಿ ಸೊಗಸಾಗಿ ಪ್ರಕಟವಾಗಿದೆ. ಬದುಕು ನಿಜವಾಗಿ ಎಲ್ಲ ಕರಣದ ವೃತ್ತಿ ಹಣ್ಣು ಬಿಡುತ್ತಿದ್ದ ಆ ಕಾಲದಲ್ಲಿ ಇಹಪರಗಳನ್ನು ಸಮನ್ವಯಿಸಿ ಚೈತನ್ಯಮೂರ್ತಿಗಳಾಗಿ ನೂರು ಶರತ್ಕಾಲಗಳನ್ನು ಸುಖ ಸಂತೋಷಗಳಿಂದ ಕಳೆಯುತ್ತಿದ್ದ ಅವರ ಜೀವನವನ್ನು ಕವಿ ಚಿತ್ರಿಸಿದ್ದಾರೆ. ಅಂಥ ಶುಭ ಸಂಭ್ರಮಗಳನ್ನು ಇಂದಿನ ಭಾರತೀಯ ಜೀವನಕ್ಕೆ ತಂದುಕೊಡುವ ವೀರರೆಲ್ಲಿ ?

ಯಾವ ಮಿತ್ರರು ಹುಟ್ಟಿ ಕತ್ತಲನು ಹರಿಸುವರೊ
ಯಾವ ಗಾಳಿಗಳೆದ್ದು ಉಸಿರನೂಡುವುವೊ
ಯಾವ ವೀರರ ಗಂಡು ಪೌರುಷವನೆತ್ತುವುದೊ

ಎಂದು ನೆನೆದು, ಅನಂತವಾದ ವೀರ್ಯ, ಅನಂತವಾದ ವರ್ಚಸ್ಸು, ಅನಂತವಾದ ವೈಭವ ಮಹಿಮೆಗಳಿಂದ ನಮ್ಮ ಜೀವನ ದೇಶದ ಶ್ರೇಯಸ್ಸನ್ನು ಎಂದು ಸಾಧಿಸುತ್ತದೆಯೋ ಎಂಬ ಆಶೆಯಲ್ಲಿ ಕವಿತೆ ಮುಕ್ತಾಯಗೊಂಡಿದೆ. 'ಕಸ್ಮೈ ದೇವಾಯ?', 'ಅಭೀಃ' ಹಾಗೂ 'ಶತಂ ಜೀವೇಮ ಶರದಃ' ಈ ಮೂರು ಕವಿತೆಗಳ ರೀತಿ ಒಂದೇ ಆಗಿದ್ದು, ಐತಿಹಾಸಿಕ ಪ್ರಜ್ಞೆಯಲ್ಲಿ ಮಿಂದು ಮೇಲೇಳುವಾಗ ಕವಿಯ ಭಾವ, ವಿಚಾರಗಳು ಪಡೆಯುವ ವೈಶಿಷ್ಟ್ಯ ಎದ್ದು ಕಾಣುತ್ತದೆ.

'ಸಾಲ', 'ಕ್ರೋಧಕೇತನ'ಗಳಲ್ಲಿ ಸಾಮಾಜಿಕ ಅನ್ಯಾಯಗಳ ಬಗ್ಗೆ ಕವಿಯ ಮನಸ್ಸಿನ ಸಾತ್ವಿಕ ಸಂತಾಪ ಹೆಡೆಯೆತ್ತಿದೆ. 'ಎಮ್ಮ ನಾಡಿನ ಹೂವು ಹಣ್ಗಳು ಎಮ್ಮ ನೆತ್ತರ ಕುಡಿಗಳು,' ಎಂಬಲ್ಲಿ ಈ ದುಡಿಮೆಯವರ ಹೃದಯದ ಮೊರೆತವಿದೆ. ಪರರ ಲಾಭಕ್ಕೆ ದುಡಿವ ತೊತ್ತುಗಳಾಗಿ ನೊಗವನ್ನು ಹೊತ್ತ ಇವರ ಬಾಳನ್ನು

ನಿಮಿರಿ ನಿಲ್ಲುವ ಒಡಲು ಬಾಗಿತು
ಭುಜವು ಸೋತಿತು ಸೊರಗಿತು
ತೊಡೆಯ ಹೆಜ್ಜೆಯ ದೃಢವು ಕೆಟ್ಟಿತು
ಎದೆಯ ಗಂಡೇ ಹೀರಿತು

('ಕ್ರೋಧಕೇತನ')

ಎಂಬ ಸಾಲುಗಳು ಚೆನ್ನಾಗಿ ಚಿತ್ರಿಸುತ್ತವೆ. ಪ್ರಳಯ ಘೋಷವು ಏರಿ ಕವಿಯುತ್ತ ಬರುವುದನ್ನು ಈ ಕವಿತೆಯ ಪದಪದವೂ ಪಂಜಿನಂತೆ ಎತ್ತಿ ಹಿಡಿದಿದೆ. ಆ ರೋಷದ, ಆ ನಡಿಗೆಯ ಗತಿಗೆ ತಕ್ಕಂತೆ ಛಂದಸ್ಸೂ ನೀಳವಾಗಿ, ಕಿರಿದಾಗಿ ಏರಿಳಿದ ಭಾವಕ್ಕೆ ತಕ್ಕ ರೂಪವನ್ನು ಒದಗಿಸಿಕೊಟ್ಟಿದೆ.

ಚೆಲುವುಗಳು, ಜೀವಗಳು ಕಲ್ಲುಬಂಡೆಯಿಂದ ಬೇಗ ತಮ್ಮ ಸೆರೆ ಬಿಡಿಸಿರೆಂಬ ಕೂಗು ಶಿಲ್ಪಿಯ ಕಿವಿಗೆ ಕೇಳಿಸುವ ಕಲ್ಪನೆ ಸುಂದರವಾಗಿದೆ.

ಬಿಟ್ಟುಕೊಡು ಬಿಟ್ಟುಕೊಡು
ಕಗ್ಗಲ್ಲ ಸೆರೆಯಿಂದ
ಬಿಟ್ಟುಕೊಡು ಸೌಂದರವನು

('ಶಿಲ್ಪಿ')

ಎಂದು ಪ್ರಾರಂಭವಾಗುವ ಈ ಕವಿತೆ ಸುತ್ತಿಗೆಯ ಪೆಟ್ಟಿನ ಭಾವಾಭಿನಯದೊಂದಿಗೆ ಕಲಾನಿಷ್ಠೆಯನ್ನು ಕಂಡರಿಸುತ್ತದೆ. 'ಬೇಲೂರು ಚೆನ್ನಕೇಶವ'ದಲ್ಲಿ ಕಲ್ಲು ನಾಡಿನ ಕತೆಯನ್ನು ಹೇಳುವುದನ್ನು ಕೇಳಿ, ಕವಿತೆಯಲ್ಲಿ ಆ ಶಿಲ್ಪ ಸೌಂದರ್ಯಕ್ಕೆ ನಾಲಗೆ ನೀಡಿದಂತಿದೆ. ಇಲ್ಲಿಯೂ ಹಿಂದಿನವರ ಹಿರಿಯ ಬಾಳಿನ ಚೆಳೆಯನ್ನೂ ಬೆಳಕನ್ನೂ ಕಂಡು ಕೈಮುಗಿದೇ ಕವಿ ದೇವಾಲಯವನ್ನು ಪ್ರವೇಶಿಸಿದ್ದಾನೆ. ಮದನ ಕೈ-ಕನ್ನೆಯರ ಆ ವಿವಿಧ ಹಾವಭಾವ :

ಕೊಳಲನೂದುವ ತುಟಿಯು ಆದರವನೂದುತಿರೆ
ಮೃದು ಮೃದಂಗದ ಚದುರ ಚಾಪು ಕೇಳುತಿದೆ,
ಕೈತಾಳ ಕೆಳೆಗೂಡಿ ಝಣಝ ತಳಾಂಗೆನ್ನುತಿರೆ
ತಾಳದಾಟಕೆ ಲಾಸ್ಯ ತೊನೆಯುತಿಹುದು.

ಇವೇ ಮೊದಲಾದ ಪದ್ಯಗಳಲ್ಲಿ ಕಾವ್ಯ, ಶಿಲ್ಪ, ನಾಟ್ಯ ಕೈ ಕೈ ಹಿಡಿದು ನಡೆದಂತಾಗಿದೆ. ಈ ಗುಡಿಯಲ್ಲಿ 'ಬಾಳಗಾನವ ಘನಿಸಿ ಶಿಲ್ಪ'ವಾಗಿರುವುದನ್ನೂ, 'ರೂಪಿಗಾತ್ಮದ ತುಂಬಿ ಅಮೃತ'ಗೈದಿರುವುದನ್ನೂ ಕವಿ ತೃಪ್ತಿಯಿಂದ ಚಿತ್ರಿಸಿದ್ದಾರೆ.

ಬಾಳ ಸೌಜನ್ಯವನ್ನು ರೂಪಿಸುವ ಜೀವನದ ಎಲ್ಲ ಇಚ್ಛೆಗಳಲ್ಲಿ ಸಂತುಷ್ಟಿ ಸಮಭಾವಗಳನ್ನು ತುಂಬುವ ಲಲಿತಕಲೆಗಳಿಂದ ಜೀವನ ಕಲೆಯನ್ನು ಸಂಸ್ಕಾರಗೊಳಿಸುವ, ಜೀವನದ ಪಯಣದಲ್ಲಿ 'ಎಷ್ಟು ದೂರವ ನಡೆದುದಾಯ್ತೊ ಅಷ್ಟು ಸಂತಸ ಉಂಡ' ತೃಪ್ತಿ 'ದ್ರಾಕ್ಷಿ–ದಾಳಿಂಬೆ'ಯ ಕವಿತೆಗಳಲ್ಲಿ ತಮ್ಮ ನೆಲೆ–ಬೆಲೆಯನ್ನು ಕಂಡುಕೊಂಡಿವೆ.

**ಸಂತುಷ್ಟಿ ಸಮಾಧಾನಗಳ 'ಹೆಜ್ಜೆ ಪಾಡು'**

ರೂಢಿಗತವಾದ ಛಂದಸ್ಸಿನ 'ಗಡಿ ದಾಟಿ' ಬಿಡುಗಡೆಯ ಉತ್ಸಾಹವನ್ನೂ ಉಲ್ಲಾಸವನ್ನೂ ಪಡೆದ ವಿ.ಸೀ.ಯವರ ಕಾವ್ಯದ ಒಂದು ಮಹತ್ವದ ಅಂಶ 'ಹೆಜ್ಜೆ ಪಾಡು' ಸಂಗ್ರಹದ 'ಕೈಮುಗಿದ ಗಾಂಧಿ', 'ಬಾಳ ಹೆದ್ದಾರಿ', 'ಆರಿದ ದೀಪ', 'ಮೂರ್ತಿಗೆ', 'ಅಂಗಲಾಚು' ಈ ಕವಿತೆಗಳಲ್ಲಿ ವಸ್ತುವಿಗೆ ತಕ್ಕಂತೆ ರೂಪುಗೊಂಡು ಮುಂದುವರಿದಿದೆ. ಇದರಲ್ಲಿ ನಾಲ್ಕು ಕವಿತೆಗಳು ಅಗಲಿದ ಉನ್ನತ ಚೇತನಗಳನ್ನು ಕುರಿತು ಬರೆದವುಗಳೆಂಬುದು ಇಲ್ಲಿ ಗಮನಾರ್ಹವಾಗಿದೆ. ವ್ಯಕ್ತಿಗಳು ಗತಿಸಿದ ಮೇಲೆ ದೊರೆಯುವ ಅವರ ಬಾಳಿನ ಒಂದು ಒಟ್ಟು ನೋಟ, ಚಿಂತನ ಅದನ್ನು ಸಮತಲದಲ್ಲಿ ನಿರೂಪಿಸಲು ಸಹಾಯಕಾರಿಯಾಗುತ್ತದೆಂದು ತೋರುತ್ತದೆ. ಆ ದೃಷ್ಟಿಯಿಂದ ಈ ಪದ್ಯಗಳ ಪರಿಶೀಲನೆ ಪ್ರಯೋಜನಕಾರಿಯಾಗಿದೆ.

ಮೊದಲೆರಡು ಕವಿತೆಗಳು ಗಾಂಧೀಜಿಯನ್ನು ಕುರಿತವು. ಆ ಮಹಾಸತ್ತ್ವದ ಆತ್ಮಶಕ್ತಿಯನ್ನು ಕೊಂಡು ಕೊನೆದಾಡುವ; ಹಲವು ದಿಕ್ಕಿನಿಂದ ಆ ವ್ಯಕ್ತಿತ್ವದ ಘನತೆಯನ್ನು ಅರಿಯಲು ಯತ್ನಿಸುವ, ಆ ಚಾರಿತ್ರ್ಯ ಈ ದೇಶದ ಚರಿತ್ರೆಯಾಗಿ ನಿಂತ ಸತ್ಯವನ್ನು, ಸೋಜಿಗವನ್ನು ಭಾವ–ಬುದ್ಧಿಗಳೆರಡಕ್ಕೂ ಹಾಯಿಸುವ ಕವಿತೆಗಳಿವು. ನಮ್ಮ ಮನಸ್ಸನ್ನು ಅಲ್ಲಲ್ಲಿ ನಿಲ್ಲಿಸಿ, ಆಲೋಚಿಸುವಂತೆ ಮಾಡುವ ಹಲವಾರು ಉಕ್ತಿಗಳು ಈ ಕವಿತೆಗಳಲ್ಲಿ ಕಾಂತಿಯುಕ್ತವಾಗಿ ಮಿನುಗುತ್ತವೆ :

ಇಳೆಯ ಹೊರೆಗಳು ಇಳಿದು, ಋಣ ಮುಗಿದು
ಬಾಳು ಹಗುರಾಯ್ತು ;

* * *

ಹಗೆ ತಣಿಯಲೆಂಬಂತೆ ಮನಸು ಸುಮನಸವಾಯ್ತು
ಪರಿಶಾಂತವಾಯ್ತು.

* * *

ನಿಮ್ಮೆತ್ತುಗೈ ಮುಗಿವ ದರ್ಶನವೆ
ಕಾಲಕಾಲಕ್ಕು, ಇನ್ನೂ ;

* * *

ಇನ್ನೆಂದು ಮರಳಿ ಕಂಡೀತು ಇಳೆಯು ?
ಕಂಡಾಗ ಮಚ್ಚರಿಸಿ ಕೊಲುವ ಇಳೆಯು !

* * *

ನಿಮ್ಮನೇ ನೀವ್ಬಿತ್ತಿ ಬೆಳಸಿರುವ ಬೆಳಸು

* * *

ದೇವರೇನ್ನಿಜವೊ ನಿಜವಲ್ಲೊ
ನಿಮ್ಮಂಥ ಬಾಳೊಂದು ನಿಜದ ನಿಜವು.

ಇಲ್ಲಿಯೂ ಕವಿಯು ಐತಿಹಾಸಿಕ ಪ್ರಜ್ಞೆ ವಸ್ತುವಿಗೆ ಘನತೆಯನ್ನೂ ಗಾಂಭೀರ್ಯವನ್ನೂ ತಂದುಕೊಟ್ಟಿದೆ.

ಯೂರೋಪದ ಪ್ರಸಿದ್ಧ ಗಾಯಕ ಬೀತೊವನ್ ಸಂಗೀತವನ್ನೂ ಅವನು ಕಂಡ ಕಾಣ್ಕೆಯನ್ನೂ ನೆನೆದಾಗ ಮೂಡಿದ ಭಾವ ಲಹರಿಗಳು 'ಆರಿದ ದೀಪ'ದಲ್ಲಿ ಶಕ್ತಿಯುತವಾಗಿ ಮೂಡಿ ಪೊಳಗಿವೆ. ಆ ಮಧುರ ಝೇಂಕಾರ, ಉನ್ಮತ್ತಮಯ ಘೋಷ, ಮಧುವಿತಾನ ಒಮ್ಮೆಲೇ ಕತ್ತರಿಸಿ ಕವಿ ಮನ ಕತ್ತಲಿಸಿದಂತಾದ ಅನುಭವ ಪರಿಣಾಮಕಾರಿಯಾಗಿ ಬಂದಿದೆ. 'ನರನ ಸಾಸಕೆ ಕರುಬಿ ಪಲ್ಕಿರಿವ ದೈವದುಪಹಾಸ'ಕ್ಕೆ ಕವಿ ಮರುಗಿದ್ದಾನೆ.

ಲೋಕದಲಿ ಶುಚಿ ಕಂಡು ಗುರುತಿಸಿ, ಒಲಿದು ಬೆಳೆಸುವವರು ನೂರಕ್ಕೆ ಸಾವಿರಕ್ಕೆ ಒಬ್ಬರು. ಅಂಥ ನಯ, ಸೌಹಾರ್ದ, ಸಜ್ಜನಿಕೆಗಳ ಮೂರ್ತಿಯಾಗಿದ್ದ ದಿವಂಗತ ಎಂ. ಆರ್. ಶ್ರೀ. ಯವರನ್ನು ಕುರಿತ ಕವಿತೆ 'ಮೂರ್ತಿಗೆ'.

ನೂರು ಜನ ಮುತ್ತಿರಲು ನಿನ್ನ ತಲೆ ರುಮ್ಮಾಲು ಮಿರುಗುತಿತ್ತು
ಗಾಂಭೀರ್ಯದಲಿ ನಿಂತ ಓರಿಮೆವೆರಸಿದ ಮೊಗದ ನುಣುಪ ಕಾಣಿಸುತೆ.

* * *

ಕ್ಷೇಮಕಾರಿಯು ಮೈಯು ಕೆಂಗಾಂತಿ ಹೊರಗು
ಅಂಚೆ ಬಿಳ್ಪಿನ ಮೃದುಲ ತುಪ್ಪುಳು ತೊಳಗು

ಇಂಥ ಕೆಲವು ಸಾಲುಗಳಲ್ಲಿ ಮನದಲ್ಲಿ ಓರೆಯಿಲ್ಲದ, ಬುದ್ಧಿಯಲ್ಲಿ ವಿಸಂಚವಿಲ್ಲದ ಮೂರ್ತಿಯವರನ್ನು ಕಡೆದು ನಿಲ್ಲಿಸಲಾಗಿದೆ.

ಮತ್ತೊಬ್ಬನಲ್ಲಿ ಮನಸ್ಸಿಟ್ಟು ತನಗೆ ಬಲಿಯಾದ ಹೆಣ್ಣನ್ನು ಕುರಿತ, 'ಅಂಗಲಾಚು'ವಿಕೆಯಲ್ಲಿ ಹೃದಯದ ಮೊರೆತ ಅಬ್ಬರಗೊಂಡು ನಿಂತಿದೆ. 'ಎನಗಾಗದುದು ಇನ್ನಾಗ್ಗೂ ಆಗದಿರಲೆ'ಂಬ ಮನಸ್ಸಿನ ಸೇಡು ಕ್ರೋಧ ಕೊರಗುಗಳನ್ನು ಈ ಕವಿತೆಯಲ್ಲಿ ಭಟ್ಟಿಯಿಳಿಸಲಾಗಿದೆ. ಐದೂ ಕವಿತೆಗಳ ಛಂದಃಶಿಲ್ಪ ಭಾವಲಯದ ಬಿಗಿಕಟ್ಟಿನಿಂದ ಕೂಡಿದೆ. ಲಯದ ಅಸಾಂಗತ್ಯಕ್ಕಿಂತ ಸಾಂಗತ್ಯ ಗುಣವೇ ಇಲ್ಲಿ ಕಂಡುಬರುತ್ತದೆ. ಆಡು ಮಾತಿನ ಲಯಕ್ಕಿಂತ ಉಸಿರಿನ ಲಯವೇ ಪ್ರಧಾನವಾಗಿದೆ.

ಕಡಲ ತೀರದಲ್ಲಿ ನಿಂತು ಸಂಜೆ ಸಿರಿ ಸೌಂದರ್ಯವನ್ನು ಸವಿಯುತ್ತಿರುವಾಗ ಮೂಡಿದ ಭಾವನೆ 'ಸಂಧಿ' ಎಂಬ ಚಿಕ್ಕ ಕವಿತೆಯ ವಸ್ತು. ಮೇಲೆ ನೀಲಾಕಾಶ, ಕೆಳಗೆ ಅಪಾರವಾದ ಜಲರಾಶಿ. ಎರಡು ಅನಂತಗಳು ಸೇರಿದಂತಿರುವ ಆ ದಿಗಂತ ಸಂಧಿಯನ್ನು ನೋಡಿ, ನೆನೆದು, ಭಾವಿಸಿ

ಏನು ದೌರ್ಭಾಗ್ಯವಿದು ತೀರದಲಿ ನಿಂದಿಹುದು
ಪುಣ್ಯ ಸಂಧಿಯನಲ್ಲಿ ಸೇರಲಾರದೆಯೆ

ಎಂಬ ಅನಿಸಿಕೆ ರೆಕ್ಕೆ ಬಡಿಯುತ್ತ ಹಾರುತ್ತಿರುವ ಬೆಳ್ಳಕ್ಕಿಗಳ ಸಾಲಿನಲ್ಲಿ ಸೇರಿಕೊಳ್ಳುತ್ತದೆ. 'ಮನದ ಕಾಮನೆಗಳ ಮೊನೆಯು ಸಾಣೆಗೈದಂ'ತೆ ಮೂಡಿನಿಂತಿರುವ 'ಕಾಮನಬಿಲ್ಲು' ಇಳೆಯ ಸೊಬಗನ್ನು ಸ್ವರ್ಗಕ್ಕೆ ಕೊಂಡೊಯ್ಯುವ ತೆರದಲ್ಲಿ ಬಾಗಿದೆ ಎಂಬ ಕಲ್ಪನೆ ಹೊಸತನದಿಂದ ಕೂಡಿದೆ. ಬೀಸಿ ಬೀಸಿ ನವಜೀವನವನ್ನು ಹರಿಸುವ 'ಆಷಾಢದ ಗಾಳಿ'ಯನ್ನು ಹಿಂದಿನದೆಲ್ಲ ನೆನೆದು ಬರುವ ಗೆಳೆಯನಂತೆ ಕಂಡು ಪ್ರಕೃತಿಯ ಚೈತನ್ಯದಲ್ಲಿ ತನ್ನ ಆಸೆಯ ಆನಂದವನ್ನು ಸೂಚಿಸುತ್ತಾನೆ.

ಹೊಸ ಶಕುತಿ ನೀನಿಂದು ಈವೆಯಾದರೆ ನೋಡು
ನಿನ್ನೊಡನೆ ಗರಿ ಹರಡಿ ಹಾರಿಬಂದಪೆನು
ನಿನ್ನಂತೆ ಉರುಳಿಪೆನು ನಿನ್ನಂತೆ ಎತ್ತುವೆನು
ನಿನ್ನಂತೆ ಕಡಲೊಡನೆ ಕಾದಿ ಗೆಲ್ಲುವೆನು.

ಜೀವನದಲ್ಲಿ, ಪ್ರಕೃತಿಯಲ್ಲಿ ಕವಿಗೆ ಕಾಣಿಸುವ, ಸೊಗಸನ್ನು ಚೆಲುವನ್ನು ಆರಿಸಿ ಕೊಟ್ಟಿದೆ 'ಚೆನ್ನ' ಕವಿತೆ. ಕವಿಯ ಪ್ರಸನ್ನ ಭಾವದ ಪ್ರಸಾದವನ್ನು ಈ ಕವಿತೆ ಎಲ್ಲರಿಗೂ ಹಂಚಿದೆ :

ನಗುವ ಮಕ್ಕಳ ನಡುವೆ ನಗುವ ಕಲಿವುದೆ ಚೆನ್ನ
ಅವರೊಡನೆ ತೊದಲುಲಿವ ಹದನು ಚೆನ್ನ
ಹೊಸ ಹೂಗಳಂತಿರುವ ಮಿದು ಮೈಯ ತಕ್ಕಯ್ಸಿ
ಹಿಡಿದೆತ್ತಿ ಮುದ್ದಾಡಿ ಕುಣಿವುದೇ ಚೆನ್ನ.

* * *

ಹಸುರು ಹುಲ್ಗಾವಣದ ನಡುನಡುವೆ ಬೆಳೆದಿರುವ
ಗಿಡದ ಹಣ್ಣನು ಹೊತ್ತ ಭಾರ ಚೆನ್ನ
ಮಡದಿ ತಾಯಾಗುತಿರೆ ಯೌವನದ ಕುದಿಗೆಂಪು
ಮಾಗಿ ಜಂತದ ಮೆರುಗು ತಳೆವುದೇ ಚೆನ್ನ.

ಇತ್ಯಾದಿ ಪದ್ಯಗಳಲ್ಲಿ ಕವಿಯ ಸೂಕ್ಷ್ಮ ಸಂವೇದನೆಯನ್ನೂ ಕಲೆಗಾರಿಕೆಯನ್ನೂ ಚೊಕ್ಕಟತನವನ್ನೂ ಒಟ್ಟಾಗಿ ಕಾಣುತ್ತೇವೆ. 'ಈ ಶರದ'ದಲ್ಲಿಯೂ ಇಂಥ ಚೆನ್ನ ಚಿತ್ರಗಳಿವೆ. 'ತಡೆದರಳುವ ಶರದದ ಋತುಭಾಗ್ಯ'ವನ್ನು ಆ ಕವಿತೆ ದೀರ್ಘವಾಗಿ ನಾಡಿನ ಜನತೆಯ ಸಂಸ್ಕೃತಿಯೊಡನೆ ಹಾಸುಹೊಕ್ಕಾಗಿ ಚಿತ್ರಿಸುತ್ತದೆ.

ವಿಧಿವಶನಾದ ಮಗುವನ್ನು ಕುರಿತ ಶೋಕಗೀತೆ 'ಕುಳಿ'. ಕರುಣಾಪೂರ್ಣ ಸನ್ನಿವೇಶವನ್ನು ಹೃದಯ ಕರಗುವಂತೆ ಚಿತ್ರಿಸುವ ಕವಿಯ ಹಿರಿಮೆ ಹಿಂದಿನಂತೆ ಇಲ್ಲಿಯೂ ವ್ಯಕ್ತವಾಗಿದೆ. ದುರಭಿಮಾನದಿಂದ ಧಿಕ್ಕರಿಸಿದರೂ ನಮ್ಮ ಅಹಂಕಾರವನ್ನು ಮುರಿದು ಎಲ್ಲ ಕಠಿಣತೆಗಳನ್ನು ಕರಗಿಸಿ ಕಾವ ಕರುಣೆ ಬೆನ್ನಟ್ಟಿ ಬರುವ

ಯೋಗವನ್ನು 'ನಿನ್ನ ಕರುಣೆ'ಯಲ್ಲಿ ಕವಿ ಭಕ್ತಿಯಿಂದ ನೆನೆದಿದ್ದಾರೆ. ಹೀಗೆ 'ಗುಪ್ತಗಾಮಿನಿ ನಿನ್ನ ಸಂಕಲ್ಪವಾಹಿನಿ' ಎಂಬ ದರ್ಶನ ಅನುಭವದ ಮೂಸೆಯಲ್ಲಿ ಹಾಯ್ದು ಬಂದು ನಮ್ಮ ಅಂತರಂಗವನ್ನು ತುಂಬಿ ನಿಲ್ಲುತ್ತದೆ.

'ಹೆಜ್ಜೆಪಾಡು'ವಿನ ಕವಿತೆಗಳು ಹೀಗೆ ಪ್ರಶಾಂತಿಯ ಕಣ್ದೆರೆವಿನಲ್ಲಿ ಮೂಡಿ ಬಂದಿವೆ. 'ಬಲಿತ ನಯದ ಸವಿಯನರಿತು ಶರದ ವರದ'ವಾಗಿರುವಂತೆ ಈ ಕಾವ್ಯ ಸತ್ತ್ವ ತನ್ನ ಶುಭ್ರವಾದ ಬೆಳಕನ್ನು ನೀಡಿವೆ. ಎಂದಿನಂತೆ ತನ್ನ ವಿಶ್ವಾಸವನ್ನು ಮೆರೆದಿದೆ.

ಹಿರಿದನು ಕಾಣಲು ತವಕಪಟ್ಟರೂ
ನಡೆವೀ ಕಿರಿದನು ಅಪ್ಪುವೆವು—
ಕಿರಿಹಿರಿ ಮೆಟ್ಟಿಲ ಹತ್ತುತೆ ನಡೆವೆವು
ಮೇಲದು ಕಡೆಯಲಿ ಬಹವರೆಗೂ.

('ವಿಶ್ವಾಸ')

ಹಿರಿಯ ಗುರಿಯನ್ನು ಮುಟ್ಟಲು ಕಿರಿಯ ನಡೆಯನ್ನು ಅಲ್ಲಗಳೆಯದೆ ಹೆಜ್ಜೆಹೆಜ್ಜೆಗೂ ಅದನ್ನು ಪರಿಭಾವಿಸಿ ಸಾಗಿ, 'ಇಹದ ಅಮರತ್ವ'ವನ್ನೆತ್ತುವ ಪೌರುಷ ಮೆಚ್ಚುವಂತಹದು. ಮಾಡುವುದನ್ನು ಮನಸ್ಸಾಕ್ಷಿಯಾಗಿ ಮಾಡುವುದೇ ಮೇಲಾದದ್ದು. ಅದರಿಂದ ಒದಗುವ ಸಮಾಧಾನ ಸಂತುಷ್ಟಿ ಋಜು ಬಾಳಿನ ಗರಿಮೆ.

ಇದ್ದರವಗರ್ಜಿತವು ಇಲ್ಲದಿರೆ ಸಂತುಷ್ಟಿ
ಮನಕೆ ಸರಿತೋರಿದುದ ಗೈದೆವೆಂದು.

('ಸಮಾಧಾನ')

ಇಂಥ ಮನೋಧರ್ಮ ಈ ಕವಿಯ ವೈಶಿಷ್ಟ್ಯವನ್ನು ಎತ್ತಿ ಸಾರುತ್ತದೆ.

ಈ ಒಂದು ಸಣ್ಣ ಸಮಾಲೋಕನದಲ್ಲಿ ವಿ.ಸೀ. ಕಾವ್ಯದ ಜಾಡನ್ನೂ ಹೆಜ್ಜೆ ಪಾಡನ್ನೂ ಅರಿಯಲು ಪ್ರಯತ್ನಿಸಲಾಗಿದೆ. ಅವರ ವ್ಯಕ್ತಿತ್ವದ ಅನೇಕ ಅಂಶಗಳನ್ನು ಅವರ ಶೈಲಿ ಪ್ರತಿಬಿಂಬಿಸಿದೆ. ಸರಳತೆ, ಲಾಲಿತ್ಯ, ನವುರು, ಆರ್ದ್ರತೆ, ಧೀರ ನಡೆ, ಗಾಂಭೀರ್ಯ, ಔದಾರ್ಯ, ಓಜಸ್ಸು ಅದರ ಒಡೆದು ಕಾಣುವ ಗುಣಗಳು. ಸಂಗೀತ, ಶಿಲ್ಪ, ನೃತ್ಯ, ಚಿತ್ರ ಇತ್ಯಾದಿ ಲಲಿತ ಕಲೆಗಳಲ್ಲಿ ಅವರಿಗಿರುವ ಆಸ್ಥೆ, ಆಮೋದ ಇಲ್ಲಿ ತನ್ನ ಸವಿಯೆನ್ನೆರೆದಿದೆ.

ಎಳ್ಳು ಕೊಬ್ಬರಿ ಬೆಲ್ಲ ಕಲ್ಲುಸಕ್ಕರೆಯ
ಕಳ್ಳೆ ಕುಸುರಿ ನೆಲಗಡಲೆಗಳ
ಬಾಳೆ ಎಳಚಿ ಬೋರೆ ಕಿತ್ತಳೆಯ
ವೀಳೆಯ ರಸದಾಳಿ ಕಬ್ಬುಗಳ—

('ಸಂಕ್ರಾಂತಿ')

ಇವೆಲ್ಲವುಗಳ ಒಂದು ರುಚಿ, ಜೊಗರು ವಿ. ಸೀ. ಯವರ ಕವಿತೆಗಳಲ್ಲಿದೆ.

ಪೊಳ್ತರೆಯ ದಾಳಿಂಬದರುಣ ಕಾಂತಿಯನು
ಸಂಜೆಯಿಳಿನೇಸರಿನ ಕಿತ್ತಿಳೆಯನು
ಎಳೆವುಲ್ಲು ಕಾವಣದ ಪೈರುಪಚ್ಚೆಯನು
ಹಿಮಬಿಂದು ಮುತ್ತುಗಳ ಧವಳ ಭೋಗವನು;
ಅಪರಾಹ್ನದಾಗಸದ ಮೃದುಲ ನೀಲಿಯನು
ನಡುರಾತ್ರಿ ಇಳೆಗೀವ ತುಂಬು ಶಾಂತಿಯನು
ಕಡಲನೆಲಸಿನೊಳಿರುವ ಅರಸು ಗಂಭೀರವನು
ನಭದ ಮುಂಗಾರ್ಮುಗಿಲ ರೌದ್ರಗಳನು;

('ಚಿತ್ರ')

ಈ ಬಣ್ಣಗಳ ಸಂಮೋಹನತೆಯನ್ನು, ಗುಣಲಾವಣ್ಯವನ್ನು, 'ರೇಸಿಮೆಯ ಮೀರಿಸಿದ ನಯದ ಎಳೆಗಳಿ'ಂದ ಇವರ ಕಾವ್ಯ ಚಿತ್ರಿಸಿದೆ. ಬೇರೆ ರುಚಿ, ಬೇರೆ ಬಣ್ಣ, ಬೇರೆ ನಾದಗಳ ಸುಖವನ್ನು ಅನುಭವಿಸಿದವರಿಗೆ ಇವು ಕೆಲಮಟ್ಟಿಗೆ ಸಪ್ಪೆಯಾಗಿ ಕಂಡಾವು. ಸಪ್ಪೆಗೂ ಒಂದು ಸ್ಥಾನ ನೀಡಿ 'ಸಪ್ಪೆ ಪಥ್ಯಕಾರಿ' ಎಂದು ಕವಿ ಅದನ್ನು ಸಮರ್ಥಿಸಿಕೊಂಡಿರುವುದುಂಟು.

ಸಾಮಾನ್ಯ ಮಟ್ಟವನ್ನು ಮೀರಿ, ರಸಪುಷ್ಟಿ ಪಡೆದು, ಕಾಲಕಾಲಕ್ಕೂ ತೂಗುವ ಹತ್ತಾರು ಕವಿತೆಗಳನ್ನು ನೀಡಿದ್ದರೂ ಬುದ್ಧಿ ಭಾವಗಳ ಒಳ ತೋಟಿಯ ಮೂಲಕ ಇವರ ಸಂವೇದನೆಗಳ ಕ್ಷೇತ್ರ ಸಂಕೋಚಗೊಂಡಿರುವುದನ್ನು ವಿಮರ್ಶಕರೊಬ್ಬರು ಸೂಚಿಸಿರುವುದರಲ್ಲಿ ಕೆಲಮಟ್ಟಿನ ಸತ್ಯಾಂಶವಿದೆ. 'ಹಳೆಯ ಕಾಲದ ಉಳಿಕೆಗರೆ'ಂದು ಅವರು ತಮ್ಮನ್ನು ಕರೆದುಕೊಂಡಿದ್ದರೂ ಆಧುನಿಕ ಕನ್ನಡ ಭಾವಗೀತ ಸಾಹಿತ್ಯದ ಗಳಿಕೆಯಲ್ಲಿ ವಿ. ಸೀ.ಯವರ ವಿಶಿಷ್ಟ ಪಾಲೂ ಸೇರಿಕೊಂಡಿರುವುದನ್ನು ಯಾರೂ ಅಲ್ಲಗಳೆಯಲಾರರು.

"ಕಾವ್ಯ ನಿರ್ಮಾಣದಂತೆ ಕಾವ್ಯ ಪ್ರಕಟನವೂ ಒಂದು ಕಲೆ" ಎಂಬುದನ್ನು ಅವರ ಕವನ ಸಂಗ್ರಹಗಳ ಒಳ ಹೊರಗಿನ ಅಂದ ಚೆಂದ, ಅಚ್ಚುಕಟ್ಟು, ಕಲಾಭಿರುಚಿಗಳೇ ಸಾರಿ ಹೇಳುತ್ತವೆ. ಕನ್ನಡ ಪುಸ್ತಕಗಳನ್ನು ಹೀಗೆ ಚೆಲುವಾಗಿ ಪ್ರಕಟಿಸುವ ಸಂಪ್ರದಾಯ ವಿ. ಸೀ. ಯವರಿಂದ ಮೊದಲಾಯಿತೆಂಬ ಅಂಶ ಈಗಾಗಲೇ ನಮ್ಮ ಸಾಹಿತ್ಯ ಚರಿತ್ರೆಗೆ ಸೇರಿಹೋದ ವಿಷಯವಾಗಿದೆ.

ಚನ್ನವೀರ ಕಣವಿ

# ಗೀತಗಳು, ದೀಪಗಳು

## ೧

ಕನ್ನಡದ ಆಧುನಿಕ ಭಾವಗೀತ ಸಾಹಿತ್ಯ ಆಚಾರ್ಯ ಶ್ರೀಯವರ ನೇತೃತ್ವದಲ್ಲಿ ಆರಂಭವಾಗಿ ಬೆಳೆದು ನಿಂತಿದೆ. ಈ ವಿಪುಲವಾದ, ವೈವಿಧ್ಯಮಯವಾದ ಕೃಷಿಗೆ ಕಾರಣರಾದ ವಿಶಿಷ್ಟ ವ್ಯಕ್ತಿಗಳಲ್ಲಿ ಶ್ರೀ ವಿ. ಸೀ. ಯವರೂ ಒಬ್ಬರು ಅವರ ಕಾವ್ಯ ಕೃಷಿ 'ಗೀತಗಳು', 'ದೀಪಗಳು', 'ನೆಳಲು-ಬೆಳಕು', 'ದ್ರಾಕ್ಷಿ-ದಾಳಿಂಬೆ' ಯಾಗಿ ನಮಗೆ ಬಂದಿವೆ. ಅವರ ಕವನಗಳು ತಮ್ಮದೇ ಆದ ಓಜಸ್ಸಿನಿಂದ ರಾಜಿಸುತ್ತವೆ. ಅವರ ವ್ಯಕ್ತಿತ್ವದಂತೆಯೇ ಅವರ ಕವನಗಳು ಲಲಿತ-ಸರಳ-ಧೀರ. ಪ್ರಕೃತದಲ್ಲಿ ಅವರ ಮೊದಲ ಎರಡು ಕೃತಿಗಳಾದ 'ಗೀತಗಳು', 'ದೀಪಗಳು'-ಇವುಗಳ ಸ್ಥೂಲ ಪರಿಚಯವನ್ನು ಮಾಡಿಕೊಡುವ ಪ್ರಯತ್ನ ಇಲ್ಲಿ ನಡೆದಿದೆ.

'ಗೀತಗಳು' ಆಚಾರ್ಯ ಶ್ರೀಯವರ ಮುನ್ನುಡಿಯ ಹರಕೆಯನ್ನು ಹೊತ್ತು ೧೯೩೧ರಲ್ಲಿ ಪ್ರಕಟವಾಯಿತು. ಇದು ಬಂದ ಎರಡೇ ವರ್ಷಗಳಲ್ಲಿ ಅವರ 'ದೀಪ ಗಳು' ಪ್ರಕಾಶಿತವಾಯಿತು. ಅವರ ಯಾವ ಕವನ ಸಂಕಲನವನ್ನು ತೆಗೆದುಕೊಂಡರೂ ಅದು ಅಂತರಂಗ ಬಹಿರಂಗವೆರಡರಲ್ಲೂ ಕಲಾಕೃತಿಯಾಗಿರಬೇಕೆಂಬ ಮನೋಧರ್ಮ ಅವರದು. 'ದೀಪಗಳು' ಕವನ ಸಂಕಲನದ ಮುನ್ನುಡಿಯಲ್ಲಿ 'ಮನೆಯ ಮಕ್ಕ ಳಿಗೆ ಒಡವೆಗಳಿಲ್ಲದಿದ್ದರೂ ಒಂದು ಒಳ್ಳೆಯ ಬಟ್ಟೆಯನ್ನು ಉಡಿಸಿ ಹೊರಕ್ಕೆ ಕಳು ಹಿಸುವ ವಾಡಿಕೆ ಎಲ್ಲ ಕಾಲಕ್ಕೂ ಎಲ್ಲೆಲ್ಲಿಯೂ ಬಂದುದು' ಎಂದಿದ್ದಾರೆ.

ಕಾವ್ಯ ನಿರ್ಮಾಣದಂತೆಯೇ ಕಾವ್ಯಪ್ರಕಟನವೂ ಒಂದು ಕಲೆ, ಎಂದು ಹೇಳಿದ್ದಾರೆ. ಅವರ ಯಾವ ಕವನ ಸಂಕಲನವನ್ನು ನೋಡಿದರೂ ಅವರ ಹೊರ ಮೈ ಒಳಮೈಗಳಲ್ಲಿ ಒಂದು ರೀತಿಯ ಅಚ್ಚುಕಟ್ಟು ಕಾಣಿಸುತ್ತದೆ. ವಿ. ಸೀ ಯವರ ಕಲಾಭಿರುಚಿಗೆ ಇವು ಕನ್ನಡಿ ಹಿಡಿಯುತ್ತವೆ. ಅವರ ಪ್ರಥಮ ಕೃತಿಯಾದ 'ಗೀತ ಗಳು' ಪ್ರಸಿದ್ಧ ಕಲಾವಿದರಾದ ನಂದಲಾಲ ಬಸು ಮತ್ತು ವರ್ಣಶಿಲ್ಪಿ ವೆಂಕಟಪ್ಪ ನವರ ಕಲಾಕೃತಿಗಳಿಂದ ಅಲಂಕೃತವಾಗಿದೆ.

'ಗೀತಗಳು' ಕವನ ಸಂಕಲನದ ಪ್ರಧಾನ ಗುಣ, ಅದರ ಸಂಗೀತಗುಣ. ಭಾವ ಗೀತೆ ಎಂಬುದಕ್ಕೆ ಮೂಲದಲ್ಲಿ ಹಾಡುವುದಕ್ಕಾಗಿಯೇ ಬರೆದ ಗೀತವೆಂಬ ಅರ್ಥ ವಿದೆ. ಶಾಸ್ತ್ರೀಯ ಸಂಗೀತವೆಂದರೆ ಜನ ಮೂಗುಮುರಿಯುವ ಕಾಲದಲ್ಲಿ ವಿ.ಸೀ. ಯವರು ಸಂಗೀತದ ಸವಿಗೆ ಮನಸೋತು ಸಾಹಿತ್ಯದ ಸವಿಯನ್ನೂ ಸಂಗೀತ ರಸ ದೊಡನೆ ಪಾಕಮಾಡಿ ಅದನ್ನು ಜನತೆಯ ಕಿವಿಯಮೇಲೆ ಹಾಕಬೇಕೆಂಬ ಪ್ರಯತ್ನ ವನ್ನು ಮಾಡಿದ್ದಾರೆ. "ಈ ಗೀತೆಗಳಲ್ಲಿ ಸಂಗೀತ ಕ್ರಮದಲ್ಲಿ ಹಾಡತಕ್ಕವು ಕೆಲವು; ಛಂದಸ್ಸಿಗನುಸಾರವಾಗಿ ಹೇಳತಕ್ಕವು ಕೆಲವು." ವಿ. ಸೀ. ಅವರ ರಸಜ್ಞತೆ ಸಾರ್ಥಕ ಗೊಂಡಿರುವುದನ್ನು, ಆಯಾ ಕವನದ ಭಾವಕ್ಕೆ ತಕ್ಕ ರಾಗವನ್ನು ಅಳವಡಿಸಿರುವುದ ರಲ್ಲಿ ನಾವು ಕಾಣಬಹುದು. ಕಾವ್ಯಕ್ಕೆ ಈ ಸಂಗೀತ ಅವಶ್ಯಕವೆ–ಎಂಬುದೊಂದು ಸಮಸ್ಯೆ. ಕಾವ್ಯ ಹಾಗೆಯೇ ಓದಿದರೂ ರಸಾನುಭವಕಾರಿಯಾಗುವಂತಿದ್ದು, ರಾಗಕ್ಕೂ ಅಳವಡುವಂತಿದ್ದರೆ ಅಲ್ಲಿ ಸಂಗೀತ ಬೇಕೇ ಬೇಡವೇ ಎಂಬ ಪ್ರಶ್ನೆ ಪ್ರಧಾನವಾಗಿ ಏಳುವುದಿಲ್ಲ. ಆದರೆ ಕಾವ್ಯಕ್ಕೆ ಶಾಸ್ತ್ರೀಯ ಸಂಗೀತದ ರಾಗಗಳನ್ನು ಹಾಕಿದಾಗ ಅದು ಹಲವು ವೇಳೆ ಓದುಗನ ದೃಷ್ಟಿಯಿಂದ ಒಳಿತಾಗಲೂಬಹುದು, ತೊಡಕಾಗಲೂಬಹುದು. 'ತಿರುಕ'ನನ್ನು ಕುರಿತ ಕವನದಲ್ಲಿ ತಿರುಕನೊಬ್ಬನು,

> ಹತ್ತು ಸಾವಿರ ಜನರು ಉಂಬುದು ಊರು
> ತುತ್ತೊಂದ ನೀಡಿರಮ್ಮ–ಮಾತಾಯಿಗಳಿರಾ–
>
> (ಗೀ. ೧೪)

ಎಂದುಕೊಳ್ಳುವಾಗ 'ಆನಂದಭೈರವಿ'ರಾಗ ಅವಶ್ಯಕವೆ ಎಂಬ ಪ್ರಶ್ನೆ ಏಳಬಹುದು. ಆದರೆ ಇದು ಬರಿಯ ರಾಗದ ಪ್ರಶ್ನೆಯಲ್ಲ; ಆ ರಾಗ ಹಾಕುವುದರಿಂದ ಓದುಗನ ಇಲ್ಲವೆ ಕೇಳುವವನ ಹೃದಯದಲ್ಲಿ ಅದು ಕವಿಯಭಾವವನ್ನು ಮೂಡಿಸಲು ಸಮರ್ಥ ವಾಗುವುದೆ ಎಂಬುದು ಇಲ್ಲಿನ ಪ್ರಶ್ನೆ. ಇಲ್ಲಿ ರಾಗಗಳನ್ನು ಹಾಕಿರುವುದರ ಉದ್ದೇಶ ಆ ರಾಗ ಕವಿಯ ಭಾವವನ್ನು ಸಹೃದಯನಲ್ಲಿ ಮೂಡಿಸಲಿ ಎಂಬ ಸದುದ್ದೇಶ ದಿಂದ. ಈ ಉದ್ದೇಶ ಸಂಗೀತ ಜ್ಞಾನವಿಲ್ಲದವನಿಗೆ ಅನುಭವ ವೇದ್ಯವಾಗುವುದ ಕ್ಕಿಂತ ಸಂಗೀತ ಬಲ್ಲವರಿಗೆ, ಬರಿಯ ಓದುಗರಿಗಿಂತ, ಸಂಗೀತ ಬಲ್ಲವನೊಬ್ಬ ಹಾಡು ವುದನ್ನು ಕೇಳುವವರಿಗೆ ಇನ್ನೂ ಹೆಚ್ಚು ಆನಂದವನ್ನು ನೀಡುತ್ತದೆ ಎಂಬ ಬಗ್ಗೆ ಯಾವ ಸಂದೇಹವೂ ಇಲ್ಲ.

ಈ ಕವನಗಳ ಮತ್ತೊಂದು ವಿಶಿಷ್ಟತೆ ಎಂದರೆ, ಅವುಗಳ ಶೈಲಿ ಬಲು ಸರಳ. ಯಾವ ತೊಡಕಾದ, ಸಮಾಸಯುಕ್ತ ಕ್ಲಿಷ್ಟಪದಗಳೂ ಇಲ್ಲಿಲ್ಲ. ಸರಳತೆಯೇ ಹಿರಿತನದ ಗುರುತು–ಎಂಬ ಮಾತನ್ನು ಇವರ ಕವನಗಳು ಸಾರ್ಥಕಪಡಿಸುತ್ತವೆ. ಅಸಾಧುವೆಂದು ತೋರಬಹುದಾದ ಕೆಲವು ಶಬ್ದ ರೂಪಗಳೂ, ಮಿಶ್ರ ಪ್ರಯೋಗ ಗಳೂ ಇಲ್ಲಿದ್ದರೂ ಈ ಕವನಗಳ ಲಾಲಿತ್ಯದಲ್ಲಿ ಅವು ಮುಳುಗಿಹೋಗುತ್ತವೆ. ವಿ. ಸೀ. ಯವರ ಶೈಲಿ ಮುಗ್ಧಳಾದ ಹಳ್ಳಿಯ ಹೆಣ್ಣು ಮಗಳಂತೆ! ವಿಷಯವನ್ನು

ಚೆನ್ನಾಗಿ ತಿಳಿದವರು, ಅನುಭವವನ್ನು ನಿಜವಾಗಿಯೂ ಪಡೆದವರು, ಯಾವಾಗಲೂ ಓದುಗರನ್ನು ಬಳಸು ದಾರಿಗಳಲ್ಲಿ, ಶಬ್ದಾರಣ್ಯಗಳಲ್ಲಿ ತೊಳಲಿಸುವುದಿಲ್ಲ. ಹೇಳುವುದನ್ನು ನೇರವಾಗಿ, ಧೀರವಾಗಿ, ಸರಳವಾಗಿ ಹೇಳುತ್ತಾರೆ. ವಿ. ಸೀ.ಯವರ ಕವನಗಳ ಗುಣ ಅಂಥದು. ಎಲ್ಲವೂ ಸರಳ ಸುಂದರ. ಅವರ 'ಚಿತ್ರ' ಎಂಬ ಕವನವನ್ನು ನೋಡಿ:

ಕೋಮಲಾಂಗಿ ಲತೆಯು ಇಲ್ಲಿ, ಭಾಮೆಯುರ ಚೆಲುವು ಅಲ್ಲಿ
ಈ ಮರ ತನಿಸೊಂಪಿದಿಲ್ಲಿ ಕರೆ ಕರೆವುವು ಪ್ರೇಮದಿ;
ಆ ಸರಸಿಯು ಹೂದಳಗಳು ತೆರೆದರಳುತ ತೋರುತಿರಲು
ಈ ಸರಸದ ಸೌಖ್ಯ ಬಯಸಿ ಕುಣಿ ಕುಣಿವುದು ಚಿತ್ರವು.

(ಗೀ. ಪು. ೧೨)

ಎಂತಹ ಮೃದುಪದಬಂಧ! ಅವರ 'ಮನೆ ತುಂಬಿಸುವುದು' ಎಂಬ ಕವನ

ಎಮ್ಮ ಮನೆಯಂಗಳದಿ ಬೆಳೆದೊಂದು ಹೂವನ್ನು
ನಿಮ್ಮ ಮುಡಿಲೊಳಗಿಡಲು ತಂದಿರುವೆವು

ಎಂದು ಆರಂಭವಾಗುವಾಗ ಆ ನವುರಾದ, ಮಧುರ ಯಾತನೆಯ ಸನ್ನಿವೇಶದ ಕರುಣಮಿಶ್ರಿತ ಲಾಲಿತ್ಯ ಎಷ್ಟು ಸುಂದರವಾಗಿ ಹರಿದಿದೆ–ಎನ್ನಿಸುತ್ತದೆ. ಹೀಗೆ ಸರಳತೆಯ ಸಮನೆಲದಲ್ಲಿ ಹರಿಯುವ ತೊರೆಯ ಮಂಜುಳರವದಂತಿರುವ ಈ ಕಾವ್ಯಶೈಲಿ ಹಲವೆಡೆ ಹೇಗೆ ಭೋರ್ಗರೆದು ಹರಿಯಬಲ್ಲುದು ಎಂಬುದನ್ನು 'ಅಭೀಃ' ಎಂಬ ಕವಿತೆಯಲ್ಲಿ ಕಾಣಬಹುದು.

ಕಾಡಮೌನವ ಸೀಳಿ ಹಬ್ಬುತಿದೆ ಕೇಳುತಿದೆ
ಬಿತ್ತರದ ದಿಕ್ತಟಗಳಡ್ಡಿ ದಾಟುತಿದೆ!
ಉಳಿದೆಲ್ಲ ನುಡಿಗಳನು ಮುಳುಗಿಸುತೆ ಮೊಳಗುತಿದೆ
ಬಾಳ ಹೆದ್ದಾರಿಯನು ಒಡಿದೆತ್ತಿ ತೋರುತಿದೆ
—ಅಭೀಃ! ಅಭೀಃ! ಅಭೀಃ!! ಎಂಬಮೃತವಾಣಿಯಿದು
ಮೂವತ್ತು ಶತಮಾನಗಳ ಮೆಟ್ಟಿ ಕೇಳುತಿದೆ
ಕಾಲದಾ ಕರೆ ಯಂಚಿನಾಚೆಯಿಂದ

(ದೀ. ಪು. ೨೫)

ಕೋಲ್‌ರಿಜ್ ಕವಿ ಕಾವ್ಯದ ಬಗ್ಗೆ ಹೇಳುತ್ತಾ 'The best words in the best order' ಎಂದು ಹೇಳಿದ ಮಾತಿನ ಸಾರ್ಥಕತೆ 'ಅಭೀಃ' ಯಂಥ ಕವನಗಳನ್ನು ಓದಿದಾಗ ಹೊಳೆಯುತ್ತದೆ. ಈ ಕವನದ ಯಾವ ಒಂದು ಪದವನ್ನೂ ಅದರದರ ಸ್ಥಾನದಿಂದ ಪಲ್ಲಟಿಸಿ ಬೇರೆ ಪದವನ್ನು ಹಾಕುವಂತಿಲ್ಲ. ಅವರ ರಸರೀತಿಗಳೆರಡೂ ಅಷ್ಟು ಬೆಸುಗೆಯಾಗಿ ಈ ಕವನದಲ್ಲಿ ಮೂರ್ತಿಗೊಂಡಿವೆ. ಆ ಧೀರಗತಿ–ಅರ್ಥ ಸಂಪತ್ತಿಯನ್ನು ನೋಡಿದಾಗ ಇದೊಂದು ಗಂಡುಗವಿತೆ–ಎಂದು ಯಾರಿಗಾ

ದರೂ ಅನ್ನಿಸದಿರದು. ಹೀಗೆ ಸರಳತೆ-ಧೀರತೆಗಳ ನಡುವೆ ಏರಿಳಿಯುವ ಗುಣ ಈ ಕಾವ್ಯ ಶಕ್ತಿಗಿದ್ದರೂ ಅದರ ಪ್ರಧಾನ ಗುಣ ಲಾಲಿತ್ಯವೇ. ಈ ಕಾವ್ಯ ಶೈಲಿ ಅಲ್ಲಲ್ಲಿ–

ನೀ ಸಿಗೆ
ನಾ ಬಿಡೆ
ನೀನ್ನಿಲೆ
ನಾನ್ನಿಲೆ
ಎಲ್ಲಿಗೆ ಓಡುವೆ ಅರಿವೆ
ನಿಲ್ಲದೆ ಅಟ್ಟುತ ಬರುವೆ
ಅಲ್ಲಿಗೆ ಸಾರುವೆ ಹಿಡಿವೆ
ಇಲ್ಲಿಗೆ ಗೆಲಿದೆಳೆತರುವೆ

(ಬೇಟೆ. ಗೀ: ೧೧೮)

ಎಂಬ ಲಲಿತ ವಿಲಾಸದಲ್ಲಿ ಮುಟ್ಟಾಟ ಹುಡುಕಾಟವಾಡುತ್ತ ಜಲ್ಲವರಿದು

ಉಂಗುರ-ಕಾಲ್ಗೆಜ್ಜೆ
ಥಳಥಳ-ಝಣಝಣ
ತಕತೈತ-ಕುಣಿಯುತ್ತ
–ಬರುತಾಳೆ

(ನಾಟ್ಯಾನುಕರಣ. ದೀ: ೨೭)

ಎಂಬ ನರ್ತನ ಗತಿಯಲ್ಲೂ ನಲಿದು ರಾಜಿಸುತ್ತದೆ. ವಿ. ಸೀ. ಯವರ ಈ ಕಾವ್ಯ ಶೈಲಿ, ಆಯಾ ಭಾವದ ಏರಿಳಿತಕ್ಕೆ ಅನುಸಾರವಾಗಿ ವೈವಿಧ್ಯಮಯವಾಗಬಲ್ಲದು.

ಈ ಕವನಗಳಲ್ಲಿ ಕಂಡುಬರುವ ವಿ. ಸೀ. ಯವರ ಕವಿ ಮನೋಧರ್ಮ ಆಶಾವಾದಿಯಾದುದು; ಸ್ಫೂರ್ತಿದಾಯಕವಾದುದು. ಬಾಳಿನ ನೂರು ಬಗೆಯ ಅನುಭವವನ್ನು ಪಡೆದ ಈ ಜೀವ—

ಮಾನವನೆತ್ತರ ಆಗಸದೇರಿಗೆ
ಏರುವವರೆಗೂ ಬೆಳೆದೇವು;

(ವಿಶ್ವಾಸ: ದೀಪಗಳು)

ಎಂಬ ಆತ್ಮವಿಶ್ವಾಸವನ್ನು ತನ್ನೆದೆಯಲ್ಲಿ ತುಂಬಿಕೊಂಡು ನಿಲ್ಲುತ್ತದೆ. ಈ ಶ್ರದ್ಧೆಯ ಹೃದಯಕ್ಕೆ ತನ್ನ ಆದರ್ಶವನ್ನು ಸಾಧಿಸಬೇಕಾದರೆ ಈ ನೆಲವನ್ನು ಬಿಟ್ಟು ಹಾರಬೇಕೆನ್ನುವ ಭ್ರಾಂತಿ ಇಲ್ಲ.

ಬಾಳನು ಶೋಧಿಸಿ ಶುಚಿಯನು ಬೆಳೆದರೆ
ಇಹವೇ ಅರಳದೆ ಪರವಾಗಿ?

(ವಿಶ್ವಾಸ: ದೀ.)

ಎಂಬುದು ಅದರ ನಂಬುಗೆ. 'ಪರ' ಎಂಬುದು ಮುಗಿಲಿನಾಚೆ ಇಲ್ಲ. 'ಇವ'ಪ ಜೀವನ ತನ್ನ ಕೊಳೆಯನ್ನು ಕಳೆದು ಪರಿಶುದ್ಧವಾದರೆ, ಈ ಇಹವೇ ಪರವಾಗಿ ಅರ ಳುತ್ತದೆ. ಇಂತಹ ಕೆಚ್ಚಿನ ಹೃದಯ, ಇಹದಲ್ಲೇ ಪರವನ್ನು ಅರಳಿಸಲು ಸಂಕಲ್ಪಿಸುವ ಹೃದಯ, ಯಾರ ಹಂಗೂ ಇಲ್ಲದೆ ತಾನು ಬಾಳಬಲ್ಲೆನೆಂಬ ನಂಬುಗೆಯಿಂದ

ಮನದೊಳಗೆ ಬೇರೊಂದು ಜಗವ ನಿರ್ಮಿಸುತಲ್ಲಿ
ಮನಕೆ ಬಂದವೊಲಾಳ್ದು ವಿಹರಿಸುವೆನು

(ವೈರಾಗಿ: ಗೀ. ೨೦)

ಎಂದು ಘೋಷಿಸುತ್ತದೆ. ಸತ್ಯದ ಹಾದಿಯಲ್ಲಿ, ಆತ್ಮಾವಲಂಬನೆಯ ಋಜುಪಥ ದಲ್ಲಿ ಹಾರಲೆಳಸುವ ಧೀರಜೀವ–

ಮಣಿಯದಿಹ ಮನವೊಂದು ಸಾಧಿಸುವ ಹಟವೊಂದು
ನಿಜದ ನೇರಕೆ ನಡೆವ ನಿಶ್ಚಲತೆಯೊಂದು-

(ಅಭೀ: ದೀ. ೨೬)

ಇದ್ದರೆ ಸಾಕು, ತನ್ನ ಗುರಿಯನ್ನು ತಾನು ಸಾಧಿಸುತ್ತೇನೆ ಎಂದುಕೊಳ್ಳುತ್ತದೆ. ಈ ಒಂದು ಪೌರುಷವಾದ ಒಮ್ಮೊಮ್ಮೆ

ಇಲ್ಲದಿರೆ ಬೇರಾವ ದೇವರೇ ಬಾರರೊ
ಇಲ್ಲದೊಂದಕೆ ಹೆಸರನಿತ್ತು ಕರೆಯುವೆವೊ
ಇಲ್ಲದಿರೆ ಮಾನವನ ಸುಗುಣವೇ ದೈವವೊ
ಎಲ್ಲಿಗೂ ಹರಿಯದಿಹ ಸಂಶಯವೆ ಕೊನೆಯೊ!

(ಕಸ್ಮೈದೇವಾಯ: ಗೀ. ೭೫)

ಎಂಬ ಸಂದೇಹದಲ್ಲಿ ತೂಗುಯ್ಯಾಲಾಡುತ್ತದೆ. ಪ್ರತಿಯೊಂದಕ್ಕೂ ಕರ್ಮಾಧೀನ ವೆಂದು ಹೇಳುತ್ತ ತಮ್ಮ ಕರ್ತವ್ಯವನ್ನೇ ಮರೆತ ಜಡರ ಪಾಡನ್ನು ನೋಡಿ

ಹುಟ್ಟಿಸಿದ ದೇವನೆಂತೂ ಪೊರೆಯುವನೆಂಬ
ಕಷ್ಟಗಳನಿತ್ತವನೆ ಪರಿಹರಿಪನೆಂಬ
ಸೃಷ್ಟಿಸಮಯದಿ ಬರೆದ ಹಣೆಯಬರಹವಿದೆಂಬ
ನಷ್ಟಸತ್ತ್ವರ ತತ್ತ್ವ ದೂಡಿಬಿಡಿರೇಳಿ

(ಏಳಿ: ಗೀ. ೪೨)

ಎಂದು ಎಚ್ಚರಿಸುತ್ತಾರೆ. ಈ ಪುರುಷಾಕಾರವೇ ವಿ. ಸೀ. ಯವರ ವಿಶಿಷ್ಟತೆ. ಈ ಪೌರುಷವಾದ, ಕರ್ತವ್ಯವಿಮುಖರಾಗಿ ಎಲ್ಲವೂ ಕರ್ಮಾಧೀನವೆಂದು 'ನಷ್ಟಸತ್ತ್ವ' ರನ್ನು ಎಚ್ಚರಿಸುವ ಘೋಷವೇ ಹೊರತು ದೈವೀಶಕ್ತಿಯನ್ನು ಕಡೆಗಣಿಸುವ ನಾಸ್ತಿ ಕತೆಯಲ್ಲ. ಬಾಳನ್ನು ನಿರಂತರವೂ ಹಿಡಿದು ನಡೆಯಿಸುವ 'ಕ್ಷೇಮಕಾರಿ'ಯ ಸಕೃದ್ದರ್ಶನಾನುಭವವನ್ನು ಅವರ ಹಲವಾರು ಕವಿತೆಗಳು ನಿರೂಪಿಸುತ್ತವೆ. ಆ ದೈವೀಶಕ್ತಿ

ಒಂದುಸಲ ಮೃದುಮಧುರ ಗೀತೆಯೊಲು ಕೇಳುವುದು
ತಂದೆ, ನಿನ್ನಿಂಚರವು ಇಳೆಯ ಮುಳುಗಿಸುತೆ!

(ಕ್ಷೀಮಕಾರಿ: ಗೀ. ೨೨)

ಅವರಿಗೆ ಕೇಳಿದ್ದುಂಟು. ಆ ಶಕ್ತಿಯನ್ನು ಅವರು ಜಗತ್ತಿನ ಚೆಲುವು-ಒಲವುಗಳಲ್ಲಿ ಗುರುತಿಸುತ್ತಾರೆ.

ತಿಳಿಗಾಳಿ ತೀಟದಲಿ
ಮಳೆಗಾಳಿ ಬಿರುಸಿನಲಿ
ಬಿರುಗಾಳಿ ಬೀಸಿನಲಿ
ಬರುವ ಮೂರುತಿಯೆ-
ಚಲನೆಯನು ಬರಿಸೈಯ

(ಪ್ರಾರ್ಥನೆ: ಗೀ. ೨೨)

ಎಂದು ಆ ಶಕ್ತಿಯನ್ನು ಪ್ರಾರ್ಥಿಸುತ್ತಾರೆ. ತಮ್ಮ ಅಹಂಕೃತಿಯನ್ನು ಅಡಗಿಸಿದ ಆ ಶಕ್ತಿಯನ್ನು ಕುರಿತು-

ಬಲ್ಲವನು ನಾನೆಂದು ಬಲು ಮೆರೆದೆನಯ್ಯ
ಎಲ್ಲ ಬಲವೆನತೆಂದು ಮೈಮರೆತೆ
—ನೀನೆನ್ನ ಸಲಹಬೇಕಯ್ಯ—

(ಮೊರೆ: ಗೀ. ೧೦)

ಎಂದು ಮೊರೆಯಿಡುತ್ತಾರೆ. ವಿ. ಸೀ. ಯವರ ಈ ಆಧ್ಯಾತ್ಮಿಕ ದೃಷ್ಟಿಯಲ್ಲಿ, ಸ್ಥೈರ್ಯ ದಿಂದ ತಲೆ ಎತ್ತಿ ನಿಲ್ಲುವ ಪೌರುಷ ಹಿರಿದರೆಡೆ ತಲೆಬಾಗುವ ವಿನಯ ಇವೆರಡೂ ಸಮವಾಗಿ ಬೆರೆತಿರುವುದನ್ನು ಗುರುತಿಸಬಹುದು.

ಪ್ರಕೃತಿಯನ್ನು ಕುರಿತ ಗೀತಗಳಲ್ಲಿಯೂ ಅದೇ ಲಾಲಿತ್ಯ ಕಂಡುಬರುತ್ತದೆ. 'ಹೇಮಂತ ಸಾಮ್ರಾಜ್ಯ'ದ ನೈರಾಶ್ಯವನ್ನು ಚಿತ್ರಿಸುವಲ್ಲಿ

ಸುತ್ತಣಾವರಣದಲಿ ಸೊಗವಿಲ್ಲ ನಗೆಯಿಲ್ಲ
ಮುತ್ತಿಬಹ ಭ್ರಮರಿ ಝಂಕಾರವಿಲ್ಲ

(ಗೀ: ಪು. ೨೩)

ಎಂಬ ಮಾತು ಆ ನೀರಸತೆಯನ್ನು ಮನಮುಟ್ಟುವಂತೆ ಮಾಡುತ್ತದೆ. ಮುಂಗಾರಿನ ರೌದ್ರತೆಯನ್ನು ವರ್ಣಿಸುವಲ್ಲಿ

ಭೀಷಣ ವರ್ಷಧಾರೆ! ಕಾರ್ಮುಗಿಲ ಸಿಡಿರೋಷ
ದಿಗ್ಭಿತ್ತಿಯೊಡೆವಂತೆ ವಜ್ರ ನಿರ್ಘೋಷ!
ಬೇಸಗೆಯ ತೇಜಃಪ್ರಭಾವದಿಂ ಬಸಿರ್ವೊತ್ತ
ಶ್ರಾವಣದ ದುರ್ದಮ್ಯ ಮೇಘಮಾಲೆ!

(ಮುಂಗಾರು: ಗೀ. ೩೭)

ಆ ಶೈಲಿ ಆ ರೌದ್ರತೆಯನ್ನು ತಂದುಕೊಡುವಂತಿದೆ. ಮಧುಮಾಸವನ್ನು ಕುರಿತು

ಹೃದಯದಾಸೆಗಳೆಲ್ಲ ಫಲಿತವಾಗುವ ಕಾಲ
ಮೃದು ಹೃದಯ ಕುಸುಮಗಳು ಅರಳ್ವ ಕಾಲ

(ಮಧುಮಾಸ: ಗೀ. ೨೮)

ಎಂಬ ನವುರಾದ ಮಾತಿನಲ್ಲಿ

ಮಳೆಗಾಲ ಹಿಮಗಾಲ ಚಳಿಗಾಲ ಹೋಗಿಪವು
ತಳಿರ್ಗಾಲ ಬೆಳೆಗಾಲ ಫಲಗಾಲ ಬಹವು

ಎಂಬ ಲಾಲಿತ್ಯದಲ್ಲಿ—

ಪುಲ್ಗರಿಯ ಶಿರದಲ್ಲಿ ಮಾಂದಳಿರ ತಳದಲ್ಲಿ
ಪೊಲ್ಲೆ ಮಲ್ಲಿಗೆ ತೆರೆದು ಬಿರಿಯುತಿರುವಲ್ಲಿ
ಚಲ್ವ ಹಸುರ್ಗೊನೆಯಲ್ಲಿ ನೆಲ್ಲ ಹೊನ್ದೆನೆಯಲ್ಲಿ
ಚೆಲ್ಲಿಹವು ಇಬ್ಬನಿಯ ಮುತ್ತುಗಳಿವಿಲ್ಲಿ

(ಮಧುಮಾಸ: ಗೀ. ೨೮)

ಎಂಬ ವರ್ಣನೆಗಳಲ್ಲಿ ಅರ್ಥದ ಸೊಗಸಿಗಿಂತಲೂ 'ಮಾತಿನ ಸೊಗಸು' ಮನೋಹರ ವಾಗಿದೆ. ಪ್ರಕೃತಿಯ ಅಂದಚೆಂದಗಳನ್ನು ಕಂಡು ಉಂಡ ಮನಸ್ಸಿನ ಆನಂದಾನು ಭವದ ರಮ್ಯನಿರೂಪಣೆ ಅವುಗಳಲ್ಲಿದೆ. ಕವಿ ಪ್ರಕೃತಿಯ ಚೆಲುವನ್ನು ತಾನು ದೂರ ನಿಂತು ಅನುಭವಿಸಿ ಹೊಮ್ಮಿಸುವ ಆನಂದದ ಉದ್ಗಾರಗಳು ಒಂದು ರೀತಿಯ ದಾದರೆ, ಪ್ರಕೃತಿಯನ್ನು ತಾದಾತ್ಮ್ಯದಿಂದ ಕಾಣುವುದು ಮತ್ತೊಂದು ರೀತಿ. ಪ್ರಕೃತಿ ಬರಿಯ ಆನಂದದಾಯಕವಾದ ಶಕ್ತಿ ಮಾತ್ರವಲ್ಲ; ನಮ್ಮ ಬಾಳಿನಲ್ಲಿ ತನ್ನ ಬಾಳನ್ನು ಬೆಸೆಯುವ ವ್ಯಕ್ತಿತ್ವವೂ ಅದಕ್ಕುಂಟು—ಎಂಬುದನ್ನು 'ಕಾರಂಜಿಕೆರೆಯ ದಾರಿಯಲ್ಲಿ' ಎಂಬ ಕವಿತೆ ತಿಳಿಸುತ್ತದೆ. ಅಥವಾ ಕವಿ ಪ್ರಕೃತಿಯಲ್ಲಿ ಒಂದು ಚೇತನವನ್ನು ಗುರುತಿಸಿ ಅದರೊಡನೆ ಗೆಳೆತನವನ್ನು ಬೆಳೆಸುವಷ್ಟು ವಿಸ್ತಾರಗೊಂಡಿದ್ದಾನೆ ಎಂಬುದು ತಿಳಿಯುತ್ತದೆ. ಕಾರಂಜಿಕೆರೆಯ ದಾರಿಗೂ ವಿ. ಸೀ. ಯವರಿಗೂ ಬಲು ನಂಟು.

ನಮ್ಮ ಕೆಳೆಯತನವು ಮೊಳೆತು
ಇಂದಿಗೆಂಟುವರುಷವಾಯ್ತು
ಅಂದಿನಿಂದಲಿಂದುವರೆಗು
ಬೆಳೆದು ಬಂದಿತು
ತಳಿತು ಹೂವ ತಳೆದು ಬೇಗ
ಫಲಗಳಿತ್ತಿತು!

(ಗೀ. ೬೪)

ಹೀಗೆ ಬೆಳೆದ ಈ ಕೆಳೆತನದ ಆತ್ಮೀಯತೆ ಒಂದು ಜೀವದಾತ್ಮಭಾವ
ಒಂದನಂತ ಪ್ರೇಮಭಾವ
(ಗೀ. ೬೭)

ಎನ್ನುವಷ್ಟರ ಮಟ್ಟಿಗೆ ಬೆಳೆದಿದೆ ಆ ಕೆರೆಗೂ ತಮಗೂ ಸಂಬಂಧವನ್ನು ಉಂಟು ಮಾಡಿದ ಒಂದು ಅನಂತ ಪ್ರೇಮಭಾವವನ್ನು ಗುರುತಿಸುತ್ತಾರೆ. ಪ್ರಕೃತಿಯಲ್ಲಿ ತನ್ನ ಚೈತನ್ಯದ ಆನಂದಾಂಶವನ್ನು ಕಂಡು ಒಲಿಯುವುದೇ ಕವಿ ಮನೋಧರ್ಮದ ಲಕ್ಷಣ. ಆ ಒಂದು ಸಹಜಕವಿಸಾಮಾನ್ಯವಾದ ಲಕ್ಷಣವನ್ನು ನಾವು ವಿ. ಸೀ. ಯವರ ಪ್ರಕೃತಿ ಗೀತಗಳಲ್ಲಿ ಕಾಣುತ್ತೇವೆ.

ವಿ. ಸೀ. ಯವರ ಕಾವ್ಯಕಲೆ ಮುಗಿಲು ಮುಟ್ಟಿರುವುದು, ಅವರು ಮಾನವ ಜೀವನದ ಕರುಣಾಪೂರ್ಣ ಸನ್ನಿವೇಶಗಳನ್ನು ಚಿತ್ರಿಸಿರುವಲ್ಲಿ. 'ಮೃಗಶಾಲೆಯ ಸಿಂಹಗಳು' ಅತ್ಯುತ್ತಮ ಕಥನ ಗೀತೆ. ಅದರಲ್ಲಿರುವ ಕರುಣಾರಸ ಓದುಗರ ಹೃದಯವನ್ನು ಕರಗಿಸುತ್ತದೆ. ಆ ಸಿಂಹ–ಸಿಂಹಿಯರ ಪೂರ್ವ ಜೀವನದ ಸ್ವತಂತ್ರ ವೈಭವ, ನರರ ಒಳಸಂಚು, ಬಂಧನದ ದಾರುಣತೆ, ತಮ್ಮ ವಂಶದ ಮರಿಗಳ ಬಾಳನ್ನು ನೆನೆದು

ಎಂತು ಅರಿವುವು ಇವನು ಈ ಹಸುಳೆ ಸಿಂಹಗಳು
ಹಿಂದಿದ್ದ ಪದವಿಗಳ, ಹೋದ ಭಾಗ್ಯಗಳ;
ಕಾಡವೊಗ ಕಾಣವಿವು, ಬೇಟೆಗಳ ನಾಡವಿವು
ಸಿಂಹಬಲ ವೀರ್ಯಗಳ–ನೆಂತುಬೆಳೆಸುವುವು!
(ದೀ. ೨೩)

ಎಂಬ ವೇದನೆಯ ಉದ್ಗಾರಗಳಲ್ಲಿ ಆ ಸಿಂಹಗಳ ವೇದನೆಯ ಸ್ವರೂಪ ಮನ ಮುಟ್ಟುವಂತೆ ಚಿತ್ರಿತವಾಗಿದೆ. ಕವಿ ಪರಕೀಯರ ದಾಸ್ಯದಲ್ಲಿ ಸಿಕ್ಕಿ ಸಿಂಹದ ಮರಿ ಗಳಂತೆ ಇದ್ದ ಭಾರತೀಯರನ್ನು ಕುರಿತು ಮರುಗಿದಂತಿದೆ. 'ಸ್ಮಶಾನದಲ್ಲಿ' ಎಂಬ ಕವನದಲ್ಲಿ ಚಿತ್ರಿತವಾಗಿರುವ ಶೋಕಭಾವವು ಮನವನ್ನು ಕರಗಿಸುತ್ತದೆ. ಸ್ಮಶಾನದ ಚಿತೆಯ ಮೇಲೆ ಗಂಡನ ಶವ ಮಲಗಿದೆ. ಅನಾಥೆಯಾದ ಸತಿ ಕಣ್ಣೀರು ಸುರಿಸು ತ್ತಿದ್ದಾಳೆ. ಆಕೆಗೆ 'ಇನ್ನತ್ತು ಫಲವಿಲ್ಲ ಶವ ನಿಮ್ಮ ಪತಿಯಲ್ಲ' ಎಂಬ ದಾರುಣ ವಾರ್ತೆಯನ್ನು ಹೇಳಿ ಸಮಾಧಾನ ಪಡಿಸಬೇಕು. ಗುರುಹಿರಿಯರೂ ವಿಧಿಯ ನಿಷ್ಠುರ ನಿಯಮದ ಎದುರು ಮೌನವಾಗಿದ್ದಾರೆ. ಇಂತಹ ನೂರಾರು ನೋಟಗಳನ್ನು ನೋಡಿದ ಚಂದ್ರ ಸ್ಮಶಾನದ ಹೊಗೆಯಲ್ಲಿ ಉರಿಯಲ್ಲಿ ಮಂಕಾಗಿದ್ದಾನೆ. ಸುತ್ತಣ ಪ್ರಕೃತಿಯೂ ಕೂಡ ಈ ಶೋಕದಲ್ಲಿ ಭಾಗಿಯಾಗಿದೆ.

ಚಲಿಸದಿವೆ ಮರದೆಲೆಯು
ಸುಳಿಯದಿವೆ ಗಾಳಿಗಳು
ಸಾವಿಂಗೆ ಕಾಣಿಕೆಯು–
ನೀವಮೌನದಲಿ
(ದೀ. ೧೦)

ಇಂತಹ ವಾತಾವರಣ. ಚಿತೆಯ ಮೇಲಿನ ಶವ ಉರಿದು ಭಸ್ಮವಾಗುತ್ತಿದೆ. ಉನ್ಮತ್ತಳಾಗಿ ಅತ್ತ ಧಾವಿಸುವ ಸತಿಗೆ

ಕರ್ಮ ಕರೆವುದು ಹೋಗಿ ಧರ್ಮ ಕರೆವುದು ಹೋಗಿ
ಅಳುವ ಮಕ್ಕಳ ನೋಡಿರೆತ್ತಿಕೊಳ ಹೋಗಿ

(ದೀ. ೧೨)

ಎಂದು ಕವಿ ನುಡಿಯುವ ಮಾತಿನಲ್ಲಿ ಎಂತಹ ರಸದ ನೆಲೆಯನ್ನು ಈ ಕವಿತೆ ಮುಟ್ಟಿದೆ! ಅದರಲ್ಲೂ 'ಅಳುವ ಮ ಕ್ಕ ಳ ನೋಡಿರೆತ್ತಿಕೊಳಹೋಗಿ'—ಎಂಬ ನಿರ್ದೇಶ, ಪತಿಯುಳಿದ ಸತಿಗೆ ಈ ಲೋಕದಲ್ಲಿ ತಾನು ಮಾಡಬೇಕಾದ ಕರ್ತವ್ಯ ವನ್ನು ಸೂಚಿಸುತ್ತದೆ. ಇದೆಲ್ಲಕ್ಕಿಂತ ಮಿಗಿಲಾದ, ವಿ. ಸೀ.ಯವರ ಒಂದು ಚಿರಂ ತನ ಕೃತಿ ಎಂದರೆ, ಅವರ 'ಮನೆತುಂಬಿಸುವುದು'. ಕನ್ನಡ ಸಾಹಿತ್ಯದಲ್ಲಿ ಅಂಥ ಒಂದು ಗೀತೆ ಅಪೂರ್ವ ಎನ್ನಬೇಕು.

ನಮಗೆ ಸ್ವಾತಂತ್ರ್ಯ ಬರುವ ಮುನ್ನ ಇದ್ದ ನಮ್ಮ ನಾಡಿನ ದುಃಸ್ಥಿತಿಯನ್ನು ಕಂಡು ಈ ನಾಡು ಬಿಡುಗಡೆ ಪಡೆದು ತಲೆ ಎತ್ತಿ ನಿಂತೀತೆ ಎಂಬ ಭರವಸೆಯಲ್ಲಿ ಕವಿಯ ಹೃದಯ ತುಡಿದಾಗ ಹೊಮ್ಮಿದ ಸ್ಫೂರ್ತಿಯ ಕಿಡಿಗಳನ್ನು ವಿ. ಸೀ.ಯವರ ನಾಡ ಗೀತೆಗಳಲ್ಲಿ ಕಾಣುತ್ತೇವೆ. ಯಾವ ರಾಜಕೀಯ ಕ್ಷೇತ್ರದ ವ್ಯಕ್ತಿಗಳು ಭಾಷಣ ಗಳಿಂದ ಜನತೆಯನ್ನೆಬ್ಬಿಸಿ, ಜೈಲುವಾಸಗಳ ಶಿಕ್ಷೆಯನ್ನನುಭವಿಸಿ ಸ್ವಾತಂತ್ರ್ಯಕ್ಕಾಗಿ ಹೋರಾಡಿದರೋ ಅದಕ್ಕಿಂತಲೂ ಮಿಗಿಲಾದ ಕೆಲಸವನ್ನು ಆ ಕಾಲದ ಜನಕ್ಕೆ ಸ್ಫೂರ್ತಿದಾಯಕವಾದ ಕೃತಿಯನ್ನು ರಚಿಸಿ ಜನತೆಯನ್ನೆಚ್ಚರಿಸುವ ಕವಿಕರ್ಮ ಮಾಡ ಬಲ್ಲದು. ಭಾರತದ ಗತವೈಭವದ ಇತಿಹಾಸವನ್ನು ಮನದಲ್ಲಿ ತುಂಬಿಕೊಂಡು. ಭವಿಷ್ಯದ ಸುಂದರ ಸ್ವಪ್ನವನ್ನು ಕಣ್ಣಲ್ಲಿ ತುಂಬಿಕೊಂಡು

ಎಮ್ಮ ನಾಡಿನ ಚರಿತೆ ದ್ರೋಹಗಳ ಕತೆಯಾಯ್ತು
ಬಹುಕಾಲ ಬೀಳಾಯ್ತು ಪೇಡಿತನವಾಯ್ತು

(ದುಂದುಭಿ: ಗೀ. ೫೩)

ಎಂದು ನಿಡುಸುಯ್ದರೂ, ಸದ್ಯದ ಕರ್ತವ್ಯವನ್ನು ಕುರಿತು

ಪಂದೆತನವಲಸತನದಿಂದ ಬಿಡುಗಡೆಯೊಂದಿ
ಹಿಂದಿನಪಮಾನಗಳ ತೊಳೆಯಿರೇಳಿ

(ಏಳಿ : ಗೀ. ೪೩)

ಎಂದು ನಾಡಿನ ಜನತೆಯನ್ನು ಎಚ್ಚರಿಸಿದರು. ಮಾನವ ಶಕ್ತಿಗೆ ದೈವೀಶಕ್ತಿಯ ನೆರವನ್ನು ಬಯಸಿ

ನಿನ್ನ ನಾಡೀ ನಾಡು ನಿನ್ನ ಮಕ್ಕಳು ನಾವು
ಎಮ್ಮನ್ನು ನೀ ನಡಸು ದಿಗ್ವಿಜಯಕೆ

(ಪ್ರಾರ್ಥನೆ: ದೀ. ೪)

ಎಂದು ಶಿವಶಕ್ತಿಯ ಕೃಪೆಯನ್ನು ಯಾಚಿಸಿದರು. ಭಾರತೀಯ ಜನತೆ ಸ್ವಾತಂತ್ರ್ಯ ಸಂಗ್ರಾಮಕ್ಕೆ ಸಿದ್ಧವಾಗಿ, ಮೈಕೊಡವಿ ನಿಂತ ಪರಿಯನ್ನು ಕಂಡು ರೋಮಾಂಚಿತರಾಗಿ

ಸಾಗರದ ಆಳಕ್ಕೆ ಅಡಿಯೂರಿ ಮೇಲೆದ್ದು
ಧವಳಗಿರಿಗೇರಿರುವ ಪರಿಯ ನೋಡಾ
ನಿನ್ನ ಕೀರುತಿ ಕಳಸ ಗೌರಿಶಂಕರದೆದುರು
ಮೇರುಗಿರಿಯಲಿ ನಟ್ಟ ವಿಭವ ನೋಡಾ

(ಹರಸುತಾಯಿ: ದೀ. ೩೫)

ಎಂದು ಹಾಡಿದರು. ದೇಶಪ್ರೇಮದ ಸಾತ್ವಿಕ ಪೌರುಷವಾಣಿ ಈ ಗೀತೆಗಳಲ್ಲಿ ಮೊಳಗಿದೆ.

ಅವರ ಕಾವ್ಯಶಕ್ತಿ, ಮತ್ತೆರಡು ಕವನ ಸಂಗ್ರಹಗಳಾದ–'ನೆಳಲು ಬೆಳಕು', 'ದ್ರಾಕ್ಷಿ ದಾಳಿಂಬೆ'ಗಳಲ್ಲಿ ಇನ್ನೂ ಹೆಚ್ಚಿನ ಪರಿಣತಿ ಪಡೆದಿರುವುದನ್ನು ರಸಜ್ಞರು ಓದಿ ತಿಳಿಯಬಹುದು. ಈ ಎರಡು ಕವನ ಸಂಕಲನದಲ್ಲಿ ನಿಜವಾಗಿಯೂ ಮನವನ್ನು ಮುಟ್ಟುವ ಕವನಗಳಿವೆ. ಸಂಗೀತಕ್ಕೆ ಗಂಟುಹಾಕಿಕೊಂಡ ಕೆಲವು ಕವನಗಳಿಗಿಂತ, ಸಂಗೀತದ ಕಟ್ಟನ್ನು ಹರಿದು ಬಂದಿರುವ ಬಹುಪಾಲು ಕವನಗಳಲ್ಲಿ ಹೆಚ್ಚು ರಸಾನುಭವಕಾರಿಯಾಗಬಲ್ಲವು ಎನಿಸುತ್ತದೆ. ಈ ಕವನಗಳಲ್ಲಿ ಕಂಡುಬರುವ ಅಚ್ಚುಕಟ್ಟು ಲಾಲಿತ್ಯ ಧೀರತೆ ಇವು ವಿ. ಸೀ. ಯವರ ಕಲಾತ್ಮಕ ವ್ಯಕ್ತಿತ್ವದ ಮೂರ್ತಿಗಳಂತಿವೆ.

೨

## ಒಂದು ಚಿರಂತನ ಕೃತಿ

ಮಹಾಕವಿ ಕಾಳಿದಾಸನ ನಾಟಕರತ್ನವಾದ 'ಶಾಕುಂತಲ'ದಲ್ಲಿ ನಾಲ್ಕನೇ ಅಂಕ ಬಹು ಮನೋಹರವಾದುದು. ಪೂಜ್ಯರಾದ ಕಣ್ವರು ಶಕುಂತಲೆಯನ್ನು ದುಷ್ಯಂತನ ಬಳಿಗೆ ಕಳುಹಿಸಿಕೊಡುವ ಸನ್ನಿವೇಶವೊಂದು ಅಲ್ಲಿ ಚಿತ್ರಿತವಾಗಿದೆ. ಶಕುಂತಲೆ ಮುದ್ದಿನಿಂದ ಸಾಕಿ ಸಲಹಿದ ಕಣ್ವರನ್ನೂ, ತನ್ನ ಬಾಳಿಗೆ ಬೆಸೆದುಕೊಂಡ ಆ ಆಶ್ರಮ ನಿಸರ್ಗಶ್ರೀಯನ್ನೂ, ಆಪ್ತರಾದ ಸಖಿಯರನ್ನೂ ತೊರೆದು ಕೈಹಿಡಿದ ನಲ್ಲನ ಮನೆಗೆ ಹೊರಟು ನಿಂತಿದ್ದಾಳೆ. ಹೆಣ್ಣುಮಗಳೊಬ್ಬಳ ಬಾಳಿನಲ್ಲಿ ಒಂದು ಸಂಧಿಕಾಲ ಇದು. ಪೂಜ್ಯರಾದ ಕಣ್ವರು, ಸಂಯಮಿಗಳಾದ ಋಷಿಗಳಾದ ಅವರೂ ತಮ್ಮ ಸಾಕು ಮಗಳಾದ ಶಕುಂತಲೆಯನ್ನು ಕಳುಹಿಸುವ ಮುನ್ನ ತಮ್ಮೊಳಗೆ ಆದ ಕಳವಳವನ್ನು ಕಂಡು 'ಅಳಲಿನಿತಾಗೆ ಕಾಡಮುನಿಜಂಗೆನಗಂ ಕಡುನೇಹದಿಂದಮಿನ್ನೆಳಿದ ಗೃಹಸ್ಥರಾತ್ಮಭವೆಯಂ ಕಳುಪುತ್ತ ಕಟೆಂತಳಲ್ವರೋ' ಎಂದುಕೊಳ್ಳುತ್ತಾರೆ. ಕಣ್ವರು ಆಶ್ರಮದ ನಿಸರ್ಗದೇವತೆಯನ್ನು ಕುರಿತು 'ಶಕುಂತಲೆ ಪತಿಗೃಹಕ್ಕೆ ತೆರಳಲು ನೀವೆಲ್ಲರೂ

ಅನುಜ್ಞೆಯನ್ನು ಕೊಡಿ' ಎಂದು ಕೇಳಿಕೊಳ್ಳುತ್ತಾರೆ. ಶಕುಂತಲೆ ಪತಿಗೃಹಕ್ಕೆ ಹೊರಟುನಿಂತ ಸಮಯದ ಮೂಕಮೌನ ಶೋಕಭಾರವನ್ನು ಕವಿ ಪ್ರಿಯಂವದೆಯ ಬಾಯಿಂದ ವರ್ಣಿಸಿದ್ದಾನೆ:

ಕುಣಿವುದನುಳಿದುವು ಶಿಖಿಗಳ್
ತೃಣಕಬಳಂ ಜಗುಳೆ ಬಾಯಿನರಿಯದು ಹರಿಣೀ
ಗಣಮುದಿರ್ವೆಲೆಯಿಂ ರಮಣೀ
ಮಣಿ ಕಣ್ಣೀರ್ವಿಡುವ ತೆರದೆ ತೋರ್ಪುವು ಲತೆಗಳ್

ಸುತ್ತಣ ನಿಸರ್ಗವೇ ಕಂಬನಿಗರೆಯುವಂತಹ ಸನ್ನಿವೇಶ ಅದು. ಶಕುಂತಲೆಯ ಶೋಕವನ್ನು ಕಂಡು ಕಣ್ವರು 'ತಡೆ ಮಗಳೆ ಬರ್ಪ ಕಂಬನಿ ಗಡಣಮನ್' ಎಂದು ಸಮಾಧಾನಮಾಡಿ,

ಪಿರಿಯರ ಸೇವೆಗೆಯ್ ಸವತಿಯರ್ಕಳೊಳಿಷ್ಟವಯಸ್ಯೆಯಂದದಿಂ
ದಿರು ಪತಿಯೊರ್ಮೆ ಹೇವಗೊಳಿಸಲ್ ಮುಳಿಸಿಂ ಪ್ರತಿಕೂಲೆಯಾಗದಿರ್
ಪರಿಜನಮಂ ಕರಂ ಸಲಹು ಭಾಗ್ಯದೆ ಬಾಗಿರು ಪೆಣ್ಗಳಿಂತಿರಲ್
ಗರತಿಯರಪ್ಪರಿಂತಿರದರನ್ವಯಕಾಧಿಯನುಂಟುಮಾಳ್ಪರ್

ಎಂದು ಗೃಹಿಣೀಧರ್ಮವನ್ನು ಬೋಧಿಸುತ್ತಾರೆ. ಅನಂತರ ಶಕುಂತಲೆ ಶೋಕಭಾರ ದಿಂದ ತನ್ನ ಪತಿಗೃಹಕ್ಕೆ ತೆರಳುತ್ತಾಳೆ. ಕವಿ ಕಾಳಿದಾಸ ಮಧುರವಾದರೂ ವೇದನಾ ಪೂರ್ಣವಾದ ಈ ಮೃದುವಾದ ಸನ್ನಿವೇಶವನ್ನು ಬಹು ರಮ್ಯವಾಗಿ ಚಿತ್ರಿಸಿದ್ದಾನೆ. ಕಾಳಿದಾಸ, ಕಣ್ವರ ಬಾಯಲ್ಲಿ ಹೇಳಿಸಿರುವ ಗೃಹಿಣೀಧರ್ಮದ ಸೂತ್ರ ಶತಮಾನ ಗಳಿಂದಲೂ ಭಾರತೀಯ ಸ್ತ್ರೀಯರ ಬದುಕನ್ನು ತಿದ್ದುತ್ತಿದೆ. ಒಂದು ಜೀವ ತಾನು ಹುಟ್ಟಿ ಬೆಳೆದ ಆವರಣವನ್ನು ತೊರೆದು, ಹೊಸತೊಂದು ಆವರಣಕ್ಕೆ ಒಳಗಾಗುವ ಸನ್ನಿವೇಶದ ದಾರುಣತೆಯನ್ನು ನಾವು ಅಲ್ಲಿ ಕಾಣುತ್ತೇವೆ.

ಕನ್ನಡದ ಮಹಾಕವಿ ಪಂಪನ 'ಆದಿಪುರಾಣ'ದಲ್ಲಿನ ಒಂದು ಸನ್ನಿವೇಶ ಗಮ ನಾರ್ಹವಾಗಿದೆ. ಶ್ರೀಮತಿ ವಜ್ರಜಂಘರ ಕತೆಯಲ್ಲಿ ವಜ್ರಜಂಘನನ್ನು ಮದುವೆ ಯಾದ ಶ್ರೀಮತಿ ಗಂಡನ ಮನೆಗೆ ಹೊರಟಿದ್ದಾಳೆ. ತಂದೆಯಾದ ವಜ್ರದಂತ ಮಗಳ–ಅಳಿಯನ ಪ್ರಯಾಣದ ಏರ್ಪಾಡು ಮಾಡಿದ್ದಾನೆ. ಬಂಧುಬಾಂಧವ ರೆಲ್ಲರೂ ನೆರೆದು ಈ ನವದಂಪತಿಗಳನ್ನು ಬೀಳ್ಕೊಡಲು ಮನವಿಲ್ಲದ ಮನವಿಲ್ಲಿ ನಿಂತಿದ್ದಾರೆ. ಆ ಸನ್ನಿವೇಶದ ಸ್ವಾರಸ್ಯವನ್ನು 'ಹಿತಮಿತ ಮೃದುವಚನ'ನಾದ ಪಂಪ ನಾಲ್ಕೇ ಸಾಲುಗಳಲ್ಲಿ ಮೂಡಿಸಿದ್ದಾನೆ:

ಪೊಡೆಮಡುವ, ಅಪ್ಪಿಕೊಳ್ವ, ನೆನೆಯುತ್ತಿರಿಮೆಂಬ, ಸಮಸ್ತವಸ್ತುವಂ
ಕುಡುವ, ಪಲರ್ಮೆಯಿಂ ಪರಸಿ ಸೇಸೆಯನಿಕ್ಕುವ, ಬುದ್ಧಿ ವೇಳ್ವ, ಕ
ಯ್ಯಡೆ ನಿಮಗೆಂದೊಡಂಬಡಿಪ, ನಲ್ಲರಗಲ್ಕೆಗೆ ಕಣ್ಣನೀರ್ಗಳಂ
ಮಿಡಿವ, ಬಹುಪ್ರಕಾರ ಜನಸಂಕಟಮೊಪ್ಪಿದುದಾಪ್ರಯಾಣದೊಳ್

ಜೀವನದ ಹಾದಿಯಲ್ಲಿ ಬರುವ ಈ ಬಗೆಯ ಬೀಳ್ಕೊಡಿಗೆಯ ಸನ್ನಿವೇಶಗಳು ಬಹು ದಾರುಣವಾದುವು. ವಿರಹ-ಸಂಗಮಗಳ ನೋವು ನಲಿವುಗಳೆರಡೂ ವಿಚಿತ್ರ ರೀತಿಯಲ್ಲಿ ಮಿಶ್ರಣಗೊಳ್ಳುವ ಈ ಸನ್ನಿವೇಶದ ಮನೋಹರತೆಯನ್ನು ಮನಗಂಡು ಚಿತ್ರಿಸುವ ಕಲೆ ಹಿರಿಯದು. ಈ ಕರುಣಾರಸದ ಹೊನಲು ಮಹಾಕವಿಗಳ ಕೈಯಲ್ಲಿ ಮಾತ್ರವಲ್ಲ, ನಮ್ಮ ಸಾಮಾನ್ಯ ಜನತೆಯ ಹೃದಯಭಾವಗಳನ್ನು ಹಾಡಿನಲ್ಲಿ ಹರಿಸಿರುವ ಅಜ್ಞಾತ ಜಾನಪದ ಕವಿಗಳಲ್ಲಿಯೂ ಈ ಚಿತ್ರಣ ಕಾಣುತ್ತದೆ. ಅವರದೇ ಆದ ಸರಳಸುಂದರ ಶೈಲಿಯಲ್ಲಿ ಈ ಸುಂದರ ಸನ್ನಿವೇಶವನ್ನು ಚಿತ್ರಿಸಿದ್ದಾರೆ. ಗಂಡನ ಮನೆಗೆ ಹೊರಟ ಮಗಳಿಗೆ ತಾಯಿ :

ಅತ್ತೇ ಮಾವಗಂಜಿ ಸುತ್ತೇಳು ನೆರೆಗಂಜಿ
ಮತ್ತೆ ಆಳುವಾ ದೊರೆಗಂಜಿ ಮಗಳೇ
ಅತ್ತೆಮನೆಯಾಗೇ ಬಾಳಮ್ಮಾ

ಎಂದು ಬುದ್ಧಿಹೇಳುತ್ತಾಳೆ. ಮಗಳು ತವರುಮನೆಯ ಹೊಸ್ತಿಲನ್ನು ದಾಟಿ ಹೊರಗೆ ಕಾಲಿಟ್ಟಾಗ ಹಡೆದ ತಾಯಿಗೆ ಆದ ವೇದನೆಯನ್ನು ಜಾನಪದ ಕವಿಯಿತ್ರಿ ಹೀಗೆ ವರ್ಣಿಸುತ್ತಾಳೆ :

ಹುಟ್ಟೀದ ಮನೆಯಿಂದ ಮೆಟ್ಟಿಲನಿಳಿವಾಗ
ಹೊಟ್ಟೆಗೆ ಸಿಡಿಲು ಬಡಿದಂತೆ ತಾಯಿಯ
ಕಣ್ಣೀರೆದ್ದು ಹೊಳೆಯಾದೊ !

ಹೀಗೆ ಈ ವಿರಹ–ಸಂಗಮಗಳ ಮಧುರ ವೇದನೆಯನ್ನು ಮಹಾಕವಿಯಿಂದ ಹಿಡಿದು ಸಾಮಾನ್ಯ ಜಾನಪದ ಕವಿಯವರೆಗೂ ಚಿತ್ರಿಸದವರಿಲ್ಲ. ಆ ವಸ್ತುವಿನ ಮಹತ್ವ ಅಂಥದು. ಆದೇ ಒಂದು ವಸ್ತುವನ್ನು ಕನ್ನಡ ಕವಿ ವಿ. ಸೀ. ಯವರು ತಮ್ಮದೇ ಆದ ವಿಶಿಷ್ಟ ರೀತಿಯಲ್ಲಿ ಮನಮುಟ್ಟುವಂತೆ 'ಮನೆತುಂಬಿಸುವುದು' ಎಂಬ ಕೃತಿಯಲ್ಲಿ ರೂಪಿಸಿದ್ದಾರೆ. ವಸ್ತು ಒಂದೇ ಆದರೂ ಅದು ಕವಿಗಳ ಸಾಮರ್ಥ್ಯಕ್ಕೆ ಅನುಸಾರವಾಗಿ ನವನವೀನವಾಗಿ ರೂಪುಗೊಳ್ಳುತ್ತದೆ. ಸಮರ್ಥನಾದ ಕವಿಯ ಕೈಯಲ್ಲಿ ಈ ಚಿರಂತನ ವಸ್ತು ಎಷ್ಟರಮಟ್ಟಿಗೆ ಸಾರ್ಥಕತೆಯನ್ನು ಪಡೆಯಬಲ್ಲುದೆಂಬುದಕ್ಕೆ ವಿ. ಸೀ. ಯವರ 'ಮನೆತುಂಬಿಸುವುದು' ಎಂಬ ಕವಿತೆ ಒಂದು ನಿದರ್ಶನ.

ಎಲ್ಲರ ಬಾಳಿನಲ್ಲಿಯೂ ಒಂದಲ್ಲ ಒಂದು ದಿನ ಬರುವ ಈ ಕರುಣಾಪೂರ್ಣವಾದ ಸನ್ನಿವೇಶವನ್ನು ಚಿತ್ರಿಸುವ ಈ ಕೃತಿ ಇಂದಲ್ಲ ನಾಳೆಯಲ್ಲ, ಎಂದೆಂದಿಗೂ ಎಲ್ಲರ ಮನವನ್ನೂ ಸೂರೆಗೊಳ್ಳುವಂಥದು. ಮಗಳನ್ನು ಗಂಡನ ಮನೆಗೆ ಕಳುಹಿಸುವಾಗ ತಾಯಿತಂದೆಯರ ಮನದಲ್ಲಿ ಆಗುವ ವೇದನೆ, ತಾಯಿ ತಂದೆಯರ ಬುದ್ಧಿವಾದ, ಮಗಳ ಪರವಾಗಿ ವರನ ಕಡೆಯವರಿಗೆ ತಂದೆ ಹೇಳುವ ಮಾತು—ಈ ಒಂದೊಂದು ಅಂಶವೂ ಏಳುಸುತ್ತಿನ ಮಲ್ಲಿಗೆಯ ದಳದಳದಂತೆ ನವಿರಾಗಿವೆ.

ಎಮ್ಮ ಮನೆಯಂಗಳದಿ ಬೆಳೆದೊಂದು ಹೂವನ್ನು
ನಿಮ್ಮ ಮಡಿಲೊಳಗಿಡಲು ತಂದಿರುವೆವು.
ಕೊಳ್ಳಿರೀ ಮಗುವನ್ನು ಎಮ್ಮ ಮನೆಬೆಳಕನ್ನು
ನಿಮ್ಮ ಮನೆಯನು ತುಂಬಲೊಪ್ಪಿಸುವೆವು.

ಎಂದು ಮೊದಲಾಗುತ್ತದೆ ಕವನ. ಈ ಕವನಕ್ಕೆ ವ್ಯಾಖ್ಯಾನವೇ ಅನವಶ್ಯಕ. ಮುಟ್ಟಿದರೆಲ್ಲಿ ಮಾಸುವುದೋ ಎಂಬಂತೆ ಥಳಥಳಿಸುವ ಇಬ್ಬನಿಯಂತೆ ಇದರ ಚೆಲುವು. ವಿ. ಸೀ.ಯವರ ಕಾವ್ಯದ ವಿಶಿಷ್ಟತೆಯೇ ಅದು. ಸರಳ, ಸುಂದರ. ಅಬ್ಬರ, ಆಡಂಬರಗಳಿಲ್ಲದ ಮೃದುಪದಬಂಧ. ಅವರು ತಮ್ಮ ಕವನಕ್ಕೆ ತಕ್ಕ ರಾಗವನ್ನು ಹಾಕುವುದು ಇನ್ನೂ ಸೊಗಸು. ಅವರ ಬಹುಪಾಲು ಕವನಗಳು ರಾಗಸಹಿತವಾಗಿಯೇ ಹುಟ್ಟಿಬಂದವು. ಈ ಸಂಗೀತಗುಣ ಓದುಗನ ದೃಷ್ಟಿಯಿಂದ ಪಲವೆಡೆ ಅನುಕೂಲವಾಗಿಯೂ, ಅನಾನುಕೂಲವಾಗಿಯೂ ಪರಿಣಮಿಸಿರಬಹುದು. ಆದರೆ ಈ ಒಂದು ಕವನದಲ್ಲಿ ಸಂಗೀತ ಸಾಹಿತ್ಯಗಳು ಎರಡೂ ಹಾಲು ಸಕ್ಕರೆ ಬೆರೆತಂತೆ ಸಮರಸವಾಗಿ ಬೆರೆತಿವೆ.

ಕವನದ ಹೆಸರು 'ಮನೆತುಂಬಿಸುವುದು'. ತವರುಮನೆಯ ಈ ಬೆಳಕಿನ ಬಳ್ಳಿಯಾದ ಮಗಳು ಗಂಡನ ಮನೆಯನ್ನು ತನ್ನ ವ್ಯಕ್ತಿತ್ವದಿಂದ ತುಂಬಿಸುತ್ತಾಳೆ. ಜೀವನವೇ ಅಷ್ಟು. ಒಬ್ಬರ ಬಾಳನ್ನು ಮತ್ತೊಬ್ಬರು ತುಂಬಿದಾಗಲೇ ಬಾಳು ಸಾಫಲ್ಯವನ್ನು ಪಡೆಯುತ್ತದೆ. ಒಂದು ಮನೆಯಿಂದ ಮತ್ತೊಂದು ಮನೆಯನ್ನು ತುಂಬುವ ಹೆಣ್ಣುಮಕ್ಕಳನ್ನು ಕುರಿತು 'ಗೃಹದೀಪ್ತಯಃ' (ಗೃಹದ ದೀಪ್ತಿಸ್ವರೂಪರು) ಎಂದು ಮಹರ್ಷಿಗಳು ಹೇಳಿದ್ದಾರೆ.

ಮೊದಲ ಪದ್ಯದ ಸೊಗಸನ್ನು ಪರಿಶೀಲಿಸಿ. ತಂದೆ ತನ್ನ ಮಗಳ ಬಗ್ಗೆ ಆಡಿರುವ ಮಾತುಗಳಲ್ಲಿ ವಾತ್ಸಲ್ಯವೇ ಹರಿದಿದೆ. ಹೂವು–ಮಗು–ಬೆಳಕು ಎಂಬ ಮಾತುಗಳಲ್ಲಿ ಎಂತಹ ಧ್ವನಿ ಮಿಡಿಯುತ್ತಿದೆ! ಹೆಣ್ಣುಮಗಳು ತಾಯಿತಂದೆಯರ ಮನೆಯಂಗಳದಲ್ಲಿ ಬೆಳೆದ ಹೂವು. ಸಂಸಾರವೃಕ್ಷಕ್ಕೆ ಮಕ್ಕಳೇ ಹೂವು. ಹೂವಿನಿಂದ ಗಿಡದ ಬಾಳು ಸಾರ್ಥಕತೆಯನ್ನು ಪಡೆಯುವಂತೆ ದಾಂಪತ್ಯಜೀವನದ ಸಾಫಲ್ಯ ಪುತ್ರಸಂತಾನದಲ್ಲಿ. ತಂದೆ ತನ್ನ ಮಗಳನ್ನು 'ಹೂವು' ಎನ್ನುವುದು ಉಚಿತವಾಗಿದೆ. ಮುಂದಿನ ಪದ್ಯದಲ್ಲಿ 'ಕಣಿಗಳ ನೆಳಲ್ ಸುಳಿಯಲದುರಿ ಬಾಡುವಳು ಹಿಮಂಜು ಬಳಲಿಸಿದ ಹೂವಿನಂತೆ' ಎಂದು ಮಗಳ ಕೋಮಲ ಗುಣವನ್ನು ಹೇಳುವಲ್ಲಿ ಈ ಭಾವಕ್ಕೆ ಇನ್ನೂ ಪುಷ್ಟಿ ದೊರೆತಿದೆ. ಎರಡನೆಯದಾಗಿ, 'ಕೊಳ್ಳಿರೀ ಮಗುವನ್ನು' ಎಂಬ ಮಾತಿನಲ್ಲಿ 'ಮಗು' ಎಂಬ ಪದ ತುಂಬ ಅರ್ಥಪೂರ್ಣವಾಗಿದೆ. ಮಗಳು ಬೆಳೆದು ದೊಡ್ಡವಳಾಗಿ ಗಂಡನ ಮನೆಗೆ ಹೊರಟುನಿಂತಿದ್ದರೂ ಆಕೆ ತಾಯಿತಂದೆಯರ ಪಾಲಿಗೆ ಇಂದಿಗೂ 'ಮಗು', ಮುಂದೆಯೂ ಮಗು. ಮೂರನೆಯದಾಗಿ ಅದು 'ಬೆಳಕು'. ಈ ಮನೆಯ ಬೆಳಕು ಗಂಡನ ಮನೆಯನ್ನು ತುಂಬಲು ಹೊರಟಿದೆ.

ತಾಯಿತಂದೆಯರು ತಮ್ಮ ಮನೆಯ ಬೆಳಕನ್ನು, ಮತ್ತೊಬ್ಬರ ಮನೆಯನ್ನು ತುಂಬಲು ಒಪ್ಪಿಸುತ್ತಾರೆ. ಈ ಒಂದು ಸುಂದರಭಾವ ಭಾರತೀಯ ಸಂಸ್ಕೃತಿ 'ಮದುವೆ' ಎಂಬುದನ್ನು ಯಾವ ದೃಷ್ಟಿಯಿಂದ ನೋಡುತ್ತದೆ—ಎಂಬುದನ್ನು ಸ್ಪಷ್ಟಪಡಿಸುತ್ತದೆ.

ಮುಂದಿನ ಪದ್ಯಗಳಲ್ಲಿ ತಂದೆ, ಮಗಳನ್ನು ಕರೆದುಕೊಂಡು ಹೋಗುವ ಮನೆಯವರನ್ನು ಕುರಿತು ತಮ್ಮ ಮಗಳ ಗುಣಗಳನ್ನು ಹೇಳುತ್ತಾರೆ. ಈ ಮುಗ್ಧೆ 'ಮರೆ ಮೋಸ ಕೊಂಕುಗಳನರಿಯದ, ಇನಿಸವಿಶ್ವಾಸವನು ಕಂಡರಿಯದ', 'ಕಷ್ಟಗಳ ಸೈಸದೆಯೆ ಕಾಣದೆಯೆ ಬೆಳೆದ' ಸುಕುಮಾರಿ. ಇವಳು 'ಕಠಿಣಗಳ ನೆಳಲ್ ಸುಳಿಯ ಲದುರಿ ಬಾಡುವಳು.' ಮಗಳು ಹೀಗೆ ಬೆಳೆದವಳು ಎಂದರೆ ಬರುವ ಕಷ್ಟಗಳನ್ನು ಸಹಿಸಲು ಸಿದ್ಧವಾಗಿಲ್ಲ ಎಂದಲ್ಲ. ಇನ್ನು ಮುಂದೆ ಆಕೆ :

ಸುಖದಲ್ಲಿ ದುಃಖದಲಿ ಎಲ್ಲ ದೆಸೆಯಿರವಿನಲಿ
ನಿಮ್ಮ ಪಾಲಿಗೆ ನಿಲುವ ಕುವರಿಯಿವಳು.

ಅಷ್ಟೇ ಅಲ್ಲ 'ಎಂದೆಂದು ಅವಳ ನಡೆ ನಿಮ್ಮ ಪರವಾಗಿ' ಎಂದು ಹೇಳುವಲ್ಲಿ ಗಂಡನ ಕಡೆಯವರಿಗೆ ಆಶ್ವಾಸನೆ ಮಾತ್ರವಲ್ಲ, ಮಗಳು ಇನ್ನು ಮುಂದೆ ಬಾಳಬೇಕಾದ ರೀತಿಯ ನಿರ್ದೇಶವೂ ಆಗಿದೆ.

ನಮ್ಮ ಬಾಳಿನಲ್ಲಿ ಮದುವೆಗಿಂತಲೂ ಹಿರಿಯ ಪವಾಡ ಮತ್ತೊಂದಿಲ್ಲ ಎನ್ನಿಸುತ್ತದೆ. ಎಲ್ಲೋ ಬೆಳೆದ ಹೆಣ್ಣು ಎಲ್ಲೋ ಬೆಳೆದ ಗಂಡೊಂದನ್ನು ಕೈಹಿಡಿದು, ಆಡಿ ಬೆಳೆದ ಅಂಗಳವನ್ನು ತೊರೆದು ಇದ್ದಕ್ಕಿದ್ದಂತೆಯೇ ಹೊರಡಬೇಕಾದ ಪ್ರಸಂಗ ನಿಜವಾಗಿಯೂ ಕರುಣಾಪೂರ್ಣವಾದುದು. ಅವಳನ್ನು ಒಪ್ಪಿಸುವ ತಂದೆ :

ಎಮ್ಮ ಕುಲಮನೆಗಳಿಗೆ ಹೊರಗಾಗಿ ಬಂದಿಹಳು
ನಿಮ್ಮ ಕುಲವನು ಬೆಳಸಬಂದಿರುವಳು

ಎಂದು ಹೇಳಿ,

ಹೆತ್ತವರ ಮನೆಗಿಂದು ಹೊರಗಾದೆ ನೀ ಮಗಳೆ,
ಈ ಮನೆಯೆ ಈ ಇವರೆ ನಿನ್ನವರು ಮುಂದೆ;
ಇವರೆ ತಾಯ್ತಂದೆಗಳು ಸಖರು ಭಾಗ್ಯವನು ಬೆಳೆಸುವರು;
ಇವರ ದೇವರೆ ನಿನ್ನ ದೇವರುಗಳು

ಎಂದು ಮಗಳಿಗೆ ದಾರುಣವಾದ ಸತ್ಯವನ್ನು ತಿಳಿಯಪಡಿಸುತ್ತಾನೆ. ಹೆಣ್ಣೊಂದು 'ಹೆತ್ತವರ ಮನೆಗೆ ಹೊರಗಾ'ಗಿ ಹೊರಟಾಗ, ಅದು ಎಂತಹ ತ್ಯಾಗವನ್ನು ಮಾಡಬೇಕು ! ಮುಂದಿನ ಭೋಗಕ್ಕೆ ಮುನ್ನುಡಿಯಾದ ಈ ತ್ಯಾಗ—ತನ್ನನ್ನೂ ತನ್ನ ತಂದೆತಾಯಿಯರನ್ನೂ—ತನ್ನ ಹುಟ್ಟುಮನೆಯ ದೈವವನ್ನೂ ತ್ಯಾಗಮಾಡುವುದರಲ್ಲಿ ಪೂರ್ಣಗೊಳ್ಳುತ್ತದೆ. ಹೆಣ್ಣು ತ್ಯಾಗದ ಮೂರ್ತಿ ಎಂದು ಹೇಳುವ ಮಾತಿಗೆ ಇದಕ್ಕಿಂತಲೂ ಹಿರಿಯ ನಿದರ್ಶನ ಬೇಕೆ ?

ತಂದೆತಾಯಿಯರು ಅಳಿಯನನ್ನು ಮತ್ತು ಅವರ ಕಡೆಯವರನ್ನು ಕುರಿತು :

ನಿನ್ನ ಮಡದಿಯ ಕೊಂಡು ಸುಖವಾಗಿರೌ ಮಗುವೆ
ನಿಮ್ಮ ಸೊಸೆ ಸೋದರಿಯು ಕೊಳ್ಳಿರಿವಳ

ಎಂದು ಹೇಳುವಲ್ಲಿ ಅವರ ವಾತ್ಸಲ್ಯಪೂರ್ಣವಾದ ಆಶಯ ಕೈಗೂಡಿದ ನೆಮ್ಮದಿಯ ನಿಟ್ಟುಸಿರೊಂದು ಕೇಳುತ್ತದೆ. ಕಡೆಗೆ ಮಗಳು ಶೋಕಪೂರ್ಣವಾಗಿ, ದೀನವಾಗಿ, ತನ್ನ ತಾಯಿತಂದೆಯರ ಕಡೆ ನೋಡುವಾಗ, ತಂದೆ ಮಗಳನ್ನು ಕುರಿತು :

ನಿಲ್ಲು ಕಣ್ಣೊರಸಿಕೊಳು, ನಿಲ್ಲು ತಾಯ್, ಹೋಗುವೆವು;
ತಾಯ್ವಿರಾ ತಂದೆಯಿರ, ಕೊಳ್ಳಿರಿವಳ;
ಎರಡು ಮನೆಗಳ ಹೆಸರು ಖ್ಯಾತಿಗಳು ಉಳಿವಂತೆ
ತುಂಬಿದಾಯುಷ್ಯದಲಿ ಬಾಳಿ ಬದುಕು

ಎಂದು ಹೇಳುವಲ್ಲಿ ಕಡೆಯಾಗುವ ಈ ಕವನ ಕರುಣಾರಸದ ಮಡುವಿನಂತಿದೆ. ಈ ಕಡೆಯ ಪದ್ಯದ ಸಾಲುಗಳಲ್ಲಿ ಮೂಡಿರುವ ಚಿತ್ರ ಅದ್ಭುತ. ಕಣ್ಣೀರು ಸುರಿಸುತ್ತ ಮೂಕಳಾಗಿ ನಿಂತಿರುವ ಹೆಣ್ಣುಮಗಳು, ನಿಷ್ಠುರ ನಿಯಮಕ್ಕೆ ತಲೆಬಾಗಿ ನಿಂತ ತಂದೆಯ ವಾತ್ಸಲ್ಯಪೂರ್ಣವಾದ ವೇದನೆ, ಬೇಡಿಕೆ, ಆದರೂ ಆ ಸನ್ನಿವೇಶದಲ್ಲಿ 'ಎರಡು ಮನೆಗಳ ಹೆಸರು ಖ್ಯಾತಿಗಳು ಉಳಿವಂತೆ ತುಂಬಿದಾಯುಷ್ಯದಲಿ ಬಾಳಿ ಬದುಕು' ಎಂದು ಹೇಳುವಲ್ಲಿ ಎಚ್ಚರಿಕೆಯ ರೂಪದ ಆಶೀರ್ವಾದ — ಈ ಎಲ್ಲವೂ ಈ ಕವನ ರಸದ ಮಡುವಾಗುವಂತೆ ಮಾಡಿವೆ.

ವಿ. ಸೀ.ಯವರು ಈ ಕವನಕ್ಕೆ ಆರಿಸಿಕೊಂಡಿರುವ ವಸ್ತು ಜನಜೀವನದ ಒಂದು ಕರುಣಾರಸಪೂರ್ಣ ಸನ್ನಿವೇಶ. ಜಗತ್ತು ಹುಟ್ಟಿ ಇಷ್ಟು ವರ್ಷಗಳಾದರೂ ಎಲ್ಲ ತಾಯಿತಂದೆಯರೂ ಒಂದಲ್ಲ ಒಂದು ದಿನ ತಮ್ಮ ಬಾಳಿನಲ್ಲಿ ಎದುರುಗೊಂಡ ಮತ್ತು ಎದುರುಗೊಳ್ಳಬೇಕಾದ ಚಿರಂತನ ಭಾವ ಈ ಕವನದ ಮೂಲ. ಈ ಚಿರಂತನ ಭಾವದ ಮೂರ್ತಿಯಾದ ಈ ಕವನ ಚಿರಂತನಗುಣ ಉಳ್ಳದೆನ್ನುವ ವಿಷಯದಲ್ಲಿ ಸಂದೇಹವೇ ಇಲ್ಲ. ಭಾರತೀಯ ವಿವಾಹ ಮತ್ತು ದಾಂಪತ್ಯಜೀವನದ ಆದರ್ಶಕ್ಕೆ ಹಿಡಿದ ಒಂದು ರನ್ನಗನ್ನಡಿಯಂತೆ ಈ ಕವನ ರಾಜಿಸುತ್ತದೆ.

ಜಿ. ಎಸ್. ಶಿವರುದ್ರಪ್ಪ

# 'ನೆಳಲು-ಬೆಳಕು' ಮತ್ತು 'ದ್ರಾಕ್ಷಿ-ದಾಳಿಂಬೆ'

ಕನ್ನಡ ಸಾಹಿತ್ಯದ ನವೋದಯದ ಬಗ್ಗೆ ಬರೆಯುತ್ತಾ ಶ್ರೀ ವಿ.ಸೀ. ಯವರು, "Sri's work was more as a creator of talent than as contributor, though as contributor he is as great a seminal influence" ಎಂದು ಹೇಳುತ್ತಾರೆ. (Triveni, March 1946). ಶ್ರೀಯವರು ಹೊಸಗನ್ನಡ ಕಾವ್ಯದ ಆಚಾರ್ಯ ಪುರುಷರು. ಅವರು ನಮ್ಮ ಸಾಹಿತ್ಯ ಪ್ರಕಾರ ಬೆಳೆಯಬೇಕಾದರೆ, ಬರಿಯ ನಮ್ಮ ಸಂಪ್ರದಾಯವೊಂದೇ ಸಾಲದು, ನೂರು ಕಡೆಯಿಂದ ನೂರು ಬಗೆಯಿಂದ ಅವಕ್ಕೆ ಉಪಕರಣಗಳು ಬಂದೊದಗಬೇಕು ಎಂದು ಸಾಧಿಸಿ, ಬೋಧಿಸಿ ಪ್ರೇರಕಶಕ್ತಿಯಾಗಿ ನಿಂತವರು. ಅವರ ಕೃತಿ ಹೆಚ್ಚು ಕಾವ್ಯಗಳಲ್ಲ—ಕವಿಗಳು !

ವಿ. ಸೀ. ಯವರು ಇದೇ ಜಾಡಿನಲ್ಲಿ ನಡೆದವರು. ನದಿ ತುಂಬಿ ಬರಬೇಕಾದರೆ, ನೂರು ಉಪನದಿಗಳ ನೀರನ್ನು ಬಾಚಿ ತಬ್ಬಿಕೊಂಡು ತನ್ನದಾಗಿಸಿಕೊಳ್ಳಬೇಕೆಂದರಿತವರು. ಅಂತೆಯೇ ವಿ. ಸೀ. ಯವರ ವಿಶ್ವಸಾಹಿತ್ಯದ ಸುಗಾಢ ಪರಿಚಯ ಕನ್ನಡದ ಮೇಲ್ಮೆಗೊಂದು ಪೂರಕ ಶಕ್ತಿಯಾಗಿ ಬಂತು. ಈ ಅಪಾರ ಸಾಹಿತ್ಯ ಜ್ಞಾನದಿಂದ ಅವರ ರುಚಿ, ತಿಳಿಯಾಗಿ ಹದನಾಗಿ ಹಸನಾಗಿ ಬೆಳೆದಿದೆ. ಇದರೊಂದಿಗೆ ಜೀವನದ ಸಾವಿರ ಮುಖದ ಅನುಭವ—ಪ್ರಕೃತಿ ಪುರುಷರ ಮಿಲನದಂತೆ—ಸೃಷ್ಟಿಗೆ ಹೇತುವಾಯಿತು.

ಮನುಷ್ಯನಾದವನಿಗೆ ಅನುಭವ ಸಾವಿರ ಬಗೆಯಲ್ಲಿ ಬರುತ್ತದೆ. ಎಲ್ಲರಿಗೂ ಎಲ್ಲ ಬಗೆಯ ಅನುಭವಗಳು ಬರುತ್ತವೆ. ಆದರೆ ಅವುಗಳನ್ನು ಎಲ್ಲರೂ ಒಂದೇ ಬಗೆಯಲ್ಲಿ, ಒಂದೇ ರೀತಿಯಲ್ಲಿ, ಒಂದೇ ಮಾನಸಿಕ ಮಟ್ಟದಲ್ಲಿ ಅನುಭವಿಸುವುದಿಲ್ಲ. ಕೆಲವರನ್ನು ಈ ಅನುಭವಗಳು ಬಂದು ತಾಕಿಯೂ ತಾಕದಂತೆ ಮುಟ್ಟಿ ಹೊರಟು ಹೋಗಬಹುದು. ಈ ರೀತಿಯವರ ಪ್ರತಿಕ್ರಿಯೆ—ನಿರ್ಲಿಪ್ತತೆಯಾಗಬಹುದು. ಆದರೆ ಮತ್ತೆ ಕೆಲವರಿಗೆ ಒಂದೊಂದು ಘಟನೆಯೂ ಒಂದೊಂದು ಅನುಭವವೂ ಕೂರಲಗಿನಂತೆ ಮೊನಚಾಗಿ ತಾಕಬಹುದು. ಆ ಅನುಭವದ ಫಲವಾಗಿ ಅವರ ಮನಸ್ಸಿಗೆ ವಿವಿಧ ಬಗೆಯ ಭಾವನೆಗಳ ಮೋಡಿ ತಾಕಬಹುದು. ಈ ಪ್ರತಿಕ್ರಿಯೆ

ಯನ್ನು ಅವರು ತಮ್ಮದೇ ರೀತಿಯಲ್ಲಿ, ತಮ್ಮದೇ ಆದ ವಿಶಿಷ್ಟ ಬಗೆಯಲ್ಲಿ ತಿಳಿಸ ಬಹುದು. ಈ ಅನುಭವವೇ ಕಲೆಯ ಉಸಿರು. ಈ ಅನುಭವ ಆ ವ್ಯಕ್ತಿಯ ವ್ಯಕ್ತಿತ್ವದ ಮೇಲೆ ನಡೆಸಿದ ದಾಳಿಗೆ ಆ ವ್ಯಕ್ತಿತ್ವ ಮಾರ್ದನಿಗೊಡುವುದೇ ಕಲೆಯ ಬಗೆ. ವ್ಯಕ್ತಿತ್ವ ಹಸನಾದಷ್ಟೂ, ತಿಳಿಯಾದಷ್ಟೂ, ಹದವಾದಷ್ಟೂ ಆ ಕಲೆಯೂ ಹಸನಾಗುತ್ತದೆ, ತಿಳಿಯಾಗುತ್ತದೆ, ಹದವಾಗುತ್ತದೆ.

ಹೀಗೆ ಮನಸ್ಸನ್ನು ತಾಕಿದ ಒಂದು ಅನುಭವ, ಮನಸ್ಸಿನ ಒಂದು ಸ್ಥಿತಿ, ಜೀವನಕ್ಕೊದಗಿದ ಒಂದು ವಿಶೇಷ ಸನ್ನಿವೇಶ, ಬಂದ ಒಂದು ಬೇಸರ, ನೋವು, ಕೆರಳಿದ ಆವೇಗ, ಹುರುಪು, ಸುಳಿಯೆದ್ದ ಸೊರಗು, ಸಂದೇಹ ಇಂತಹ ಭಾವ ಗಳನ್ನೆಲ್ಲ ಕಲೆ ಪ್ರತಿಬಿಂಬಿಸುತ್ತದೆ, ವ್ಯಕ್ತಿತ್ವದ ಸೂಚನೆಯನ್ನು ನಮಗೆ ಕೊಡು ತ್ತದೆ. ಕಾವ್ಯಪ್ರಕಾರದಲ್ಲಿ ಭಾವಗೀತಗಳು ಈ ಕಾರ್ಯವನ್ನು ವಿಶೇಷವಾಗಿ ಮಾಡುತ್ತವೆ. ಒಂದರಲ್ಲಿ ದ್ವೇಷ, ಮತ್ತೊಂದರಲ್ಲಿ ಪ್ರೇಮ ತೋರಬಹುದು. ಒಂದು ಗೀತದಲ್ಲಿ ಸಂದೇಹ ತೋರಿದ್ದರೆ, ಮತ್ತೊಂದರಲ್ಲಿ ಅಪಾರ ವಿಶ್ವಾಸ ಹೆಪ್ಪಾಗಿರಬಹುದು. ಇವೆಲ್ಲವೂ ಅನುಭವಗಳೇ – ಯಾವ ಅನುಭವವೂ ಒಂದ ಕ್ಕೊಂದು ವಿರೋಧವಲ್ಲ. ಎಲ್ಲವೂ ಒಂದುಕ್ಕೊಂದು ಪೂರಕ. ಇದರ ಕೊರೆಯನ್ನು ಅದು ತುಂಬುತ್ತದೆ. ಅದರ ಕೊನಸೊಡ್ಡುಗಳನ್ನು ಇದು ಹದಮಾಡುತ್ತದೆ. ಈ ರಸಪಾಕವನ್ನು ಓದುಗ ಸಹೃದಯತೆಯಿಂದ ಅನುಭವಿಸಬೇಕು, ಅಷ್ಟೆ.

ಕವಿ ಯಾವುದೋ ರೀತಿಯಲ್ಲಿ, ಸ್ಥಿತಿಯಲ್ಲಿ ನಿಂತು ಸತ್ಯಕ್ಕೆ ಕಣ್ಣು ತೆರೆದಿರು ತ್ತಾನೆ. ಆದರೆ ಆ ಕಾವು, ಆ ಸ್ಥಿತಿ ಯಾವಾಗಲೂ ಇರುವುದಿಲ್ಲ. ಅದರ ಕಾವು ಕೂಡ ನಿಧಾನವಾಗಿ ತಣ್ಣಗಾಗುತ್ತದೆ. ಕಾವಿದ್ದಾಗ ಕಾವ್ಯದಲ್ಲಿ ಒಂದು ಆವೇಶ (Inspiration)ವಿದೆಯೆನ್ನುತ್ತೇವೆ. ಈ ಕಾವಿನಲ್ಲಿ ಕಂಡುದೆಲ್ಲ ಕಲ್ಪನೆಯ ಮೂಸೆ ಯಲ್ಲಿ ಹಾದು ಹದಗೊಳ್ಳುತ್ತದೆ. ಅಂತೆಯೇ ಕಲೆ ಎಲ್ಲವನ್ನೂ ಬದಲಿಸುತ್ತದೆನ್ನು ವುದು. ಈ ಅನುಭವ ಪ್ರಕಾಶನದಲ್ಲಿ ಕಲೆ ಎಷ್ಟರ ಮಟ್ಟಿಗೆ ಗುರಿ ತಾಗಿದೆಯೆನ್ನುವು ದನ್ನು ಸಹೃದಯ ಓದುಗನೇ ಅರಿತುಕೊಳ್ಳಬೇಕು. ಕವಿಯ ಕಾವ್ಯದಲ್ಲಿ, ಭಾವ ಗೀತದಲ್ಲಿ ಮೈತುಂಬಿ ಬಂದಿರುವ ಅನುಭವ, ಹೊರಚೆಲ್ಲುವ ಭಾವನೆ, ಓದುಗನನ್ನು ಅಷ್ಟೇ ಅಲ್ಲದಿದ್ದರೂ, ಅದೇ ಬಗೆಯ ಭಾವನೆ, ಅನುಭವಕ್ಕೆ ಒಯ್ದು ಮೈಮರಸಿ ದರೆ ಆಗ ಆ ಕಾವ್ಯ ಸಫಲವಾಯಿತೆನ್ನಬಹುದು. ಅಂದರೆ ಭಾವನೆಯನ್ನು ಹೇಳಿದ ರೀತಿ, ಉಪಯೋಗಿಸಿದ ಪದಪುಂಜಗಳು. ಕಾಣುವ ಪ್ರತಿಮೆಗಳು, ರಸಚಿತ್ರಗಳು, ಮಾನಸಿಕವಾದ ಅನುಭವ. ಭಾವನೆಗೆ ಒಂದು ಭೌತಿಕ ರೂಪ ಕೊಡುವ ಪರಿಕರಗಳು ಚೆನ್ನಾಗಿರಬೇಕು. ಆಗಲೇ ಆ ಭಾವಗೀತೆ ಜನರ ಹೃದಯ ತಾಕೀತು. ಹೀಗೆ ಭಾವನೆ, ಅದನ್ನು ಪ್ರಕಟಿಸುವ ರೀತಿ–ಇವೆರಡರ ಜತೆಯಿಂದ ಓದುಗನಲ್ಲಿಯೂ ಪ್ರಚೋದನೆಯಾಗುವಂತಿರಬೇಕು. ಓದುಗ ಕೂಡ ಸಹೃದಯನಾಗಿ, ಆ ಭಾವ ನೆಯ ಜಾಡು ಹಿಡಿಯಬೇಕು. ಅನುಭವಿಸಿದ ಮನಸ್ಸಿನ ಹದ ಎಂತಹುದು, ಸ್ಥಿತಿ

ಯೇನು ಎಂಬುವುದನ್ನರಿತು, ಗೀತೆಯ ಹಿನ್ನೆಲೆಯನ್ನು ಚಿತ್ರಿಸಿಕೊಂಡು, ಮನಸ್ಸಿನ ಬಾಗಿಲು ತೆರೆದು ಆ ವೈಶಾಲ್ಯದಲ್ಲಿ ಭಾವಗೀತೆಯನ್ನೋದಬೇಕು. ಆಗಲೇ ನಾವು ಭಾವಗೀತೆಯ ಮಿಡಿತವನ್ನನುಭವಿಸುವುದು ಸಾಧ್ಯ. ಆಗಲೇ ಕವಿ ಕಂಡ ಸೊಬಗು ನಮ್ಮ ಕಣ್ಣಿಗೂ ಸೊಗಯಿಸುವುದು. ಅವನಿಗೆ ಕಂಡ ಚೆಲುವಿನಲ್ಲಿ ನಾವೂ ಪಾಲುಗೊಂಡು ಓಲಾಡುತ್ತೇವೆ. ಆದರೆ ಇದೆಲ್ಲವನ್ನೂ ಪ್ರಚೋದಿಸುವ ಶಕ್ತಿ ಮಾತ್ರ ಆ ಕವಿಯಲ್ಲಿರಬೇಕು. ಈ ಪ್ರೇರಕ ಶಕ್ತಿಯಿದ್ದರೆ ಮಾತ್ರ ಆತ ನಿಜಕವಿ.

ವಿ. ಸೀ. ಯವರು ಅಂತಹ ಹಿರಿಯ ಕವಿಗಳೆಂಬುದಕ್ಕೆ ಅವರ ಕವಿತೆಗಳೇ ಸಾಕ್ಷಿ. 'ಮನೆತುಂಬಿಸುವುದು' ಹಾಡನ್ನು ಯಾವ ಮದುವೆಯ ಮನೆಯಲ್ಲಿಯಾದರೂ, ಮಗಳನ್ನು ಕಳಿಸಿಕೊಡುವಾಗ ಕೇಳಬಹುದು. ಅದರ ಮಧುರನೋವಿಗೆ ಮನ ಕರಗಿ ಗಂಡೆದೆಗಳು ಕೂಡ ಕಣ್ಣೀರಿಡುತ್ತವೆ. ಅದೇ ಕವಿಯ "ಅಭೀಃ" ಕೇಳಿ, ಮುರಿದು ಬಿದ್ದು, ಸುರುಟಿಹೋದ ಬಾಳುಬಳ್ಳಿ ಮತ್ತೆ ಕೆದರಿ ನಿಂತು ಗಂಡುಮೆಟ್ಟಾಗಿ ನಿಂತಿದೆ. ಇಂತಹ ಕವಿಯ ಎರಡು ಕವನ ಸಂಗ್ರಹಗಳು–'ನೆಳಲು–ಬೆಳಕು' ಮತ್ತು 'ದ್ರಾಕ್ಷಿ–ದಾಳಿಂಬೆ'ಯ ಸಣ್ಣಪರಿಚಯ ಮಾಡಿಕೊಡುವುದು ನನ್ನ ಈ ಲೇಖನದ ಉದ್ದೇಶ.

ಭಾವನೆಯ ವೀಣೆಯಲ್ಲಿ ಮಿಡಿತ ಬರಿಯ ಒಂದೇ ತಂತಿಯದಲ್ಲ. ನಾಲ್ಕು ತಂತಿಯೂ ಮೀಟಿ, ವಿವಿಧ ಮಿಡಿತಗಳು ಸಿಡಿದೇಳುತ್ತವೆ. ಒಮ್ಮೆ ಸಮಾಜದ ನಿಷ್ಕರುಣೆ, ಬಾಳಿನ ಜಂಜಡತನ, ವ್ಯಕ್ತಿವ್ಯಕ್ತಿಯ ಮೇಲೆ ನಡೆಸುವ ದರ್ಪ ಇವುಗಳನ್ನು ಕಂಡು ಸಿಡಿಮಿಡಿಗೊಳ್ಳಬಹುದು. ಆ ಸಿಡಿಮಿಡಿಯಲ್ಲಿ ಸಮಾಜದ ಕಲ್ಲುತನವನ್ನು ಸೀಳಿ ಹೆಮ್ಮರದಂತೆ ಮುಗಿಲಿಗೀಟಿಯನಿಡುವಂತೆ ಮನಸ್ಸು ಬೆಳೆಯಬೇಕು.

ಸುತ್ತಲಿನ ಪಾಷಾಣ ಕಾರ್ಪಣ್ಯವನು ಸೀಳಿ
ಸಸಿತನದರಿಷ್ಟಗಳ ನೀಗಿ ಚಿಗುರಿ
ವಿಷ ವಾತ ಭೀತಿಗಳ ಎಡರುಗಳ ಕುತ್ತಗಳ
ಚೀಡೆಗಳ ಪೀಡೆಗಳನೆಲ್ಲ ದಾಟುತ್ತೆ
ಬಲಿತ ಹೆಮ್ಮೆರನದೆಗೊ ಕಾಣುತಿದೆ ನೋಡು!

ಆ ಹೆಮ್ಮರನಂತೆ ಬೆಳೆದು ನಾಲ್ಕು ದಿಕ್ಕಿಗೂ ಕೈಚಾಚಿ, ನಾಲ್ಕು ಜನಕ್ಕೆ ಆಸರೆಯಾಗಿ ಋತುನೇಮಿಯಾಗಿ ಬೆಳೆಯಬೇಕು ಮನಸ್ಸು. ಹಿರಿಯ ಬಾಳು ನಮ್ಮದಾಗಬೇಕಾದಲ್ಲಿ ಆ ಹೆಮ್ಮರನನ್ನು ಕಂಡು ನಾವು ಅರಿಯಬೇಕು.

ಮರನು ಹಿರಿಮೆ ಪತಾಕೆಯೆತ್ತಿ ದಿಕ್ಕಿಗೆ ಹಿಡಿದು
ಸಹ್ಯಾದ್ರಿಶಿಖರಗಳ ಪುಳಕಗೊಳಿಸುತಿದೆ.

ಅಂತೆಯೇ ಅದು ನಮಗೆ ಗುರು. ಅದರಂತೆಯೇ ನಾವೂ ವೀರಸಾಹಸಿಗಳಾಗಬೇಕು. ವೀರತನವನ್ನು ಪಡೆಯಬೇಕು. ಬರಿದೆ "ಕುಗ್ಗಿ ಕಂಗೆಟ್ಟು ಎದೆ ಕುಸಿದು" ಕುಳಿತೇನೂ ಫಲವಿಲ್ಲ. ವೀರಸಾಸಿಯಾಗಬೇಕು. ಕುಲಮಾನ, ದಿಕ್ಕು ದೆಸೆ, ಮನೆ

ಮಠ ಎಲ್ಲ ಕಂಡವರ ಕಾಲ ದೂಳಾಗಬಹುದು. ಆದರೂ ಮನುಷ್ಯ ದುಃಖದಲ್ಲಿ ಇದನ್ನು ಮರೆಯಬಾರದು :

ವೀರಸಾಸಿಗಳೇರಿ ತುದಿಯಿಂದ ಸುತ್ತಲಿನ
ಸೌಭಾಗ್ಯವಳೆಯುವರು ಕಣ್ದಣಿವವರೆಗೂ ;
ಇಂದ್ರ ನೀಲಾಕಾಶದೊಡಲಲ್ಲಿ ಹುದುಗಿರುವ
ತಾರೆಗಳ ಜೀವಗಳ ಗತಿಯನಳೆಯುವರು ;
ದಿವ್ಯಮರ್ಮಗಳರಿತು ದೇವರಿಗು ಮಿಗಿಲಾದ
ಸತ್ಯಧರ್ಮದ ಕೀರ್ತಿ ವಿವರವರಿಯುವರು.

(ಹೆಮ್ಮರ)

ಇದರಿಂದ ನಾವು ನಡೆಸಬೇಕಾದುದು ಸಾಧನೆ ! ಕೆಚ್ಚಿನಿಂದ ದುಡಿಯಬೇಕು. ಸಾಧಿಸುವೆನೆನ್ನುವ ಛಲ ಬೇಕು. ಸಹನೆ, ಆತ್ಮಶಕ್ತಿ, ತನ್ನ ಬಾಳನ್ನು ತಾನೇ ರೂಪಿಸಿಕೊಂಡು, ಕಂಡರಿಯುವ ಸತ್ವ ಬೆಳೆಯಬೇಕು. ಎಲ್ಲಕ್ಕೂ ಮಿಗಿಲಾಗಿ ಸಹನೆ ಬೇಕು. ಅಳುಕದೆಯೆ, ಅಹಂಕಾರವನ್ನು ಮೆಟ್ಟಿ ಮುನ್ನಡೆಯುವ ಕಸುವು ಬೇಕು. ಈ ಕಾವ್ಯ, ಕೆಚ್ಚನ್ನು ಕೆದರಿ ಸಾಧನೆಗೆ ಪ್ರೇರಣೆಯಾಗುತ್ತದೆ. ಆದರೆ ಇನ್ನೊಂದು ಸಂದರ್ಭದಲ್ಲಿ ಮನಸ್ಸಿನ ಹಿನ್ನೆಲೆಯಲ್ಲಿ ನೋವಿನ ನೆರಳು ಬಿದ್ದು, ಬೆಳೆದು ಭಯ ಬೆದಕಬಹುದು. ಆಗ ನಲವು ಕಾಣದಾಗಬಹುದು. ಜಗತ್ತಿನ ನೋವಿಗೆ ಈ ಮನಸ್ಸೊಂದು ಪಾತ್ರವಾಗಬಹುದು. ಸಮಾಜದ ಸಂಕಲೆಗಳಿಗೆ ಸಿಕ್ಕಿ ನೊಂದವರನ್ನು ಕಂಡು ಸಹಾನುಭೂತಿ, ಕರುಣೆ ಆಗ ಉಕ್ಕಿ ಬರುತ್ತದೆ. ಅನಾಥೆಯಾದವಳು, ತನಗೆ ಸಮಾಜದಲ್ಲಿ ಒಂದು ಸ್ಥಾನವನ್ನು ಕೊಟ್ಟು, ಪ್ರೀತಿ, ಆದರ, ಪ್ರೇಮಗಳ ತೊಡಪಿನಿಂದ ಸೊಗಯಿಸಿದ ಅಣ್ಣನನ್ನು ಕಳೆದುಕೊಂಡವಳು, ತನ್ನ ಸರ್ವಸ್ವವೂ ಕಳೆದು ಹೋದುದರ ಪೆತೆಗೆ, ಸಮಾಜದ ಕ್ರೌರ್ಯವನ್ನು ಅನುಭವಿಸಬೇಕು.

ನಂಬಿದಿನಿಯನು ಕಳೆಯೆ ನಿರ್ಭಾಗ್ಯಳಾದಳಿಗೆ
ಜಗದವರನಾದರದ ಬಾಣದಿರಿತಗಳು !

(ಅನಾಥೆ)

ಎಲ್ಲೆಲ್ಲಿಯೂ ಹಬ್ಬ. ಮಂಗಳವನ್ನುಂಟುಮಾಡೆಂದು ಮಹಾಲಕ್ಷ್ಮಿಯನ್ನು ಪ್ರಾರ್ಥಿಸುವ ದಿನ. ಈ ಅನಾಥೆ ಮಾತ್ರ ಒಬ್ಬಳೇ ಏಕಾಂಗಿಯಾಗಿ ಕಿಟಕಿಯ ಹಿಂದೆ ತನ್ನ ಮೈಯನ್ನು ಗೇಣಗಲ ಮಾಡಿ ಬಚ್ಚಿಟ್ಟುಕೊಳ್ಳಬೇಕು. ದುರ್ಭರವಾದ ನೋವನ್ನು ಸಹಿಸಬೇಕು. ಅವಳನ್ನು ಕರೆಯುವವರಾರು—

ಯಾವ ಮನೆಗೂ ನೀನು ಇಂದಮಂಗಳೆಯು.

ಸಹಾನುಭೂತಿಯಿದೆ. ಆದರೆ ಲೋಕಕ್ಕೆ ಹೆದರಿ ಈ ಕಣ್ಣೀರನ್ನೊರಸುವ ಚೈತನ್ಯ ವಿಲ್ಲ. ಲೋಕ ಆ ಕಣ್ಣೀರನ್ನು ತರಿಸಿತು. ಆ ಕಣ್ಣೀರು ಲೋಕವನ್ನು ತಾಕದು.

ನೀನಿಡುವ ಕಣ್ಣೀರು ಜನತೆಯನು ಕರಗಿಸದು
ಕಲ್ಲೆದೆಯ ಕಠಿನಗಳು ಮುರಿಯದಿಹವು.

ಈ ಕಣ್ಣೀರನ್ನು ಕಂಡು ನಮ್ಮ ಮನಸ್ಸು ಕರಗುವುದು. ಅಯ್ಯೋ! ಎನಿಸಿ ಕರುಣೆ ಚಿಮ್ಮುತ್ತದೆ. ಆದರೆ ಈ ಕರುಣೆಗೆ ಅವಳ ದುಃಖವನ್ನು ದೂರಮಾಡುವಷ್ಟು ಶಕ್ತಿಯಿಲ್ಲ. ಲೋಕದ ಹೆದರಿಕೆಯಿಂದ ನಾವೂ ಹಿಮ್ಮೆಟ್ಟುತ್ತೇವೆ. ಬೇಡವೆಂದರೂ ಹೃದಯ ಕಗ್ಗಲ್ಲ ಬಾಳನ್ನು ಹೊರೆಯಬೇಕಾಗಿದೆ.

ಯಾರೇನ ಗೈಯಲಿಕು ಮುಂದೆ ಸಾರದೆ ಇಹವು
ನಾಳೆ ನಾಡಿನ ಕರುಣೆ ತೆರೆವವರೆಗು.

(ಅನಾಥೆ)

ಇಲ್ಲಿ ಸಾಮಾಜಿಕ ಅತೃಪ್ತಿ ಕರುಣೆಯಲ್ಲಿಯೂ ಕಿಚ್ಚಾಗಿ ಕಾಣುತ್ತದೆ. ವ್ಯಕ್ತಿಯ ಅಸಹಾಯ ಎದ್ದು ಕಾಣುತ್ತದೆ.

ಸಮಾಜದ ನೋವು ಒಂದಾದರೆ, ವ್ಯಕ್ತಿ ತನ್ನದೇ ಆದ ವಾತಾವರಣದಲ್ಲಿ ಬೇಗುದಿಯಲ್ಲಿ ಬೇಯುತ್ತಾನೆ. The poet makes little songs out of great sorrow ಎಂದು ಹೆನ್ರಿಚ್ ಹೇನ್ ಹೇಳಿದ್ದಾನೆ. ಕವಿ ಅಪಾರ ನೋವಿನಿಂದ ಒಂದು ಸಣ್ಣ ಗೀತೆಯನ್ನು ರೂಪಿಸುತ್ತಾನೆ. ಈ ನೋವು ಅವನ ಬಾಳುವೆಯಲ್ಲಿ ಹಾಸು ಹೊಕ್ಕಾಗಿ ಬಂದಿದೆ. ಅದರ ತೆಕ್ಕೆಗೆ ಬಿದ್ದು ಕವಿ ಅದನ್ನು ಮಧುರ ಗೀತವಾಗಿ ಮಾರ್ಪಡಿಸುತ್ತಾನೆ. ತನ್ನ, ಜಗದ, ತನ್ನ ಕಾಲದ ನೋವನ್ನೆಲ್ಲ ಅಳೆದು ಸುರಿದು ಒಂದು ಗೀತದಲ್ಲಿ ತುಂಬಿಸುತ್ತಾನೆ. ಸುಂದರವಾದ ದಿಗಂತ ನೋಡುತ್ತಾನೆ. ನೆಲ ತಬ್ಬುವ ಬಾನು, ಬಾನನ್ನು ಬೆಟ್ಟದಲ್ಲಿ ಮುಟ್ಟಲು ನಿಮಿರಿ ನಿಂತ ನೆಲ. ಇವೆರಡರ ಸೊಗಸು ನಿಂತಂತೆ ನಿಂತ ಕವಿಯ ಹೃದಯದಲ್ಲಿ ತನ್ನ ನೋವಿನ ನೆನಸನ್ನುಕ್ಕಿಸಿದೆ.

ನಡುವೆ ನಾ ನಿಂದಿಹೆನು ಮನದ ಜಂಜಡದಲ್ಲಿ
ಜಡಕಿಂತ ಜಡವಾಗಿ ಬಡವಾಗಿ ಬೆಂಡಾಗಿ
ಬೆಡಗು ನೋಟವ ನೋಡನೋಡುತಿಲ್ಲಿ

(ದಿಗಂತ ೮)

ನೋಡನೋಡುತ್ತ ತನ್ನ ಬಂಜೆತನವೇ ಎದ್ದುಕಾಣುತ್ತದೆ. ಆಗ ತನ್ನ ಸ್ಥಿತಿಯ ಅರಿವಾಗಿ ನೆನಪೆಲ್ಲ ನೋವಾಗುತ್ತದೆ. ತನ್ನ ಅಸಹಾಯತೆಯ ಅರಿವಾಗುತ್ತದೆ.

ಹಿರಿತನವ ಸಾಧಿಸುವ ಗೈಮೆಯದಟುಗಳಿಲ್ಲ.
ನೆಲಕೆ ಸಗ್ಗವ ಬರಿಪ ಗುಣದ ಬಲವಿಲ್ಲ.
ಈ ಮನದಲೀ ಬರಡು ಬದುಕಿನಲ್ಲಿ.

(ದಿಗಂತ)

ಇಂತಹ ಮನಸ್ಸಿನ ಸ್ಥಿತಿಯಲ್ಲಿ ಎಲ್ಲವೂ ನೋವಿಗೆ ತನಿಯೆರೆಯುವಂತೆ ಕಾಣುತ್ತದೆ.

ನೋವು ಎಲ್ಲದರ ಒಳಹಾಡಾಗಿ ಕಾಣಿಸಿಕೊಳ್ಳುತ್ತದೆ. ಸೊಗಸಾಗಿ ಮಾವಿನೆಲೆ ಚಿಗುರು ಮೆದ್ದು ಮದಿಸಿ ಹಾಡುವ ಕೋಗಿಲೆಯು ಇಂಚರ ಕೂಡ ಆ ಸಮಯದಲ್ಲಿ ಕರ್ಕಶವಾಗಿ ಕೇಳಿಸುತ್ತದೆ. ಆಗ ಕೋಗಿಲೆಯನ್ನು

ಕೊರಲು ಬಿರಿದು ಹೋಗುವಂತೆ
ಬೆಳಗಿನಿಂದ ಅರಚುತಿರುವೆ
ಕಣ್ಣು ಕಾಂಬ ಘೋರಗಳಿಗೆ
ಕಲ್ಲು ಮರನು ಕರಗುತಿರಲು
ಎದೆಯು ಕಲ್ಲು ಮಾಡಿ ಮೊರೆವೆ
ನಿಲಿಸು ನಿಲ್ಲಿಸು

(ನಿಲ್ಲಿಸು)

ಎಂದು ಕವಿ ಗದರಿಸುತ್ತಾನೆ.

ನಿನ್ನ ಹರುಷ ನಿನ್ನದಿಂದು
ಜಗದ ವೆತೆಗಳೇಕೆ ನಿನಗೆ ?
ಯಾರ ನೋವ್ಗಳೇನೆ ಇರಲಿ
ನಿನಗೆ ಸೋಕವು
ಕರುಣೆಯಿನಿಸು ತೆರೆಯದೇನು ?
ಎದೆಯಿರಿತವ ಕಂಡು ಕಂಡು
ನಿನ್ನ ಕಠಿನ ಮುರಿಯದೇನು ?

(ನಿಲ್ಲಿಸು)

ಎಂದು ಕವಿ ಕೋಗಿಲೆಯನ್ನು ನಿಂದಿಸುತ್ತಾನೆ.

ಇಂತಹ ನೋವಿನ ಒಂದು ಪ್ರತೀಕವೇ 'ವರುಷ ಹೋಯಿತು' ಎಂಬ ಗೀತ. ಈ ಗೀತವನ್ನೋದಿದರೆ ಇದು ಬರಿಯ ಒಂದು ವ್ಯಕ್ತಿಯ ಶೋಕ, ವೇದನೆಯೆನಿ ಸುವುದಿಲ್ಲ. ಇದು ಜಗತ್ತಿನೆಲ್ಲರ ಒಳನಾಡಿಯ ಧ್ವನಿಯೆನಿಸುತ್ತದೆ. ಹೊರಗೆ ಇರುಳು ಕಳೆದರೂ ಮನಸ್ಸಿನ ಇರುಳು ಕಳೆದಿಲ್ಲ. ಕೊಳದ ಕದಡು ತಿಳಿಯಾದರೂ

ಮನದ ಕೊಳಚೆಯ ಕದಡು ಮುರಿಯದು
ತಿಳಿಯು ಹೂಗಳು ಬಾರವು.

ಪ್ರಕೃತಿಯ ಚೆಲುವು, ನಿಸರ್ಗ ರಚಿಸಿರುವ ಬಣ್ಣಬಣ್ಣದ ಮೋಡಿ ಎಲ್ಲವೂ ದುಃಖದಲ್ಲಿ ಅದ್ದಿ ಮನಸ್ಸಿನ ನೋವಿನ ತಂತಿ ಸೆಳೆದು ಎದೆ ಸೀಳುತ್ತದೆ.

ಆದರೆ ಅದೇ ಚೆಲುವು, ಮತ್ತೊಂದು ಕ್ಷಣದಲ್ಲಿ ಬೇರೊಂದು ರಂಗಾಗಿ, ಬೇರೊಂದು ರಾಗವಾಗಿ ಹೃದಯ ಮುಟ್ಟಿ, ಉಲ್ಲಾಸ ನಗೆಗಳನ್ನು ಬುಗ್ಗೆಯಾಗಿಸು ತ್ತದೆ. ಲಾಲ್‌ಬಾಗ್ ಒಂದು ಸುಂದರ ಚಿತ್ರ. ಹೂಗಳ ಸಂಭ್ರಮ, ಚೈತ್ರದ ಸೊಬಗಿನ ರಾಶಿ, ಹಕ್ಕಿಗಳ ಸೊಗದುಕ್ಕು ಎಲ್ಲವನ್ನು ಈ ಕವಿತೆ ಸಹಜ ಸುಂದರ

ವಾಗಿ ಹೊರಹೊಮ್ಮಿದೆ. ಈ ಸುಗ್ಗಿ ಸಂಭ್ರಮದಲ್ಲಿ ಭಾಗಿಯಾಗಲು ಎಲ್ಲರನ್ನು ಕರೆಯುತ್ತದೆ.

ಮಧುಮಾಸದೀ ಸವಿಯು ಬೆಡಗು ಹೋಹುದು ಬೇಗ
ನಡೆವಾಗ ಇದನುಣಲು ಓಡಿಬನ್ನಿ.

(ಲಾಲ್‌ಬಾಗ್, ೧೯)

ಎಂದು ಕವಿ ತನ್ನ ಸುಗ್ಗಿ ಸಂಭ್ರಮದಲ್ಲಿ ಕರೆಯುತ್ತಾನೆ.

ಮುಂಗಾರಿಗೆ ಕರೆಕೊಟ್ಟು ನೆಲಕೆ ತಂಪೆರೆದು, ಬಾಳಿಗೆ ಮರೆತಿರುವ ಸಂತಸ ವನ್ನು ಹೆಚ್ಚಿಸುತೆ ಹಂಚುತ್ತ ಸುರಿಯೆ ಬನ್ನಿರೆಂದು ಕರೆಯುತ್ತಾನೆ. ಈ ಕೃತಿಗಳಲ್ಲಿ ಸುತ್ತಲಿನ ಸೃಷ್ಟಿಯ ಚಿತ್ರಣವೇ ರೂಪವೆತ್ತು ಬಂದಿದೆ.

'ಶಬರಿ' ವಿ. ಸೀ. ಯವರ ಗೀತಗಳಲ್ಲಿ ಬಹಳ ಪ್ರಸಿದ್ಧವಾದುದು. ಶಬರಿ ರಾಮನಿಗಾಗಿ ಕಾದು ನಿಂತು ಅವನಿಗಾಗಿ ಹಂಬಲಿಸಿ, ಕಾತರಿಸಿದ ಸುಂದರ ಚಿತ್ರಣ ವಿದೆ. ಅಂತೆಯೇ ಕೊನೆಯಲ್ಲಿ ಬಡವರನು ಕಾಯಬಾರಾ ಎಂದು ಹೃದಯ ಶಬರಿ ಸ್ವಾತಂತ್ರ್ಯರಾಮನಿಗಾಗಿ ಹಂಬಲಿಸಿ ಹಲುಬುವ ಚಿತ್ರವೂ ಬಂದಿದೆ. ಈ ಚಿತ್ರ ಯಾರ ಹೃದಯವನ್ನಾದರೂ ತಾಕುವಂತಹುದು.

ಕಾರಂತರ 'ಕಾಲನಟ' ನರ್ತನ ವಿ. ಸೀ. ಯವರಲ್ಲಿ ಮೂಡಿಸಿದುದರ ಚಿತ್ರವೇ 'ಕಾಲನಟ'. ಇಲ್ಲಿ ರಂಗದ ಮೇಲಿನ ಕುಣಿತ, ಸಜ್ಜಿಕೆ, ಯಕ್ಷಗಾನದ ಕುಣಿತದ ಪ್ರತೀಕ ಕಾಣುತ್ತದೆ. ಇಲ್ಲಿಯೇ ನಾವು ನರ್ತಕ ಕಾರಂತರು ಕನ್ನಡದ ಗಡಿಗಡಿಗೂ ಹೋಗಿ ಕಲೆಯಲ್ಲಿ ಎಲ್ಲವನ್ನೂ ಒಗ್ಗೂಡಿಸಲು ನಡೆಸಿದ ಪ್ರಯತ್ನವೂ ಸೂಚಿತ ವಾಗಿರುವುದನ್ನು ಕಾಣುತ್ತೇವೆ. ಈ ಕವಿತೆ ಒಂದು ಕಲೆಗೆ ಮತ್ತೊಂದು ಕಲೆಯ ಪ್ರತಿಬಿಂಬವೆನಿಸುತ್ತದೆ.

ಹಂಪೆಯನ್ನು ಕಂಡಾಗ ಯಾವ ಕನ್ನಡಿಗನ ಕರುಳೂ ಕಿತ್ತುಬರುತ್ತದೆ. ಪಂಪಾ ಯಾತ್ರೆಯಲ್ಲಿ ತಮ್ಮ ಅನುಭವ ಕೊಟ್ಟ ವಿ. ಸೀ. ಯವರು ಇಲ್ಲಿ ತಮ್ಮ ಮನಸ್ಸಿ ಗಾದ ಹಲುಬು ನಿರಾಶೆಯನ್ನು 'ವಿರೂಪಾಕ್ಷ'ದಲ್ಲಿ ತೋಡಿಕೊಂಡಿದ್ದಾರೆ.

ತಳಗು ಮೇಲಾಗುವುದು
ಮೇಲು ತಳಗಾಗುವುದು.

ಎನ್ನುವ ಮಾತು ಎಲ್ಲರೂ ಹೇಳುತ್ತಾರೆ. ಆದರೆ

ಅಂತಾಗದಾಯ್ತಿಲ್ಲಿ
ಈ ಹಾಳು ಹಂಪೆಯಲಿ
ನಾಣ್ನುಡಿಯು ಹುಸಿಯಾಯ್ತು
ಏರಿ ಕೂಲಿದ ಬಾಳು
ಏರದಾಯ್ತು.

(ವಿರೂಪಾಕ್ಷ)

ಹಂಪೆಯು ಏರು ಬೀಳಾಯ್ತು, ಆದರೆ ಆ ಬೀಳು ಮತ್ತೆ ಏರಾಗಲಿಲ್ಲ. ವೈರಿಗಳ ಕರುಬು, ಆಳಿದವರ ವಿಗಡತನದಿಂದ ಹಂಪೆ ಹಾಳಾಯ್ತು. ಅದರ ಭಾಗ್ಯ ಬಯಲಾಯ್ತು. ಇದನೆಲ್ಲ ನೋಡಿದ ಪಂಪಾಪತಿ ವಿರೂಪಾಕ್ಷ ಮಾತ್ರ

ಸುಯ್ಯದೆಯೆ ಬೇಯದೆಯೆ
ಪೂಜೆಯನು ಕೊಳುತಿಹನು

(ವಿರೂಪಾಕ್ಷ)

ಇದೇ ಏರುಬೀಳು ರಾಜ್ಯಕ್ಕೆ ಬಂದಂತೆಯೂ ಜನಕ್ಕೂ ಬರುತ್ತದೆ. ಅಲ್ಲಿಯೂ ಅದೇ ಬಗೆ. ಬಿದ್ದುದಕ್ಕೆ ಮತ್ತೆ ಏಳಿಲ್ಲ. ಒಂದು ದಿನ ಸಾವಿರ ಜನರನ್ನು ತನ್ನ ಕಿರುಬೆರಳಿನ ಸುತ್ತ ಆಡಿಸಿದವಳು ಇಂದು ಬೀದಿಯಲ್ಲಿ ಕೇರಿಗಳ ಕಂಗಾಲ ಜನಕ್ಕಿಂತ ಕೀಳಾಗಿ, ಕಂಡವರ ಕಣ್ಣಿಗೆ ಕಸವಾಗಿ ಬಿದ್ದಿರುವಳು. ಈ ಚಿತ್ರ ಕೂಡ ಕರುಣೆಯುಕ್ಕಿಸುವ ಚಿತ್ರ.

ಮನುಷ್ಯನ ಬಾಳಿನ ಅಸಮ ಜೂಜಾಟದಲ್ಲಿ ಎರಡು ಎಲೆ–ಒಂದು ಪ್ರೇಮ, ಮತ್ತೊಂದು ಸಂಗ್ರಾಮ. ಪ್ರೇಮದಲ್ಲಿಯೂ ಈ ಕಲಹ, ಮುಜುಗರ, ಹಗರಣ, ನೋವು ಉಂಟು. ಮನೆಯಲ್ಲಿ ಮಡದಿಯನ್ನು ಕಂಡಾಗ ಅವಳ ಯಾವುದೋ ಒಂದು ಸಿಂಗಾರ ಮನ ತಾಗುತ್ತದೆ. ಅವಳ ಒಂದೊಂದು ನಡೆಯೂ ಹೃದಯದೊಳಗಿಟ್ಟ ಒಂದೊಂದು ಹೆಜ್ಜೆ, ಒಂದೊಂದು ನೋಟವೂ ಕಣ್ಸೆರೆ, ಅವಳ ಬಗೆ ಹೃದಯಕ್ಕೆ ಸೊದೆ. ಅವಳೆಲ್ಲ ಸಿಂಗಾರವೂ ಕಣ್ಣಿಗೆ ಹಬ್ಬ. ಈ ಪ್ರೇಮವೇ 'ಸ್ವರ್ಗಕ್ಕೆ ಕಿಚ್ಚು ಹಚ್ಚು' ಎಂದು ಮನುಷ್ಯರ ಕೈಯಲ್ಲಿ ಅನಿಸುವುದು. 'ಸಿರಿ'ಯಲ್ಲಿ ನಾವೂ ಈ ಹಿಗ್ಗನ್ನು, ಪ್ರೇಮವನ್ನು ಕಾಣುತ್ತೇವೆ. ಆದರೆ ಉಳಿದ ಪ್ರೇಮಗೀತಗಳಲ್ಲಿ ಕಾಣುವುದು ವೇದನೆ, ನೋವು. ಹೆಣ್ಣಿನ 'ಆ ನೋಟ' ನೋವುಗಳ ನೆನಪು ತಂದು ಎದೆಯುರಿಯುತ್ತದೆ. ಹಿಂದೆ ಕಳೆದು ಹೋದ ಪ್ರಿಯೆಯ ನೆನಪಾಗಿ ಬೆಂದೊಡಲು ಕಪಡುವುದು. ನೆನಪೆಲ್ಲ ನೋವಾಗಿ ಇರಿಯುವುದು. ಅಗಲಿಕೆಯು ಸಾವಿಂದಲೂ ಬರಬಹುದು. ಬೇರೆ ಬೇರೆಯಾಗಿಯೂ ಬರಬಹುದು. ಆ ಅಗಲಿಕೆಯಲ್ಲಿಯೂ ಕೊರಗು ಕರೆಯುವುದು. ಅಂತೆಯೋ ನಲ್ಲೆ ತನ್ನನ್ನು ಪ್ರೇಮಿಸಿದವನನ್ನು ಕಂಡು ತನ್ನ ಪ್ರೇಮದ ಸುಗ್ಗಿ ಮುಗಿದು ಈಗ ಶಿಶಿರ ಬಂದಾಗ ಈತ ಬಂದನಲ್ಲ ಎನಿಸಿ ಕಾವು ಕುಗ್ಗಿ ಬೇರೊಬ್ಬನಿಗೆ ಮನ ಕೊಟ್ಟು ಈಗ ಬಾಳು ಬರಿದಾದುದನ್ನು ನೆನಸಿ ಮರುಗುವುದು ಕೂಡ ಒಂದು ಬಗೆ. ಹೀಗೆ ಪ್ರೇಮದಲ್ಲಿ ಬಗೆಬಗೆಯ ನೋವು, ನಲವುಗಳುಂಟು.

ಇಂದು ಮಾಗಿಯು ಮುಗಿವ ಮುನ್ನವೆ
ನಗುವ ಬೇಸಗೆ ಬಂದಿದೆ
ಕಾಮನಂಬಿನ ಕೆಳೆಯ ರಂಗುಗಳೆಲ್ಲವನ್ನೂ ತಂದಿದೆ.

(ಸೆಳೆ)

ಎಂದು ಹಿಗ್ಗಿದರೂ, ಅಲ್ಲಿಯೇ ದುಃಖವೂ ಬೆರೆತು ಒಳದನಿಯಾಡುವುದು.

ಹಲವು ವರ್ಷಗಳಿಂದ ಬಾಳಿದು
ಬಂಜೆತನದಲಿ ಸವೆಯಿತು
ಸುಖದ ಬಯಕೆಯು ತುಳಿದು ಮರೆಯಿಸಿ ಬರಡುಗೆಲುವನು ತಂದಿತು

(ಸೆಳೆ)

ಆದರೆ ಈ ದುಃಖದಲ್ಲಿ ಬರಡುತನದಲ್ಲಿ ಕೂಡ ಮತ್ತೆ ಪ್ರೇಮ ಮಿಂಚಿ ಬಂದಿತು.

ಯಾವ ಜನ್ಮದ ಕೆಳೆಯೊ ಕಾಣೆನು
ಕಂಡಕೂಡಲೆ ಒಲಿಸಿತು
ಕಣ್ಗೆ ರೂಪವು ಇಳಿವ ಮುನ್ನವೆ ಎದೆಗೆ ಪ್ರೇಮವು ಹರಿಯಿತು.

(ಸೆಳೆ)

ಎಂಬ ಸರಳ ಸುಂದರ ಉಕ್ತಿಯಲ್ಲಿ ಪ್ರೇಮದ ತನಿ ಬಂದಿದೆ.

ಇಂತಹ ಪ್ರೇಮದ ನಲವಿನ ಚಿತ್ರದಲ್ಲಿ ಕೂಡ ಒಂದು ನೋವಿನ ಲಹರಿ ನಮಗೆ ಕಂಡು ಬರುತ್ತದೆ. ಇದು ಈ ಗೀತಗಳ ವಿಶಿಷ್ಟ ಗುಣ.

'ಕನಸು' ಈ ಯಾವ ಬಗೆಗೂ ಸಿಕ್ಕದ ಒಂದು ವಿಶಿಷ್ಟ ಕೃತಿ; ಪ್ರಕೃತಿ–ಪುರುಷರು ಜಗತ್ತನ್ನು ಸೃಷ್ಟಿಸಿದ ಮೋಹ ಜಾಲದ ಸುಂದರ ಚಿತ್ರಣ. ಜಗತ್ತಿನ ಜೀವಿಗಳ ಬಾಳು ಕಠಿನವೆಂದು ದೇವಿಯಾಕ್ಷೇಪಣೆಗೆ ಆ ಕಾಠಿಣ್ಯ ಕರಗಿಸಲು,

ಎಲ್ಲಿ ಕೋಟಲೆ ಎಲ್ಲಿ ಭೀತಿ ನಿಷ್ಕರುಣೆಗಳು
ಎಲ್ಲಿ ಅನ್ಯಾಯಗಳ ಧೋರಣೆಗಳು
ಎಲ್ಲಿ ಅಧಿಕಾರಿಗಳ ಮದದ ದುರ್ವರ್ತನೆಯು
ಎಲ್ಲಿ ದಾರುಣ ಕ್ಲೇಶ ಪ್ರಾರ್ಥನೆಗಳು
ಎಲ್ಲಿ ಚೀರುವ ಜೀವ ಅಲ್ಲಿ ನಾ ಕಾದಿರುವೆ
ಅವರ ಕುಂದುಗಳನ್ನು ತುಂಬಿಕೊಡಲು ;

(ಕನಸು)

ಎಂದು ದೇವಿಯನ್ನು ಪುರುಷ ಸಂತೈಸುತ್ತಾನೆ. ಅಲ್ಲದೆ ಜಗತ್ತಿನ ಜನರಲ್ಲಿ ಕೆಲವರು ಜ್ಞಾನಿಗಳು ತಮಗೆ ತಾವೇ ಬಾಳಿನ ನಿಜವನ್ನರಿತು ಉಳಿದವರ ತಿಳಿವಿಗೆ ಪ್ರಯತ್ನಿಸುವರು. ಮುಂದೆ ಎಲ್ಲರೂ ಒಲವಿನಲಿ ಸೇವೆಯಲಿ ನಡೆದಾರು. ಆಗ ಹರಡಿರುವ ಮಾಯೆ ಮಡಿಸಿ ಮುಚ್ಚಿಡುವೆನೆಂದು

ಚಿಂತೆಯೇತಕೆ ನಲ್ಲೆ ಇಂತೆ ಆಗಲುಬೇಕು
ಇಂತೆ ಆಗುವುದೆಲ್ಲ ನೋಡುತಿರು ನೀನು (ಕನಸು)

ಎಂದು ಭರವಸೆಗೊಡುತ್ತಾನೆ ಪುರುಷ. ಬಾಳಿನ ಬಗೆಯ ಈ ಕಲ್ಪನಾ ಚಿತ್ರದಲ್ಲಿ ಧೈರ್ಯವಿದೆ. ನಟ್ಟ ನೋಟವಿದೆ. ಅರಿವಿದೆ. ಬಾಳು ಹಸನಾಗುವುದೆಂಬ ಭರವಸೆಯೂ ಇದೆ. ಈ ಭರವಸೆಯೇ ಹಾರೈಕೆಯಲ್ಲಿ ಆಸೆಯಾಗಿ ಮೂಡಿ ಬಂದಿದೆ.

ನುಡಿಗೊಂದು ಸಿಂಗರದ
ಎಳೆಯೆದ್ದು ನಿಲುತಿರಲಿ
ನುಡಿಯ ನಾದವು ಕಿವಿಗೆ
ಸೊದೆಗರೆಯಲಿ. (ಹಾರೈಕೆ)

ಆಗಲೇ ಶುಭದ ಸೊಬಗಿನ ಸೌಭಾಗ್ಯವನ್ನೂ ಕೀರ್ತಿಯನ್ನೂ ಬೆಳಗಿಸುವುದು.

'ನೆಳಲು—ಬೆಳಕು'ವಿನ ಕವಿತೆಗಳ ಬಗ್ಗೆ ಇನ್ನೊಂದು ಮಾತು ಹೇಳಬಹುದು. ಇಲ್ಲಿನ ಹೆಚ್ಚು ಕವಿತೆಗಳಲ್ಲಿ ಭಾವನೆಯೂ, ವಿಚಾರವೂ ತೀವ್ರವಾಗಿದೆ. ತೀಕ್ಷ್ಣವಾಗಿದೆ. ಕರುಣೆ ಬೆದಕುವಂತಹ ಕವಿತೆಗಳಲ್ಲಿಯಂತೂ ಭಾವ ಹೃದಯ ಮುಟ್ಟುತ್ತದೆ. ಲಲಿತವಾದ ಪದಪುಂಜ, ಗೀತಗಳ ವಿನ್ಯಾಸ ತುಂಬಿಕೊಂಡ ಈ ಗೀತಗಳು ಹಾಡಿಕೊಂಡರೆ ಇನ್ನೂ ಸವಿಗೊಳ್ಳುವುವು. ಆದರೆ ಅಲ್ಲಲ್ಲಿ ಕಾವ್ಯಕ್ಕಿರಲೇಬೇಕಾದ ಕಾವು ತಗ್ಗಿದಂತೆ ಕಾಣುತ್ತದೆ. ಇದರಿಂದ ಈ ಕವಿತೆಗಳು ಎಸಗಬಹುದಾದ ಪರವಶತೆಯನ್ನು ತರುವುದಿಲ್ಲ. ಕವಿಯ ವಿಚಾರಗಳು ಧೀರವಾದುವು, ಧೀಮಂತವಾದುವು. ಸಮಾಜದ ಬಗೆಗೆ ಅತೃಪ್ತಿ, ಸ್ವಂತ ಜೀವನದ ಅನುಭವದ ನೋವಿನ ಕಟುಸತ್ಯ, ನಾಡ ಜೀವನದ ಬಗೆಗಿರುವ ಅಭಿಮಾನ ಎಲ್ಲವೂ ಹಿರಿತನದ ಲಕ್ಷಣಗಳನ್ನೊಳಗೊಂಡಿವೆ. ಗೀತ ಗುಣ, ಲಾಲಿತ್ಯ, ವಿಚಾರದ ಧೀರತನ, ನಟ್ಟತನ ಈ ಕವಿತೆಗಳಲ್ಲಿ ಎದ್ದುಕಾಣುತ್ತವೆ.

"ದ್ರಾಕ್ಷಿ—ದಾಳಿಂಬೆ"ಯ ಮುವತ್ತು ಕವಿತೆಗಳು ವಿ. ಸೀ. ಯವರ ಕಾವ್ಯದ ಉನ್ನತ ಮಟ್ಟದ ಮಜಲೆನ್ನಬಹುದು. ಇಲ್ಲಿಯ ಕವಿತೆಗಳಲ್ಲಿ ಸಾಮಾಜಿಕ ಅತೃಪ್ತಿ ಕಿಡಿಗಾರುತ್ತದೆ. ರಾಷ್ಟ್ರೀಯತೆಯು ತಾನೇ ತಾನಾಗಿ ಬುಗ್ಗೆಗೊಳ್ಳುತ್ತದೆ. ಪ್ರೇಮದ ಗೆಳೆತನದ ಕಾವು, ನೋವುಗಳು. ವಿರಹ ಸಂತೋಷಗಳು ಪರಿಪುಷ್ಟವಾಗಿ ಚಿತ್ರಿತವಾಗಿವೆ. ಕಲೆಗಾರಿಕೆ ಹದಗೊಂಡು, ಸ್ಫುಟವಾದ ಚಿತ್ರಣವಾಗಿದೆ. ಈ ಸಂಗ್ರಹ ದ್ರಾಕ್ಷಿ—ದಾಳಿಂಬೆ ಬಹಳ ಸುಂದರ ಕವಿತೆಗಳ ಸಂಕಲನವೆನ್ನಬೇಕು. 'ನೆಳಲು—ಬೆಳಕು'ವಿನಲ್ಲಿ ಕಾಣದ ಹೊಸ ಛಂದಗಳು, ಹೊಸ ಹೊಸ ಪ್ರಯೋಗಗಳು, ಇಲ್ಲಿ ಮೂಡಿ ಬಂದಿವೆ. ವಿಚಾರಗಳಿಗೆ ಸ್ಫುಟತೆ ಬಂದು, ಮೈತುಂಬಿಕೊಂಡ ಚಿತ್ರಗಳಾಗಿ ನಿಂತಿವೆ.

ಬೇಲೂರಿನ ಚೆನ್ನಕೇಶವ ದೇವಾಲಯ ಕಲೆಯ ಗುಡಿ. ಅಲ್ಲಿಯ ಕೃತಿಕೌಶಲ್ಯ ಕಂಡು ಬೆರಗಾಗದ ಜನರಿಲ್ಲ, ಅಚ್ಚರಿಗೊಳ್ಳದ ರಸಿಕರಿಲ್ಲ, ಮೆಚ್ಚದವರಿಲ್ಲ.

ಬಾಳಗಾನವೆ ಘನಿಸಿ ಶಿಲ್ಪವಾಗಿದೆಯಿಲ್ಲಿ
ನಾಡಭಾಗ್ಯದ ಚರಿತೆ ರೂಪಾಂತಿದೆ
ರೂಪಿಗಾತ್ಮವ ತುಂಬಿ ಅಮೃತಗೈದಿರಲಿಲ್ಲಿ
ಕಲೆ ಸಫಲವಾಯ್ತೆಂದು ಶಿಲೆ ಸಾರಿದೆ.

(ಬೇಲೂರು ಚೆನ್ನಕೇಶವ)

ನಾಡಿನ ಹಿರಿತನದ ಇತಿಹಾಸ ಈ ಗುಡಿಯ ಕಲ್ಲುಕಲ್ಲಿನಲ್ಲೂ ನಿಂತು ಕಣ್ಗೆ ಹೃದಯಕ್ಕೆ ಹಬ್ಬವಾಗಿದೆ.

ಕಲ್ಲು ನಾಡಿನ ಕತೆಯ ಹೇಳುತಿದೆಯಿಲ್ಲಿ
ಗೈಮೆ ಆಗಸದತ್ತ ಕೈಯೆತ್ತಿ ತೋರುತಿದೆ
ಕಲೆಗೆ ಕಳಸವ ಕೆತ್ತಿ ಕಣ್ಗೆ ಹಿಡಿದು
ಹಿರಿಯ ಬಾಳಿನ ಬೆಳಗೆ ಬೆಳಕನಿಡಿದು

(ಚೆನ್ನಕೇಶವ)

ಪದ್ಯದ ಸಾಲುಸಾಲಿನಲ್ಲಿಯೂ ಗುಡಿಯ ಒಂದೊಂದು ಭವ್ಯ ಚಿತ್ರ ನಮ್ಮ ಕಣ್ಣ ಮುಂದೆ ನಿಲ್ಲುತ್ತದೆ. ಸ್ಫುಟವಾಗಿ, ಭವ್ಯವಾಗಿ, ಗಂಭೀರವಾಗಿ ಹರಿಯುವ ಈ ಸಾಲುಗಳು ಬೇಲೂರಿನ ಚೆನ್ನಕೇಶವ ಗುಡಿಯ ಭವ್ಯತೆಗೆ ಸರಿಯಾದ ಕಾಣಿಕೆ. ಒಂದು ಕಲೆ ಮತ್ತೊಂದು ಕಲೆಗೆ ಅರ್ಪಿಸಿದ ಸುಂದರ ಕಾಣಿಕೆ. ಈ ಪದ್ಯವನ್ನೋದುವಾಗ ಕೀಟ್ಸ್‌ಕವಿಯ 'Ode to a Grecian Urn'ನ ಭವ್ಯ ಸುಂದರ ಚಿತ್ರ ಕಣ್ಣೆದುರು ನಿಲ್ಲುತ್ತದೆ.

ಗಾನ, ರಾಗದ ಭಾವ, ವಾದ್ಯವಾದನ ಮೋದ
ಅಭಿನಯದ ಬಿನ್ನಾಣ, ಚೆಲುವು ನಿಲುಕು
ಭಾವದಲೆಯಲಿ ತೊನೆದು ಕಲೆಗಣ್ಗೆ ಹೊಳೆದಂತೆ
ಎಂದಿಗೂ ಸೊಬಗಾಂತು ನಿಂದಿರುವುವು.
ಕೃಷ್ಣನೂದುವ ಕೊಳಲ ಮಾಧುರಿಗೆ ಮನಸೋತು
ಬೆಟ್ಟ ನದಿ ತರು ತುರುಗಳೆಲ್ಲ ಆಲಿಸಿವೆ
ಶತಮಾನಗಳು ಕಳೆವ ಕಾಲದುತ್ಸವದಲ್ಲಿ
ಕೇಳುತಿವೆ ಇಂದಿಗೂ ಪರವಶದಲೇ.

ಇಲ್ಲಿ ಶಿಲ್ಪಿಯ ಕಲೆಗೆ ಕವಿಯ ಕಲೆ ಇಂಬಾಗಿ ನಿಂತಿದೆ. ಚಿತ್ರಗಳು ಪದಗಳಾಗಿ, ಪದಗಳೆಲ್ಲ ಚಿತ್ರಗಳಾಗಿ ಮೈತುಂಬಿ ನಿಂತಿದೆ. ಕಗ್ಗಲ್ಲಿನ ಸೆರೆಯಿಂದ ಸೌಂದರ್ಯವನು ಬಿಡಿಸುವ ಶಿಲ್ಪಿ (ಶಿಲ್ಪಿ) ಯಂತೆಯೇ, ಪದಗಳಿಗೆ ಪ್ರಾಣ ತುಂಬಿದ್ದಾರೆ ಕವಿಗಳು. ಬರಿಯ ಕಲ್ಲೆಂದು ಅದನ್ನು ಕಡೆಗಾಣಿಸಿದರೂ, ಶಿಲ್ಪಿ ತನ್ನ ಒಲವನ್ನು, ಪ್ರೇಮವನ್ನು ಅದರಲ್ಲಿ ಕಂಡರಿಸಿದಾಗ

ದೇವದಾನವರಂದು
    ಹಾಲ್ಗಡಲ ಕಡೆದಂತೆ
ನಿನ್ನೊಡಲ ನಾ ಕಡೆವೆನು—
ಅಂದವರು ಅಮೃತವನು
    ಕಡೆದಂತೆ ಪಡೆದಂತೆ
ಸವಿಯಮೃತ ನಾ ಕಡೆವೆನು

(ಶಿಲ್ಪಿ)

ಆಗ ಅದು ಕಲ್ಲೆನ್ನುವುದು ಮರೆತು, ನಯ ಸಿಂಗಾರ ಅದಕ್ಕೆ ಬರುವುದು. ಚೆನ್ನಕೇಶವನಂತಹ, ಬೇಲೂರಿನ ಗುಡಿಯಂತಹ ಕಲಾಕೃತಿ ಸೃಷ್ಟಿಯಾಗುವುದು.

ಸಮಾಜ ಜೀವಿಯಾದವನಿಗೆ ಸಾಮಾಜಿಕ ಜೀವನದ ಕೊರತೆಗಳು, ನಿರ್ಲಕ್ಷ್ಯ, ದರ್ಪ ದಬ್ಬಾಳಿಕೆ, ಅದು ಬೇಕು, ಇದು ಬೇಕೆನ್ನುವ ಹಂಬಲಗಳು, ಇದರಿಂದಾಗುವ ಅನ್ಯಾಯಗಳೆಲ್ಲ ಕಣ್ಣಿಗೆ ಬೀಳಲೇ ಬೇಕು. ಕವಿಯ ಕಣ್ಣಿನ ಗರುಡದೃಷ್ಟಿಗೆ ಇದೆಲ್ಲ ಹಿರಿದಾಗಿ, ಮೊನಚಾಗಿ ಕಾಣುತ್ತದೆ. ಸಾಲ ಕೊಂಡವನೊಬ್ಬ ಹಳ್ಳಿಯ ಬಡವನ ದನಗಳೆಲ್ಲವನ್ನೂ ಸಾಲಕ್ಕೆ ಬದಲಾಗಿ ಕಟುಕರು ಹೊಡೆದುಕೊಂಡು ಹೋಗುವರು. ಅವುಗಳ ಕಿರುಚು, ಅಬ್ಬರ, ದಡಿಗ ದೂತರ ಚಾಟಿಯ ಪೆಟ್ಟು ತಿಂದ ಮೂಕ ನೋವು ಅವುಗಳನ್ನು ಒಡೆಯನೆದೆ ತಿವಿವಂತೆ ದಿಕ್ಕೆಟ್ಟು ಕೂಗು ವಂತೆಸಗಿದೆ. ಅವುಗಳನ್ನು ಮಾರಲೇಬೇಕಾದ ತನ್ನ ಅಸಹಾಯತೆಯಲ್ಲಿ ತಲೆ ತಗ್ಗಿಸಿ,

ಮುಖಕೆ ಹಚ್ಚಡ ಹಚ್ಚಿ ಆರಡಿಯನರೆಮಾಡಿ
ಹೆಜ್ಜೆಯೆಳೆಯುತಲೊಡೆಯ ಹಿಂದೆ ಸಾಗಿಹನು

ಎಂಬ ಚಿತ್ರ ಮನಕರಗಿಸುವಷ್ಟು ಸ್ಪಷ್ಟವಾಗಿದೆ. ಇವನನ್ನು ಮೂಸ ಬಂದ ದನ ವೊಂದಕ್ಕೆ ತೊಗಲಿನ ಚಾಟಿಯ ಪೆಟ್ಟು!

ಜಡೆಚಾಟಿ, ನಿಡುಕುಣಿಕೆ, ಒಳಗೆ ಆಕಳ ಹಿಂಡು
ಮುಂದೆ ಕಟುಕರ ಬೀಡು, ಹರಿಸಲಾರದ ಸಾಲ,
ಹೊರೆವೊತ್ತು ಬಾಗಿರುವ, ಬಡವನೀ ಹಿಂದೆ.

(ಸಾಲ)

ಇಲ್ಲಿ ಬಡವರ ಸಾಲಸೂಲದ ಬಗ್ಗೆ ಮರುಕವಿದೆ. ಮಮತೆಯಿದೆ. ಕಣ್ಣೀರಿದೆ. ಆದರೆ ಅದೇ ಅನ್ಯಾಯವನ್ನು ಮತ್ತೆ ಮತ್ತೆ ಕಂಡಾಗ ರೋಸಿದ ಮನಸ್ಸು ರೋಷ ದಲ್ಲಿ ಕಿಚ್ಚೇಳುತ್ತದೆ. ಆ ಬೆಂಕಿಯ ಬಾವುಟವೇ ಕ್ರೋಧಕೇತನದಲ್ಲಿ ಹಾರಾಡಿದೆ.

ಹೆರರ ಲಾಭಕೆ ದುಡಿವ ತೊತ್ತುಗ
ಳಾಗಿ ನೊಗವನು ಹೊತ್ತೆವು
ನಿಮಿರಿ ನಿಲ್ಲುವ ಒಡಲು ಬಾಗಿತು
ಭುಜವು ಸೋತಿತು ಸೊರಗಿತು
ತೊಡೆಯು ಹೆಜ್ಜೆಯ ಧೃಢವು ಕೆಟ್ಟಿತು
ಎದೆಯ ಗಂಡೇ ಹೀರಿತು.

(ಕ್ರೋಧಕೇತನ)

ಇವರೆಲ್ಲರ ದುಡಿತದ ಫಲ ಸಿಕ್ಕುವುದು ಬಂಡವಾಳಗಾರನಿಗೆ. ಮನೆಯ ಮಕ್ಕಳ ಚಳಿಗೆ ಮುಚ್ಚಾಗಿ ಒಂದು ಬಟ್ಟೆ ಕೊಳ್ಳಲಾಗದ ನೇಯ್ಗೆಯವರು, ತಮ್ಮ ಬಾಳಿ ನಲ್ಲಿ ತೊತ್ತಾಗಿ ದುಡಿದವರು. ಹೆಣ್ಣಿನ ಮಾನವನ್ನು ಕೋವಿಯಂಜಿಕೆಯಿಂದ ಕಾಪಾಡಲಾರದವರು, ಈ ಕೂಲಿಗಾರರು.

ಎಮ್ಮ ಬಾಳಿನ ತಿರುಳು ಸಂತತ—ಮಾರಿರಕ್ಕಸರೂಟವು
ಎಮ್ಮ ನಾಡಿನ ಹೂವು ಹಣ್ಗಳು ಎಮ್ಮ ನೆತ್ತರ ಕುಡಿಗಳು
(ಕ್ರೋಧಕೇತನ)

ಅಂತೆಯೇ ಇಂದು ರೋಷವುಕ್ಕಿ ಕೆಂಬಾವುಟ ಹಿಡಿದೆದ್ದಿದ್ದಾರೆ.

ಅದುವೆ ಕೇಳಿರಿ ಪ್ರಳಯ ಘೋಷವು ಏರಿ ಕವಿಯುತೆ ಬರುವುದು
ಗಣದ ತಂತ್ರವು ಧನಿಯ ರಕ್ತದಿ ನಾಂದು ಬಲಿವುದು ಎನ್ನುತೆ.
(ಕ್ರೋಧಕೇತನ)

ಇಲ್ಲಿಯು ಮೂರು ಭಾಗಗಳಲ್ಲೂ ಕವಿತೆ ಸಿಡಿಲಂತೆ ಸಿಡಿದು, ಯಾವುದೋ ಜ್ವಾಲಾಮುಖಿಯ ಸುಡುಗರ್ಭದಲ್ಲಿ ಹುಟ್ಟಿಬಂದ ಅಗ್ನಿಪಿಂಡವಂತೆ ಬೆಂಕಿಗಾರಿದೆ. ಪದಗಳು, ಬಂಧ, ಛಂದಸ್ಸೆಲ್ಲ ಕೇತನದ ಸುಯಿದಾಟಕ್ಕೆ ಅನುವಾದಂತಿದೆ.

ಇದೇ ಸಾಮಾಜಿಕ ಅತೃಪ್ತಿ ವ್ಯಂಗ್ಯವಾಗಿ ಮತ್ತೊಂದು ಕಡೆ ತೋರಿಸಿಕೊಳ್ಳಬಹುದು. ತನಗೆ ಪದವಿಯಿದೆಯೆಂದು ದರ್ಪಗೊಳ್ಳುವ ಇಂದ್ರನಿಗೆ ಸೊಕ್ಕು. ಆದರೆ

ಇರುವ ಪದಕೇನು ಬಂದೀತೊ ಎಂಬೊಂದು ಚಿಂತೆಯೇ ಚಿಂತೆ.
ಎಂತು ಮೇಲಿನ ದೊರೆಯನೊಲಿಸೇನು ಎಂಬುದೇ ದಿನದಿನದ ಸಂತೆ;
(ಪದವಿ)

ತನ್ನ ಸ್ಥಾನಕ್ಕೆ ಯಾವ ಸಂಚಕಾರ ಒದಗುವುದೋ ಎಂಬ ಭೀತಿ ಇಂದ್ರನಿಗೆ. ಅದಕ್ಕಾಗಿ ಅವನ ಸಿಡಿಲು ವಜ್ರಗಳ ಉಪಯೋಗ.

ಜಗದೆಲ್ಲ ಐಶ್ವರ್ಯ ಪದವಿ ಹಿರಿಹೆಮ್ಮೆಗಳು
ಉಂಟಾದರೇಂ ಬಂತೆ ದಿವ್ಯತೆಯ ಸೊಬಗು!
(ಇಂದ್ರ)

ಇಲ್ಲಿಯು ಮಾತುಗಳಲ್ಲಿ ವ್ಯಂಗ್ಯವಿದೆ. ಕಟುಟೀಕೆಯಿದೆ, ಪದವಿಗಾಗಿ ಹಂಬಲಿಸುವವರ ಬಗ್ಗೆ ಮರುಕವೂ ಇದೆ.

ಸಾಮಾಜಿಕ ಜೀವನದ ಮತ್ತೊಂದು ರೂಪವೇ ಗೆಳೆತನದ ಸೌಭಾಗ್ಯ ಸಂಪತ್ತು. "ಸ್ವರ್ಗದೊಳಗೀ ಸ್ನೇಹ ದೊರೆವುದೇನು ?" ಎಂದ ವಿ. ಸೀ. ಯವರು ಇಲ್ಲಿಯೂ ಗೆಳೆತನದ ಬೆಸುಗೆಯ ಚಿತ್ರಣ ಕೊಟ್ಟಿದ್ದಾರೆ. ಗೆಳೆತನ ಎರಡು ಹೃದಯಗಳಲ್ಲಿ ಇದ್ದುದಿದ್ದಂತೆ ಬೆರೆತು ಬರುವ ಒಂದು ಬಂಧುರ ಭಾವ. ಅದು ಕೊಟ್ಟರೆ ಉಂಟೇ ವಿನಹ ಕಾಡಿ ಕೊಳ್ಳುವಂತಹುದಲ್ಲ.

ನೀವಿತ್ತರೆನಗುಂಟು ಇಲ್ಲದಿರಲೇನಿಲ್ಲ ;
ಬೇಡಿ ಗಳಿಸಲು ಬಹುದೆ, ಕೆಳೆಯ ಒಲವ ?
(ದಾನಪಾತ್ರ : ೩೫)

ಇಂತಹ ಗೆಳೆತನ ಗಾಳಿಯಂತೆ ಬೀಸಿ ತಾನೇ ತಾನಾಗಿ ಬರುವುದು. ಈ ಜತೆಗಾರಿಕೆಯಲ್ಲಿ ಜತೆ ಜತೆಗೆ ನಡೆದುದಷ್ಟೂ ಭಾಗ್ಯವೇ ! ಇಂತೆಯೇ ಮುಂದೆಯೂ ನಡೆವರೆ

ಅದೊಂದು ಪುಣ್ಯ. ಈ ಗೆಳೆತನದ ಸೊಬಗಿನಲ್ಲಿ ಪ್ರಕೃತಿಯ ಚೆಲುವು ನೂರು ಸಾವಿರವಾಗುತ್ತದೆ.

ದಾರಿಯ ಹೂಬಳ್ಳಿ ಇಕ್ಕೆಲ ಕೈಚಾಚಿ
ಉಬ್ಬಿದೆದೆಗೆ ಬಾಚಿ ಅಪ್ಪುತಿತ್ತು.

ಇಂತಹ ಸುಂದರ ಚಿತ್ರಗಳು ಕಣ್ಕಟ್ಟಾಗಿ ನಿಲ್ಲುತ್ತವೆ. ಆಗ ಬಿಟ್ಟು ಹೋಗುವಾಗ

ಒಂದಂಗುಲ ದಾರಿಗೊಂದು ಸಿರಿ ನೆನಸಿದೆ

(ಬೀಳ್ಕೊಡುಗೆ)

ಈ ಕೆಳೆ ಗಂಡುಹೆಣ್ಣಿನ ಪ್ರೇಮವಾಗಬಹುದು. ಆ ಕೆಳೆಗಿರುವಂತೆಯೇ ಇಲ್ಲಿಯೂ ನಲವು, ನೋವುಗಳುಂಟು. ಹೆಣ್ಣುಗಂಡಿನ ಸಂಬಂಧ ಬಲು ತೊಡಕಿನದು. ಅವರ ರೀತಿಯಂತೂ ಅತಿ ಚಂಚಲ. ಒಮ್ಮೆ ಬೇಕೆನಿಸಿ, ಬಂದಾಗ ಬೇಡವೆನಿಸಿ, ತೆರೆದ ಕಣ್ಣಲಿ ಕನಸು ಕಂಡು, ಕನಸು ಕಣ್ಣುಮುಂದೆ ಮೈತಳೆದು ನಿಂತಾಗ ಅದನ್ನು ಬಿಡುವುದೆಲ್ಲ ಪ್ರೇಮದ ಬಗೆಗೆ ಸೇರಿದುದೇ. ಇಂತಹ ಚಂಚಲ ಚಪಲತೆಯನ್ನು ಪದಗಳಲ್ಲಿ ಕುಸುರಿಕುಸುರಿಯಾಗಿ ಬಿಡಿಸಿ ಸೆರೆಹಿಡಿದ ಕವಿತೆಯೇ 'ಕೊಂಕು' ಇಲ್ಲಿಯ ಸಹಜ ಸುಂದರ ಚಿತ್ರಣಕ್ಕೆ ಪದಲಾಲಿತ್ಯ, ಕುಣಿತ ಇಂಬಾಗಿ ನಿಂತಿದೆ. ಚೆಲುವೆಯನ್ನು ಕಂಡು, ಕಂಡೊಡನೆ ಕಣ್ಗೂಡಿ ಕಣ್ಣು ಹೃದಯವನ್ನು ಅಡುವು ಹಾಕಿದಾಗ ಅಚ್ಚರಿಯಲ್ಲಿ ಎಲ್ಲ ಮೋಹಕವಾಗುವುದು. ಎಲ್ಲ ಹಚ್ಚ ಹೊಸತಾಗುವುದು. "ನೆಲಕೆ ಹೆಜ್ಜೆಯು ಸೋಕಿತಿಲ್ಲವೊ" ಎನುವಂತೆ "ಚಿಗರಿ ನಡಗೆಯ ಹೆಣ್ಣೆ ನೀನಾರೆ ?"

ದಾರಿಣ್ಗಳ ಬಲೆಯೆ, ಸೆರೆಯೆ
ನೋಡಿ ನೋಡದ ಬೆಡಗೆ, ಕೊಂಕೆ,
ಕೊಲುವ ಮೋಹದ ಬೆರಗೆ, ಸೆರಗೆ
ಚೆಲುವೆ ನೀನಾರೆ?
ಮಾಯೆ ಬೀಸುವ ಕುಂಚ ಸಂಚೇನೆ?

(ನೀನಾರೆ?)

ಎಂದು ಮಾರುಹೋದ ಹೃದಯ ಮಧುರ ನೋವಿನಲ್ಲಿ ಕೇಳುವುದು.

ಆಕೆಯು ತನ್ನೆಲ್ಲವನ್ನೂ ನಲ್ಲನಲ್ಲಿ ಅರ್ಪಿಸಿಕೊಳ್ಳುವಳು. ಮನುಷ್ಯನ ಸೃಷ್ಟಿಯಾದಂದಿನಿಂದ ಈ ಗಂಡು ಹೆಣ್ಣುಗಳ ಮೇಳ. ಈಗಲೂ ಅದೇ. ಹಿಂದೆಯೂ ಅದೇ–ಮುಂದೆಯೂ ಅದೇ. ಸಪ್ತಪದಿ ಸುತ್ತಿದ ಈ ಗಂಡು ಹೆಣ್ಣು ಒಬ್ಬರನ್ನೊಬ್ಬರು ಪೂರ್ಣವಾಗಿ ಅರಿತು ಒಂದಾಗಿ ನಡೆಯುವರು. ವಿರಹದಲ್ಲಿ ಬೇಯುವರು. ಆಗ ಎಲ್ಲೆಲ್ಲೂ ಇಬ್ಬರಿಗೂ ಒಬ್ಬರೊಬ್ಬರ ಚಿತ್ರವೇ ಕನಸಿನಲ್ಲಿ. ಇಂತಹ ಸಹಜ ಸುಂದರ ಪ್ರೇಮಚಿತ್ರವಿದೆ ಇಲ್ಲಿಯ 'ವಿರಹ' ಮತ್ತು 'ಸಪ್ತಪದಿ'ಗಳಲ್ಲಿ.

ಸಂಸಾರಕ್ಕಿಳಿಯುವ ಗಂಡು ಹೆಣ್ಣು ತಮ್ಮ ಮನೆತನ ಬೆಳೆಯಲೆಂದು, ಆಶಿಸುವರು. ತಂದೆಯಂತೂ

ನನ್ನ ರಕ್ತದಿ ಹುಟ್ಟಿ ಬೆಳೆದಿಹ
ನಾಲ್ಕು ಮಕ್ಕಳು ನಿಲ್ಲಲಿ;
ನನ್ನ ದಿಬ್ಬಣವವರ ಭುಜದಲಿ
ಮಸಣ ಸೂಡಿಗೆ ನಡೆಯಲಿ

(ತಂದೆ ಹರಕೆ)

ಎಂದೇ ಆಶಿಸುತ್ತಾನೆ. ಮಕ್ಕಳು ಹಿತವಾಗಿ, ಒಪ್ಪಾಗಿ, ಒಟ್ಟಾಗಿ ನಡೆಯಲಿ ಎಂಬುದು ಅವರ ಆಸೆ. ಆದರೆ ತಂದೆ ಸತ್ತಾಗ ಎಲ್ಲರೂ ಶ್ರಾದ್ಧ ನಡೆಸಬೇಕಾಗಿ ಬಂದಾಗ ಹಿರಿಯನ ಬಗ್ಗೆ ಕಿರಿಯರಸೂಯೆ ಪಟ್ಟು, ತಾಯಿಯೊಪ್ಪಿಗೆಯಿಂದ ಅವನ ಅಂತಕ್ಕೆ ಕಾರಣವಾದ ವಿಕಟ ಚಿತ್ರವೂ 'ಶ್ರಾದ್ಧ'ದಲ್ಲಿದೆ. ಇದು ಭೀಕರತೆಯನ್ನು ಭಟ್ಟಿಯಿಳಿಸಿಕೊಂಡ ಪುಟ್ಟ ಪದ್ಯ.

ಮನುಷ್ಯ ಹುಟ್ಟಿದಾಗಿನಿಂದಲೂ ಬೆನ್ನ ಹಿಂದೆಯೇ ನೋವಿನ ಹೊರೆ ತಂದಿದ್ದಾನೆ. ಈ ಜಗತ್ತಿನ ನೋವು (World's sorrow) ಗಂದು ಗಯಟೆ ಕರೆದಿರುವ ನೋವಿನಲ್ಲಿ ಕಾರಣವಿಲ್ಲದೆಯೇ ಮನುಷ್ಯನ ಬಾಳು ತೊಳಲುವುದು. ಆಗ,

ತಳವಿಲ್ಲದ ಪಾತಾಳದಿ ಕೊಳೆಯುತ್ತಿದೆ ಬದುಕು
ನೆಲೆಯಿಲ್ಲದ ಆಕಾಶದಿ ತೊಳಲುತ್ತಿದೆ ಬಗೆಯು
ಮರುಳಾಟವೊ ಬರಿಬೇಟೆಯೊ ನುಸುಳೋಡುವ ನೆಳಲೊ,
ಬದುಕೇತಕೊ ಬರಿನೋವಿಗೆ ಕಿಡುಸಾವಿಗೆ ಬಲಿಯು

(ಏಕೋ)

ಎನಿಸಿ ಜೀವನವೇ ಬೇಸರವೆನಿಸುವುದು. ಹೊರಗಿನ ಚೆಲುವು ಬೆಳಕು ಮನಸ್ಸಿನೊಳಗನ್ನು ಮುಟ್ಟದು. ಒಳಗೆ ಕಗ್ಗತ್ತಲೆ ಕವಿದಿದೆ.

ಯಾವ ಶಾಪದ ಸುಡುವ ಕಾಡೋ
ಎಮ್ಮ ಬದುಕಿನ ಬಯಲಿದು!
ಯಾವ ಅರಗುಲಿ ಬೇಡ ಬೇಟೆಯು
ಕಾಳರಕ್ಕಸತನವಿದೋ!

(ಸವೆದ ಹರುಷ)

ಎನಿಸಿ ಬಾಳಿಗೆ ಅರ್ಥವೇ ಇಲ್ಲದಾಗಬಹುದು. ಆದರೆ ಈ ಮನೋಗತಿ ಕೆಲವು ವೇಳೆಗಳಲ್ಲಿ ಮಾತ್ರ ಕಾಣಿಸುವುದು. ಈ ಅಸಹಾಯತೆ, ದೌರ್ಬಲ್ಯದ ನೋವನ್ನು ವಿ. ಸೀ.ಯವರು ಬಹಳ ಹದನರಿತು ಸೆರೆಹಿಡಿದು ಈ ಕೃತಿಗಳಲ್ಲಿ ಕೊಟ್ಟಿದ್ದಾರೆ.

ಇಂತಹ ಭಾವನೆ, ನಿರಾಸೆಯ ಮಬ್ಬು ಬರಬೇಕಾದರೆ ದೇಶದ ಸ್ಥಿತಿಯೂ ಕಾರಣವಾಗಬಹುದು. ರಾಷ್ಟ್ರ ದಾಸ್ಯಕ್ಕೆ ಸಿಕ್ಕಿ ಬೇಯುತ್ತಿರುವಾಗ ವ್ಯಕ್ತಿಗೆ–ಅದೂ ಸೂಕ್ಷ್ಮ ಹೃದಯಿಯಾದ ಕವಿಗೆ–ನಲವು ಎಲ್ಲಿ? ದ್ರಾಕ್ಷಿ–ದಾಳಿಂಬೆಯಲ್ಲಿ ರಾಷ್ಟ್ರೀಯತೆಯ ಪ್ರಚೋದಕ ಹಾಡುಗಳು, ಗಂಡು ಮೆಟ್ಟಿನ ಹಾಡುಗಳು ಎಲ್ಲಕ್ಕಿಂತ

ಪ್ರಭಾವಶಾಲಿಗಳಾಗಿವೆ. ಓಜಸ್ಸಿನಿಂದ, ಶಕ್ತಿಯಿಂದ, ಚಂಡೆಯಂತೆ ನುಡಿಯುತ್ತವೆ ಈ ಗೀತಗಳು. ನಾಡಿನ ಹಿರಿಮೆ, ವೇದಗಳ ಕಾಲದಿಂದ ಬಂದ ಸಂಸ್ಕೃತಿಯ ಶಕ್ತಿ, ತೇಜಸ್ಸು 'ಶತಂ ಜೀವೇಮ' ಎನ್ನುವ ಕೆಚ್ಚು ಇಂದು ಅಳಿದಿದೆ. ಅಂದು

ಶತಂ ಜೀವೇಮ ಶರದಃ–ಶತಂ ನಂದಾಮ ಪ್ರಬ್ರವಾಮ

—ಎಂಬ ಹಿರಿಹಾರೈಕೆ ನಾಡಿಗಿದ್ದಾಗ
ಬಾಳೆಲ್ಲ ಮುಖದಲ್ಲು ಚಿಗಿದು ಚಿಮ್ಮಿತ್ತು;
ಗೈಮೆ ಆಗಸಕೆತ್ತಿ ಕಲಶ ನಿಲಿಸಿತ್ತು
ಇಹವು ಸಗ್ಗಕೆ ನೇರ ಸೇತುಗಟ್ಟಿತ್ತು.

ಈ ಸಂಸ್ಕೃತಿಯ ತೇಜಸ್ಸಿನಲ್ಲಿ ಕಲೆ, ಚೆಲುವು, ಎಲ್ಲವೂ ತಾನೇ ತಾನಾಗಿತ್ತು. ಜಡ ವೆಲ್ಲ ಚೇತನವಾಗಿತ್ತು.

ಉಸಿರಿದುದು ಸೌಮನಸ; ನುಡಿ ದಿವ್ಯಸಾಹಿತ್ಯ,
ನಡೆಯು ಶಾಂತಿಯ ಬಿತ್ತು: ಗೈಮೆಯಮೃತ!

(ಶತಂಜೀವೇಮ)

ಆದರೆ ಇದಕ್ಕೂ ವಿಷವೂಡಿಸಿದರು. ಅಂದು ಕನಲೆದ್ದು ಕೆಚ್ಚಾಗಿದ್ದ ನುಡಿಯಿಂದು ಅರ್ಥಶೂನ್ಯವಾಗಿದೆ.

ನುಡಿವ ಗಂಟಲ ಹಿಸುಕಿ ಸಾವ ಬಿತ್ತಿದರು
ಮೆರೆವ ಗಂಡಿನ ನೆಲೆಗೆ ಕುಳಿಯ ತೋಡಿದರು!

(ಶತಂಜೀವೇಮ)

ಇಂತಹ ಕತ್ತಲು, ಸಾವಿನಾಟಗಳಿಂದ ಭಾರತಕ್ಕೆ ಉದ್ಧಾರವೆಂತು ಎಂದು ಕವಿ ಹೃದಯ ತಳಮಳಗೊಂಡಿದೆ.

ಇನ್ನೆಂದು ಭಾರತವು ಎಚ್ಚತ್ತು ನಡೆದೀತು
ಮರಳಿ ಜನತೆಗೆ ಮೈಮೆ ನಿಲುವು ನಿಂತೀತು

ಎಂದು ಕನಲಿ ಕೊರಗುವ ಕವಿವಾಣಿ ಮತ್ತೆ ಶಾಂತಿಯ ಸಗ್ಗದ ಚಿತ್ರ ಕೊಡುತ್ತದೆ.

ಮಾನ ಆಯುಃ ಪ್ರಮೋಷಿಃ ಶತಮಜೀತಾಸ್ಯಾಮ
ಶತಮನಂತಂ ವೀರಂ, ಶತಮೈಶ್ವರ್ಯಂ ವರ್ಚಂ
ಎಂದು ಬಾಳ್ ಶ್ರೇಯಕ್ಕೆ ನುಗ್ಗಿ ಮುಂದೋಡುತಿರೆ
ಕಾವ್ಯ ಶಾಸ್ತ್ರಾಲಾಪ ಓಜ ಕಲೆ ಸೌಂದರ್ಯ
ಶಾಂತಿ ಸೌಹಾರ್ದಗಳು ನೆಲಸಿ ನಿಂತಾವು!

ಎಂಬ ಕೊನೆ ಮಾತುಗಳು ಮೈ ಪುಲಕಗೊಂಡು ಉದ್ವೇಗದಲ್ಲಿ ಮನಸ್ಸು ನಿಮಿರಿ ನಿಲ್ಲುವಂತೆ ಮಾಡುತ್ತದೆ. ಭಾರತದ ಅಭಿಮಾನ, ದೇಶ ಹಿರಿದಾಗಲೇ ಬೇಕೆಂಬ ಆಸೆ ಯಾರ ಹೃದಯವನ್ನಾದರೂ ಮುಟ್ಟುವಂತೆ ಇಲ್ಲಿ ಚಿತ್ರಿತವಾಗಿದೆ. ಪದ ಪದದಲ್ಲೂ, ಸಾಲು ಸಾಲಿನಲ್ಲೂ ಈ ಅಭಿಮಾನ, ಕಳಕಳಿಸಿದೆ. ಅಂದು ಭಾರ

ತಕ್ಕೆ ಸ್ವಾತಂತ್ರ್ಯ ಬರುವ ಮುನ್ನ ನಡೆದ ಹಿಂದೂ ಮುಸ್ಲಿಂ ಗಲಭೆಗಳಲ್ಲಿ ಒಬ್ಬ ವಿದ್ಯಾರ್ಥಿ ಮುಂದೆ ಬಂದು ಎಲ್ಲರನ್ನು ಕೊಲೆ ಮಾಡಬೇಡಿರೆಂದು ತಡೆದು ಅಮೋಘ ತ್ಯಾಗ ಮಾಡಿದ ಚಿತ್ರಣ 'ವಿದ್ಯಾರ್ಥಿ'ಯಲ್ಲಿ ಮೂಡಿಬಂದಿದೆ. ಯಾರ ಹೃದಯದಲ್ಲಾದರೂ ನಾಡ ಪ್ರೇಮ, ಸ್ವಾರ್ಥತ್ಯಾಗಗಳ ಕಿಚ್ಚು ತರುವಂತಹ ಚಿತ್ರಣ ಈ ಕವಿತೆಯಲ್ಲಿದೆ. ಎರಡೂ ಕಡೆಯವರಿಗೆ ಕೊಲೆ ಮಾಡಬೇಡಿರೆಂದು ಬೇಡಿಕೊಂಡು, ಇಬ್ಬರಿಂದಲೂ ಬೈಸಿಕೊಂಡು, ದ್ರೋಹಿ, ಸೈತಾನನೆನ್ನಿಸಿಕೊಂಡು, ತನ್ನ ಪ್ರಾಣವನ್ನರ್ಪಿಸಿದ ವಿದ್ಯಾರ್ಥಿ ವೀರನ ವಿಧಿಯ ಚಿತ್ರ ಮನಮುಟ್ಟುವಂತಿದೆ.

ಸ್ವಾತಂತ್ರ್ಯ ಬಂದುದು-ಕನಸು ನೆರವೇರಿದುದು ಎಲ್ಲರಿಗೂ ಹೆಮ್ಮೆಯ ಮಾತು ಇನ್ನು ಈ ಜನಪದದ ನಡೆಗೆ ತಡೆಯಿಲ್ಲ, ಸಾಹಸ ಉತ್ಸಾಹಗಳು, ಹೊಸ ಹುರುಪು ತುಂಬಿದ ಜನದೆದೆಯಲ್ಲಿ ಹೊಸ ಚೇತನ ಮಿಂಚಿದೆ.

ಯಾರಿನ್ನೀ ನಾಡಿನ ಮುಂದೋಟವ ತಡೆಯುವರು?
ಯಾರಿನ್ನೀ ಜನದಾಸೆಗೆ ಮೇರೆಗಳಿಡುವವರು?

(ಗಡಿದಾಟು)

ಈ ಚಿತ್ರಣ ಕವಿಯುಹಾರೈಕೆ. ಭಾರತ ಹಿರಿಯದಾಗಬೇಕೆಂಬ ಹೃದಯದ ಕುದಿ, ಅಭಿಮಾನ ಇಲ್ಲಿ ತುಂಬಿ ತುಳುಕಿದೆ. ಇಲ್ಲಿಯ ಛಂದಸ್ಸು ಕೂಡ 'ಶತಂ ಜೀವೇಮ' ದಂತೆಯೇ ಹೊಸಗತಿಯಲ್ಲಿ ನಡೆಯುತ್ತದೆ. ನವ್ಯಭಾರತದ ಸುಂದರ ಕ ನ ಸು ಈ ಕವಿತಾಶಿಲ್ಪ! ಭಾರತ ನಮ್ಮದು. ಕನ್ನಡನಾಡೂ ನಮ್ಮದು. ಕನ್ನಡ ಹಿರಿದಾದರೆ ಭಾರತವೂ ಹಿರಿದಾಗುತ್ತದೆ. ಈ ಕನ್ನಡ ನಾಡಿನ ಹಿರಿಮೆಯ ಸ್ಫೂರ್ತಿಯನ್ನು ಹೊತ್ತ ಕವಿತೆ 'ಕನ್ನಡನಾಡು'. ಕನ್ನಡದ ದನಿ ಕೇಳಿ ಆವೇಶಗೊಳ್ಳುವ ಚೇತನ ಇಲ್ಲಿ ಮಿಡಿದಿದೆ.

ಅಗೆದಲ್ಲಿ ಹೊಳೆಹೊನ್ನು, ನುಡಿಯು ದಾಂಗುಡಿ ಹಾಡು
ಅಡಿತಳದ ಹಿರಿಮೆಟ್ಟು, ಗಂಡುಮೆಟ್ಟು—
ವೀರ ಸಿರಿ ಕಲೆಬೀಡು ಎನ್ನ ತಾಯ್ನಾಡು

ಎಂದು ಘೋಷಿಸುವ ಕವಿಯ ಕನ್ನಡ ಪ್ರೇಮ ಯಾರನ್ನು ತಾನೇ ಸ್ಫೂರ್ತಿ ಗೊಳಿಸದು! ಈ ಕೃತಿ ಮೊದಲಿಂದ ಕೊನೆಸಾಲಿನವರೆಗೂ ಹೊನ್ನು ಹೊಳೆ–ಗಂಡು ಮೆಟ್ಟು! 'ದ್ರಾಕ್ಷಿ–ದಾಳಿಂಬೆ'ಯಲ್ಲಿ ಕಲೆಗಾರಿಕೆ ಹಣ್ಣಾಗಿದೆ, ಸವಿಯಾಗಿದೆ. ಅಲ್ಲಲ್ಲಿ ಕಾವು ಕಡಿಮೆಯಾದ ಒಂದೆರಡು ಕವಿತೆಗಳಿರಬಹುದೇ ಹೊರತು, ಉಳಿದೆಲ್ಲ ಕವಿಯ ಉತ್ಕೃಷ್ಟ ಕೃತಿಗಳೇ. ಸ್ಫುಟಚಿತ್ರಗಳು, ಸರಳ, ಗಂಭೀರ ನಡೆ, ಲಾಲಿತ್ಯಗಳು ಮೈವೆತ್ತಿವೆ ಈ ಕವನಗಳಲ್ಲಿ.

ಎಸ್. ಅನಂತನಾರಾಯಣ

# ಅರಲು-ಬರಲು

ಉತ್ತಮ ವಿಮರ್ಶಕರೂ, ಮೇಧಾವಿಗಳೂ, ವಾಗ್ಮಿಗಳೂ ಆದ ವಿ. ಸೀ.ಯವರು ಕವಿಗಳೂ ಹೌದು. ಅವರ ದ್ರಾಕ್ಷಿ-ದಾಳಿಂಬೆ, ಹೆಜ್ಜೆಪಾಡು, ನೆಳಲು-ಬೆಳಕು ಮುಂತಾದ ಕವನ ಸಂಕಲನಗಳು ಅವರ ಕವಿತಾಪ್ರತಿಭೆಯ ಮಧುರ ಫಲಗಳು. ಆದರೆ ಇವೆಲ್ಲಾ ರಮ್ಯ ಸಂಪ್ರದಾಯದ ದೋಹದವನ್ನುಂಡು ಬೆಳೆದವು. ಅರಲು ಬರಲು ಮಾತ್ರ ಸ್ವಲ್ಪ ಮಟ್ಟಿಗೆ ಹೊಸ (ನವ್ಯವೆನ್ನಬಹುದೆ!) ಸಂಪ್ರದಾಯದ ಹಾದಿಯನ್ನು ತುಳಿದಿದೆ ಎನ್ನಬೇಕು. ಪ್ರೊ. ವಿ. ಸೀ.ಯವರ ಅಧ್ಯಯನವು ಎಷ್ಟು ಭಾರತೀಯವೋ ಅಷ್ಟು ಐರೋಪ್ಯವೂ ಆಗಿದೆ. ಆದುದರಿಂದ ಅವರ ಕಾವ್ಯ ಮೀಮಾಂಸೆಯಲ್ಲಿ ಪಾಶ್ಚಾತ್ಯ-ಪೌರಸ್ತ್ಯ ಸಂಪ್ರದಾಯಗಳ ತೌಲನಿಕ ವಿಚಾರಗಳು ತಲೆದೋರಿವೆ. ಈ ಕವಿತಾಸಂಕಲನದಲ್ಲಿ ಅಂತಹ ಮಿಶ್ರಸಂಪ್ರದಾಯದ ಪ್ರಯೋಗವು ಫಲಿಸಿದೆ. ನವ್ಯ ಕಾವ್ಯ ಸಂಪ್ರದಾಯದಲ್ಲಿ ಮೊದಲು ಬರುವುದು ಸಾಂಕೇತಿಕವಾದ ಭಾಷೆ, ಬಳಿಕ ಭಾಷೆಯನ್ನು ಸಾಂಕೇತಿಕವಾಗಿ ಸಂವೇದನೆಯ ಅಭಿವ್ಯಕ್ತಿಗೆ ದುಡಿಸಿಕೊಳ್ಳುವ ಪ್ರಯತ್ನ. ಇವೆರಡೂ ಈ ಸಂಕಲನದಲ್ಲಿ ಎಷ್ಟರಮಟ್ಟಿಗೆ ಸಫಲವಾಗಿವೆ ಎಂಬುದನ್ನು ಅರಿತುಕೊಳುವುದೇ ಒಂದು ಅಧ್ಯಯನ.

'ಅರಲು ಬರಲಿ'ನ ರಕ್ಷಾಕವಚದಲ್ಲಿ ತೋರುವ ಎರಡು ಮಗ್ಗುಲಲ್ಲಿರುವ ಚಿತ್ರಗಳೂ ಸಾಂಕೇತಿಕವಾಗಿವೆ. ಮೊದಲ ಕವಚದಲ್ಲಿ ಅರಲು, ಕೊನೆಯದರಲ್ಲಿ ಬರಲು. ಮೊದಲಿನದು ಕಿರಿಯಲರುಗಳಿಂದ ಕಿಕ್ಕಿರಿದು ತುಂಬಿ ಸೊಂಪಾಗಿ ಬೆಳೆದ ಮರ, ಮತ್ತಿನದು ಹೂವುದುರಿ ಬೋಳಾಗಿ ನಿಸರ್ಗದ ನೀರಸ ವಾತಾವರಣವನ್ನು ಎದುರಿಸಿ ನಿಂತ ಬರಲು. ಎರಡರಲ್ಲೂ ಒಂದೊಂದು ರೀತಿಯ ಸೊಬಗು ಮೈವೆತ್ತಿದೆ. ಬದುಕಿನಲ್ಲಿ ಅ ರ ಲು ಹೇಗೋ ಬರಲು ಹಾಗೆ ಸ್ವಾಗತಾರ್ಹ. ಅರಲುವ ಕಾಲಕ್ಕೆ ಅರಲು, ಬರಲಾಗುವ ಕಾಲಕ್ಕೆ ಅದು. ಈ ದ್ವಂದ್ವಗಳಿಂದ ಬಿಡುಗಡೆ ಸಾಧ್ಯವೆ? ಒಳಗಿನ ಕವಿತೆಗಳೂ ಬದುಕಿನ ಅರಲು-ಬರಲುಗಳನ್ನು ಶಾಬ್ದಿಕವಾಗಿ ಚಿತ್ರಿಸುತ್ತವೆ.

ಮೊದಲಿನ ಮುನ್ನುಡಿಯ ಸುಮಾರು ಮೂವತ್ತೇಳು ಪುಟಗಳಲ್ಲಿ ವಿ. ಸೀ.

ಯವರು ಕಾವ್ಯಮೀಮಾಂಸೆಯ ಮೂಲಭೂತವಾದ ಕೆಲವು ವಿಚಾರಗಳನ್ನು ಎತ್ತಿಕೊಂಡು ವಿಶ್ಲೇಷಿಸಿದ್ದಾರೆ. ಕವಿತೆಯ ಸೂಕ್ಷ್ಮಾತಿಸೂಕ್ಷ್ಮ ಸ್ತರಗಳನ್ನು ಬಿಡಿ ಬಿಡಿಯಾಗಿ ಸ್ಪರ್ಶಿಸಿದ್ದಾರೆ. ಈ ಸಂಕಲನದಲ್ಲಿ ಸೊಗಸುವಂಥದು ಅರಲು, ಉಳಿದುದು (ತನ್ನಂತೆ) ಬರಲು ಎಂದಿದ್ದಾರೆ. ಅದು ಅವರ ಮಾತಿನ ಮೊಡಕು ಅಷ್ಟೆ. ಅವರ ಕವಿತಾಸಂಪ್ರದಾಯವನ್ನು ಮೆಚ್ಚದವರ ಗುಂಪಿಗೆ ಒಪ್ಪುವ ಮಾತು ಅದು. ಬದುಕಿನಲ್ಲಿ ಎರಡೂ ಇವೆ. ಅರಲಿನ ಕಾಲದಲ್ಲಿ ಅದು ಹೇಗೆ ಸ್ವಾಭಾವಿಕವೋ ಸುಖಾವಹವೋ ಅಂತೆಯೇ ಬರಲಿನ ಕಾಲದಲ್ಲೂ ಅದು ಸ್ವಾಗತಾರ್ಹ, ಅಪೇಕ್ಷಿತ. ಒಂದು ಸೊಗಸು, ಮತ್ತೊಂದು ಸೊವಡು. ಸೊವಡಿನಲ್ಲೂ ಸೊಗಸಿದೆ. ಕಾಣುವುದಕ್ಕೆ ಕಣ್ಣು ಬೇಕು ಅಷ್ಟೆ. ಅಂದರೆ? ಸೊವಡು, ಹೊಲಸು ಎಂಬುದೆಲ್ಲವೂ ಸೊಗಸು ಎನ್ನುವುದಾದರೆ ವಿಮರ್ಶೆಯ ಮಾತೇಕೆ? ಕಸದಲ್ಲೂ ರಸವನ್ನು ತರುವುದೇ ಕಲೆಯಲ್ಲವೆ? ಆದುದರಿಂದ ಕಣ್ಣಿಗೆ ಕಾಣಿಸುವುದು ಮಾತ್ರ ಚೆಲುವಲ್ಲ, ಕಾಣಿಸದವೂ ಇವೆ. ಅವೇ ಬರಲು. ಅದರಲ್ಲೂ ಸೌಂದರ್ಯವನ್ನು ಕಾಣುವ ಸಂಸ್ಕಾರ ಪಡೆಯಬೇಕು. ಹಾಗಾದರೆ ಚೆಲುವಿನ ಲಕ್ಷಣವೇನು? ಯಾವುದು ಸಾಮಾನ್ಯವಾಗಿ ಚೆಲುವಲ್ಲವೋ ಅದರಲ್ಲೂ ಚೆಲುವಿರುವುದಾದರೆ ಎಲ್ಲವೂ ಚೆನ್ನ, ಸುಂದರ ಎಂದೇಕೆ ಒಪ್ಪಿಕೊಳ್ಳಬಾರದು? ಇದು ಅನವಸ್ಥೆಯಲ್ಲವೆ? ಎಂಬ ಹಲವಾರು ವಿಕಲ್ಪಗಳು ಏಳುತ್ತವೆ. ಸೌಂದರ್ಯಸ್ಥಾನವನ್ನು ಗುರುತಿಸಲು ಒಂದು ಮಾನದಂಡವಿದೆ. ಅದನ್ನು ಸಂಸ್ಕಾರದಿಂದ ಕಂಡುಹಿಡಿಯಬೇಕು. ಕೊಳಚೆ, ಹೊಲಸು ಮುಂತಾದುವನ್ನು ಚೆಲುವೆಂದು ಯಾವ ಸಹೃದಯನೂ ಹೇಳಲಾರ. ಸಾಮಾನ್ಯವಾಗಿ ಚೆಲುವಲ್ಲದುದೆಂದು ಕಂಡರೆ ಅಷ್ಟರಿಂದಲೇ ತೀರ್ಮಾನಕ್ಕೆ ಬರಬಾರದು. ಬಾಹ್ಯದೃಷ್ಟಿಗೆಮಾತ್ರ ಹಾಗೆ ಕಂಡಿದೆಯೋ ಅಥವಾ ಸಂಸ್ಕೃತವಾದ ಒಳನೋಟಕ್ಕೂ ಅಂತೆಯೇ ಕಾಣುವುದೆ? ಎಂದು ವಿಮರ್ಶಿಸಬೇಕಾಗುತ್ತದೆ. ಸಂಸ್ಕಾರಕ್ಕೆ ಒಂದು ಪರಂಪರೆ ಇದೆ, ವ್ಯಕ್ತಿಭೇದವಿದೆ. ಆದುದರಿಂದ ಸೌಂದರ್ಯದ ಸಮೀಕ್ಷೆ ಅಷ್ಟು ಸುಲಭವಾದ ಕೆಲಸವಲ್ಲ. ಅದರ ಅನ್ವೇಷಣೆ ಬಹಳ ನಾಜೂಕಿನ ಕೆಲಸ ಎನ್ನುತ್ತಾರೆ ವಿ.ಸೀ. ಯವರು.

ಹೊಸ ಕವಿತೆಗಳನ್ನು ರೊಮ್ಯಾಂಟಿಕ್ ಮತ್ತು ನವ್ಯ ಎಂದು ವಿಭಾಗ ಮಾಡಿ ಒಂದರಿಂದ ಮತ್ತೊಂದನ್ನು ಪ್ರತ್ಯೇಕಿಸುವ ಪ್ರಯತ್ನ ನಡೆದಿದೆ. ಸಾಹಿತ್ಯಪ್ರಕಾರದಲ್ಲಿ ನವ್ಯ ಎಂಬುದಕ್ಕೆ ತಾತ್ಕಾಲಿಕವಾದ ಮೌಲ್ಯವೇ ಹೊರತು ನಾಳಿನವರಿಗೆ ಅದು ಯಾತಯಾಮವಲ್ಲವೆ! ಈ ರೀತಿಯ ವಿಭಾಗದ ಅರ್ಥವೇನು? ಕಾವ್ಯಸತ್ತ್ವ ಅಥವಾ ಕಾವ್ಯಗುಣ ಅದರಲ್ಲೂ ಇರಬಹುದು, ಇದರಲ್ಲೂ ಇರಬಹುದು; ಅಥವಾ ಎರಡರಲ್ಲೂ ಇಲ್ಲದಿರಬಹು. ನವ್ಯವೆನಿಸಿದ ಮಾತ್ರಕ್ಕೆ ಉತ್ತಮವೆಂದೂ ರೊಮ್ಯಾಂಟಿಕ್ ಆದರೆ ಹಳಸಿದುದೆಂದೂ ಹೇಳಲಾಗುವುದಿಲ್ಲ. ಕವಿತೆಯ ಜೀವ, ಸೌಂದರ್ಯಸ್ಥಾನಗಳನ್ನು ಗುರುತಿಸುವ ದೃಷ್ಟಿಯೂ ಇತ್ತೀಚೆಗೆ ತೀವ್ರವಾಗಿ ಬದಲಾಗುತ್ತಿದೆ. ಪ್ರಾಚೀ

ನರು ಯಾವುದನ್ನು ಕಲೆಯಸತ್ತ್ವ ಜೀವವೆಂದು ಪರಿಗಣಿಸುತ್ತಿದ್ದರೋ ಅದು ಈಗ ಬದಲಾಗಿದೆ. ಭಾಷೆ, ಅರ್ಥ, ಅಲಂಕಾರ, ರೀತಿ, ಗುಣ ಇವೆಲ್ಲಕ್ಕೂ ಒಂದು ಹೊಸ ಅರ್ಥವುಂಟಾಗಿದೆ.ಕವಿತೆಯ ಭಾಷೆ ವ್ಯಾಕರಣಶುದ್ಧವಾಗಿರುವುದಕ್ಕಿಂತ ಆಡುಮಾತಿನ ಲಯಕ್ಕೆ ಹತ್ತಿರವಿರುವುದು ಒಳಿತು. ಅರ್ಥದಲ್ಲಿ ಕಲ್ಪನೆಯ ಕ್ಲೇಶಕ್ಕಿಂತ ವಸ್ತುಸ್ಪಷ್ಟತೆ ಯಿರಬೇಕು. ಅಲಂಕಾರ ಸಂಯೋಜನೆಯಲ್ಲಿ ಅಂಗಾಗಿ ಭಾವಗಳಿಗೆ ಸಾಂಗತ್ಯವಿಲ್ಲ ದಿದ್ದರೂ ಪ್ರತಿಮೆಯಾಗಿ ಬಂದರೆ ಸಾಕು. ಛಂದಸ್ಸು ಏಕರೀತಿಯಾಗಿರುವುದಕ್ಕಿಂತ ಭಿನ್ನಲಯಗಳಿಗೆ ಎಡೆಗೊಡುವುದು ಮೇಲು, ಅಥವಾ ಗದ್ಯದ ನಡೆಯೂ ಸಾಕು. ಪ್ರಾಸವಿರಬೇಕಾದುದಿಲ್ಲ. ಇದ್ದರೆ ಆಯತ್ನಸಿದ್ಧವಾಗಿ ಮೂಡಿಬಂದಿರಬೇಕು. ಹೆಚ್ಚೇಕೆ? ಕ ವಿ ತೆ ಸ–ರಾಗವಾಗಿ ಹೇಳುವಂತಿರಕೂಡದು–ಓದುವಂತಿರಬೇಕು. ಚಮತ್ಕಾರವಿದ್ದರೆ ಅದು ಕೃತಕವೆನಿಸುವ ಸಂಭವವಿದೆ, ಇತ್ಯಾದಿ. ಇಷ್ಟೇಕೆ ಮಾತು ಎಂದರೆ ವಿ. ಸೀ.ಯವರು ರಮ್ಯ ಸಂಪ್ರದಾಯಕ್ಕೆ ಸೇರಿದ ಕವಿಗಳು. ಅವರ ಮೊದಲ ಕವಿತಾಸಂಕಲನಗಳಲ್ಲಿ ಸಾಂಪ್ರದಾಯಕವಾದ ಲಕ್ಷಣಗಳನ್ನು ಗುರುತಿಸ ಬಹುದು. ಅರಲು ಬರಲಿನಲ್ಲಿ ಅವರು ತಮ್ಮ ಹಿಂದಿನ ಧಾಟಿಯನ್ನು ಬಿಟ್ಟುಹೊಸ ಸಂಪ್ರದಾಯವನ್ನು ತುಳಿದಹಾಗೆ ಕಾಣುತ್ತದೆ. ಅದು ಅಂತಃಪ್ರೇರಣೆಯೋ ಕಾಲದ ಅನಿವಾರ್ಯತೆಯೋ ತಿಳಿಯದು. ಬೆಳೆಯುವ ಮನೋಧರ್ಮದೊಂದಿಗೆ ಅವರೂ ಬೆಳೆದರೆ ಅಚ್ಚರಿಯೇನಲ್ಲ. ಯಾವುದನ್ನೂ ಪರೀಕ್ಷೆಗೆ ಒಳಪಡಿಸದೆ ಸುಮ್ಮನೆ ಒಪ್ಪಿ ಕೊಳ್ಳುವವರು ವಿ.ಸೀ.ಯವರಲ್ಲ. 'ಸುಮಾರು 50 ವರ್ಷಗಳಿಂದ ಹೊಸಕಾಲವಲ್ಲಿ ಬಂದ ಸಾಹಿತ್ಯ ಪ್ರಕಾರಗಳಿಗೆ ವಿಶ್ವಾಸದಿಂದ ಒಲಿದವನು ನಾನು' ಎಂದು ಹೇಳಿ ದ್ದಾರೆ. ಆದರೆ ನವ್ಯತೆಯೇ ಕಾವ್ಯದ ಮಾನದಂಡವಲ್ಲ–ಆಗಬೇಕಿಲ್ಲ–ಆಗಬಾರದು ಎಂಬುದು ಅವರ ನಿಲುವು. ಇಂದಿನದು ನಾಳೆಗೆ ಹಳಸುವುದೆಂಬ ಭೀತಿಯಿಂದ ಇಂದಿನದನ್ನು ಕಡೆಗಣಿಸದೆ, ಇಂದಿನೊಡನೆ ಹೊಂದಿಕೊಂಡುಹೋಗುವುದೇ ಸಹೃದ ಯತೆ. ಅಂತೆ ಕವಿ ವಿ. ಸೀ. ಇಲ್ಲಿ ನವ್ಯಸಂಪ್ರದಾಯದ ಕವಿತೆಗಳನ್ನು ಬರೆದಿರು ವರೆಂದು ತಿಳಿಯಬೇಕಾಗುತ್ತದೆ.

ಇಂತಹ ಸಹೃದಯತೆ ನವ್ಯರಲ್ಲೂ ಬೇಕು ಎಂಬ ಒಲವಿನ ಬೇಡಿಕೆಯಿದೆ. ಕೇವಲ ಆವೇಶ, ಆಕ್ರೋಶಗಳಿಂದ ಕಲೆಯ ಉತ್ತಮಿಕೆಯನ್ನು ಸಾಧಿಸಲು ಸಾಧ್ಯ ವಿಲ್ಲ. ಕಲೆಯ ಸಿದ್ಧಿಗೆ ತಾಳ್ಮೆ, ಅಧ್ಯಯನಗಳಿಂದುಂಟಾಗುವ ಸಂಸ್ಕಾರ ಮುಖ್ಯ. ಹಿಂದಿನ ಕವಿಗಳು ಇಂದಿನವರ ಹಾಗೆ ಬರೆಯಲಿಲ್ಲವೆಂಬ ಆಕ್ಷೇಪವಿದ್ದರೆ, ಇಂದಿನ ವರೂ ಮುಂದಿನವರಿಂದ ಇದನ್ನೇ ಎದುರಿಸಬೇಕಾದೀತು. ಆದುದರಿಂದ ಆಯಾ ಕಾಲಕ್ಕೆ ಯಾವ ಪ್ರಕಾರವು ಸಾಧ್ಯವೋ ಅದನ್ನು ಸಹೃದಯತೆಯಿಂದ ಸ್ವೀಕರಿಸುವ ಔದಾರ್ಯಬೇಕು. 'ನೀವು ಬರೆಯುವುದನ್ನು ನಿಲ್ಲಿಸಿ ಅಥವಾ ಸತ್ತುಹೋಗಿ ಎಂದರೆ ಹಾಗೆನ್ನುವವರಿಗೆ ಜೀವಾಧಿಕಾರ ಕೊಟ್ಟವರು ಯಾರು? ಇದು ಅಸಭ್ಯ ವರ್ತನೆ.'

ಇಂತಹ ಟೀಕೆ ಸಾಧುವಲ್ಲ. ಹಾಗೆ ಹೇಳುವುದಾದರೆ ಅವರವರ ಮನಸ್ಸು ಅವರವರಿಗೆ ಎನ್ನಬೇಕಾಗುತ್ತದೆ.

ವಿ. ಸೀ. ಯವರು ಈವರೆಗೆ ನಡೆದುಬಂದ ಪರಿಶೀಲನೆಯನ್ನು ಅರ್ಥಮಾಡಿಕೊಳ್ಳಲು ಬಯಸಿರುವವರು. 'ಸ್ವಂತ ರಚನೆ ಇಂದಿನ ನಡಿಗೆಯ ವೇಗಕ್ಕೂ ತಿರಿಚುಗಳಿಗೂ ಪೂರ್ತಿ ರೂಪುಗೊಡದಿದ್ದರೆ ನನಗೆ ಹೊಸದರಲ್ಲಿ ಅಪ್ರೀತಿಯೆಂದಲ್ಲ. ಎಷ್ಟೋ ಹೊಸ ಕವಿತೆಗಳಲ್ಲಿ ಸ್ವಾರಸ್ಯ, ಅನುರಕ್ತಿ ಉಳ್ಳವನು' ಎಂದು ತಮ್ಮ ವಿಷಯದಲ್ಲಿ ಹೇಳಿದ್ದಾರೆ. ಯಾರೋ ಒಬ್ಬರು ಗೆಳೆಯರು ವಿ. ಸೀ.ಯವರ ಬರವಣಿಗೆಯನ್ನು Rhetoric ಮಾತಿನ ಉಬ್ಬರ–ಅಬ್ಬರ ಎಂದರಂತೆ. ಇರಬಹುದು. ಇದಕ್ಕೆ ಅವರ ಉತ್ತರ ಬಹಳ ನಾಜೂಕಾಗಿದೆ.

ಸಾಹಿತ್ಯ, ಕವಿತೆ ಎಂದರೆ ಏನು? ಹೇಳುವುದು ಕಷ್ಟ. ಪ್ರಾಚೀನರು ಬಹಳ ಸುಲಭವಾಗಿ 'ಶರೀರಂ ತಾವದಿಷ್ಟಾರ್ಥ ವ್ಯವಚ್ಛಿನ್ನಾ ಪದಾವಲೀ' (ದಂಡಿಯ ಕಾವ್ಯಾದರ್ಶ) ಎಂದು ಕಾವ್ಯದ ಸ್ಥೂಲವಾದ ಲಕ್ಷಣವನ್ನು ಮಾತ್ರ ಹೇಳಿದರು. ಮುಂದಿನವರು ಅದನ್ನು ಖಂಡಿಸಿ ತಮ್ಮದೇ ಆದ ಮಾತಿನಲ್ಲಿ ಕಾವ್ಯಕ್ಕೆ ಶಾಬ್ದಿಕ ವಿವರಣೆಯನ್ನು ಕೊಟ್ಟರೇ ಹೊರತು ನಿರ್ಣಾಯಕವಾಗಿ ಹೇಳಲು ಅವರಿಂದಲೂ ಆಗಲಿಲ್ಲ. ನಮ್ಮಿಂದೂ ಆಗದ ಕೆಲಸವದು. ಹಳೆಯ ಲಕ್ಷಣಗಳಿಗೆ ಹೊಸಶಬ್ದಗಳ ಕವಚವಷ್ಟೆ! ಅಂದರೆ ಲಕ್ಷಣದಿಂದ ಲಕ್ಷ್ಯದ ಸ್ವರೂಪವೇನು ಎಂದು ತಿಳಿಯುವುದು ಸಕ್ಕರೆಯ ಸವಿಯನ್ನು ಮಾತಿನಿಂದ ತಿಳಿಯುವಷ್ಟೇ ಕಷ್ಟ. ಆದುದರಿಂದ ಅವರು ಸಾರ್ವಕಾಲಿಕವಾದ ಲಕ್ಷಣವನ್ನು ಸ್ಥೂಲವಾಗಿ ತಿಳಿಸಿದರು. ಎಲ್ಲರನ್ನೂ ಖಂಡಿಸಿದ ಜಗನ್ನಾಥ ಪಂಡಿತನೂ 'ರಮಣೀಯಾರ್ಥ ಪ್ರತಿಪಾದಕಃ ಶಬ್ದಃ ಕಾವ್ಯಂ' ಎಂದು ಹಳೆಯದಕ್ಕೆ ಹೊಸ ಕವಚವನ್ನಿಟ್ಟ. ಅದರಿಂದೇನು ಸಿದ್ಧಿಸಿತು?

ರಾಜಾಭಿಷೇಕೇ ಮದವಿಹ್ವಲಾಯಾಃ
ಹಸ್ತಾ ತ್ ಚ್ಯುತೋ ಹೇಮಘಟೋ ಯುವತ್ಯಾಃ
ಸೋಪಾನ ಮಾರ್ಗೇಷು ಕರೋತಿ ಶಬ್ದಂ
ಟಂಟಂಟಟಂಟಂ ಟಂಟಟಂಟಂಟ ಟಟಂಟಂ

ಇದೂ ಒಂದು ಕವಿತೆ. ರಾಜನ ನಗ್ನ ಸೌಂದರ್ಯವನ್ನು ನೋಡುತ್ತಿದ್ದ ಪ್ರಮದೆಯೊಬ್ಬಳಿಗೆ ಸಾತ್ತ್ವಿಕ ಭಾವೋದಯ (ಹಸ್ತಕಂಪನ) ವುಂಟಾಯಿತು ಎಂಬ ಧ್ವನಿಯಿದರಲ್ಲಿದೆ ಎನ್ನಲೋ, ಅಥವಾ ಕೇವಲ ಕೃತ್ರಿಮವಾದ ಶಬ್ದಾಡಂಬರವೆನ್ನಲೋ! ಕೆಲವರು ಇದನ್ನು ಚಿತ್ರ ಕವಿತೆ (ಅಧಮ ಕಾವ್ಯ) ವೆನ್ನಲೂಬಹುದು. ಅವರಿಗೆ ಚಿತ್ರ, ಇನ್ನೊಬ್ಬರಿಗೆ ವಿಚಿತ್ರ. ಹೀಗೆ ಇನ್ನೊಂದು ಹಂತದಲ್ಲಿ ಪಾಶ್ಚಾತ್ಯ ಕಾವ್ಯ ಮೀಮಾಂಸಕರ ವಿಚಾರಧಾರೆಯೂ ಬೆಳೆದಿದೆ. ಆ ಸಾಹಿತ್ಯಗಳಿಂದ ಪ್ರಭಾವಿತರಾದ ನಾವಾದರೋ ಯಾವ ನಿರ್ಣಯಕ್ಕೆ ಬಂದಿದ್ದೇವೆ? ಹಿಂದಿನದನ್ನು ಅಲ್ಲಗಳೆದು ಕೆಲವು ಗುಣವನ್ನೋ, ಬನಿಯನ್ನೋ, ಬಾನಿಯನ್ನೋ, ಪದವನ್ನೋ ಬಳಸಿಕೊಂಡಿ

ದ್ದೇವೆ. ಅವು ಚೆನ್ನಾಗಿವೆ. ಆದರೂ ಇಂದಿನ ಕಾವ್ಯತತ್ತ್ವಗಳಲ್ಲಿ ತಿರುಳು ಯಾವುದೆಂದು ಹೇಳುವುದು ಕಷ್ಟ. ಹೊಸ ಸಂಪ್ರದಾಯ ಮೊದಲಿನ ಪರಿಪಾಟಿಗಿಂತ ಒಂದು ಹೊಸ ಒನಪು. ಪ್ರತಿಮೆ, ಸಂಕೇತ ಮುಂತಾದುವನ್ನು ಕವಿತೆಗೆ ತಂದು ಕೊಟ್ಟಿದೆ. ವಿ. ಸೀ. ಯವರ ಈಚಿನ ಕವಿತೆಗಳಲ್ಲಿ ಅಂತಹವೂ ಕಾಣಸಿಗುತ್ತವೆ 'ಅರಲಾಗಿ'.

ಕವಿತೆಯ ವಿಷಯವಾಗಿ ಯಾವುದೂ ಕೊನೆಯ ಮಾತಾಗಿ ಉಳಿಯುವುದು ಕಷ್ಟ. ಕಾಲದ ಮಿತಿಯಲ್ಲಿ ಎಷ್ಟೋ ಕಾವ್ಯ ಪ್ರಕಾರಗಳು ಹುಟ್ಟಿವೆ, ಬದುಕಿವೆ, ಬದಲಾಯಿಸಿವೆ, ಅಳಿದಿವೆ. ಆದರೂ ವ್ಯಾಸ ವಾಲ್ಮೀಕಿಗಳು, ಭಾಸ ಕಾಳಿದಾಸರು, ಪಂಪ ರನ್ನರು ನಮಗೆ ಇನ್ನೂ ಬೇಕಾಗಿದ್ದಾರೆ. ಮುಂದಿನವರಿಗೂ ಬೇಕಾಗ ಬಹುದು. ಕಾವ್ಯತತ್ತ್ವವು ಎಷ್ಟೇ ಬದಲಾಯಿಸಿದರೂ ಸತ್ತ್ವಶಾಲಿಯಾದುದು ಉಳಿಯುತ್ತದೆ ಎಂಬುದಕ್ಕಿಷ್ಟು ಸಾಕು. ಸಮಕಾಲೀನ ಸಾಹಿತ್ಯದಲ್ಲಿ ಎಷ್ಟೋ ಬದಲಾವಣೆಯುಂಟಾಗಿದ್ದರೂ ಈಗಿನವರೆಗೆ ಬಂದುದರಲ್ಲಿ ಉಳಿಸಿಕೊಳ್ಳಬೇಕಾದ ಬೆಳೆಸಬೇಕಾದ ಅಂಶಗಳು ಕೆಲವಾದರೂ ಇವೆಯಲ್ಲವೆ? ಅವೆಲ್ಲ ಹಳಸಿದ ಕಾವ್ಯಪ್ರಕಾರಗಳು ಎಂದು ಹೇಳುವವರ ಅರ್ಥ ಬಹುಶಃ ಇದು. ಇಂದಿನ ಪರಿಸರದಲ್ಲಿ ಬದುಕಿದ ಕವಿ ಹಳೆಯ ಸಂಪ್ರದಾಯದಲ್ಲೆ ಬರೆದರೆ ಸಹಜವೆನಿಸದೆ ವಿಡಂಬನೆಯಾಗುತ್ತದೆ. ಆದುದರಿಂದ ಕವಿ ತನ್ನತನವನ್ನು ಅನ್ವೇಷಿಸಿ ಅದನ್ನು ಮೆರೆಯಬೇಕು. ಪ್ರಾಚೀನ ಕವಿಗಳೂ ಹಾಗೆ ಅವರವರ ಸ್ವತ್ವವನ್ನೇ ಆಯಾಕಾಲಕ್ಕೆ ಮೆರೆದಿದ್ದಾರೆ. ಆಕಾಲಕ್ಕೆ ಅದು ನವ್ಯ. ಆದುದರಿಂದ ಅಂತಹ ಕಾವ್ಯಗಳು ಇಂದಿಗೂ ಬೆಳಕು ಕೊಡುತ್ತಿವೆ, ಸಂಸ್ಕಾರವನ್ನು ತರುತ್ತವೆ. ಕವಿಯಾಗಬೇಕೆಂಬ ಚಪಲದಿಂದ ಆ ಹಳೆಯ ಮಾದರಿಯನ್ನೇ ಅನುಸರಿಸಿ ಗದ್ಯದಲ್ಲಿ ಹೇಳಬಹುದಾದುದನ್ನೇ ಛಂದಸ್ಸಿನ ಚೌಕಟ್ಟಿನಲ್ಲಿ ಬಿಗಿದ ಮಾತ್ರಕ್ಕೆ ಅದು ಪದ್ಯ(ಕಾವ್ಯ)ವಾಗುವುದೆ? ಅದನ್ನೇ ಗದ್ಯದಲ್ಲಿ ಹೇಳಿದರೆ ಅದಕ್ಕಿಂತಲೂ ಸೊಗಸೆನಿಸದೆ! ಕವಿ ಏಕೆ ಪದ್ಯ ಬರೆಯುತ್ತಾನೆ? ಬಹುಶಃ ಗದ್ಯದಲ್ಲಿ ಹೇಳಲಾಗದುದಕ್ಕೆ ಛಂದಸ್ಸಿನ ಧಾಟಿಯಲ್ಲಿ ಬರೆಯುತ್ತಾನೆ. ಛಂದಸ್ಸು ಕವಿತೆಯ ಅಂಗವಾಗಿ ಅರಳಬೇಕು. ಇಲ್ಲದಿದ್ದಲ್ಲಿ ಪದ್ಯವೆಂಬ ಕಾರಣದಿಂದ ಮನುಸ್ಮೃತಿಯೂ ಕಾವ್ಯವಾಗಬಹುದು-ಹಿರಿಯರೂ ಅಂತಹ ಪದ್ಯವನ್ನು ಕಾವ್ಯವೆಂದು ಹೇಳಿಲ್ಲ. ಗದ್ಯದಲ್ಲೇ ಇದ್ದರೂ 'ಕಾದಂಬರಿ' ಯಂತಹುದು ಕಾವ್ಯವಾಗಿಲ್ಲವೆ? ಬಾಣನಿಗೆ ತನ್ನ ಕಲ್ಪನೆಯ ಅಭಿವ್ಯಕ್ತಿಗೆ ಗದ್ಯದಷ್ಟು ಸಹಜವಾದ ಮಾಧ್ಯಮ ಪದ್ಯವಾಗಿರಲಿಲ್ಲ. ಅಂತೆಯೇ ಅವನು ಗದ್ಯ ಕವಿ. 'ಯಾದೃಗ್ಗದ್ಯವಿಧೌ ಬಾಣಃ ಪದ್ಯಬಂಧೇ ನ ತಾದೃಶಃ' ಅಲ್ಲವೆ? ಆದುದರಿಂದ ಪದ್ಯವಾದರೆ ಕವಿತೆ, ಗದ್ಯವಾದರೆ ಪ್ರಬಂಧ ಎಂಬ ಮಾತೂ ಸಲ್ಲದು. ಕಾವ್ಯದಲ್ಲಿ ಕವಿಯಸಂವೇದನೆ ಸುಂದರವಾದ ಶಾಬ್ದಿಕ ಅಭಿವ್ಯಕ್ತಿಯನ್ನು ಪಡೆಯಬೇಕೆನ್ನುವುದು ಮುಖ್ಯ.

ಕವಿಯು ಸ್ವತಂತ್ರ ಎಂಬ ಮಾತೂ ಅಷ್ಟೇ ಜಟಿಲವಾದುದು. ಅವನ ಕಲೆ

ಗಾರಿಕೆಗೆ ಮತ, ರಾಜಕೀಯ ಮುಂತಾದ ಬಾಹ್ಯ ಉಪಾಧಿಗಳ ಪ್ರಭಾವ ಸಲ್ಲದು ಎಂದಷ್ಟೇ ಈ ಮಾತಿನ ಅರ್ಥ. ಆದರೂ ಎಷ್ಟೋ ವೇಳೆ ಅವನಿಗರಿವಿಲ್ಲದಂತೆಯೇ ಅವನಲ್ಲಿ ರೂಢ ಮೂಲವಾಗಿದ್ದ ಒಲವು, ಮತ, ಸಂಪ್ರದಾಯಗಳು ಕವಿತೆಯಲ್ಲಿ ನುಸುಳಿಕೊಳ್ಳುವುದುಂಟು. ಹಾಗಿದ್ದೂ ಅವನ ಕಲೆಗಾರಿಕೆ ಶ್ರೇಷ್ಠವಾಗಿದ್ದರೆ ಅವನ ಪ್ರತಿಭೆಯಿಂದಾಗಿ ಕವಿತೆ ಉತ್ತಮವಾಗಲೂ ಸಾಧ್ಯ. ಕವಿಯು ತನಗಿರುವ ಸಾತಂತ್ರ್ಯ ವನ್ನು ಒಂದು ಪರಿಧಿಯಲ್ಲೇ ಬಳಸಿಕೊಳ್ಳಬೇಕೇ ಹೊರತು, ಉನ್ಮತ್ತನಂತೆ ಅಪ ಲಾಪ ಮಾಡಿದರೆ ಕವಿತೆಯಾಗಲಾರದು. ಈ ಎಲ್ಲ ಹಿನ್ನೆಲೆಗಳಿಂದ ಒಂದು ಕವಿತೆಯ ಮೌಲ್ಯಮಾಪನವೆಂದರೆ ಬಹಳ ತೊಡಕಿನ ವಿಷಯವಾಗುತ್ತದೆ. ಅಲ್ಲದೆ ಆ ಮೌಲ್ಯ ಮಾಪನವು ಸರ್ವಸಮ್ಮತವಾಗಬೇಕೆಂದೇನೂ ಇಲ್ಲ. ಅದು ಸಾಧ್ಯವಾಗದ ಮಾತು. ದೇಶ–ಕಾಲ ಭೇದದಿಂದ ಜನರ ರುಚಿ, ನಿರೀಕ್ಷೆಗಳು ಭಿನ್ನವಾದಾಗ ಕಲೆಯ ಮೌಲ್ಯವೂ ಬದಲಾಯಿಸುವುದು ಅನಿವಾರ್ಯವೇ ಸರಿ. ಈ ದೃಷ್ಟಿಯಿಂದ ಈ ಸಂಕಲನದ ಕೆಲವು ಕವಿತೆಗಳ ಭಾವವನ್ನು ವಿಶ್ಲೇಷಿಸುವ ಪ್ರಯತ್ನ ಮಾಡಲಾಗಿದೆ.

‘ಅರಲು ಬರಲಿ’ನ ಮೊದಲ ಮತ್ತು ಕೊನೆಯ ಕವಿತೆಗಳು ಕ್ರಮವಾಗಿ ‘ಇನ್ನೇನು ಬೇಕು’–‘ಸಾಕು’ ಎಂಬವು. ಒಂದು ದೃಷ್ಟಿಯಿಂದ ಈ ಎರಡು ಕವಿತೆಗಳು ಈ ಸಂಕಲನವನ್ನೇ ಪ್ರತಿನಿಧಿಸುತ್ತವೆ. ಮೊದಲಿನದರಲ್ಲಿ ಮನುಷ್ಯನ ಆಶೋತ್ತರಗಳು ಎಷ್ಟು ಅಪ್ರತಿಹತವಾಗಿವೆ, ಅವನ ಶಕ್ತಿಯು ಮೊತ್ತ ಯಾವ ಪ್ರಮಾಣದ್ದು, ಸಾಧನೆ–ಸಿದ್ಧಿಗಳು ಯಾವ ಮಟ್ಟದವು ಎನ್ನುವುದರ ಚಿತ್ರಣವಿದೆ. ಕೊನೆಯದರಲ್ಲಿ ತನ್ನ ಸಾಧನೆ–ಸಿದ್ಧಿಗಳು ಮುಂದಿನವರಿಗೆ ಹೇಗೆನಿಸಬಹುದೋ ? ತನ್ನ ಬದುಕಿನ ಕೊಡುಗೆ ಮುಂದಿನವರಿಗೆ ಸ್ವಲ್ಪವಾದರೂ ಬೆಳಕು ತೋರಿಸಿದರೆ ಅಷ್ಟೇ ಸಾಕು ಎಂಬ ಮಿತಿಯ ಅರಿವಿದೆ.

ನನ್ನ ನುಡಿ, ನಡೆ; ನನ್ನ ಕಣ್ಬೆಳಕು
ಮನದ ತಿಳಿ, ನಯ ಹಿತವಾಗೆ ನಾಲ್ವರಿಗೆ
ಬೆಳಕು ಕಂಡೀತು; ಧೈರ್ಯವನ್ನೂಡೀತು
ಎಂಬ ನಚ್ಚಾದರೊಳಿತು.

ಇಲ್ಲಿನ ವಿನಯ ಸಂಸ್ಕೃತನಾದ ವ್ಯಕ್ತಿಗೆ ಒಪ್ಪುವಂತಹದು. ಈ ಸಂಕಲನದ ಎಲ್ಲ ಕವಿತೆಗಳೂ ಏಕಕಾಲದಲ್ಲಿ ಬರೆದು ಮುಗಿಸಿದುವಲ್ಲ. ಆಗಾಗ ಕವಿಗೆ ಉಂಟಾದ ಭಾವ ನೆಗೆ ಅಭಿವ್ಯಕ್ತಿ ಕೊಟ್ಟವು. ಆಯಾ ಕಾಲಕ್ಕೆ ಕವಿಯ ಭಾವತೀವ್ರತೆಗೆ ಅನುಗುಣ ವಾಗಿ ಕವನವು ಅರಳಬೇಕಷ್ಟೆ. ಅಂತೆ ಕೆಲವು ಉತ್ತಮ ಗುಣದವಿದ್ದರೆ ಕೆಲವು ಕವನ ಗಳು ಸಾಮಾನ್ಯವಾಗಿಯೇ ಇವೆ. ಅದರಿಂದ ಕೊರೆಯೇನೂ ಆಗಿಲ್ಲ.

ಮಾನವಗೆ ಮಾನವಂತನಾದ ನರನಿಗೆ ಹಿರಿಯಾಸೆ, ಅದನ್ನು ತುಂಬಿಕೊಳ್ಳುವ ಧೈರ್ಯ, ಸಾಧಿಸಿಯೇನೆಂಬ ಕಸುವಿರುವವರೆಗೂ ಅವನ ಆನಂದಕ್ಕೆ ಕೊರತೆಯಿಲ್ಲ. ಅದು ಕಡಿಮೆಯಾಗದಿರಲಿ.

ಅನ್ನ ವಸನದ್ದಲ್ಲ ಬಡತನವು ಲೋಕಕ್ಕೆ
ಮನದ ಮಹದಾಸೆಗಳ ಕೊರೆಯೊಂದೆ, ಕಡುಬಡತನ
ಅವುಗಳದೆ ಜಾಡ್ಯ, ಅವುಗಳವೆ ಸೋಲು, ಸೊರಗು.
ಅಂತಾಗದಿರಲೆಮಗೆ.

ಎಂಬ ಹಾರೈಕೆ ಇನ್ನೇನು ಬೇಕು ಕವನದಲ್ಲಿ ಪದರು ಪದರಾಗಿ ಅರಳಿಕೊಂಡಿದೆ.

'ದೀಪಾವಳಿ ದೀಪಾವಳಿ' ಎಂಬ ಕವನದಲ್ಲಿ ನಮ್ಮ ಈಗಿನ ಜಿಡಗಿನ ಬದುಕಿನ ವಿಡಂಬನೆಯಿದೆ. ಹೊಟ್ಟೆ ಬಟ್ಟೆಗಿಲ್ಲದೆ ಬದುಕು ದಿವಾಳಿಯಾದರೂ ನಾವು ಪಿಮ್ಮ ದ್ದೀಪಗಳ ಸಾಲುಗಳಿಂದ ಮನೆ ಮಠಗಳನ್ನು ಅಲಂಕರಿಸಿ ಉತ್ಸವವನ್ನು ಆಚರಿಸುವು ದರಲ್ಲೇ ಮಗ್ನರಾಗಿದ್ದೇವೆ. ಬದುಕಿಗೆ ಬೆಳಕನ್ನು, ಶಾಂತಿಯನ್ನು ತರುವ ಧರ್ಮ, ನಡತೆ ಮುಂತಾದುವು ಬಂಜೆಯಾಗಿವೆ. ರಾಷ್ಟ್ರವನ್ನು ರಾಕ್ಷಸತೆ ಕಬಳಿಸಿದೆ. ಈ ಬದು ಕಿನ ದಿವಾಳಿತನ ಮುರಿಯಲು, ಮರಳಿ ಹರುಷ ಚಿಗಿಯಲು ದೇವರ ಅನುಗ್ರಹ ಕ್ಕಾಗಿ ಕಾಯಬೇಕು ಎಂಬ ಹಂಬಲವಿದೆ.

'ಮಕ್ಕಳು' ಮಕ್ಕಳ ಅವಿಕೃತವಾದ ವರ್ಣನೆಯು ಒಂದು ಕಿರಿಯ ಮುದ್ದು ಕವನವೆನ್ನಬಹುದು. ಇಂದು ಎಳೆಯ ಮಕ್ಕಳಲ್ಲಿ ಕಾಣುವ ಒಂದು ಮುಗ್ಧ ಮಂದ ಹಾಸ ನಾಳೆ ಬೆಳೆದಾಗ, ಗಳಿಸಿ ತರುವಾಗ, ಮಡದಿಯರ ಕಂಡಾಗ ಇರಬಲ್ಲುದೋ!

ಏನು ಮುದ್ದಿವರ ಮುಖ; ಗೆಲವು;
ಕಪಟವರಿಯದ ಬಗೆಯ ತಿಳಿಹಗುರು;
ಈ ಕ್ಷಾಮ ಕಾಲದಲಿ—
ಯಾರಿಟ್ಟರೊ ನಗೆಯ ತುಟಿಯ ಮೇಲೆ.
ಹೇಗೆ ಬಂದಿತ್ತೋ ಕಾಲ್ಗೆ ಚಿಗರಿ ನಡೆತ ?

ಎಂಬ ಸಾಲುಗಳಲ್ಲಿ ಬುದ್ಧಿ ಬಲಿತ ಮೇಲೆ ಏನು ಮಾಡಿದರೂ ಪಡೆಯಲಾಗದ ಈ ಮುಗ್ಧತನ ಈ ಪಸುಳೆಗಳಲ್ಲಿ ಮಾತ್ರ ಇರಲು ಸಾಧ್ಯ. ಈ ಕ್ಷಾಮ ಕಾಲದಲಿ ಎನ್ನುವಾಗ ಈಗಿನ ಸಂಕೀರ್ಣ ವಾತಾವರಣದಲ್ಲಿ, ಅಹೋರಾತ್ರಿ ತಲೆ ಬಿಸಿಯಾಗಿರು ವಾಗ ಈ ಮಕ್ಕಳ ನಿರ್ಮಲವಾದ ಬದುಕು, ಅದರ ಬಗೆಗೆ ಕುತೂಹಲವೆಲ್ಲವೂ ಮಂಗಮಾಯ, ಎನ್ನುವ ವೇದನೆಯು ಒತ್ತು. ಇದೆ. 'ಸ್ವಸ್ತಿಕ್ರೋಧಿಗೆ' ಒಂದು ಕೆಟ್ಟ ಕಾಲದ ಚಿತ್ರ. ಶುಭಕೃತ್, ಶೋಭಕೃತ್ ಸಂವತ್ಸರಗಳ ಬಳಿಕ ಬರುವ ಕ್ರೋಧಿ ನಿಜ ವಾಗಿ ನಾಡಿನ ಮೇಲೆ ತನ್ನ ಕ್ರೋಧವನ್ನೆ ತೋರಿಸಿದೆ. ಹಿಂದಿನವು ಕೊಡದ ಸುಖ ವನ್ನು ಇದೇನು ಕೊಟ್ಟೀತು? ಆದರೂ ನಾವು ಕಷ್ಟಕ್ಕೆ ಅಂಜಲಾಗದು.

ತ್ಚ್ !
ಭಯವೇಕೆ ಬರಿ ಹೆಸರಿಗೆ
ಎಷ್ಟು ಕ್ರೋಧದ ಪೀಡೆ ಎರಗಿಲ್ಲ ಈ ನಾಡ ಮೇಲೆ
ಒಂದೊಂದು ಕಾಲದಲ್ಲು!

ಬರಲೇಳಿ ಇದಿರಿಸುವ ಅದನು;
ಮೊದಲೆಗೆ ಬಾಗುವರೆ ಸೋಲುವರೆ ಪೌರುಷಕೆ ಬೆಲೆ ಏನು ?

ಸುಖವೋ ದುಃಖವೋ ಆಗಂತುಕಗಳು, ಒಂದಾದ ಮೇಲೊಂದು ಬರುವವೇ, ಅದಕ್ಕಾಗಿ ಎದೆಗುಂದಿ ಕರ್ತವ್ಯ ಭ್ರಷ್ಟರಾಗುವುದೆಷ್ಟರದು !

ಕ್ರೋಧಿ ಬರಲೇಳಿ; ಹಾಡುವೆವು; ಹೊಸ ಅಮೃತ
ನಾವುಂಡು–ಊಡುವೆವು ಜಗಕೆ ಅಕ್ರೋಧದಿಂದ

ಎಂಬಲ್ಲಿ ಕರ್ತವ್ಯ ನಿಷ್ಠೆ, ಎಂಟೆರ್ದೆತನ ಇವನ್ನು ತುಂಬಿಕೊಳ್ಳುವ ಪೊಳಗುಗಳಿವೆ.

'ಯೋಜನೆಯ ಕರೆ'ಯಲ್ಲಿ ಭಾರತದ ಜನರ ಹಿರಿಯಾಸೆಯ ಕನಸನ್ನು ನನಸಾಗಿಸುವ ಛಲ, ತಾಳ್ಮೆ, ಸ್ನೇಹ ಮುಂತಾದ ಗುಣಗಳ ನಖಚಿತ್ರವಿದೆ. ಹಿಂದೆ ಈ ನಾಡನ್ನು ರಾಮನಾಳಿದ್ದನಂತೆ. ರಾಮರಾಜ್ಯವಿದು. 'ರಾಮನಾಳಿದ ಕಾಲ ಸಕಲ ಸೌಭಾಗ್ಯ ಸೀಮೆಯೆನ್ನುವುದ ಕೇಳಿ ನಾಳೆ ಅದ ಮರಳಿಸಲು ತವಕಿಸಿದೆ ಮನಸು.' ಅದೇ ಜಲ, ಅದೇ ನೆಲ ಮುಂತಾದವು ಇನ್ನು ಇವೆ. ಅವರದೇ ಉತ್ಸಾಹ ಬಯಕೆಗಳು ನಮ್ಮಲ್ಲಿರುವುದಾದರೆ ಆ ಕಾಲವನ್ನು ನಾವು ಏತಕ್ಕಾಗಿ ತರಲಾರೆವು ? ಐವತ್ತು ಕೋಟಿ ಮಂದಿ ಒಮ್ಮತದಿಂದ ದುಡಿಯುವಾಗ, ಮೇಲು ಬೀಳೆಂಬ ಭಾವವಿಲ್ಲದಿರುವಾಗ ಏಕೆ ಆಗದು ?

ಗಳಿಕೆ ಗುರಿ ನಾಳೆಯದು–ಇಂತೆಂದು ರಚಿಸಿಯಾಯಿತ್ತು
ನಾಡಿದ್ದು ದಾಟುವೆವು ಅದನು

ಎಂಬ ಯೋಜನೆಯನ್ನು ಹಾಕಿದ್ದೇವೆ. ರಾಮ, ಕೃಷ್ಣ, ಋಷಿ ಮುನಿಗಳು ಇವರ ವರ್ಚಸ್ಸು ಜನದ ಬಾಳನ್ನು ನಡೆಯಿಸುತ್ತಿರುವಾಗ ಇವರಿಗೆ ಇಹವನ್ನೆತ್ತಿ ಪರಕ್ಕೆ ನಾಟಿಸಲ್ಲಿಸಿ ಮೆರೆಯಬೇಕೆಂಬಾಸೆಯಿದ್ದರೆ ಆಶ್ಚರ್ಯವೇನು ಬಂತು? ಇದಕ್ಕೆ ಸಾಹಸವಿರಬೇಕು. ಅಲಸನಿಗೆ ಯಾವ ಫಲವೂ ದೊರೆಯದು. ಸಾಹಸಿಯ ಕೈಯಲ್ಲಿ ಶುಭವಿದೆ, ಮಂಗಳವಿದೆ, ಭಾರತದ ಸಮೃದ್ಧಿಯು ಎಂದೆಂದೂ ನಿಲ್ಲುವಂತಾಗಬೇಕು

ಇಹವಸಮೆದು ಪರವಾಗಿಪ
ಭಾಗ್ಯವೆಮಗೆ; ನಿಮಗೆ

ಎಮಗೆ ಎಂಬಲ್ಲಿ ನಮ್ಮ ಕಾಲವು ಹೇಗೋ ಮುಗಿಯಿತು, ಇನ್ನು ಎಳೆಯರ ಕಾಲ. ಅವರು ಸಾಹಸಿಗಳಾಗಬೇಕು ಎಂಬ ಬೇಡಿಕೆಯ ಭಾವವಿದೆ. ಈ ಕವನ ಅರ್ಥೈಸುವ ಭಾವವು ಮುಂದಿನದಕ್ಕೂ ಚಾಚುತ್ತದೆ ಅದೇ 'ಮೀಸಲು'.

ಭಾರತೀಯನಾದವನ ಜೀವ, ಕೈಕಾಲು, ಅಂತಃಕರಣ ಎಲ್ಲವೂ ನಾಡಿಗೆ, ನಾಡಿನ ಜನರ ಬದುಕಿಗೆ, ಅವರ ಏಳ್ಗೆಗೆ ಮೀಸಲಾಗಿರಲಿ ಎಂಬ ರಾಷ್ಟ್ರೀಯತಾಭಾವವನ್ನು ಒಂದು ಹಂತದಲ್ಲಿ ಬೆಳಸುತ್ತದೆ. ನಮ್ಮನ್ನು ಹಡೆದ ಧಾತ್ರಿ ಸರ್ವಂಸಹೆ, ನಾವು ಎಂಹತ ದುರ್ಗುಣವನ್ನೇ ಮೆರೆದರೂ ಅದು ನಮ್ಮನ್ನು ಏಕರೀತಿಯಾಗಿ ಭೇದಭಾವವಿಲ್ಲದೆ ರಕ್ಷಿಸಿದೆ ಎಂಬ ಕೃತಜ್ಞತೆಯಿರಬೇಕು. ಎಂತಹ ಲುಚ್ಚನಿಗೇ ಆಗಲಿ ಎಷ್ಟು

ಅಮೃತರಸವನ್ನೊದಗಿಸಿದೆ ಈ ನೆಲ! ಅದಕ್ಕಾಗಿ ನಾವು ಏನು ಮಾಡಿದ್ದೇವೆ ಎಂಬ ಆರ್ತಭಾವವು ಈ ಕವನದ ಒಡಲು ತುಂಬಿ ನಿಲ್ಲುತ್ತದೆ.

ವಿಷಗಳನೇನಾವ್ ಕಡೆದೆವು; ಅಮೃತವನೇ ಇತ್ತೆ ನೀನು,
ಎಂತು ತೀರಿಸಬಹುದು ನೀ ಹೊರಿಸಿಹ ಋಣವನು ?
ಬಾನೊಡನೆ ಸೆಣಸುತ್ತಿಹ ಬಯಲನಾಡ ಭೋಗ ಪರಮ
ಮಲೆನಾಡಿನ ಕೋಡು, ಕಾಡು, ನೀರ್ಬೀಳಿನ ಭೋರ್ಗರೆ
ಎಂದೆಂದೂ ನಿನ್ನ ದಾನ
—ಎಂತಾದರು ಮಾಸಲು.
ನೀನಿತ್ತುದ ನಿಸಗೀಯಲು ಯಾವುದಿದೆ ತಡೆಯು ?

ಎಂಬ ಕೃತಜ್ಞತೆಯಿಂದ ನಮ್ಮ ಮನಸ್ಸು ತುಂಬಿರಬೇಕು. ತಾಯ್ನೆಲದ ಋಣವನ್ನು ತೀರಿಸಲಿಕ್ಕಾಗಿಯಾದರೂ ನಾವು ಒಮ್ಮತದಿಂದ ಬಾಳಬೇಕು.

'ಬುದ್ಧಿ ಬಂದಿತ್ತು ಕಡೆಗೆ' ಎಂಬ ಕವನದ ಒಡಲಿನಲ್ಲಿ ವಿಡಂಬನೆ ತುಂಬಿ ಅಲ್ಲೇ ಅರಳಿಕೊಳ್ಳುತ್ತದೆ. ಅದು ಹಾಗೆ ಅರಳಿಕೊಳ್ಳುವುದರಲ್ಲೇ ಕವನದ ಸಾರ್ಥಕತೆ.

ಮನೆ ಮಠ, ಆಸ್ತಿ ಪಾಸ್ತಿ
ಆಸೆ ಆಸರೆ, ಎಲ್ಲವೂ ಮುಗಿದ ಮೇಲೆ
ಹುರುಳಳಿದು ಹೋದ ಮೇಲೆ
ಬಂದಿತ್ತು ಬುದ್ಧಿ;

ಇಲ್ಲಿ ಹುರುಳು ಎಂಬುದಕ್ಕೆ ಸತ್ತ್ವ, ವಿತ್ತ ಎರಡೂ ಅರ್ಥ, ಅದನ್ನು ಮುಂದಿನ ಸಾಲಿನಲ್ಲಿ ಕಾಣಬಹುದು.

ನೂರುಸಾವಿರ ಕರಗಿ ಹರಿದ ಮೇಲೆ
ಮಡದಿ ಮಡಿದಳು, ಇಂದಿದ್ದಿದ್ದರವಳು—
ಆ ಮಾತು ಈಗೇಕೆ ? ಅದರ ಪರಿ ಬೇರೆ ಇತ್ತು.

ಹೆಂಡತಿ ಸಹಧರ್ಮಚಾರಿಣಿ, ಸುಖದಲ್ಲೆಂತೋ ದುಃಖದಲ್ಲೂ ಪಾಲ್ಗೊಳ್ಳಬೇಕಾದವಳು. ಕೈಯಲ್ಲಿ ರೊಕ್ಕವಿರುವಾಗ ಇದ್ದಳು ಆಕೆ ನನ್ನ ಮಡದಿಯಾಗಿ, ಈಗ ಆಕೆ ಇಲ್ಲ, ಇದ್ದಿದ್ದರೆ ಬಹುಶಃ ಆಕೆಗೂ ಬೇಡಾದವನಾಗಿರುತ್ತಿದ್ದೆನೋ ಎಂಬ ಕಳಕಳಿ. ಅದರ ಪರಿ ಬೇರೆಯಿತ್ತು, ಎಂಬುದರಿಂದ ವ್ಯಕ್ತವಾಗುತ್ತದೆ.

"ಮುತ್ತಿದ್ದ ವಿರುವೆಗಳು ಬೆಲ್ಲಕ್ಕೆ, ಆಯ್ತು ಆ ಕಾಲ." ಇದ್ದಾಗ ಹೆಂಡತಿ ಮಕ್ಕಳು ಎಲ್ಲರೂ ತನ್ನವರೇ ಆಗಿದ್ದರು. ಇಲ್ಲದಾಗ ಅವರವರ ಪಾಡು ಅವರವರಿಗೆ. ಹಾಗಾಗಿ ಯಾರಿಗೆ ಯಾರೂ ಇಲ್ಲ. ಎಲ್ಲವೂ ಇರುವಾಗ ಇವೆಲ್ಲಾ ತನ್ನದೆಂಬ ಮಮಕಾರದಿಂದ ಹಿರಿ ಹಿಗ್ಗಿದ ಚೇತನಕ್ಕೆ ಈ ಯಾವುದೂ ತನ್ನದಲ್ಲವೆಂಬ ಬುದ್ಧಿ ಬಂದಿತ್ತು. ಆಗ ಕಾಲ ಮಿಂಚಿತ್ತು. ಈ ಕವನದ ಭಾವವು ಹೊಸದಲ್ಲವಾದರೂ ಮಾತಿನ ಹದ ಅಭಿವ್ಯಕ್ತಿ ನೇರವಾದ ತೀವ್ರತೆ ಇವುಗಳಿಂದ ಬದುಕು ಅಶಾಶ್ವತವೆಂಬ

ಭಾವಕ್ಕೆ ಹೊಸ ಮೊನಚುವುಂಟಾಗಿ ಕವನದ ವಸ್ತು ಹೆಪ್ಪುಗೊಂಡು ಮನಸ್ಸಿನಲ್ಲಿ ನಿಲ್ಲುತ್ತದೆ. ಇದು ಸುದೀರ್ಘವಾದ ಕವನ. ಇದರ ಒಂದೊಂದು ಹಂತದಲ್ಲೂ ಬದುಕು, ಚೆಲುವೆನ್ನಿಸಿದ ವಾತಾವರಣ, ತನ್ನ ಅಹಂಕಾರವು ಅರಳಿಕೊಳ್ಳಲು ಒತ್ತಾಸೆಯಿತ್ತ ಬಂಧುಗಳು, ಕೊಡುವ ಸಾಮರ್ಥ್ಯವಿದ್ದಾಗ ತೆಗೆದುಕೊಳ್ಳುವ ಹೊಗಳುಭಟ್ಟರು ಮುಂತಾದವರ ಬೆಲೆಯನ್ನು ನಿರ್ಣಯಿಸುವ ತಂತ್ರವು ಕಾಣುತ್ತದೆ.

ಕೊಟ್ಟ, ಕೊಡುತಿದ್ದ ಸೊಳ್ ಮುರಿದು
ಬಂದಿಹುದು ಕೇಳ್ವ ಸರದಿ.
ಆಗಲೇಳು
ಯಾರಿಗಾರಿತ್ತರೂ ಸರಿಯೆ, ಕೊಡುವುದೊಳಿತು
ಕೊಳ್ಳೆನೆನ್ನುವ ಹಮ್ಮೇಕೆ ಇಂದು ?

ಈ ಸಾಲುಗಳಲ್ಲಿ ವಿಸರ್ಗದಲ್ಲಿರುವ ಆನಂದ ಆ ದಾನದಲ್ಲಿಲ್ಲ ಎಂಬ ಭಾವದೊಡನೆ ತನ್ನ ಅನಾಥ ಪ್ರಜ್ಞೆಯಿಂದುಂಟಾದ ನಿರಹಂಕಾರಭಾವವು ಹೆಪ್ಪುಗಟ್ಟಿದೆ. ಸುಖ ದುಃಖ, ಹಗಲು–ರಾತ್ರಿ, ಬೆಳ್ದಿಂಗಳು–ಕದ್ದಿಂಗಳು ಇವೆಲ್ಲಾ ನಿಜವೆನಿಸಿದ ದ್ವಂದ್ವ ಗಳು. ಇವುಗಳಿಂದ ಬಿಡುಗಡೆಯೇ ನಮಗಿರುವ ಪರಮಾರ್ಥ.

ಯಾವುದೂ ತಪ್ಪಲ್ಲ, ಎಲ್ಲವೂ ಸರಿಯೆ
ಬಾಳ್ವ ಬಾಳೆಮತು ಸರಿಯಾಗಿ ಬಾಳ್ವವರೆಗೂ

ಎಂಬುದು ಕೊನೆಗೂ ಉಳಿಯುವ ಮಾತು. ಇದನ್ನೆ ಒಂದು ಮಗುವಿಗೆ ಉಪದೇಶ ಕೊಡುವುದರಲ್ಲಿ ಕವಿತೆ ಮುಗಿಯುತ್ತದೆ.

'ಬಾಳುಗರಗಸ' ಎಂಬ ಕವಿತೆ ಮನೆಯಲ್ಲಿ ಮಡದಿ ತಿಂಗಳ ರಜೆ ಪಡೆದಾಗ ಗಂಡಸೆಂಬವನಿಗುಂಟಾಗುವ ಕಿರಿಕಿರಿಗೂ ಆಫೀಸಿನಲ್ಲಿ ಉಂಟಾಗುವ ಕಿರಿಕಿರಿಗೂ ಹೋಲಿಕೆಯನ್ನಿತ್ತು ಪರಿಶೀಲಿಸುತ್ತದೆ. ಆಫೀಸಿನಲ್ಲಿ ಕೆಲಸ ಮಾಡುವುದಕ್ಕಿಂತ ತಲೆ ಬಿಸಿಯಾಗುವ ಪ್ರಸಂಗವೇ ಹೆಚ್ಚು. ತಿಂಗಳಲ್ಲಿ ಮೂರು ದಿನ ಒಲೆಯ ಮುಂದೆ ಕೈ ಬಿಸಿ ಮಾಡಿಕೊಳ್ಳುವಾಗ ರಜೆ ಯಾರು ಕೊಡುತ್ತಾರೆ ? ಮನೆಯಲ್ಲಿ ಮಕ್ಕಳ ರಗಳೆ, ಆಫೀಸಿನಲ್ಲಿ ಅಧಿಕಾರಿಗಳ ಅಬ್ಬರ, ಎಲ್ಲೆಲ್ಲೂ ಕಿರಿಕಿರಿ. ಅಂಥ ಪ್ರಸಂಗದಲ್ಲಿ ಗಂಡು ಎದೆಯುವನಿಗೂ ಅನಿಸುವುದು :

ಹುಟ್ಟಬಾರದಯ್ಯ ಹೀಗೆ; ಕಡುಪಾತಕಂ ಗೈದು
ಗಂಡಾಗಿ ಹುಟ್ಟಿದೆನ್ನೊಳಪರಾಧಮುಂಟು
ಇಂಥ ಮನೆಯಲ್ಲಿ
ಇಲ್ಲೊ—
ಬಚ್ಚಲನ್ನೆಲ್ಲ ಹೆಗ್ಗಣ ಅಗೆದು ರಂಪ ಮಾಡಿದೆ
ಎಲ್ಲೂ ಅವೇ; ಆಫೀಸಿನಲ್ಲೂ ಹೆಗ್ಗಣ
ಆಫೀಸರೂ ಅದೇ.

ಓಗೆ ಅಂತಹ ಗಂಡಸಿಗೆ ಬಾಳೊಂದು ಗೋಳು, ಇನ್ನೊಂದು ಹಂತದಲ್ಲಿ ಬಾಳು ಸಿಲುಬೆಯಂತೆ ಕಾಣುವುದು, ಕೊನೆಗೆ ಬಾಳೊಂದು ಗರಗಸವೆನಿಸುತ್ತದೆ. ಹೋಗುತ್ತ ಕುಯ್ಯುವುದು, ಬರುತ್ತ ಕುಯ್ಯುವುದು. ಈ ಕವನದಲ್ಲಿ ಬಾಳಿನ ಪ್ರತಿಮೆಗಳಲ್ಲಿ ಹೊಸ ಮೆರುಗನ್ನು ಕಾಣಬಹುದು.

'ಸಂನ್ಯಾಸಿ' ಕವನವು ವಿವೇಕಾನಂದರ ಮನಸ್ಸಿಗುಂಟಾದ ತುಮುಲವನ್ನು ಚಿತ್ರಿಸುತ್ತದೆ. ಸಂನ್ಯಾಸಿಗೆ ತನ್ನ ಮುಕ್ತಿಯೊಂದೇ ಗುರಿಯಲ್ಲ. ಲೋಕವೇ ತಬ್ಬಲಿ ಯಾಗಿರುವಾಗ ಸಂನ್ಯಾಸಿಗೆ ಶಾಂತಿಯೆಲ್ಲಿಯದು? ಸ್ವಾಮಿ ವಿವೇಕಾನಂದರು ವಿರಾಗಿಯಾದರೂ ವೀತರಾಗರಲ್ಲ. ಅಣುರೇಣುತೃಣಕಾಷ್ಠಗಳಲ್ಲಿ ಬ್ರಹ್ಮನ ಅಂಶ ವನ್ನು ಕಂಡಿರುವ ದ್ರಷ್ಟಾರರು. 'ತೇನ ವಿನಾ ತೃಣಮಪಿ ನ ಚಲತಿ' ಎಂಬುದನ್ನು ಅರಿತು ನಡೆದುಕೊಂಡರು. ಊರೂರು, ನಾಡು ನಾಡು ಧಾವಿಸಿ, ಬೋಧಿಸಿ, ಒಲಿಸಿ ಗೆದ್ದು ಭಾರತಕ್ಕೆ, ಜನತೆಗೆ ಹೊಸ ಬೆಳಕನ್ನು ನೀಡಿದರು. ಎಲ್ಲ ಸಂನ್ಯಾಸಿಗಳೂ ಇಂಥವರೇ ಆದರೆ!

ಬ್ರಹ್ಮ, ನಾಡು, ಜನಕಾರ್ಯ, ನೀನು ಬೇರೆ ಬೇರೆಂತು
ನೀ ದುಡಿಯಲಿರುವಂದು ಯಾರಿಗೇಕಯ್ಯ ನಿರ್ಬಲತೆ?
ಏತರದು ಭೀತಿ? ಎಲ್ಲಿಯದು ಭಂಗ?
ನಿನ್ನಂಥ ಬಾಳ ಮೀಸಲಾಗಿರಲದಕೆ
ನಾಡಬಾಳ್ ಚಿನ್ನವಾದೀತು.

ಸಂನ್ಯಾಸಿಗಿರುವ ವಿಶಾಲವಾದ ಹೊಣೆಯನ್ನು ಈ ಕವನ ಚಿತ್ರಿಸಿರುವುದು. 'ವಿಮರ್ಶ ಕರು' ಕವನ 'ತೆಗಳುವುದೇ ವಿಮರ್ಶೆಯ ಕೆಲಸ'ವೆಂದುಕೊಂಡ ಕೆಲವು ವಿಮರ್ಶಕ ರನ್ನು ವಿಡಂಬಿಸುತ್ತದೆ. ಬಾಳು, ಕ್ಷಾಮ, ಅನ್ನದಾನ, ಕಾವ್ಯದೇವಿಗೆ ಎಂಬ ನಾಲ್ಕು ಚುಟುಕಗಳು ಸಣ್ಣ ಕಸ್ತೂರಿ ಮಾತ್ರೆಗಳಂತೆ ಮನಸ್ಸನ್ನು ಅರಳಿಸುತ್ತವೆ. "ಗಾಂಧಿ" ಮತ್ತು 'ಗಾಂಧಿ ೧೦೦ ರ ಹಬ್ಬ' ಈ ಎರಡು ಪೂಜ್ಯ ಬಾಪೂಜಿಯವರ ಬಗೆಗೆ ಬರೆದ ಕವನಗಳು. ಭಾರತದ ಸ್ವಾತಂತ್ರ್ಯ ಅವರ ಕೊಡುಗೆ, ಆದರೆ ಅದರಿಂದ ಅವರಿಗಾದುದೇನು, ಅವರನ್ನು ನಮ್ಮವರೇ ಕೊಂದರು, ತಥಾಪಿ ಬಾಪೂಜಿ 'ಸಬ್ ಕೋ ಸನ್ಮತಿ ದೇ ಭಗವಾನ್' ಎಂದರು. ಬಂತೇ ಮತಿ?

ರಾಜ್ಯವಾಯಿತು ನಮ್ಮದಾಗಿ
ನಮ್ಮವರದೇ ಹಬ್ಬಿತ್ತು ನಮ್ಮ ನಾಡಿನಲಿ ಆಳ್ಕೆ,

* * *

ನಾಡಿದಕೆ ಬೇಸತ್ತಿದೆ, ಮರಳಿ ಕಂಗೆಟ್ಟಿದೆ
ಓ ತಂದೆ ಗಾಂಧಿ
ಜನಕೆ ಶುಚಿ ತರುವುಪಾಯವನಿನ್ನೊಮ್ಮೆ ಕಲಿಸು

ಋಜುತೆಗದು ನಡೆವಂತೆ ಹೃದಯವನ್ನನುಗೊಳಿಸು.
ನಾಡು ಬದುಕಿದ ರಾವು ಬದುಕಿದೆವು
ಅದರಾಗು ಹೋಗು ನಮಗಾಗುಹೋಗು.

ಎಂದು ಗಾಂಧಿಯುವರ ಬಗೆಗೆ ನೆನಪು ಸುರುಳಿಬಿಚ್ಚುತ್ತದೆ. ಗಾಂಧಿಯುವರ ೧೦೦ ನೆಯ ಜನ್ಮ ದಿನದಲ್ಲೂ ಅವರ ಆದರ್ಶ ಈಡೇರದಿರುವುದರ ಕಳಿಕಳಿಯಿದೆ.

ಈ ನಿಮ್ಮ ನೂರನೆಯ ಹುಟ್ಟು ವರ್ಷದಲ್ಲಿ
ನಿಮ್ಮ ಉಳಿದಿಹ ನೆನಪೆ, ನಿಮ್ಮ ನಡೆಗುರುತೆ ?
ಹರ್ಷವೇ ಹಿತವೆ ಇಂದಿನದು ಸುಖಕೆ
ನಾಳೆಗಾದರ್ಶವೆ ?
ಕೊಳೆ, ಕೊಲೆ, ಕರ್ಕಶತೆ ಪ್ರಾಕೃತರಸಭ್ಯವೃತ್ತಿ,
ಮಾನವನ ಮಾನವತೆ ರೂಪಿಸಿದ ದುರ್ಮಾರ್ಗತನವೇ.
ಎಂದು ತಿಳಿದೀತು ಜನವು !
ಹೇಗೆ ಬದುಕೀತು ಮರಳಿ
ಕುಳವೊಂದಾಗಿ ಲೋಕದಲಿ
ನಮ್ಮ ಜನವು !

'ನನ್ನ ಮನಸು' ಕಾವ್ಯದ ವಸ್ತು, ರೀತಿ ಮುಂತಾದುವುಗಳ ಬಗೆಗೆ ಕವಿಯ ಮನಸ್ಸು ಹೇಗೆ ಪ್ರತಿವರ್ತಿಸುವುದೆಂಬುದನ್ನು ತಿಳಿಸುತ್ತದೆ. ವಿ.ಸೀ.ಯವರು ಮುನ್ನುಡಿಯಲ್ಲಿ ಬರೆದ ಅಭಿಪ್ರಾಯವನ್ನು ಇಲ್ಲಿ ಕವನವಾಗಿಸಿರುವರು. ಕಾವ್ಯದ ವಸ್ತು ಹೇಗಿರ ಬೇಕು ಎಂಬುದಕ್ಕೆ ನನ್ನ ಮನಸ್ಸು ಹೇಳುವುದೊಂದು, ಮತ್ತೊಬ್ಬರದು ಇನ್ನೊಂದು. ತನ್ನ ತಿಳಿವು ಎಲ್ಲೆಲ್ಲೊ ಹರಿದು, ಎಂತಹ ಕಲ್ಪನೆಗಳಲ್ಲೊ ಸುಳಿದು, ಬಣ್ಣನೆಗೆ ಮೆರುಗು ಕೊಟ್ಟರೆ ಅದು ಇತರರಿಗೆ ಏಕೆ ಕಿನಿಸು ತರಬೇಕು? ಅದು ನನ್ನ ಮನಸ್ಸು. ಬದುಕಿನಲ್ಲಿ ಕೊಳೆಯಿಲ್ಲವೆಂದಲ್ಲ. ಅದು ಕಾವ್ಯಕ್ಕೆ ವಸ್ತುವಾಗಬಾರ ದೆಂದೂ ಅಲ್ಲ. ಹಾಗೇ ನೋಡಿದರೆ ಕಾವ್ಯಕ್ಕೆ ವಿಷಯವಾಗದ ಯಾವ ವಸ್ತುವೂ ಇಲ್ಲ. ಬೀಭತ್ಸವೂ ರಸವೇ ಅಲ್ಲವೆ ? ಆದರೆ ಅದರಿಂದಲೇ ಎಲ್ಲವನ್ನೂ ತುಂಬ ಬಹುದೆ ? ಮಾತು ಹಳೆಯದಾದರೆ ಹಳಸಿದುದೆನ್ನುತ್ತಾರೆ, ಹೊಸದೂ ಅಂತ ಹುದೇ ಅಲ್ಲವೆ ? ನಮ್ಮದಲ್ಲ, ಬೇರೊಬ್ಬರದು, ಆಂಗ್ಲನದು, ಅಮೇರಿಕನದು, ಫ್ರೆಂಚನದು,–ನುಡಿ, ನೀತಿ, ಶಯ್ಯೆ, ಅಷ್ಟೆ ಅಲ್ಲವೆ?

ಇದೋ ಈ ಹೊಸತ ನೋಡಿ
ನವೋ ನವೋ ಭವತಿ ಜಾಯಮಾನಃ !
ಹೌದು ಜಾಯಮಾನ
ಕಿಡು ನಡೆ.

ನವ್ಯ ಕಾವ್ಯದಲ್ಲಿರುವ ಬಿಚ್ಚು ಶೃಂಗಾರ ಹಳೆಯ ಕಾವ್ಯದ ವೇಶ್ಯಾವಾಟಿಕೆಗೆ ಹೊಸದೆನಿಸಬಹುದೆ ?

ನಿಮ್ಮ ರುಚಿ ನಿಮಗೆ ಯಾರಡ್ಡಿ ಅದಕೆ
ನನಗೆ ನನ್ನ ಮನಸು.

ಕಲ್ಪನೆಗೆ ನಮಸ್ಕಾರ ಹಾಕಿ ವಾಸ್ತವಿಕತೆಯ ಗಟ್ಟಿ ನೆಲದ ಮೇಲೆ ನಿಲ್ಲೋಣ. ಬತ್ತಲೆ ಮೈ ಚಂದ, ಅಲ್ಲವೆ ?

ಆ ಮೆಯ್ಯೆ ನಿಜವಾದ ಪುರುಳು, ಅದು ಚೆಲ್ವು
ಆ ಅಂದ
ಆ ಸೌಭಾಗ್ಯವೆಲ್ಲಿ ?

ಲಂಪಟ ತೆಯೀ ಬಾಯ ಚಪ್ಪರಿನ ಬತ್ತಲೆಗಳೆಲ್ಲ !

ಬತ್ತಲೂ ಎಲ್ಲರದು ಚೆಲುವಲ್ಲ
ಎಲ್ಲೊ ಲಕ್ಷಕೆ ಒಂದು, ಗಂಡು ಹೆಣ್ಣು
ನಡೆವಾಗ ಕೆಲಕಾಲ ಚೆಲು; ಚೆನ್ನ.
ಸಮಂ ಸಮವಿಭಕ್ತಾಂಗಂ ಎಂಬ ದೇವಾಂಗ ರಾಮ ಸೀತೆಯ
ರಂಘುದು. ಖುಷಿ ನುಡಿ; ನನಗೇನು ಗೊತ್ತು ;
ಉಳಿದದ್ದೆಲ್ಲ ರಾಮ ರಾಮ, ಕುರೂಪ !
ಬಟ್ಟೆ ಬರಿ
ಉಳಿದೆಲ್ಲರಿಗೂ ಒಳಿತು
ಚೆಲುವರಿಗು ಮಿಗಿಲು ಸೊಗಸು
—ಇದು ನನ್ನ ಮನಸು.

ಎಂದು ಕವನ ಮುಗಿಯುತ್ತದೆ. ಇದರಲ್ಲಿ ವಿ. ಸೀ. ಯವರಿಗೆ ಕಾವ್ಯದ ಬಗೆಗಿರುವ ಶುಚಿ–ರುಚಿಗಳನ್ನು ಗುರುತಿಸಬಹುದು.

'ಪುರಂದರ ದಾಸರು' ಒಂದು ಉತ್ತಮವಾದ ಕವಿತೆ, ನಿಜವಾದ ಕವಿಯು ಮಾತ್ರ ಇಂತಹ ಕವಿತೆ ಬರೆಯಬಲ್ಲ, ಈ ಕವನದ ಸಾಲುಗಳಿಗೆ ಗದ್ಯಸತ್ತ್ವ ಬಂದಿದೆ. ಭಾಷೆಯಲ್ಲೂ ಒಂದು ಹೊಸ ತಿರಿಚು ಉಂಟಾಗಿದೆ.

ನೆಲದಾಳದಲ್ಲಿ ಘನಿಸಿರುವ ಲೋಹವೂ ನರರು ಹೊತ್ತಿಸುವ ಉರಿ ಬೇಗೆಯಲ್ಲಿ ಕರಗಿ ನೀರಾಗಿ ಕಲೆ, ಶಿಲ್ಪವಾಗಿ, ಶಸ್ತ್ರಶಾಸ್ತ್ರವಾಗಿ, ಕ್ಷಿಪಣಿಯಾಗಿ ಮನುಷ್ಯನ ಮನಸ್ಸಿನಂತೆ ರೂಪು ತಾಳಬಹುದು. ನರರ ಕಲ್ಲೆದೆ ಮಾತ್ರ ಯಾವ ತಂತ್ರಕ್ಕೂ ಮಂತ್ರಕ್ಕೂ ಕರಗದೆ ಇದ್ದೀತು. ಅದಕ್ಕೆ ಕಾಲಲಬ್ಧಿ ಕೂಡಿಬರುವವರೆಗೂ ಮನುಷ್ಯನ ಜಡತೆ ಹರಿಯದು. ಕಾಲಲಬ್ಧಿಯೂ ನಾವು ಬಯಸಿದಾಗ ಬರುವುದಲ್ಲ, ಅದು ಬರುವ ಕಾಲಕ್ಕೇ ಬರುವುದು. ಹಾಗೆ ಬಂದ ಕಾಲಲಬ್ಧಿಯಿಂದಾಗಿ ಪುರಂದರ ದಾಸರು ವೈರಾಗ್ಯಹೊಂದಿ ಎಲ್ಲವನ್ನೂ ದಾನಮಾಡಿ ದಾಸರಾದರು. ಅಂತಹವೇ

ಸನ್ನಿವೇಶ ನಮಗೆ ಉಂಟಾದರೆ ನಾವು ದಾಸರಾದೇವೋ ? ಖಂಡಿತ ಇಲ್ಲ. ಪುರಂದರ ದಾಸರ ಮೊದಲಿನ ಬದುಕನ್ನು ಈ ಸಾಲುಗಳು ಚಿತ್ರಿಸುತ್ತವೆ.

ಎಷ್ಟು ಜನ್ಮದ ಪಾಪವೊ ಇನ್ನಾವ ತಾಪವೊ ಹೆಪ್ಪುಗಟ್ಟಿ
ನಿರ್ಮೊಡಲು ಮನಗಳನು ನಿಮ್ಮ ನುಡಿ ವ್ಯವಹಾರವನು.
ಗಡಸುಗೊಳಿಸಿತ್ತು, ನಾಣ್ಯಕ್ಕೆ ನಾಣ್ಯ ಮರಿಯಿಡಿಸಿ
ಸುತ್ತಲೆಲ್ಲರನು ಗಾಸಿಗೊಳಿಸಿ.
ನಾಡಿಗೇ ಹೆಸರಾಯ್ತು ಲೋಭಿತನಕೆ
—ತಂದಿತ್ತು ಕಣ್ಣೀರು ಕೆನ್ನೆಗಳಿಗೆ.

ಕಾಸಿಗೆ ಕಾಸು ಕೂಡಿಸಿ ನವಕೋಟಿ ನಾರಾಯಣನೆನಿಸಿದ ಪುರಂದರ ದಾಸರು, ಒಬ್ಬ ಬ್ರಾಹ್ಮಣನ ದಾನದ ಒಳಸಂಚಿನಿಂದ ಅವರ ನಿರ್ಘೃಣತೆ ಕರಗಿಹೋಗಿ ಎಲ್ಲವನ್ನೂ ತೊರೆದು ವೈರಾಗಿಗಳಾದರು.

ವೃತ್ತಿ ಮನೆ ಮಠ, ಕುಲ ಐಸಿರಿ
ಧನದ ಹಂಬಲ, ಪೇಟೆಯ ಪ್ರತಿಷ್ಠೆ
ನಿಮ್ಮದೇ ಕೆಟ್ಟ ಹಟ
ಮಾಯವಾದವು ಒಡನೆ,
ಉಳ್ಳವನಿಗೇನಿಲ್ಲ
ಇಲ್ಲದವಗೆಲ್ಲವಿದೆ.

ಎಂಬ ನಿಲುವು ಅವರದಾಯಿತು. ಮುಂದೆ ವಿಠ್ಠಲ ನಡೆಸಿದುದೇ ದಾರಿ. ಅವರು ನಾಡಿಗೆ ನೀಡಿದ ಐಶ್ವರ್ಯ ಧನವೆಲ್ಲವೂ ಎಲ್ಲಿ ಹೋಯಿತೋ. ಆದರೆ ಅವರ ಗಾನದ ಐಶ್ವರ್ಯ ಮಾತ್ರ ಇಂದಿಗೂ ಕರ್ನಾಟಕದ ಕಣ್ಣು ತೆರೆಯಿಸಬಲ್ಲುದು ಎನ್ನಲೆ!

ಧರ್ಮಕ್ಕೆ ದಿವ್ಯಕ್ಕೆ ಕುರುಡಿದ್ದ ನಮ್ಮ ಕಣ್ಣುಗಳ
ನೆಂತು ತೆರೆಯುವಿರೊ ಇಂದು.
ನಿಮ್ಮ ನಡೆನುಡಿ ಕಾಣ್ಕೆ ಬೇಡುತಿರುವಂದು
ನಿಮ್ಮ ಬಾಳುದ್ಧಾರವಾದುದನು ಕಂಡು
ತೀರುವುದು ನಮ್ಮದೂ ಕಾಲ
ಇದಕೆ ಸಂಶಯವಿಲ್ಲ
ಎಂದು ಭರವಸೆಯಿಡಿ; ನಾವು ಬದುಕಿದೆವು.

ಇದೇ ರೀತಿ 'ಹೊಸತ ನೋಡು', 'ಓಲೆ', 'ಅದು, ಇದು ಹೊಸವರ್ಷ', 'ಮುಪ್ಪು ಮುಪ್ಪೆ' ಮುಂತಾದ ಒಳ್ಳೆಯ ಕವನಗಳೂ ಈ ಸಂಕಲನದಲ್ಲಿ ಬಂದಿವೆ. ಮೊದಲೇ ಹೇಳಿದಂತೆ ಮೊದಲಿನ ಕವನಗಳು ಬದುಕಿನ ಆಶೋತ್ತರಗಳನ್ನು, ಮತ್ತಿನವು ಬದುಕಿಗಿರುವ ಮಿತಿಯನ್ನೂ ಪ್ರತಿಬಿಂಬಿಸುತ್ತವೆ.

ಎಂ. ರಾಜಗೋಪಾಲಾಚಾರ್ಯ



# ಶುಚಿ ಜೀವನ ದರ್ಶನ

ಬಾಳನು ಶೋಧಿಸಿ ಶುಚಿಯನು ಬೆಳೆದರೆ
ಇಹವೇ ಅರಳದೆ ಪರವಾಗಿ?

'ಗೀತಗಳು', 'ದೀಪಗಳು', 'ನೆಳಲು–ಬೆಳಕು', 'ದ್ರಾಕ್ಷಿ–ದಾಳಿಂಬೆ' ಈ ಕವನ ಸಂಕಲನಗಳನ್ನು ಓದಿದಾಗ ಇದರ ಕರ್ತೃಗಳಾದ ವಿ. ಸೀ. ಅವರ ಮನೋಧರ್ಮದ ಸಮಗ್ರವಾದ ಒಂದು ಪರಿಚಯ ನಮಗೆ ಆಗುತ್ತದೆ. ಆ ಪರಿಚಯ ನಮಗೆ ನಿಜಕ್ಕೂ ಲಾಭದಾಯಕವಾಗುತ್ತದೆ. ಒಟ್ಟಿನಲ್ಲಿ ನನ್ನ ಅನುಭವಕ್ಕೆ ಬಂದ ಸಂಗತಿಯನ್ನು ಹೇಳುವುದಾದರೆ ಈ ಎಲ್ಲ ಕವನಸಂಕಲನಗಳ ಕವಿತೆಗಳನ್ನೂ ನುಡಿದ ಕವಿ ಮನೋಧರ್ಮ, ಸೋತ ಜೀವಕ್ಕೆ ಒಂದು ಧೈರ್ಯವನ್ನೂ ನೊಂದ ಜೀವಕ್ಕೆ ಒಂದು ಭರವಸೆಯನ್ನೂ ಕೊಡಬಲ್ಲ ಸತ್ವವುಳ್ಳದ್ದು ಎನಿಸುತ್ತದೆ. ಜೀವನದ ನಾನಾ ವಿಧವಾದ ನೋವು–ನಲಿವುಗಳಲ್ಲಿಯೂ, ಕಷ್ಟಸುಖಗಳಲ್ಲಿಯೂ, ಬೇಸರಿಕೆಗಳಲ್ಲಿಯೂ, ಕಸಮುಸುರೆಗಳಲ್ಲಿಯೂ ಸಿಲುಕಿ ಸೊರಗಿದ ಜೀವಕ್ಕೆ ದಾರಿದೀಪವಾಗಿ ಈ ಕವಿಹೃದಯ ಒಂದು ಆಸೆಯ ಜ್ಯೋತಿಯನ್ನು ಕೊಡುತ್ತದೆ. ಆದ್ದರಿಂದಲೇ ವಿ. ಸೀ. ಅವರ ಕೃತಿಗಳಲ್ಲಿ ಶುಚಿ ಜೀವನ ದರ್ಶನ ಎಂದು ಅವರ ಕವಿಮನೋಧರ್ಮವನ್ನು ಗುರುತಿಸಿ ಇಲ್ಲಿ ನಾನು ಆ ದರ್ಶನದ ಹಲವು ಮುಖಗಳ ಪರಿಚಯ ಮಾಡಿಕೊಡಬೇಕೆಂದು ಆಶಿಸಿದ್ದೇನೆ. ಮುಖ್ಯವಾಗಿ ಪರತತ್ವ ಚಿಂತನ, ಆತ್ಮಸಾಂತ್ವನ, ಪ್ರೇಮಾರಾಧನ, ರಾಷ್ಟ್ರಾಭಿಮಾನ ಎಂಬ ಈ ನಾಲ್ಕು ದೃಷ್ಟಿಯಿಂದ ಶುಚಿ ಜೀವನದರ್ಶನದ ಪರಿಚಯವನ್ನು ಇಲ್ಲಿ ಕೊಡಲು ಪ್ರಯತ್ನಿಸಿದ್ದೇನೆ.

## ೧

ಮೊಟ್ಟಮೊದಲು ವಿ. ಸೀ. ಅವರ ಕವಿತೆಗಳಲ್ಲಿ ಕಾಣಬರುವ ಪರತತ್ವ ಚಿಂತನವನ್ನು ಕುರಿತು ನೋಡುವುದು ಯುಕ್ತ. ಸಾಮಾನ್ಯವಾಗಿ ಎಲ್ಲ ಕವಿಗಳೂ ಒಂದು ಕಡೆ ಪ್ರಕೃತಿಯ ಲಲಿತವೂ ರುದ್ರವೂ ಆದ ಬಗೆಬಗೆಯ ಚಿತ್ತಾಕರ್ಷಕವಾದ

ವೈಚಿತ್ರ್ಯಗಳನ್ನು ಕ್ಷಣಕ್ಷಣವೂ ಕಣ್ದೆರೆದು ನೋಡುತ್ತಿರುತ್ತಾರೆ. ಇನ್ನೊಂದು ಕಡೆ ಸುತ್ತಣ ಸಮಾಜದ, ಜನಜೀವನದ ನಾನಾ ವಿಧವಾದ ಸುಖದುಃಖಗಳ ವ್ಯಾಪಾರಗಳನ್ನು ಅನುಭವಕ್ಕೆ ತಂದುಕೊಳ್ಳುತ್ತಿರುತ್ತಾರೆ. ಮತ್ತೊಂದು ಕಡೆ ತಮಗೆ ಮಾತ್ರ ಅನುಭವಕ್ಕೆ ಬಂದ ಸ್ವಯಂವೇದ್ಯವಾದ ತುಂಬ ವೈಯುಕ್ತಿಕವೂ, ತೀರ ಸ್ವನ್ನಿಹಿತವೂ ಆದ ಅನುಭವ ವಿಶೇಷಗಳನ್ನು ಕುರಿತು ಧೇನಿಸುತ್ತಿರುತ್ತಾರೆ. ಇವುಗಳೆಲ್ಲದರ ಪರಿಣಾಮವಾಗಿ, ಈ ಎಲ್ಲ ವ್ಯಾಪಾರಗಳ ತಳಹದಿಯಾಗಿ ಯಾವುದೋ ಒಂದು ಶಕ್ತಿ ಅಡಗಿದೆ, ಆ ಶಕ್ತಿ ಸರ್ವತಂತ್ರ ಸ್ವತಂತ್ರವಾದದ್ದು, ಅಜೇಯವಾದದ್ದು, ಅಘಟನ ಘಟನಾ ಸಾಮರ್ಥ್ಯವುಳ್ಳದ್ದು, ಸರ್ವವ್ಯಾಪಕವಾದದ್ದು ಎಂಬ ವಿಷಯ ಮನಸ್ಸಿಗೆ ಖಚಿತವಾಗುತ್ತಾ ಬರುತ್ತದೆ. 'ತೇನ ವಿನಾ ತೃಣಮಪಿ ನ ಚಲತಿ' ಎಂಬ ಮಂತ್ರದ ಅರ್ಥ ಅನುಭವವೇದ್ಯವಾಗುತ್ತಾ ಹೋಗುತ್ತದೆ. ಈ ಘಟ್ಟದಲ್ಲಿ ಕವಿಯಾದವನು ಆ ಶಕ್ತಿಯನ್ನು ಹೆಚ್ಚುಹೆಚ್ಚಾಗಿ ಅರಿತುಕೊಳ್ಳಲು ಪ್ರಯತ್ನಿಸುತ್ತಾನೆ. ಅದರ ಮಹಿಮೆಯನ್ನು ಹಾಡುತ್ತಾನೆ. ವೈಭವವನ್ನು ಕೊಂಡಾಡುತ್ತಾನೆ. ಅದರ ಕರುಣೆಯನ್ನು ಬೇಡುತ್ತಾನೆ. ಆ ಪರವಸ್ತುವನ್ನು, ಆ ಪರಾಶಕ್ತಿಯನ್ನು ಇನ್ನಿಲ್ಲದ ಶ್ರದ್ಧಾಭಕ್ತಿಗಳಿಂದ ನೋಡುತ್ತಾನೆ, ಓವುತ್ತಾನೆ. ವಿ. ಸೀ. ಅವರ ಕೃತಿಗಳಲ್ಲಿಯೂ ಇಂತಹ ಪರಾಶಕ್ತಿಗೆ ನಿವೇದಿತವಾದ ಗೀತಕುಸುಮಗಳನ್ನು ನಾವು ಕಾಣುತ್ತೇವೆ. ಆ ಕುಸುಮಗಳ ಸೌರಭ, ಸೌಕುಮಾರ್ಯ, ಸೌಂದರ್ಯ, ಲಾಲಿತ್ಯಾದಿಗಳಿಗೆ ಬೆರಗಾಗುತ್ತೇವೆ. ಇಂತಹ ಗೀತಕುಸುಮಗಳಲ್ಲಿ, ಪ್ರಳಯ ತಾಂಡವ, ಪ್ರಶ್ನೆ, ಆಸೆ, ಜೀವವಾಹಿನಿ, ಮೊರೆ, ಭ್ರಮೆ, ಶಿಖರದಲ್ಲಿ, ಪರತತ್ವ, ನಿನ್ನ ಕೃಪೆ, ಯಾನ, ಕ್ಷೇಮಕಾರಿ, ನಿಲ್ಲಿಸಮ್ಮ, ಪ್ರತಿಧ್ವನಿ, ಋತುಗಳ ಹೇಳಿಕೆ, ನನ್ನ ನಿನ್ನ ಕಾರ್ಯಗಳು, ಪ್ರಾರ್ಥನೆ, ಶಿವರಾತ್ರಿ, ನೈವೇದ್ಯ, ದೇವನ ಬರವು, ಕಸ್ಮೈದೇವಾಯ, ಚಿತ್ರ, ಶಿವನ ಕೋಪ, ಅರ್ಧನಾರೀಶ್ವರ, ಶಿವ, ದೀಪಗಳು, ಶಬರಿ, ಗಂಗಾಪೂಜೆ, ಕನಸು ಮುಂತಾದ ಕವನಗಳು ಮುಖ್ಯವಾದವು. ಇವುಗಳಲ್ಲಿ ಪರತತ್ವ ಚಿಂತನದ ಮತ್ತು ಇಹಪರ ಸಂಬಂಧದ ಹತ್ತಾರು ಪರಿಗಳನ್ನು ನಾವು ಕಾಣುತ್ತೇವೆ. 'ಈ ಜಗದ ವ್ಯಾಪಾರವು ಚಿತ್ರವಾಗಿದೆ. ಇದರ ಸಾರವೂ ಅಷ್ಟೇ ಚಿತ್ರವಾಗಿದೆ. ಈ ಭೂಮಿ ಮೋಕ್ಷಕ್ಕೆ ಒಂದು ಸಾಧನರಂಗದಂತೆ ಇದೆ. ಇಲ್ಲಿ ಅಕ್ಷಯದ ಆನಂದಕ್ಕೆ ಅವಕಾಶವಿದೆ. ಮೃದು ಮಧುರವಾದ ರೀತಿಯಲ್ಲಿ ಈ ಜಗವು ನಮ್ಮನ್ನು ಮೋದಗೊಳಿಸುತ್ತಿದೆ' ಎಂದು ಕವಿ ಒಮ್ಮೆ ಹೇಳಿ ಅದೇ ಉಸುರಿನಲ್ಲಿ, 'ಜಗವು ಸುಂದರವಾದರೂ ಅದನ್ನು ಅನುಭವಿಸುವ ಒಂದು ಚಿತ್ತವೃತ್ತಿ ನಮ್ಮಲ್ಲಿ ಇಲ್ಲ' ಎಂದು ಕೊರಗಿದ್ದಾರೆ. 'ಕಣ್ದೆರೆದು ರಿಸ ಸೃಷ್ಟಿಯ ಸೌಂದರ್ಯವನ್ನು ನೋಡಿ ಸುಖಿಸುವುದಕ್ಕಾಗದೆ ಹೃದಯದ ಉದ್ವೇಗದಿಂದ ಯಾವ ಯಾವುದನ್ನೋ ನೆನೆದು ನಾವು ಕೊರಗುತ್ತೇವೆ' ಎಂದು ನೊಂದು ನುಡಿದಿದ್ದಾರೆ. ತಮ್ಮ ಮನಸ್ಸು ಜೀವನದ ಅನಂತತೆಯನ್ನು ನೆನೆದಾಗ ತಮಗೆ ಹೊಳೆದ ಒಂದು ಭಾವನೆಯನ್ನು ಇನ್ನೊಂದು ಕವನದಲ್ಲಿ ಮೂಡಿಸಿದ್ದಾರೆ. 'ಜೀವ

ಒಂದು ಅನಂತ ವಾಹಿನಿ; ಇದರ ಆಳವನ್ನು ಕಂಡವರಾಗಲಿ ಮೂಲವನ್ನು ಅರಿತವರಾಗಲಿ ಯಾರೂ ಇಲ್ಲ. ಈ ಜೀವವಾಹಿನಿ ಯಾವ ಸಾಗರಕ್ಕೆ ಎಲ್ಲಿ ಹೋಗಿ ಸೇರುತ್ತದೆಯೋ ಯಾವಕಡೆ ಧುಮ್ಮಿಕ್ಕುತ್ತ ಎಲ್ಲಿ ಸುಳಿಯುತ್ತದೆಯೋ, ಯಾವ ದೋಣಿಯನ್ನು ಎಳೆದು ದಡಕ್ಕೆ ನೂಕುತ್ತದೆಯೋ, ಯಾವ ನಾವಿಕನು ಇದನ್ನು ದಾಟಲು ತಿಳಿದಿದ್ದಾನೆಯೋ?' ಎಂದು ವಿಚಾರಮಗ್ನರಾಗಿದ್ದಾರೆ. ಹೀಗೆಯೆ 'ಈ ಲೋಕ ಎನ್ನುವುದು ನಿಜಕ್ಕೂ ಯಾವುದು? ಅರಿವೋ, ಮಾಯೆಯ ಮಂಕೋ, ಭ್ರಮೆಯೋ ಬೇಸರವೋ, ಬರಿಯ ನೆಳಲ ಬೇಂಟೆಯೋ, ಪರ ಎನ್ನುವುದೊಂದು ಇದೆಯೋ, ಇಲ್ಲವೋ' ಎಂಬ ಒಂದು ಭ್ರಮೆ ಕವಿಯ ಮನಸ್ಸಿನ ಶಾಂತಿಯನ್ನು ಕದಡಿದ್ದೂ ಉಂಟು. ಆದರೆ ಈ ಚಿತ್ತದ ಭ್ರಮೆ ಸ್ವಲ್ಪಕಾಲ ಮಾತ್ರ ಇರುತ್ತದೆ. ಮರುಗಳಿಗೆಗೆ ಚಿತ್ತ ನಲಿಯುತ್ತದೆ, ಮೊರೆಯುತ್ತದೆ, ಕುಣಿಯುತ್ತದೆ, ಮೆರೆಯುತ್ತದೆ, ಹೊಳೆಯುತ್ತದೆ, ಬಿರಿಯುತ್ತದೆ. ಈ ಅರ್ಥ ಬರುವಂಥ 'ಚಿತ್ತ' ಎಂಬ ಒಂದು ಕವನವನ್ನು ಈ ಕವಿ ಹಾಡಿದ್ದಾರೆ. ನಗುವ ಹಗಲು, ಮುಗಿಲ ಮೋಹರ, ಬಗೆಬಗೆಯ ಖಗಗಣ, ಸೂರ್ಯ ಚಂದ್ರರ ಬಿಸಿಲು ಬೆಳುದಿಂಗಳುಗಳು, ಭಾಮೆಯರ ವೈಯಾರ, ಸರಸಿಗಳ ಹೂದಳ, ತಂಬೆಲರ ತೀಟ ಮುಂತಾದುವುಗಳನ್ನು ನೋಡಿ ಚಿತ್ತ ಮಾರು ಹೋಗುತ್ತದೆ. ಪ್ರಕೃತಿಯಲ್ಲಿಯೂ ಜನಜೀವನಗಳಲ್ಲಿಯೂ ಕಾಣಬರುವ ಸುಖ, ಸೌಂದರ್ಯಗಳ ಲಾಸ್ಯದಲ್ಲಿ ಚಿತ್ತ ತಾನೂ ಬೆರೆತು ಆ ನಾಟ್ಯೋನ್ಮಾದದಲ್ಲಿ ಲೀನವಾಗುತ್ತದೆ. ಹೀಗೆ ಮನಸ್ಸು ಸೃಷ್ಟಿಯನ್ನೂ, ಜೀವನವನ್ನೂ ನೋಡಿ ಅರ್ಥ ಮಾಡಿಕೊಳ್ಳಲು ಪ್ರಯತ್ನಿಸಿ ಇವುಗಳ ಅಂತರಾರ್ಥವನ್ನು ಅರಿಯಲು ತೊಡಗಿದಾಗ ಪರವೂ ಪರಮತತ್ವದ ಸಾರವೂ ಯಾವುದೆನ್ನುವುದು ಮನಸ್ಸಿಗೆ ಹೊಳೆಯುತ್ತದೆ. ಕುಹಕ ಭಾವನೆಗಳು ಎದ್ದು ತನುವನ್ನು ತಲ್ಲಣಗೊಳಿಸಿದ್ದಾಗ ವಿಹಿತ ಮಾರ್ಗವನ್ನು ತೋರಿ ಪೊರೆವ ದೈವವೊಂದಿದೆ, ಅದೇ ಪರ; ಅದೇ ಪರಮತತ್ವ ಅಹಿತ ಸಂತತಿಯ ಜಾಲ ಮೊನೆಗೊಂಡು ಮುಸುಕಿದಾಗ ಮಹಿಯ ಮಂಗಳವನ್ನು ಬಯಸಿ, ಮರುಗುವ ಆತ್ಮವೊಂದಿದೆ—ಅದೇ ಪರ; ಅದೇ ಪರಮತತ್ವ. ಕಣ್ಣುಗಳಿಗೆ ಕಾಣದಂತೆ ಎಂದಿಗೂ ಮರೆಯಾಗಿ ಮಂಗಳದ ಕಾರ್ಯಗಳಿಗೆ ಆಧಾರವಾಗಿ ತುಂಗ ಬಲಯುತರಾದವರಿಗೆ ಬಲದಾತ್ಮವಾಗುತ್ತ ಉತ್ತುಂಗಮಾನಸರಿಗೆ ನೆರವಾಗುತ್ತಾ ಇರುವ ಯಾವ ಶಕ್ತಿಯಿದೆಯೋ ಅದೇ ಪರ; ಅದೇ ಪರಮತತ್ವ. ಈ ತತ್ವವನ್ನು ತಿಳಿದವನು ನರರ ಎರೆಯ ಆಗಬಲ್ಲನು. ಇವನೇ ಅರಿವಿನ ಗಿರಿಯ ಶಿಖರವನ್ನು ಏರಬಲ್ಲನು. ಮರವಿನಲ್ಲಿಯೂ ನಿದ್ರೆಯಲ್ಲಿಯೂ ತಮದ ಅರೆತಿಳಿವಿನಲ್ಲಿಯೂ ಧರೆಯೆಲ್ಲ ಮುಳುಗಿರುವಾಗ ಇವನೊಬ್ಬನೇ ಅರಿವಿನ ಗಿರಿಯ ಶಿಖರಕ್ಕೆ ಹೋಗುತ್ತಾನೆ. ಇವನು ಹಾರುವ ಹಕ್ಕಿಗಳ ಜತೆಗಾರ, ಪಾರವಿಲ್ಲದ ಪ್ರೇಮ ಇವನ ಮನವನ್ನು ಅರಳಿಸುತ್ತದೆ. ಇವನ್ನು ಏರುತ್ತೇರುತ್ತಾ ಮೈಮರೆತು ಹಾಡುತ್ತಾನೆ ಎಂದು ವಿ. ಸೀ. ಪರತತ್ವವನ್ನು ಅರಿತವನ ನಿಲುವಿನ ಚಿತ್ರವೊಂದನ್ನು ನೆನೆದಿದ್ದಾರೆ.

ಜೀವನದ ಯಾವುದೋ ಒಂದು ಸನ್ನಿವೇಶದಲ್ಲಿ ಭಗವತ್ಕೃಪೆ ತಾನಾಗಿಯೆ ಬಂದು ನಮ್ಮನ್ನು ಸೋಂಕುತ್ತದೆ. ನಮ್ಮಲ್ಲಿ ಯಾವ ಅಂತಹ ಮಹಿಮೆಯಿಲ್ಲದಿದ್ದರೂ, ನಮ್ಮನ್ನೇ ಹುಡುಕಿಕೊಂಡು ಪರದೈವ ಬಂದು ಕೃಪೆದೋರುತ್ತದೆ, ಎಂಬ ಅರ್ಥದ ಒಂದು ಕವಿತೆ 'ನಿನ್ನಕೃಪೆ'.

ಒಂದು ದಿನ ನಾ ನಿನ್ನ ಭಜಿಸಿದವನಲ್ಲ
ಒಂದು ದಿನ ಹೂಗಳಿಂ ಸಿಂಗರಿಸಲಿಲ್ಲ,
ಕಂಗಳಿದ್ದರು ಕಾಣದಂಥನೋಲ್ ಇರುತಿದ್ದೆ
ನಿಂದಿನೀ ಕರುಣೆಗೆ ಕಾರಣವನರಿಯೆ

ಈ ಭಗವತ್ಕೃಪೆ ಕಣ್ಮುಚ್ಚಿ ಕಣ್ ತೆಗೆಯುವಷ್ಟರಲ್ಲಿ ಮತ್ತೆ ಮಾಯವಾಗುತ್ತದೆ. ಕಣ್ಣು ಮುಚ್ಚಾಲೆಯ ಆಟದಂತೆ ಪರವಸ್ತು ನಮ್ಮನ್ನು ಆಡಿಸುತ್ತದೆಯೋ ಎನಿಸುತ್ತದೆ. ನಮ್ಮ ಧ್ಯೇಯ ಆದರ್ಶ ಮುಂತಾದುವುಗಳ ಕಡೆಗೆ ನಮ್ಮ ದೋಣಿ ಸಾಗುವುದೇ ಕಷ್ಟವಾಗುತ್ತದೆ. ದೋಣಿಯೊಳು'ಕುಳಿತಾನು ಬಲುದೂರ ಬಂದಿಹೆನು; ಕಾಣೆನೆಲ್ಲಿಹುದೋ ತೀರ ಇನ್ನು ಮುಂದೆ' ಎಂಬ ಹಾಡಿನಲ್ಲಿ ಪಯಣ ಮಧ್ಯದ ಕಷ್ಟ ಕೋಟಿಗಳನ್ನು ಕವಿ ಬಹು ಮಾರ್ಮಿಕವಾಗಿ ಚಿತ್ರಿಸಿದ್ದಾರೆ. ಇದು ತಿಳಿದ ದೇಶ ಅಲ್ಲ; ಅರಿತ ಮಾರ್ಗ ಅಲ್ಲ; ಉಳಿದ ನಮ್ಮವರೆಲ್ಲ ಅಲ್ಲೇ ನಿಂತರು. ನಾಲ್ಕು ದಿಕ್ಕಿನಲ್ಲೂ ಜಲರಾಶಿ ಹಬ್ಬಿದೆ. ನನ್ನ ದೋಣಿಯೋ ಬಳುಕಿ ಬೀಳುತ್ತಾ, ಏಳುತ್ತಾ ಹೋಗುತ್ತಿದೆ ಎಂದು ಮುಂತಾಗಿ ಹಾಡಿ, ಕವಿ ಕೊನೆಗೆ ಹೀಗೆ ಹೇಳಿದ್ದಾರೆ:

ಬಂದುದಕೆ ಭಯಪಡದೆ ನಂಬಿ ಮುಂಬರಿಯುವೆನು
ಅಂಬಿನಂದದಿ ನೇರ ಗುರಿಯನರಸಿ
ಕಂಡರದ ನೋಡುವೆನು; ಇಲ್ಲದಿರೆ ಕಳ್ತಲೆಯು
ನುಂಗಿನೊಳಗಾಂ ಸೇರಿ ಅಳಿಸಿ ಪೋಗುವೆನು

ಇಂತಹ ಸಂಕಷ್ಟ ಸಮಯದಲ್ಲಿ ವೀರ ನಿರ್ಧಾರದಿಂದ ಮುಂಬರಿವ ಜೀವಕ್ಕೆ ಮತ್ತೆ ಪರವಸ್ತುವಿನ ಕೃಪಾಕಟಾಕ್ಷ ಲಭಿಸುತ್ತದೆ. 'ಕೊನೆಗೆ ದರುಶನವಿತ್ತೆಯೈ ಕ್ಷೇಮಕಾರಿ. ಇನಿತು ದಿನ ಕೊರಗಿ ನಾ ತಪಿಸುತಿದ್ದುದಕೆ' ಎಂದು ಕವಿ ಹಾಡುತ್ತಾರೆ. 'ಜೀವನದ ಕಷ್ಟಗಳು ದೇಹವನ್ನು ಸುಡುತ್ತಿದ್ದುವು. ಆಗ ದೇವಾ, ನೀನು ಅಮೃತ ಧಾರೆಗಳನ್ನೇ ಕರೆದೆ; ನನ್ನ ಹಾಗೆ ಇರುವವರು ನಿನಗೆ ಇನ್ನು ಎಷ್ಟು ಜನರೋ? ನನಗಿಂತಲೂ ಆರ್ತರೂ, ಕಾತರರೂ, ನಿರ್ಗತಿಕರೂ ಯಾರು ಯಾರು ಇರುವರೋ! ಆದರೂ ನನ್ನ ಬೇನೆಯನ್ನು ಹರಿಸುವುದಕ್ಕಾಗಿ ನೀನು ಕಾಪಾಡಿದೆ. ಶಾಂತಿಗಾಗಿ ನಾನು ನೆಲವನ್ನು ಬಿಡಲಿಲ್ಲ, ವಿಶ್ರಾಂತಿಗಾಗಿ ನಾನು ರಂಗದಿಂದ ಸರಿಯಲಿಲ್ಲ; ಎಲ್ಲವನ್ನು ನೀನು ತಿಳಿದಿದ್ದೀಯೆ. ಒಂದು ಸಲ ಮಧುರ ಗೀತೆಯ ಹಾಗೆ ನಿನ್ನ ದನಿ ಕೇಳಿಸುತ್ತದೆ. ಒಂದು ಸಲ ಕೊಂಬಿನ ಕೂಗಿನಂತೆ ಅದೇ ದನಿ ಮೊಳಗುತ್ತದೆ............

ಇಂತಹ ನೀನು ಬಂದು ದರುಶನವಿತ್ತು ನಮ್ಮ ನಂಬುಗೆಯನ್ನು ಉಳಿಸಿದ್ದೀಯೆ' ಎಂದು ಕವಿ ಹಾಡಿದ್ದಾರೆ.

ಆದರೆ ಒಮ್ಮೊಮ್ಮೆ ಎಂಥವನಿಗಾದರೂ ಕೂಡ ದೇವರು ಒಬ್ಬನು ಇರುವನೋ ಇಲ್ಲವೋ ಎಂಬ ಶಂಕೆ ತಲೆದೋರದಿರದು. 'ಪ್ರತಿಧ್ವನಿ' ಎಂಬ ಕವಿತೆಯಲ್ಲಿ ಈ ಶಂಕೆಯ ಒಂದು ಛಾಯೆಯನ್ನು ನಾವು ಕಾಣುತ್ತೇವೆ.

ಭಾವದುದ್ರೇಕದಾವೇಶದಲಿ ಕೂಗಿ
ಕಾವ ದೇವನು ಒರ್ವನಿರ್ಪನೋ ಎನಲು
ಆವ ದೇವನು ಒರ್ವನಿರ್ಪನೋ ಎಂಬುದು
ಕರುಣೆಯೇನೆಂದೆನಲು ಋಣಿಯೆಂಬುದು.

ಈ ವಿಧವಾದ ಚಿತ್ತವೃತ್ತಿಯ ಇನ್ನೊಂದು ಮುಖವನ್ನು 'ಕಸ್ಮೈ ದೇವಾಯ' ಎಂಬ ಕವಿತೆಯಲ್ಲಿ ನಾವು ಕಾಣುತ್ತೇವೆ. ಈ ಪರತತ್ವಚಿಂತನದ ಗುಂಪಿಗೆ ಸೇರುವ ಕವನಗಳಲ್ಲಿ 'ಕಸ್ಮೈ ದೇವಾಯ' ತುಂಬ ಮುಖ್ಯವಾದ್ದು. ಚಾರಿತ್ರಿಕವಾಗಿಯೂ ವೈಜ್ಞಾನಿಕವಾಗಿಯೂ ಒಂದೊಂದು ವಿಷಯವನ್ನೂ ತೋಲನ, ಪರೀಕ್ಷೆ, ಪ್ರಯೋಗಗಳಿಗೆ ಒಳಪಡಿಸಿ ನೋಡುವ ಈ ಶತಮಾನದ ಒಂದು ಚಿಕಿತ್ಸಕಬುದ್ಧಿ ಇಲ್ಲಿ ವ್ಯಕ್ತವಾಗಿದೆ. ಅಂದಿನ ದೇವರುಗಳೆಲ್ಲರೂ ಮಡಿದು ಉರುಳಿಹೋಗಿದ್ದಾರೆ; ಇಂದ್ರ, ವರುಣ, ಧನದ, ಮಿತ್ರ, ಪೂಷಣ ಮುಂತಾದ ವೇದಗಳ ಕಾಲದ ದೇವತೆಗಳೆಲ್ಲ ತಮ್ಮ ಅಗ್ಗಳಿಕೆಯನ್ನೂ ಔನ್ನತ್ಯವನ್ನೂ ಕಳೆದುಕೊಂಡಿದ್ದಾರೆ ಎಂದು ಕವಿ ಕವಿತೆಯ ಪ್ರಾರಂಭದಲ್ಲಿ ನುಡಿದಿದ್ದಾರೆ. ಮನುಷ್ಯನ ಅತಿ ತೀಕ್ಷ್ಣವಾದ ಮನಸ್ಸಿನ ವಿಮರ್ಶೆಯ ಮೊನೆಯ ಕತ್ತಿಯ ಘಾತದಲ್ಲಿ ಈ ದೇವತೆಗಳೆಲ್ಲರೂ ನೊಂದು ಸೋಲನ್ನೊಪ್ಪಿಕೊಂಡಿದ್ದಾರೆ. ಧಾನ್ಯ ಪೂಜೆಗಳು ತಮಗೆ ಇನ್ನು ಸಲ್ಲವೆಂದುಶರಣು ಬೇಡಿದ್ದಾರೆ. ಆಶ್ಚರ್ಯದಿಂದಲೂ ಮೋಹದಿಂದಲೂ ಆಕಾಶವನ್ನು ನೋಡುತ್ತ ಉಚ್ಚ ಕಂಠದಿಂದ ಹಾಡಿದ ಆ ಭಕ್ತರುಗಳು ಅಳಿದಿದ್ದಾರೆ. ಇಂದಿನ ದಿನ ನಯದಿಂದಲೂ, ಭಯದಿಂದಲೂ ಆ ಇಂದ್ರಾದಿ ದೇವತೆಗಳನ್ನೊಲಿಸುವ ಸ್ಥಿತಿ ನಮ್ಮ ಜನರ ಮನಸ್ಸಿನಿಂದ ತೊಲಗಿಹೋಗಿದೆ. ಸಮುದ್ರದ ಅಪಾರ ಜಲರಾಶಿಯನ್ನೂ ಭೋರ್ಗರೆಯುವ ಅರ್ಭಟೆಯನ್ನೂ ಸುರನೀಲ ನೀಲಿಮತೆಯನ್ನೂ ನೋಡಿ ಅದರ ಅಪಾರ ಗಂಭೀರತೆಗೆ ಬಾಗಿ ಮಾಡುತ್ತಿದ್ದ ವರುಣ ಪೂಜೆ ಈ ಹೊತ್ತು ಕಾಣಿಸುವುದಿಲ್ಲ. ಹಾಗೆಯೇ ಆಕಾಶಕ್ಕೆ ಮುಖಮಾಡಿ ಹೂವು ಎಲೆಗಳನ್ನು ಎರಚುತ್ತಾ ಪರ್ಜನ್ಯ ಕೃಪೆದೋರು ಎಂದು ಈಗ ಯಾರೂ ಮೊರೆಯಿಡುವುದಿಲ್ಲ. ಗುಡುಗಿನ ಘರ್ಜನೆಯನ್ನು ಕೇಳಿ ನಡುಗುವುದಿಲ್ಲ; ಬಲಿಯನ್ನು ಅರ್ಪಿಸುವುದಿಲ್ಲ. ಈಗ ಯಾರೂ ರುದ್ರನ ರೌದ್ರವನ್ನು ಈ ರೀತಿ ಇಳಿಸುವುದಕ್ಕೆ ಪ್ರಯತ್ನಿಸುವುದಿಲ್ಲ. ಇದೇ ರೀತಿಯಲ್ಲಿ. ಹೇ ಪೂಷನೆ, ನಮ್ಮ ಗೋವುಗಳನ್ನು ಕಾಪಾಡು, ಅವುಗಳ ತಳಿಯನ್ನು ಹೆಚ್ಚಿಸು, ದವಸಧಾನ್ಯಗಳನ್ನು ಕೊಡು, ಎಂದು ಪೂಷನನ್ನು ಯಾರೂ

ಬೇಡುವುದಿಲ್ಲ. ಧನಕನಕವಾಹನಾದಿಗಳನ್ನು ಕೊಡು ಎಂದು ಧನದನನ್ನು ಯಾರೂ ಶರಣು ಹೋಗುವುದಿಲ್ಲ. ಹೀಗೆಂದು ಕವಿ ಈ ಕವನದ ಪ್ರಥಮ ಭಾಗದಲ್ಲಿ ವೇದ ಕಾಲದ ದೇವತೆಗಳ ವೈಭವವನ್ನೂ, ಆ ದೇವತೆಗಳನ್ನು ಒಲಿಸಿಕೊಳ್ಳುವ ಅಂದಿನ ಭಕ್ತರ ವಿಧಾನಗಳನ್ನೂ ನೆನೆದು ಈಗ ಆ ದೇವತೆಗಳೂ ನಮ್ಮಿಂದ ಮರೆಯಾಗಿವೆ ಎಂದು ಹೇಳಿದ್ದಾರೆ.

ಎರಡನೆಯ ಭಾಗದಲ್ಲಿ 'ಬೇರೆಯ ದೇವತೆಗಳು ನಮ್ಮ ಜನಮನದ ಮೇಲೆ ದಾಳಿಯಿಟ್ಟರು. ಬ್ರಹ್ಮ, ವಿಷ್ಣು, ಮಹೇಶ್ವರಾದಿಗಳು ಮುಂದೆ ಐದು ಸಾವಿರ ವರ್ಷ ಆಳಿದರು. ಇಂದು ಇವರ ಆಳ್ವಿಕೆಗೂ ಚ್ಯುತಿಬಂದಿದೆ' ಎಂದು ಹೇಳಿದ್ದಾರೆ. ಹಳೆಯ ಕಾಲದ ತಂದೆ ತಾತಂದಿರ ದೇವರುಗಳೆಲ್ಲ ಅಳಿದು ಹೋಗುವ ಕಡಿದು ಕಾಲ ಬರುತ್ತಿದೆ, ಎಂದ ಈ ವೈಜ್ಞಾನಿಕ ಯುಗದ ಮಾನವನ ಚಿತ್ತವೃತ್ತಿಗೆ ದೇವರ ಅಸ್ತಿತ್ವದಲ್ಲಿ ಇರುವ ಶ್ರದ್ಧಾಭಕ್ತಿಗಳ ಬಲಾಬಲಗಳನ್ನು ತೂಗಿಹೇಳಿದ್ದಾರೆ. ಕೊನೆಯಲ್ಲಿ ಬರುವ ಎರಡು ಪದ್ಯಗಳಲ್ಲಿ, ಅತ್ಯುತ್ತಮವಾದ, ಅರ್ಥಗರ್ಭಿತವಾದ, ಈ ವಿಷಯದಲ್ಲಿ ಇಷ್ಟು ಮಾತ್ರ ಹೇಳಬಹುದು ಎನ್ನುವಂತಹುದಾದ ರೀತಿಯಲ್ಲಿ ತಮ್ಮ ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದಾರೆ :

ಪೋಪವರ ಪದವಿಗಳಿಗಿನ್ನಾರು ಬಂದಪರೊ
ಕೋಪಿಗಳೊ, ಕರುಣಿಗಳೊ, ತಿಳಿಪ ಕೋವಿದರೊ
ಆರನರಸುತೆ ಹೋಗಿ ಹವಿಸನೀಯಲುಬೇಕೊ
ಆವ ಶೀಲವನವರು ಜಗದಿ ಬಿತ್ತುವರೊ
ಇಲ್ಲದಿರೆ ಬೇರಾವ ದೇವರೇ ಬಾರರೊ
ಇಲ್ಲದೊಂದಕೆ ಹೆಸರನಿತ್ತು ಕರೆಯುವೆವೊ
ಇಲ್ಲದಿರೆ ಮಾನವನ ಸುಗುಣವೇ ದೈವವೊ
ಎಲ್ಲಿಗೂ ಹರಿಯದಿಪ ಸಂಶಯವೆ ಕೊನೆಯೊ !

ಇದು ಪ್ರಜಾಪ್ರಭುತ್ವದ ಯುಗ. ಪ್ರಜಾಸ್ವಾತಂತ್ರ್ಯದ ಯುಗ. ರಾಜಕೀಯ ಕ್ಷೇತ್ರದಲ್ಲಿ ಸ್ವಾತಂತ್ರ್ಯ ಸರ್ವಸಮದೃಷ್ಟಿ ಹೃದಯವೈಶಾಲ್ಯ ಮುಂತಾದುವುಗಳು ವ್ಯಕ್ತವಾಗಿರುವಂತೆ ಧಾರ್ಮಿಕ ಕ್ಷೇತ್ರದಲ್ಲಿಯೂ ಇವೇ ಗುಣಗಳು ವ್ಯಕ್ತವಾದರೆ ಆಶ್ಚರ್ಯವೇನಿಲ್ಲ. ಮಾನಸಿಕ ವ್ಯವಹಾರದಲ್ಲಿಯೂ ನಮಗೆ ಸ್ವಾತಂತ್ರ್ಯ ಬೇಕು. ವೇದ, ಧರ್ಮ, ಶಾಸ್ತ್ರ, ಮತ, ಪುರಾಣ ಮುಂತಾದ ಸಂಬಂಧಗಳಲ್ಲಿ ಕೂಡ ನಮಗೆ ತೋರುವ ಸಂಶಯವನ್ನು ನಾವು ಹೊರಗೆಡಹಬೇಕು. ಚರ್ಚೆಮಾಡಿ ಹೊಸ ಹೊಸ ತತ್ವಗಳನ್ನು ಕಂಡುಹಿಡಿಯಬೇಕು. ಇಂತಹ ಒಂದು ವೈಜ್ಞಾನಿಕವೂ ಚಾರಿತ್ರಿಕವೂ ಆದ ದೃಷ್ಟಿ ಈ ಕವಿತೆಯಲ್ಲಿ ವ್ಯಕ್ತವಾಗಿದೆ. ಆಲೋಚನಾಸ್ವಾತಂತ್ರ್ಯ ೨೦ನೆಯ ಶತಮಾನದ ಉದ್ಘೋಷ. ಈ ಘೋಷದ ಒಂದು ಅಬ್ಬರ 'ಕಸ್ಮೈ ದೇವಾಯ'ದಲ್ಲಿ ತರಂಗತರಂಗವಾಗಿ ಮೊಳಗುವುದನ್ನು ನಾವು ಕೇಳುತ್ತೇವೆ. ಇಲ್ಲಿ ನಾಸ್ತಿಕತೆಯ

ಮನೋಭಾವ ಖಂಡಿತ ಇಲ್ಲ; ಅಧಿಕಪ್ರಸಂಗದ ಸಂಗತಿ ಇದಲ್ಲ. ಆದರೆ ಅಂಧಶ್ರದ್ಧೆ ಗ್ರಂಥ ದಾಕ್ಷಿಣ್ಯ ವ್ಯಕ್ತಿಗೌರವಗಳಿಗೆ ಬಲಿಬೀಳದೆ ತನಗೆ ಸರಿಯೆಂದು ಕಾಣುವ ಸತ್ಯವನ್ನು ಸಾರುವ ಎದೆಗಾರಿಕೆ ಇಲ್ಲಿ ಕಾಣಬರುತ್ತದೆ. ದೇವರ ವಿಷಯವನ್ನು ಕೂಡ ಚಾರಿತ್ರಿಕ ದೃಷ್ಟಿಯಿಂದ ನೋಡಬೇಕು. ವಿಮರ್ಶೆಯ ದೃಷ್ಟಿಯಿಂದ ಬೆಲೆ ಕಟ್ಟಬೇಕು. ದೇವರಿಗೆ ದೇವತ್ವವನ್ನು ಕೊಡುವ, ಧರ್ಮಕ್ಕೆ ಧರ್ಮತ್ವವನ್ನು ಕೊಡುವ ತತ್ತ್ವವಾವುವೆಂಬುದನ್ನು ಕಂಡುಹಿಡಿಯಲು ಪ್ರಯತ್ನಿಸಬೇಕು. ಇಂತಹ ಒಂದು ಧೋರಣೆಯನ್ನು ಈ ಕವಿತೆ ಸಾರುತ್ತದೆ. 'ಅಶುಚಿಯೆಂದು ಶವವನ್ನು ಸುಟ್ಟು ಬೂದಿಮಾಡುತ್ತಿದ್ದ ಜನಾಂಗವು ಮನೋರಾಜ್ಯದ ಶವಗಳನ್ನು ಕಾಪಾಡಿಡುವುದು ಶೌಚಸಾಧಕವಲ್ಲವೆಂಬುದನ್ನು ಮರೆಯಲಾಗದು' ಎಂದು ವಿ. ಸೀ. ಅವರು ಬೇರೊಂದು ಸಂದರ್ಭದಲ್ಲಿ ಕೊಟ್ಟ ಎಚ್ಚರಿಕೆಯನ್ನು ಇಲ್ಲಿ ನೆನೆಯಬೇಕು. ಮಾನವನ ಸುಗುಣವೇ ದೈವವೋ ಎಂಬ ಮಾತು ಸತ್ಯ. ಎಲ್ಲಿಗೂ ಹರಿಯದಿಹ ಸಂಶಯವೆ ಕೊನೆಯೋ ಎನ್ನುವುದು ಸತ್ಯಸ್ಯ ಸತ್ಯ.

'ಕಸ್ಮೈ ದೇವಾಯ' ಎನ್ನುವುದು ಪರತತ್ತ್ವಚಿಂತನೋದಧಿಯ ಒಂದು ದ್ವೀಪಖಂಡ. ಸಂಶಯಾಕುಲಿತಚಿತ್ತನಾದ ಕವಿ ಈ ದ್ವೀಪಖಂಡದಲ್ಲಿ ಕೆಲಕಾಲ ನಿಂತು ಏನೂ ಬಗೆಹರಿಯದೆ ಕೊನೆಗೆ ಮತ್ತೆ ಅಪಾರ ಪಾರಾವಾರದಲ್ಲಿ ಧುಮ್ಮಿಕ್ಕುತ್ತಾರೆ. ಕೆಲಕಾಲಾನಂತರ ಮತ್ತೊಂದು ದ್ವೀಪಖಂಡವನ್ನು ಸೇರುತ್ತಾರೆ. ನೈವೇದ್ಯ ಎನ್ನುವುದು ಆ ಇನ್ನೊಂದು ದ್ವೀಪಖಂಡವಾಗಿ ಪರಿಣಮಿಸಿದೆ. 'ಮುರುಕುಮನವಿದ ನೊಂದ ಹರಿದ ಹೃದಯವಿದೊಂದ ಪರಮಕರುಣಾಮೂರ್ತಿ ನಿನಗೆ ಅರ್ಪಿಸುವೆ' ಎಂದು ಕವಿ ಹಾಡುತ್ತಾರೆ. ಇದೇ ನೀನು ಉಳಿಸಿರುವ ಸರ್ವಸಂಪದ, ಇದನ್ನೇ ನಿನಗೆ ನಿವೇದಿಸುತ್ತೇನೆ, ಕೊಂಡು ಸುಖಿಸು ಎಂದು ಕೇಳಿಕೊಳ್ಳುತ್ತಾರೆ. ನೀನು ಪ್ರೇಮಮಯನು ಎದುಕೊಂಡೆ. ಒಲಿಸಿಕೊಳ್ಳಲು ಯತ್ನಿಸಿದೆ... ....ಪ್ರೇಮಿಯೋ, ಕ್ರೂರಿಯೋ ಸೋಲ್ಪೆಯೋ ನೋಡೆಯೋ ಸಾವಧಾನದೊಳೆಲ್ಲೊ ಮಲಗಿ ನಿದ್ರಿಪೆಯೋ ಎಂದು ಶಂಕಿಸುತ್ತಾರೆ. ಕೊನೆಗೆ ಇಳೆಯಲ್ಲಿ ಆಗುವುದು ಒಂದೂ ನಿನ್ನ ಗಮನಕ್ಕೆ ಬರುವುದಿಲ್ಲವೋ ಅಥವಾ ಇಲ್ಲಿನದೆಲ್ಲವೂ ನಿನ್ನ ಕೈಮೀರಿ ಹೋಗಿದೆಯೋ ಅಥವಾ ನಡೆಯುವುದೆಲ್ಲ ನಡೆಯಲಿ ಎಂದಿದ್ದೀಯೋ ಅಥವಾ ಎಲ್ಲಿಯಾದರೂ ಹಾಳಾಗಿ ಹೋಗಲಿ ಎಂದಿದ್ದೀಯೋ ಹೀಗೆ ಆಗಲೇಬೇಕೆಂಬ ನಿಯಮ ನಿನಗೆ ಇಲ್ಲವೋ ಇಂಥದೇ ಹೌದು ಎಂಬ ನಿಶ್ಚಯವೇ ಇಲ್ಲವೋ ಈ ಜಗತ್ತಿನ ಸಂಗಡ ನೀನೂ ಬಳಲುತ್ತಿದ್ದೀಯೋ ಕೊಂಕುವಿಧಿ ನಿನ್ನನ್ನೂ ನಡೆಸುತ್ತಿದೆಯೋ ಎನ್ನುವ ಬಗೆಬಗೆಯ ಶಂಕಾಭೀತಿಗಳಿಂದ ತಲ್ಲಣಗೊಂಡ ಮನಸ್ಸಿನ ಚಿತ್ರ ಇಲ್ಲಿದೆ.

ಇಂತಹ ಯಾವ ಯಾವ ಚಿಂತೆ, ಶಂಕೆ, ಭಯ ಮುಂತಾದ ಚಿತ್ತವೃತ್ತಿ ಪರವಸ್ತುವಿನ ಶೀಲ ಸ್ವಭಾವ ವ್ಯಾಪಾರ ಸ್ವರೂಪಾದಿಗಳ ವಿಷಯದಲ್ಲಿ ಮೇಲಿಂದ ಮೇಲೆ ಪ್ರಕಟವಾಗುತ್ತಿದ್ದರೂ ಆ ಪರವಸ್ತುವಿನ ಅಸ್ತಿತ್ವದಲ್ಲಿ ಆಸ್ತಿಕ್ಯಮನೋ

ಭಾವವೇ ಪ್ರಬಲವಾಗಿರುತ್ತದೆ. ಅಂತಹ ಕೆಲವು ಪದ್ಯಗಳನ್ನು ಇಲ್ಲಿ ನೋಡಬಹುದು. ಪ್ರಕೃತಿಯ ಪ್ರತಿಯೊಂದು ವ್ಯಾಪಾರದಲ್ಲಿಯೂ ಪರವಸ್ತುವಿನ ಸರ್ವವ್ಯಾಪಕವಾದ ಚೈತನ್ಯ ಅನುಭವಗೋಚರವಾಗುತ್ತದೆ. ತಿಳಿಗಾಳಿಯ ತೀಟ, ಮಳೆಗಾಳಿಯ ಬಿರುಸು, ಬಿರುಗಾಳಿಯ ಬೀಸು, ಸರದ ಕಲ್ಲೋಲ, ನದಿಯ ತರಂಗ, ಕಡಲ ನೊರೆದೆರೆ, ಚಿಗುರು ಗೊಂಚಲು, ಅರಳುವ ಹೂದಳ, ಬಿರಿವ ಹಣ್ಬಿಡಗು, ಹಕ್ಕಿಯಿಂಚರ, ಮಗುವಿನ ತೊದಲುಲಿ, ಕೆಳೆಯ ನಗೆನುಡಿ, ಗುಡುಗು-ಸಿಡಿಲು—ಈ ಮುಂತಾದ ಪ್ರಕೃತಿಯ ಬಗೆಬಗೆಯ ವ್ಯಾಪಾರಗಳಲ್ಲಿ ಆ ಪರವಸ್ತುವಿನ ಚೇತನಸ್ವರೂಪ ಪ್ರಕಟವಾಗುತ್ತದೆ. ಇಂತಹ ಪರವಸ್ತು ನಮಗೂ ಸುಖಸಂತೋಷಗಳನ್ನು ಕೊಡಲಿ ಎಂದು ಕವಿ ಪ್ರಾರ್ಥಿಸುತ್ತಾರೆ.

ಶಿವರಾತ್ರಿ, ಅರ್ಧನಾರೀಶ್ವರ, ಶಿವ ಈ ಮುಂತಾದ ಗೀತಗಳಲ್ಲಿ ಆ ಪರತತ್ತ್ವವನ್ನು ಶಿವರೂಪಿಯಾಗಿ ಗುರುತಿಸಿ ಹಾಡಿದ್ದಾರೆ. ತ್ಯಾಗವೇ ಭೋಗವೆಂದು ಈತ ಸಾರಿದ್ದಾನೆ. ಇವನು ವರತಪೋನಿಷ್ಠನು, ಅಖಿಲ ಲಯಕಾರಕನು, ನರರ ಎಣಿಕೆ, ಗುಣದ ಎಣಿಕೆ ಯಾವುದಕ್ಕೂ ಬಾಗದೆ ಒಂದು ನೀತಿಯ ನಿಯಮಕ್ಕೆ ಒಪ್ಪಿ ಸಿಲುಕದೆ ಒಂದು ರೀತಿ ಚಿಂತಿಸಿದರೆ ಮತ್ತೊಂದು ರೀತಿ ತೋರುತ್ತ ಅರಸುವವರ ಕೌತುಕವನ್ನು ಈತ ಹೆಚ್ಚಿಸುತ್ತಾನೆ ಎಂದು ಮುಂತಾಗಿ ಶಿವನನ್ನು ಕುರಿತು ಹಾಡಿದ್ದಾರೆ. 'ಅರ್ಧನಾರೀಶ್ವರ'ದಲ್ಲಿ ಒಂದು ಮುಖದಲ್ಲಿ ಗಂಡು, ನಿಯಮ, ನಿಷ್ಠುರ, ಉರಿಗಣ್ಣು, ಕೈಶೂಲ, ವಿಷವ ಕಾರುವ ಸರ್ಪ, ಉಕ್ಕಿನಲ್ಲಿ ಸಮೆದಂತೆ ಇರುವ ಒಡಲನ್ನು ಕಂಡು ಜನ ಪೂಜಿಸುವರು ಎಂದೂ ಇನ್ನೊಂದು ಮುಖದಲ್ಲಿ ಜನ ತಾಯನ್ನು, ಉಕ್ಕಿ ಹರಿಯುವ ಕರುಣೆಯ ಒರತೆಯನ್ನು, ಅಕ್ಕರೆಯನ್ನು, ಸ್ನೇಹವನ್ನು, ಅರಳಿದ ಎಳೆನಗೆಯನ್ನು ತೆಗೆಗೈಯಿಂದ ಕೊಡುವ ಔದಾರ್ಯವನ್ನು ಕಂಡು ಅರ್ಚಿಸುತ್ತಾರೆ. 'ತಾಯಿ ತಂದೆಯರ ಗುಣ ನಿನ್ನಲ್ಲಿ ಸೇರಿವೆ. ಒಂದು ಕೈಯಿಂದ ದಂಡಿಸುತ್ತೀಯೆ, ಒಂದು ಕೈಯಿಂದ ಕಾಪಿಡುತ್ತೀಯೆ, ಎಲ್ಲ ತಾಯ್ತಂದೆಗಳ ತಂದೆ ನೀನು' ಎಂದು ಆ ಪರತತ್ತ್ವವನ್ನು ನೆನೆದಿದ್ದಾರೆ.

'ದೀಪಗಳು', 'ಗಂಗಾಪೂಜೆ'ಗಳಲ್ಲಿ ಸಂಪ್ರದಾಯಾನುಸಾರವಾಗಿ ನಡೆದುಬಂದ ನಮ್ಮ ಜನರ ಆಸ್ತಿಕ್ಯಮನೋಧರ್ಮದ ಒಂದು ಸುಂದರವಾದ ಚಿತ್ರವನ್ನು ಕವಿ ಕೊಟ್ಟಿದ್ದಾರೆ. 'ಊರಿನ ತಾಯ್ಗಳ ತಾಯಿಯ ಸೇವೆಗೆ ಮಕ್ಕಳು ಹರಕೆಯ ತರುತಿಹರು; ಊರಿನ ಮಕ್ಕಳ ಮರಿಗಳ ಮನೆಗಳ ರಕ್ಷೆಯ ಕಾಣಿಕೆ ಸಲಿಸುವರು' ಎಂದೂ 'ಹಿರಿಕಾಣಿಕೆಗಳನೀಯಲಾರೆವು. ತಾಯಿ, ಬಡವರಿಗೊಲಿಯಮ್ಮ. ಇಲ್ಲಿಂ ಬೇಗನೆ ಬಾರೆಮ್ಮೂರಿಗೆ ಮಕ್ಕಳ ಮನೆಗಳ ಪೊರೆಯಲಿಕೆ' ಎಂದೂ ಕವಿ ಹಾಡಿದ್ದಾರೆ.

'ಕನಸು' ಎನ್ನುವ ಒಂದು ಪದ್ಯ ಈ ಪರತತ್ತ್ವಚಿಂತನೋದಧಿಯ ದೀಪಸ್ತಂಭದಂತೆ ರಾರಾಜಿಸುತ್ತದೆ. ಋತಚಿನ್ಮಯಿ ಜಗನ್ಮಾತೆಯ ಮತ್ತು ವಿರಾಟ್‌ಪುರುಷನ ಲೀಲಾವಿನೋದದಿಂದೊಗೆದ ಬ್ರಹ್ಮ, ಹರಿ, ಶಿವರ ಪರಿಯನ್ನೂ ಅವರವರ ಕರ್ತವ್ಯ

ನಿಷ್ಠೆಗಳನ್ನೂ ಅವರಿಂದ ಒಗೆದ ಸೃಷ್ಟಿಯನ್ನೂ, ಮಾನವಕುಲವನ್ನೂ, ಅದರ ಪರಿಯನ್ನೂ ವಿಶ್ವಧರ್ಮದ ನಿಯಮ ನಿಯತಿಗಳ ರಹಸ್ಯವನ್ನೂ ಕವಿ ಇಲ್ಲಿ ಅತ್ಯದ್ಭುತವಾದ ರೀತಿಯಲ್ಲಿ ವರ್ಣಿಸಿದ್ದಾರೆ. ಕವಿಯ ಒಂದು ಭವ್ಯದೃಷ್ಟಿಗೆ ಹೊಳೆದ ದಿವ್ಯದರ್ಶನ, ಈ ಕವಿತೆ.

ಪರದೈವದ ಬರವಿಗಾಗಿ ಜನ ತಪಗೈದು ಜಪಗೈದು ನುಡಿಸೋತ ಮೂಕಪ್ರೇಮವನ್ನು ಹೇಗೆ ಪ್ರಕಟಿಸುತ್ತಿರುವರೆಂಬುದರ ಆರ್ದ್ರಚಿತ್ರವೊಂದನ್ನು 'ಶಬರಿ' ಎನ್ನುವ ಕವಿತೆಯಲ್ಲಿ ಕವಿ ಕಂಡರಿಸಿದ್ದಾರೆ. ಹೀಗೆ ಶುಚಿ ಜೀವನ ದರ್ಶನದ ಒಂದು ಮುಖವಾದ ಪರತತ್ವಚಿಂತನದಲ್ಲಿ ಪರದೈವ ಎನ್ನುವುದು ಒಂದಿದೆ, ಅದರ ಸ್ವರೂಪ ನಿರ್ಣಯ ಅಸಾಧ್ಯ, ಶುಚಿಜೀವನದಿಂದ ಮಾನವನು ಆ ದೈವವನ್ನು ನೆನೆಯುತ್ತಾ ಬಂದಲ್ಲಿ ತನ್ನ ಮತ್ತು ಲೋಕದ ಕಲ್ಯಾಣ ಸಾಧ್ಯವಾಗುತ್ತದೆ ಎಂಬ ಅಭಿಪ್ರಾಯವನ್ನು ಕವಿ ವೈಯಕ್ತಿಕವಾದ ಅನುಭವಗಳ ಮೇಲೆ ಕಟ್ಟಿ ಹಾಡಿದ್ದಾರೆ.

## ೨

ಜೀವನದ ಕಷ್ಟನಷ್ಟಗಳನ್ನು ಎದುರಿಸಲಾರದೆ ಮನಸ್ಸು ತಳಮಳಗೊಳ್ಳುವುದು ನಮ್ಮೆಲ್ಲರ ಅನುಭವಕ್ಕೂ ಬಂದದ್ದು. ದುರ್ಭರವಾದ ಬದುಕಿನ ಕಠೋರ ಸತ್ಯಗಳನ್ನು ಕಂಡು ಮನಸ್ಸು ಅಳುಕಿದಾಗ ನಾವು ಅಸಹಾಯರೆಂಬಂತೆ ಕಂಬನಿದುಂಬಿ ನಿಟ್ಟುಸಿರೆಳೆದು ಕೈಕಟ್ಟಿ ಕುಳಿತುಬಿಡುತ್ತೇವೆ. ಇಂತಹ ಸಂದರ್ಭಗಳಲ್ಲಿ ನಮಗೆ ನಾವೇ ಸಮಾಧಾನವನ್ನು ತಂದುಕೊಂಡು ನಮ್ಮನ್ನು ನಾವೇ ಸಂತೈಸಿಕೊಂಡು ಒಂದು ಒಳ ಎಚ್ಚರಿಕೆಯನ್ನೋ ಒಂದು ಹೊಸ ಅರಿವನ್ನೋ ನಮ್ಮ ಮನಸ್ಸಿಗೆ ನಾವೇ ಬೋಧಿಸಿಕೊಂಡು ಮತ್ತೆ ಕಾರ್ಯೋನ್ಮುಖರಾಗುವುದು ಸಾಮಾನ್ಯರಿಗೆ ಸಾಧ್ಯವಾಗುವುದಿಲ್ಲ. ಆದರೆ ಕವಿಚೇತನ ಅಸಾಮಾನ್ಯವಾದದ್ದು. ಸಮಾಧಾನ, ತಾಳ್ಮೆ, ಧೈರ್ಯ, ಸ್ಥೈರ್ಯ, ಮುಂದಾಲೋಚನೆ, ದೂರಾಲೋಚನೆ, ಪೂರ್ವಾಪರವಿವೇಚನೆ ಈ ಮುಂತಾದ ಗುಣವಿಶೇಷಗಳಿಂದ ಪರಿಪೋಷಿತವಾದ ಆ ಚೇತನ ಕಷ್ಟದಲ್ಲಿ ಎದೆಗೆಡದೆ ಮುನ್ನುಗ್ಗುವುದಕ್ಕೆ ಬೇಕಾದ ಸಿದ್ಧತೆಯಲ್ಲಿ ತೊಡಗುತ್ತದೆ. ತನಗೆ ತಾನೇ ತಿಳಿವನ್ನು ಹೇಳಿಕೊಂಡು ತನ್ನನ್ನು ತಾನೇ ಸಮಾಧಾನಮಾಡಿಕೊಂಡು ಪರಿಸ್ಥಿತಿಯನ್ನು ಎದುರಿಸುವ ಶಕ್ತಿಯನ್ನು ತಂದುಕೊಳ್ಳುತ್ತದೆ. ಇಂತಹ ಗುಣವನ್ನು 'ಆತ್ಮಸಾಂತ್ವನ' ಎಂದು ಕರೆಯಬಹುದು. ನಮ್ಮ ಬಾಳು ಹಸನಾಗುವುದಕ್ಕೂ ನಾವು ಲೇಸನ್ನೇ ಕುರಿಯುವುದಕ್ಕೂ ಲೋಕಕಲ್ಯಾಣ ಆತ್ಮಕಲ್ಯಾಣಗಳ ಹಾದಿಯಲ್ಲಿ ಹೆಜ್ಜೆಯಿಡುವ ಸಾಮರ್ಥ್ಯ ಯತ್ಕಿಂಚಿತ್ತಾದರೂ ನಮ್ಮಲ್ಲಿ ಉದಯಿಸುವುದಕ್ಕೂ ಈ 'ಆತ್ಮಸಾಂತ್ವನ' ಎನ್ನುವ ಗುಣವನ್ನು ನಾವು ಪಡೆದಿರಬೇಕಾಗುತ್ತದೆ. ವಿ. ಸೀ. ಅವರ

ಕೃತಿಗಳಲ್ಲಿ 'ಆತ್ಮಸಾಂತ್ವನ' ಪ್ರಕಟವಾಗಿರುವ ಕೆಲವು ಗೀತಗಳನ್ನು ಇಲ್ಲಿ ನೆನೆಯ ಬಹುದು. 'ಇನಿತು ಮರೆಯೇಕೆ ಎನ್ನಿದಿರೊಳು—ಮನ್ಮಾನಸಮೆ, ಇನಿತು ಚಿಂತೆಯಿದೇಕೆ, ಕಳವಳವೇಕೆ ?' ಎಂದು ಆರಂಭವಾಗುವ ಕವಿತೆಯೊಂದರಲ್ಲಿ ಹೊರಗಿನ ಸೃಷ್ಟಿ ಸೌಂದರ್ಯ ನಿನಗೆ ಸಂತೋಷವನ್ನು ಕೊಡುವುದಿಲ್ಲವೆ? ಹೂಬಳ್ಳಿ, ಎಳಗಾಳಿ, ನೀಲಮೇಘ, ವಿಶಾಲ ಗಗನದ ರಾಗದೊಯ್ಯಾರ ಮುಂತಾದವುಗಳು ನಿನ್ನನ್ನು ಮೋಹಿಸವೆ ? ನಾನು ನಿನಗೆ ಎಂದೂ ಆಯಾಸ ಕೊಟ್ಟವನಲ್ಲ. ಮಾಯೆ ಮೋಸಗಳಿಂದ ನಿನ್ನನ್ನು ನಾನು ಬಂಧಿಸಿದವನಲ್ಲ. ಕಾಯಸುಖ ಬೇಕೆಂದು ಬಳಲಿಸಿದವನಲ್ಲ ಎಂದು ಮನಸ್ಸನ್ನು ಸಂಬೋಧಿಸಿ ಚಿಂತೆ ತಾಳುವುದು ಸಾಧುವಲ್ಲ ಎಂದಿದ್ದಾರೆ.

ಅಂತರಂಗದೊಳೇನಿಹುದು ಪೇಳೆನ್ನ ಮಾನಸಮೆ
ಸಂತಸವ ತಾಳು ಬೇಡುವೆನು ಕೊರಗಬೇಡಿಂತು
ಸ್ವಾಂತದಾಯಸವ ನೀಗಿ ಹಾಸವನು ಬೀರು ದಳದಿ–
ಗಂತರಾಳಗಳ ಭೇದಿಸುವೆ ಜಯಸಿರಿಯ ಗೆಲುವೆ.
ಇನಿತು ತಾಮಸವೇಕೆ ? ಇನಿತಸಂತುಷ್ಟಿಯೇಕೆ ?

ಎಂದು ಕೊನೆಯಾಗುವ ಈ ಕವನದಲ್ಲಿ ಮನಸ್ಸಿನ ಸಂತೋಷವೇ ಸರ್ವ ಸುಖಕ್ಕೂ ಮೂಲ, ಸರ್ವ ಜಯಕ್ಕೂ ಕಾರಣ. ಆದ್ದರಿಂದ ಮನಸ್ಸಿನ ಪ್ರಫುಲ್ಲತೆಯನ್ನು ನಾವು ಕಳೆದುಕೊಳ್ಳಬಾರದು ಎಂಬ ಅಂಶ ಸೂಕ್ಷ್ಮವಾಗಿ ಪ್ರಕಟವಾಗಿದೆ.

'ಶಾಂತಿ' ಸುಸಂಸ್ಕೃತ ಚೇತನದ ಒಂದು ಮುಖ್ಯ ಲಕ್ಷಣ. ಏಳಿಗೆಯಲ್ಲಿಯೂ ಬೀಳಿನಲ್ಲಿಯೂ ನಾಲ್ದೆಸೆಯ ಕಷ್ಟದಲ್ಲಿಯೂ ಆಳುವ ಅರಸುವ ಆಳುತನಗಳಲ್ಲಿಯೂ ಕೀಳು ಜನಗಳು ಸೇರಿ ದೂಷಿಸುವ ಕಾಲದಲ್ಲಿಯೂ ಮೇಲ್ಮತಿಯ ಭಾವದಲ್ಲಿ ಮನವು ನಿಂತಾಗ 'ಶಾಂತಿ' ನಮಗೆ ದೊರೆಯುತ್ತದೆ ಎಂದು ಕವಿ ಇನ್ನೊಂದು ಕವನದಲ್ಲಿ ಹಾಡಿದ್ದಾರೆ. ಹೆಂಗಸರಲ್ಲಿ ಅನ್ಯೋನ್ಯವಾದ ಸಹನೆ ತೋರಬೇಕು. ಹೊನ್ನು ಹೆಣ್ಣುಗಳ ಆಸೆ ನಮ್ಮಿಂದ ದೂರವಾಗಬೇಕು. ಮಂಗಳಾಮಂಗಳಗಳಲ್ಲಿ ಸಮಭಾವ ಬರಬೇಕು. ಸಂಗಸೌಖ್ಯದ ದಾಹ ಅಡಗಬೇಕು. ಆಗ 'ಶಾಂತಿ' ಲಭಿಸುತ್ತದೆ. ಜಗವು ಇತ್ತುದ್ದನ್ನು ಕೊಂಡು ತುಷ್ಟಿಪಡಬೇಕು. ಹಗೆಯ ಉತ್ಕರ್ಷದಲ್ಲಿ ನಲಿಯಬೇಕು. ಜಗದ ವೈರಗಳೂ ಪ್ರತಿಚಿಂತನಗಳೂ ಮನಸ್ಸಿನ ಪಟದಿಂದ ತೊಡೆದು ಹೋಗಬೇಕು; ಆಗ ಶಾಂತಿ ಬರುತ್ತದೆ. ದುರ್ಮದದ ಹೆಮ್ಮೆಯಲ್ಲಿ ನಾವು ಈಶ್ವರರು ಎಂಬ, ಧರ್ಮ ಮರ್ಮಗಳೆಲ್ಲ ನಮ್ಮ ಸುಖ ಎಂಬ, ಬ್ರಹ್ಮಸೃಷ್ಟಿಯಲ್ಲಿ ನಾವು ಕೊನೆಮೆಟ್ಟಲವರು ಎಂಬ, ಬ್ರಹ್ಮನ ಇಚ್ಛೆಯನ್ನು ನಾವು ಬಲ್ಲೆವು ಎಂಬ, ನಮ್ಮ ಶಕ್ತಿಗೆ ಅಭ್ಯುದಯ ಪತನಗಳು ಅಧೀನವಾಗಿವೆ ಎಂಬ, ಪ್ರಕೃತಿ ನಮ್ಮ ಅಧೀನದ ದಾಸಿ ಎಂಬ, ನಮ್ಮ ಸಿದ್ಧಾಂತಗಳೆ ನಿತ್ಯಸತ್ಯಗಳು ಎಂಬ, ನಮ್ಮ ನೆಚ್ಚಿನ ತರ್ಕ ಉರುಳಿಬೀಳುವಾಗ ಶಾಂತಿ ನಮಗೆ ಲಭಿಸುತ್ತದೆ. 'ಶಾಂತಿ' ಎನ್ನುವ ಈ ಕವನದಲ್ಲಿ ಪ್ರಕಟವಾಗಿರುವ ಕವಿಚೇತನ ಎಷ್ಟು ಉದಾರವಾದದ್ದು !

ಮನುಷ್ಯನ ಜೀವನದಲ್ಲಿ ನಡೆಯುವ ಒಂದೊಂದು ಘಟನೆಯೂ ಅರ್ಥಪೂರ್ಣವಾದದ್ದು. ನಮ್ಮ ಖಂಡದೃಷ್ಟಿಗೂ ಅಲ್ಪಮತಿಗೂ ಈ ಘಟನೆಗಳು ಅರ್ಥಹೀನವೋ ಅನರ್ಥಕಾರಕವೋ ಎನಿಸಿದರೆ ಆಶ್ಚರ್ಯವಿಲ್ಲ. ಆದರೆ ದೂರಾಲೋಚನೆಯು ಕವಿಚೇತನವು, ಒಂದಾದ ಮೇಲೆ ಒಂದರಂತೆ ದುರ್ಭರ ಶೋಕವು ಬಂದು ಹೃದಯವನ್ನು ತಿನ್ನುತ್ತಿರುವಾಗ, 'ಹಿಂದೆ ಆದುದು ಎಲ್ಲ ಬಂದು ಹೋದುವು ಪೆಲ್ಲ ಇಂದು ಯೋಚಿಸಲೊಂದು ಕ್ರಮದೊಳಾಗಿಹವು' ಎಂಬ ತೀರ್ಮಾನಕ್ಕೆ ಬಂದು ನಿಲ್ಲುತ್ತದೆ. ಹಿಂದಣದರ ಅರಿವು ನಮ್ಮನ್ನು ಯಾವಾಗಲೂ ಕಾಯುತ್ತದೆ. ಆ ಅರಿವು 'ನಡೆ, ನಿಲ್ಲಬೇಡ ಪೊಡವಿಗತಿಗೆ ಈ ನಿನ್ನ ಅಡಿಯು ಗತಿಯನುವಡಿಸು ತಡೆಮಾಡದಿರು ಸಾಗು ಎಲ್ಲ ಸರಿಯುಪುದು' ಎಂದು ಧೈರ್ಯವನ್ನು ತುಂಬುತ್ತದೆ.

> ವಿಶ್ವಸಂಸಾರದೊಳು ನಿನ್ನಂಶವೆನಿಸಿರದು
> ನಿಶ್ಚಯವು ನಿನ್ನಿನಿಸನಂತವಹುದು,
> ಸತ್ಸೇವೆಯಿಂದವನನೊಲಿಪ ಯತ್ನಗಳೆಲ್ಲ
> ವಿಶ್ವಸಂಕಲ್ಪದಲಿ ಪೂರ್ಣಗೊಳ್ಳುವುವು
> ಇಂದು ಕಾಣದ ದಾರಿ ಮುಂದೆ ಕಾಣುವುದೇನೊ
> ಅಂದು ಕರುಣೆಗಳನ್ನು ಅಳೆಯಬಹುದೇನೊ
> ಇಂದಿನಂತೆಯೆ ಮುಂದು ಕ್ರಮವು ತೋರುವುದೇನೊ
> ಇಂದಿನದೆ ಹಿರಿದೇನು ? — ನಾಳೆ ತಿಳಿಸುವುದು'

— ಈ ಸಾಂತ್ವನ ನೊಂದ ಜೀವಕ್ಕೆ ಎಂತಹ ಭರವಸೆ !

ಇಲ್ಲದಿರುವ ಬೇರೆ ಯಾವುದೋ ಒಂದನ್ನು ಅರಸುತ್ತ ಅನವರತವೂ ತೆರತೆರನಾಗಿ ಹೊಯ್ದಾಡಿ ಭಂಗವಡೆಯುತ್ತೇವೆ. ಆದರೆ ಮರಳಿ ಸನ್ನಾಹಗೈಸುವುದೂ ಮೋಹಿಸುವುದೂ ಬರಿ ಮಾಯೆ ಎಂದು ಇಹವನ್ನು ದೂಡಬೇಡ ಮನವೇ ಎಂದು ಕವಿ ಇನ್ನೊಂದು ಸಂದರ್ಭದಲ್ಲಿ ಎಚ್ಚರಿಕೆಯ ಮಾತು ಆಡಿದ್ದಾರೆ. ಮಾಯೆಯೇ ಸತ್ಯ, ಮಾಯೆಯೇ ಸೌಂದರ್ಯ, ಮಾಯೆಯೇ ಸಂಸಾರಸಾರಸರ್ವಸ್ವ, ಮಾಯೆಯೇ ಅಖಿಲತಳಧರ್ಮದ ಆಧಾರ, ಮಾಯೆಯೇ ಮಾನವನ ಮೂಲಬಲ. ಈ ಮಾಯೆಯ ಬಯಲಿನಲ್ಲಿ ಸಿಂಗರದ ಖನಿಯಿದೆ. ಬಳ್ಳಿಗಳೂ, ಹೂವುಗಳೂ, ಹಣ್ಣುಗಳೂ, ಪರಿಮಳಗಳೂ ಇವೆ. ಈ ಎಲ್ಲ ಹೂ ಹಣ್ಣು ಸವಿಕಾಂತಿಗಳ ಮೀರಿ ಎಲ್ಲವನ್ನೂ ಬೆಳಗುತ್ತಿದೆ, ಸ್ನೇಹವೆಂಬ ಹೂವು. ಹೀಗೆಂದು ಮಿತ್ರಸ್ನೇಹದ ಕಟ್ಟಕ್ಕರೆಯ ಮಮತೆ ಮನಸ್ಸಿಗೆ ಆಪ್ಯಾಯಮಾನವಾಗಿ ಒದಗಿಬರುವ ಸಂಗತಿಯನ್ನು ಕವಿ ಹಾಡಿದ್ದಾರೆ.

ಎಷ್ಟು ಮನಸ್ಸನ್ನು ಸಮಾಧಾನಕ್ಕೆ ತಂದುಕೊಂಡರೂ ಜೀವನ ಒಂದೊಂದು ಸಲ 'ಒಣಗಿದ ಎಳೆಗಾಯಿ'ಯ ಹಾಗೆ, 'ಅಳಿದನ ಎದೆಗೂಡಿನ' ಹಾಗೆ. 'ಹಾಳು ತೋಟದ ತರುಗಳ ಆಲವಾಲ'ದ ಹಾಗೆ ರಸರಹಿತವಾಗುತ್ತದೆ. ಗಾಳಿಗೆ ಅಲುಗುವ ಅರಳಿಯ ಎಲೆಯ ಹಾಗೆ ಕೆಂಪಗೆ ಕೋಮಲವಾಗಿ ನಳನಳಿಸುತ್ತಿದ್ದ ಹೃತ್ಪಲ್ಲವ

ಬಾಡಿಹೋಗುತ್ತದೆ. ಹೋದ ಭಾಗ್ಯದ ನೆನಪು ಮನಸ್ಸನ್ನು ತಿನ್ನುತ್ತದೆ. ಅಂತರಂಗ ಕೊರಗುತ್ತದೆ. ಯಾತನೆಯನ್ನು ಅನುಭವಿಸಿ ಅನುಭವಿಸಿ, ಚಿಂದಿಬಟ್ಟೆಯ ಹಾಗೆ ಛಿದ್ರಛಿದ್ರವಾಗುತ್ತದೆ. ಮನ ಪಾಳುಬೀಳುತ್ತದೆ, ಮರುಭೂಮಿಯಾಗುತ್ತದೆ. ರೆಂಬೆ ಕೊಂಬೆಗಳೊಣಗಿ ನಿಂತ ಮೊಂಡು ಮರವಾಗುತ್ತದೆ. 'ಇಂದು' ಎಂಬ ಕವಿತೆಯಲ್ಲಿ ಮನಸ್ಸಿನ ಈ ತುಯ್ತವನ್ನು ಕವಿ ಎದೆಗರಗುವಂತೆ ಚಿತ್ರಿಸಿದ್ದಾರೆ. ಇಂತಹ ಸಂದರ್ಭದಲ್ಲಿ 'ಓಡಿಹೋಗು ಜಗವು ಬೇಡವೆಂದು ನುಡಿದು ಮನವು ಮತ್ತೆ ಬೇಡ ನಿಲ್ಲು ಹೇಡಿತನವು ಎಂಬುದೊಡನೆಯೆ.' 'ಎರಡು ದನಿಗಳು' ಹೀಗೆ ಹೃದಯಗಹ್ವರ ದಲ್ಲಿ ಮೊಳಗಿದಾಗ ಕೊನೆಯ ತೀರ್ಮಾನವೊಂದು ರೂಪುಗೊಳ್ಳುತ್ತದೆ: 'ಚೆಲುವು ನಿಲ್ಲದಿದ್ದರೇನು ಬಲವು ಕುಗ್ಗುತಿದ್ದರೇನು ಪ್ರಿಯರ ಸಖರ ಒಲವು ನೇಹ ಕುಂದು ತಿದ್ದರೇನು? ಚೆಲುವು ಒಲವು ಬಲವು ನೇಹ ಇರುವವರೆಗು ಸವಿಯೆ ಅಲ್ತೆ! ಬರುವುದೆಲ್ಲ ಬರಲಿಯೆಂದು ಕೊಡುವ ಕಾಲ ಕೊಂಡು ಪೋಪುದೆಂದು ನಂಬುತೆ ವಿಧಿಯ ಕೆರಳು ಕೋಪವೆಂದು ಅಳುಕದಂತಿರು. ಎಡರ ಶರದ ಘಾತವೆಂದು ಮಣಿಯ ದಂತಿರು....' ಈ ವಿವೇಕೋದಯ, ಈ ಸ್ಥಿತಪ್ರಜ್ಞೆ ಕತ್ತಲ ಮನೆಗೆ ಮಣಿದೀಪ!

ನಚ್ಚು ಅಥವಾ ಭರವಸೆ ಒಂದು ದೊಡ್ಡ ಊರೆಗೋಲು. ಮುಂದೆ ಒಳ್ಳೆಯ ದಾಗುತ್ತದೆ ಎನ್ನುವ ಒಂದು ನಂಬಿಕೆಯೇ ಮನಸ್ಸಿಗೆ ಎಷ್ಟೋ ನೆಮ್ಮದಿ.

ಎನಿತು ಬಡತನವಿರಲಿ ಎಡರು ಕವಿದಿರಲಿ
ಎನಿತರಾಯಸ ತೋರಿ ಬೇಸರಾಗಿರಲಿ
ಎನಿತು ಮಹದಾಸೆಗಳು ಭಂಗವಡೆದಿರಲಿ
ಮರುಳು ಹೃದಯವು ಸುಖವ ಬಯಸಿ ಬಯಸುವುದು.

ಈ ನಚ್ಚಿನ ಇನ್ನೊಂದು ಮುಖ 'ವಿಶ್ವಾಸ' ಕವನದಲ್ಲಿ ಕಾಣ ಸಿಗುತ್ತದೆ:

ಮಾನವನೆತ್ತರ ಆಗಸದೇರಿಗೆ
    ಏರುವವರೆಗೂ ಬೆಳೆದೇವು;
ಮಾನವಹೃದಯಕೆ ವಿಶ್ವವಿಶಾಲತೆ
    ಹಾಯುವವರೆಗೂ ಹಾದೇವು.

ಸಮಾಧಾನ, ಪೂರ್ವಾಪರವಿವೇಚನೆ, ಧೈರ್ಯಸ್ಥೈರ್ಯ, ವಿಶ್ವಾಸ ಈ ಮುಂತಾದ ಗುಣಗಳನ್ನು ಪೋಷಿಸಿಕೊಂಡು ಮನಸ್ಸನ್ನು ಒಂದು 'ಹದ'ಕ್ಕೆ 'ಪಾಕ'ಕ್ಕೆ 'ಶುಚಿ'ಗೆ ತಿದ್ದಿ ಪಳಗಿಸಿ ಆ ಮೂಲಕ ಇಹಪರಗಳ ಪ್ರೇಮ ಶ್ರೇಯಗಳನ್ನೂ ಸುಖ ಶಾಂತಿಗಳನ್ನೂ ಗಳಿಸಲು ಪ್ರಯತ್ನಿಸಬೇಕು ಎನ್ನುವ ತತ್ವ ಈ 'ಆತ್ಮಸಾಂತ್ವನ'ದ ಗುಂಪಿನ ಕೃತಿಗಳಲ್ಲಿ ಎದ್ದು ಕಾಣುತ್ತದೆ.

ಪ್ರಣಯ ಜೀವನದ ಚಿತ್ತವೃತ್ತಿಯ ಬಗೆಬಗೆಯ ವ್ಯಾಪಾರಗಳನ್ನು ಕುರಿತು ಬರೆದ ಕವನಗಳಲ್ಲಿ ಶುಚಿಜೀವನದ ವಿಶಿಷ್ಟವಾದ ಕಾಣ್ಕೆಯೊಂದು ವ್ಯಕ್ತವಾಗುತ್ತದೆ. ಮೊದಲು ಇಲ್ಲಿ 'ಸಪ್ತಪದಿ' ಎಂಬ ಕವನವನ್ನು ನೆನೆಯಬಹುದು. ಯಾರೋ ಎಲ್ಲೋ ಇದ್ದವರಿಬ್ಬರನ್ನು ತಂದು ಸತಿಪತಿಗಳನ್ನಾಗಿ ಮಾಡಿದರು. ಹೋಮವನ್ನು ಮಯ್ಯಿಸಿ ಹರಕೆಯನ್ನು ಇಕ್ಕುತ್ತ ನೀವು ದಂಪತಿಗಳು ಎಂದರು. ಗುರುಹಿರಿಯರ ಪ್ರೇರಣೆ ಅನುಗ್ರಹಗಳ ಫಲವಾಗಿ ವಿಧಿವತ್ತಾಗಿ ಮದುವೆಯಾದ ಈ ಸತಿಪತಿಯರ ಬಾಳಿನಲ್ಲಿ ಆ ಕಾಲಕ್ಕೆ ಎಂತಹ ಶುಭದ ಆದರ್ಶ ಮನಸ್ಸಿನಲ್ಲಿ ಮೂಡಬೇಕು ಎಂಬುದನ್ನು ಕವಿ ಹೀಗೆ ವರ್ಣಿಸಿದ್ದಾರೆ:

'ಮನಗಳನರಿಯೆವು ನಡೆಗಳ ಕಾಣೆವು
ಹಿರಿಯರ ಬಯಕೆಗೆ ಬಾಗಿಹೆವು
ಮುಂದಿನ ಬಾಳಿನ ಪಯಣದಲಿಬ್ಬರು
ತೆರಳುತೆ ದಾರಿಯ ನಡೆಯುವೆವು.
ಒಂದೇ ದೋಣಿಗೆ ಹುಟ್ಟನು ಹಾಕುತ
ಕಡಲಿನ ಅಲೆಗಳ ದಾಟುವೆವು
ಒಂದೇ ಗುರಿಯಲಿ ಮುಂದಕೆ ಸಾಗುತೆ
ಆಚೆಯ ಬಂದರ ಮುಟ್ಟುವೆವು.'

ವಿಶುದ್ಧವೂ ಸಾತ್ವಿಕವೂ ಅನ್ಯೋನ್ಯಾವಲಂಬಿಯೂ ಆದ ಈ ಮಧುರಪ್ರೇಮ ದಂಪತಿಗಳಲ್ಲಿ ಕುದುರಿದರೆ ಆ ಸಂಸಾರ ಸ್ವರ್ಗಸದೃಶವಲ್ಲದೆ ಮತ್ತೇನು? ಗಂಡ ಹೆಂಡಿರಲ್ಲಿ ಪ್ರೀತಿ, ವಿಶ್ವಾಸ ಎನ್ನುವುದು ಎಷ್ಟು ಗಾಢವಾಗಿ ರೂಢಮೂಲವಾಗಿ ಇರಬೇಕು, ಇದ್ದರೆ ಚೆನ್ನ ಎನ್ನುವುದನ್ನೂ ಕವಿ ಇಲ್ಲಿ ಕಾಣಿಸಿದ್ದಾರೆ:

ಒಬ್ಬರ ಗುಣಕಿನ್ನೊಬ್ಬರು ಸೋಲುತೆ
ಕುಂದನು ಲೆಕ್ಕಿಸದಿದ್ದೇವು
ಕುಂದಿಗೆ ಕೊರತೆಗೆ ಕೆರಳದ ತೆರದಲಿ
ದಿನವೂ ಸಹನೆಯ ಕಲಿತೇವು.

ಉರಿ ಬರಲಿ, ಸಿರಿ ಬರಲಿ, ಈ ಪ್ರೇಮಕ್ಕೆ ಚ್ಯುತಿಯಿಲ್ಲ, ಚ್ಯುತಿ ಬಾರದು ಎಂಬ ನೆಚ್ಚು ಸತಿಪತಿಗಳಲ್ಲಿ ಮೂಡಬೇಕು. ಈ ಜನ್ಮದಲ್ಲಿ ಮಾತ್ರ ಈ ಪ್ರೇಮ ಸತಿಪತಿಯರನ್ನು ಬೆಸೆಯುವುದೆಂದಲ್ಲ. ಪ್ರೇಮ ಶಾಶ್ವತವಾದದ್ದು. ಜನ್ಮಾಂತರ ಸಂಸ್ಕಾರರೂಪಿಯಾದದ್ದು. 'ಹೆಜ್ಜೆಗಳೇಳನು ಈಗಿಡುವಂತೆಯೆ ಶಲೆಗಳನೇಳನು ನಡೆದೇವು!' ಎಂದು ಸತಿಪತಿಯರ ಮನಸ್ಸು ನುಡಿಯುತ್ತದೆ. ಇಂತಹ ಸತಿಪತಿಯರ ಸುಂದರ ಸಂಸಾರದಿಂದ ಅವರ ಮನೆ ಮಾತ್ರವಲ್ಲ, ನೆರೆ, ಹೊರೆ, ಊರು, ಕೇರಿ, ಜನ, ಜನಪದ

ಎಲ್ಲವೂ ನಲಿಯುವಂತಾಗುತ್ತದೆ. ಈ ಪ್ರೇಮಿಗಳ ಬಾಳಿನ ಒಂದು ಸಂತಸ, ಲೋಕವನ್ನೇ ತೊಳೆದು ಬೆಳಗುವಂತಹ ಮಹಾಪೂರವಾದೀತು.

'ಸಪ್ತಪದಿ'ಯ ತರುವಾಯ 'ಮನೆತುಂಬಿಸುವುದು' ಎನ್ನುವ ಕವನದ ಭಾವ ವನ್ನು ನೆನೆಯುವುದು ಅವಶ್ಯ. ಹೆತ್ತ ತಾಯಿತಂದೆ ತಮ್ಮ ಮಗಳನ್ನು ಮದುವೆ ಮಾಡಿಕೊಟ್ಟು ಗಂಡನೊಡನೆ ಅವಳನ್ನು ಅವಳ ಅತ್ತೆ ಮಾವಂದಿರ ಮನೆಗೆ ಕಳುಹಿಸಿ ಕೊಡುವಾಗ ತಮ್ಮ ಮಗುವನ್ನು ಕುರಿತು ಅವರು ಆಡುವ ಮಾತು ತುಂಬ ಹೃದ್ಯ ವಾದದ್ದು, ಭಾವಪೂರ್ಣವಾದದ್ದು. 'ಎಮ್ಮ ಮನೆಯಂಗಳದಿ ಬೆಳೆದೊಂದು ಹೂವು', 'ಎಮ್ಮ ಮನೆಬೆಳಕು' ಎಂದು ಈ ಮುದ್ದುಮಗಳನ್ನು ಪ್ರೀತಿಯಿಂದ ಕರೆದು ಹೆಣ್ಣೊಪ್ಪಿಸುತ್ತಾರೆ ಹೆತ್ತವರು :

ಮರೆ ಮೋಸ ಕೊಂಕುಗಳನರಿಯಳಿವಳು;
ಇನಿಸವಿಶ್ವಾಸವನು ಕಂಡರಿಯಳು;
ಕಷ್ಟಗಳ ಸೈಸದೆಯೆ ಕಾಣದೆಯೆ ಬೆಳೆದವಳು
ಸಲಹಿಕೊಳಿರೀ ಮಗಳನೊಪ್ಪಿಸುವೆವು.
ಕಠಿಣಗಳ ನೆಳಲ್ ಸುಳಿಯಲದುರಿ ಬಾಡುವಳು
ಹಿರಿಮಂಜು ಬಳಲಿಸಿದ ಹೂವಿನಂತೆ
ಸುಖದಲ್ಲಿ ದುಃಖದಲಿ ಎಲ್ಲದೆಸೆಯಿರವಿನಲಿ
ನಿಮ್ಮ ಪಾಲಿಗೆ ನಿಲುವ ಕುವರಿಯಿವಳು.

ಈ ಮುಂತಾದ ಮಾತುಗಳಲ್ಲಿ ಗಂಡು ಮದುವೆಯಾಗುವ ಹೆಣ್ಣು ಎಷ್ಟು ಕೋಮ ಲಳು, ಅವಳ ತಾಯಿತಂದೆಯರಿಗೆ ಅವಳು ಎಷ್ಟು ಅಕ್ಕರೆಯವಳು ಎನ್ನುವ ಕಲ್ಪನೆ ಗಂಡಿನ ಬಗೆಗೆ ಬರುತ್ತದೆ. ಆ ಗಂಡಹೆಂಡಿರಲ್ಲಿ ಅನ್ಯೋನ್ಯ ಪ್ರೇಮ ಪಲ್ಲವಿಸುವು ದಕ್ಕೆ ಹೆಣ್ಣಿನ ವಿಷಯವಾಗಿ ಗಂಡಿನಲ್ಲಿ ಈ ಭಾವನೆ ಬಲಿಯಬೇಕಾಗುತ್ತದೆ.

ತನಗೆ ಅನುರೂಪಳಾದ ಹೆಣ್ಣನ್ನು ಗಂಡು, ತಂದು ಮನೆತುಂಬಿಸಿಕೊಳ್ಳುತ್ತಾನೆ. ಗಂಡಹೆಂಡಿರು ಪ್ರಿಯ ಪ್ರೇಯಸಿಯರಾಗುತ್ತಾರೆ. ಸಂಸಾರದ ಸುಖದ ದಿನಗಳು ಪ್ರಾರಂಭವಾಗುತ್ತವೆ. ತನ್ನ ಪ್ರಿಯೆಯ ಉಂಗುರರವಕೇಳಿಯೆ ಪ್ರಿಯನ ಸಂತಸ ವಾಂತ ಎದೆ ಮೊರೆಯುತ್ತದೆ. ತರುಗಳ ನೆಳಲಲ್ಲಿ, ತಿಳಿನೀರಿನ ಕೊಳದಲ್ಲಿ ಅರಳುವ ಹೊನ್ನೈದಿಲೆಯಂತೆ ನೀನು ನನ್ನ ಮನೆಯಲ್ಲಿ ಬಿರಿದರಳುತ್ತ ಬೆಳಗಿ ಸಂತಸವನ್ನು ಬೀರುತ್ತಿದ್ದೀಯೆ ಎಂದು ಪ್ರಿಯನು ನುಡಿಯುತ್ತಾನೆ. ಕಾಲುಂಗುರದ ಮೃದು ನಿನದ, ಕೈಬಳೆಗಳ ಘಲು ಘಲು ನಾದ, ಮುಡಿಯ ಮಲ್ಲಿಗೆ ಜಾಜಿ ಗುಲಾಬಿಗಳ ಪರಿಮಳ, ಆ ಮೊಗದ ನಗುನಗುವ ಕಣ್ಣುಗಳು—ಇವೆಲ್ಲವೂ ಪ್ರಿಯನ ಬಗೆಗೆ ನಲಿ ವನ್ನೀಯುತ್ತವೆ. ಈಗ ಪ್ರಿಯನು ಪ್ರೇಮಾರಾಧಕನಾಗುತ್ತಾನೆ: 'ಬಾ ಬಾ ಬಾ ಚೆಲುವೆ ಬಾ ಕಮಲೆ ಮರೆಯುವ ಭವಭಯದಾಯಸವ, ಬರುವುದು ಬರಲೇಳಾ ಲಬ್ಬರಿಸಲಿ' ಎಂದು ಚೆನ್ನೆಯನ್ನು ಆಹ್ವಾನಿಸುತ್ತಾನೆ.

ಒಡಲೆರಡಾದರು ಒಂದು ಮನದಲಿ
ಒಂದು ಹೃದಯದಲ್ಲಂತರಂಗದಲಿ
ಹೊಂದಿ ಬಲಿದ ಮನದೊಂದು ದೃಢದಲಿ
ಒಂದೇ ಒಲವಿನ ವೀರದಲಿ.

ಬಳಿಗೆ ಬಾ ಬಾ ಬಾ ಚೆಲುವೆ ಎಂದು ಕರೆಯುತ್ತಾನೆ. ಮುಂದೆ ಈ ಪ್ರಿಯನು ತನ್ನ ಪ್ರಿಯೆಯನ್ನು ಕುರಿತು ಬಗೆಬಗೆಯ ಪ್ರೇಮಾಲಾಪಗಳನ್ನು ಬಿತ್ತರಿಸುತ್ತಾನೆ :

ಸುಮದೊಲಾನಿರುತಿರಲು
ನೀನು ಪರಿಮಳವು;

ಹೀಗೆ ಈ ಕಾದಲ ಕಾದಲೆಯರಲ್ಲಿ ಪ್ರೇಮ ಬಲಿಯುತ್ತದೆ. ಬಗೆಬಗೆಯ ಆಮೋದ ಪ್ರಮೋದಗಳನ್ನು ಸುಖಸಂಕಥಾವಿನೋದದಿಂದ ಈ ಪ್ರಿಯರು ಕಾಲಕಳೆಯುತ್ತಾರೆ. ಹೀಗೆ ಕೂಡಿ ಕಳೆದ ಕಾಲ ಮನಸ್ಸಿನ ಫಲಕದ ಮೇಲೆ 'ಅಳಿಸದ ನೆನಪು' ಎಂಬಂತೆ ಅಚ್ಚೊತ್ತಿ ನಿಲ್ಲುತ್ತದೆ. 'ನಿನ್ನೆ ನಡೆದಂತಿಹುದ ಮರೆವೆನೆಂತು ? ಎನ್ನ ಕಂಗಳ ಮುಂದೆ ಚಿತ್ರ ಕಟ್ಟಿದೊಲಿಹುದು, ಚಕ್ರವಾಕಗಳಂತೆ ಕೂಡಿ ಮೆಲ್ಲುಲಿದೆವೇ ಮಿಕ್ಕ ಲೋಕವ ಮರೆತು ಒರ್ವರೊರ್ವರೊಳು' ಎಂದು ತಮ್ಮ ದಿನಾಂತದ, ವಸಂತದ ಬಗೆಬಗೆಯ ವಿನೋದಗಳನ್ನು, ಕೇಳಿಗಳನ್ನು, ಹಾಡುಹರಟೆಗಳನ್ನು ನೆನೆನೆನೆದು ಪ್ರಕೃತಿಯ ಪ್ರಶಾಂತವೂ ರಮಣೀಯವೂ ಆದ ಆವರಣದಲ್ಲಿ ತಾವು ಸುಖಪಟ್ಟ ಕ್ಷಣಗಳನ್ನು ಸ್ಮರಿಸಿ ಸ್ಮರಿಸಿ ಸ್ಮರಣೆಯಲ್ಲಿಯೇ ಸುಖವನ್ನು ಈ ನಲ್ಲನು ಕಾಣುತ್ತಾನೆ.

ಇಂತಹ ಕಾದಲನು ತನ್ನ ಸತಿಯ ಚೆಲುವನ್ನು ಬಗೆಬಗೆಯಾಗಿ ಬಣ್ಣಿಸುತ್ತಾನೆ. 'ಸಿರಿ' ಎನ್ನುವ ಒಂದು ಕವಿತೆಯಲ್ಲಿ ಈ ಚೆಲುವಿನ ಸುಂದರವಾದ ಚಿತ್ರ ಕಾಣಬರುತ್ತದೆ. ತನ್ನ ಕಣ್ಣಿಗೂ ತನ್ನ ಬಗೆಗೂ ತನ್ನ ಕಿವಿಗೂ ಯಾವ ಯಾವ ಅಲಂಕಾರ ಸೊಬಗು ನಿಜದ ಪ್ರಿಯವಾದದ್ದು ಎಂದು ಪ್ರಿಯನು ಬಣ್ಣಿಸುತ್ತಾನೆ. ಈ ಬಣ್ಣನೆಯ ಎರಡು ಚಿತ್ರಗಳನ್ನು ಇಲ್ಲಿ ಕೊಡಬಹುದು :

'ಮುಂಗುರುಳು ಮುಂದುಗಡೆ ತೊಂಡಲಿದು ಹಾರುತಿರೆ
ಹಿಂದುಗಡೆ ಭುಜಕಿಳಿದು ತುಂಬುಮುಡಿ ತೂಗುತಿರೆ
ಕುಂಕುಮದ ಪುಡಿ ನೊಸಲ ನಡುವೆ ತಾ ರಂಜಿಸಿರೆ
—ಅದುವೆ ಸಿಂಗರವೆನ್ನ ಕಣ್ಣಿಚೆಲುವು.
ಒಂದು ಅಂಗುಲದಂಚ ಬಣ್ಣದೊಡಲಿನ ಸೀರೆ,
ಬಿಳಿಯ ಕುಪ್ಪಸ, ತುರುಬು ಗುಂಡು–ಸೆಕ್ಕು;
ಚಪ್ಪರದ ಮಲ್ಲಿಗೆಗೆ ತೋಳೆತ್ತಿ ಆಡುತಿರೆ
ಕೈಬಳೆಯು ಘಲ್ಲೆಂದು ಘಲುಕೆಂದು ಉಲುಕುತಿರೆ
—ಅದುವೆ ಸಿಂಗರವೆನ್ನ ಕಿವಿಗಳಿಂಪು.'

ಹೀಗೆ ಕೇವಲ ಬಾಹ್ಯಸೌಂದರ್ಯ ಮಾತ್ರವೇ ನಲ್ಲನಿಗೆ ಆಪ್ಯಾಯಮಾನವಾಗುತ್ತದೆ ಎಂದಲ್ಲ; ಈ ಸೌಂದರ್ಯಗಳ ಜೊತೆಗೆ ಇದನ್ನೂ ಮೀರಿಸುವ ಅಂತರಂಗದ ಎದೆಯೊಲುಮೆಯನ್ನೇ ಅವನು ಹಾಡುತ್ತಾನೆ. ಹೊರಗಿನ ಜಗತ್ತಿನ ಕುಟಿಲ ನಿಷ್ಕರುಣೆಗಳನ್ನೂ ಕರುಬು ಉಪೇಕ್ಷೆಗಳನ್ನೂ ಕಂಡು ನೊಂದ ಮನಸ್ಸಿಗೆ ಮನೆಗೆ ಬಂದಾಗ ಸತಿಯ ಈ ಮೈಮನಗಳ ಚೆಲುವು ಒಲವುಗಳು ಅವನ ಚೇತನಕ್ಕೆ ವಿಶೇಷ ಸ್ಫೂರ್ತಿಯನ್ನು ಕೊಡುತ್ತವೆ.

ಇಲ್ಲಿಯವರೆಗೆ ಗಂಡು, ಹೆಣ್ಣಿನ ವಿಷಯದಲ್ಲಿ ತಾಳುವ ಮನೋಭಾವವನ್ನು ಕಂಡದ್ದಾಗಿದೆ. ಮುಂದಿನ ಪದ್ಯದಲ್ಲಿ ಹೆಣ್ಣು, ಗಂಡಿನ ವಿಷಯದಲ್ಲಿ ಯಾವ ಮನೋಭಾವವನ್ನು ತಾಳಬಲ್ಲುದು ಎಂಬುದನ್ನು 'ಮಡದಿ' ಎನ್ನುವ ಕವಿತೆಯಲ್ಲಿ ಕವಿ ಕಾಣಿಸಿದ್ದಾರೆ. ಗೃಹಿಣಿಯಾದವಳ ನಿಶ್ಚಲವೂ, ನಿರ್ಮಲವೂ ಆದ ಪತಿಪ್ರೇಮ ಇಲ್ಲಿ ವ್ಯಕ್ತವಾಗಿದೆ. 'ನೀವಿಲ್ಲದ ಮನೆ ಬರಿದಾಗಿ ಕಾಂಬುದು, ನೀವಿದ್ದರೆ ಮನ ತುಂಬಿಹುದು; ನೀವಿಲ್ಲದೆ ಮನೆ ಕೆಲಸಗಳಾಗವು; ನೀವಿಲ್ಲದೆ ಬಾಳು ಬೇಸರವು' ಎಂದು ಪ್ರಾರಂಭವಾಗುವ ಈ ಕವಿತೆಯಲ್ಲಿ ಗರತಿಯ ಸ್ವಚ್ಛವಾದ ಪ್ರೇಮದ ಹೃದಯ ತೆರೆದು ತೋರುತ್ತದೆ. ಪತಿ ಊರಿನಲ್ಲಿ ಇಲ್ಲದೇ ಇದ್ದಾಗ 'ಮನೆಯಾಚೆ, ಊರಾಚೆ ಮನವೋಡಿ ದಣಿವುದು; ಗಿಡಕೆ ದಿನದ ನೀರು ನಿಲ್ಲುವುದು' ಎಂದು ಈ ಗರತಿ ಪತಿಯ ಕಾತರದಲ್ಲಿ ಮನೆಯ ಕೆಲಸಗಳಲ್ಲಿಯೂ ಅಲಸಿಕೆಯನ್ನು ತೋರುತ್ತಾಳೆ. 'ಇಂತಹ ತನ್ನ ಮನಸ್ಸಿನ ಬೇಗೆಯನ್ನು ಹೇಳಿದರೆ ಜನ ಪರಿಹಾಸಗೆಯ್ಯುತ್ತಾರೆ. ಹೇಳದೆ ಇದ್ದರೆ ಬೇನೆ ಇನ್ನೂ ಮೊನಚಾಗುತ್ತದೆ, ಇನ್ನೂ ಮೊನೆಯಾಗುತ್ತದೆ. ಬೆದರ ಹೆಣ್ಣು ಎಂದು ನೀವು ಆಡಿಕೊಂಡು ನಗುತ್ತೀರಿ. ನಾನು ನಿಮ್ಮನ್ನಗಲಿ ಒಂಟಿಯಾಗಿ ಇರಲಾರೆ' ಎಂದು ಈ ಹೆಣ್ಣು ಪತಿಯ ಪ್ರೇಮವನ್ನೂ, ಸ್ನೇಹವನ್ನೂ, ಸಾಮೀಪ್ಯಸುಖವನ್ನೂ ಬಯಸಿ ಬಯಸಿ ಅವನ ಅಗಲಿಕೆಯನ್ನು ಸಹಿಸಲಾರದೆ ಕೊರಗುತ್ತಾಳೆ.

'ಅಪಾತ್ರ' ಎನ್ನುವ ಇನ್ನೊಂದು ಕವಿತೆಯಲ್ಲಿ ಪ್ರಿಯನು ತನ್ನ ಪ್ರಿಯೆಯನ್ನು ಕುರಿತು ನೀನು ನನ್ನನ್ನು ಇಷ್ಟೊಂದು ಪ್ರೀತಿಸಿದ್ದೀಯೆ; ನಿನ್ನ ಪ್ರೀತಿಗೆ ನಾನು ಪಾತ್ರನೆ ಎಂಬ ಶಂಕೆ ನನ್ನನ್ನು ಬಾಧಿಸುತ್ತಿದೆ ಎಂದುಕೊಳ್ಳುತ್ತಾನೆ. ಸುಖದಲ್ಲಿಯೂ ದುಃಖದಲ್ಲಿಯೂ ಸ್ನೇಹಮಯಿಯಾಗಿ ನೀನು ನನ್ನೊಡನೆ ಇದ್ದೀಯೆ, ನನಗೋಸ್ಕರ ಜನರ ನಿಂದೆ ಅಪವಾದಗಳನ್ನು ಹೊತ್ತುಕೊಂಡೆ; ನಿನ್ನ ಕಷ್ಟವನ್ನು ಮರೆತು ನನ್ನ ಕಷ್ಟಗಳನ್ನು ಹಗುರಗೈದೆ. ನಿನ್ನ 'ಒಲುಮೆ ತುಂಬಿದ ಕಣ್ಣು ನಂದನದ ಹಣ್ಣು.' ಪ್ರೀತಿ ತುಂಬಿದ ನಿನ್ನ ಹೃದಯದಲ್ಲಿ ಸೃಷ್ಟಿಯ ಸೌಭಾಗ್ಯವೆಲ್ಲವನ್ನೂ ನಾನು ಕಾಣುತ್ತೇನೆ. ನನಗೆ ಆ ಹೃದಯದಲ್ಲಿ ಸಕಲ ವಾದ್ಯದ ಮೇಳವೂ ದಿವ್ಯಕಿನ್ನರರ ಗಾನವೂ ಪುಣ್ಯದ ಅಮೃತದ ಪಾನವೂ ದೊರೆಯುತ್ತದೆ. ಇಂತೆಲ್ಲ ಬಿತ್ತರಿಸಿ ಕೊನೆಗೆ 'ಏನನೀವೆನು ಹೇಳು ಕೆಳೆಗೆ ಪ್ರೇಮಕೆ ನಾನು ನಿನ್ನ ಪ್ರಣಯದ ಪುಣ್ಯ ದಾನಕೊಂಡ

ವನು; ಋಣವ ಹೊರಿಸುತ್ತಿರುವೆ ತೀರಿಸುವೆ ನಾನೆಂತು ಎಂದಿಗಾ ಸೌಭಾಗ್ಯ ದೊರೆವುದೆನಗೆ; ಧನ್ಯ ತ್ಯಾಗವ ಗೈವೆ ನಿನ್ನಾತ್ಮವರ್ಪಿಸುವೆ ಇನಿತು ಹಿರಿದಾನಕ್ಕೆ ಪಾತ್ರನಹೆನೆಂತು ?' ಎಂದು ಗಂಡು ಕೇಳುತ್ತಾನೆ. ಈ ಮಾತುಗಳಲ್ಲಿ ಪ್ರೇಮದ ಋಣವನ್ನು ಏನು ಮಾಡಿದರೂ ತೀರಿಸುವುದು ಅಸಾಧ್ಯ. ಅದು ಅಷ್ಟು ಗುರುತರವಾದದ್ದು; ಪವಿತ್ರವಾದದ್ದು ಎಂದು ಕವಿ ಸಾರಿದ್ದಾರೆ. ಹೆಣ್ಣಿನ ಪ್ರೇಮದ ನೆಲೆಬೆಲೆಗಳನ್ನು ಯತ್ಕಿಂಚಿತ್ತಾದರೂ ಅರಿತು ಅವಳ ಆ ತ್ಯಾಗದ ಮಹಿಮೆಯನ್ನು ಗಂಡು ಕೊಂಡಾಡುವುದಾದರೆ ಅದೇ ಹೆಣ್ಣಿನ ತ್ಯಾಗಕ್ಕೆ ಪ್ರತಿಫಲವಾದೀತು.

ಇಷ್ಟು ಅಪೂರ್ವವಾದ ಹೆಣ್ಣಿನ ಪ್ರೇಮಕ್ಕೆ ತಾನು ಅಪಾತ್ರ ಎಂದು ಗಂಡು ನುಡಿದರೆ ಅದಕ್ಕೆ ಪ್ರತಿಯಾಗಿ ನೀವೇ ನನಗೆ ಸರಿಯಾದ ದಾನಪಾತ್ರ ಎಂದು ಹೆಣ್ಣು ನುಡಿಯಬೇಕು. ಇಂತಹ ಭಾವನೆಯ ಒಂದು ಪದ್ಯ 'ದಾನಪಾತ್ರ'. 'ನೀವಿತ್ತರೆನಗುಂಟು, ಇಲ್ಲದಿರಲೇನಿಲ್ಲ. ಬೇಡಿ ಗಳಿಸಲುಬಹುದೆ ಕೆಳೆಯ, ಒಲವ ?' ಎಂದು ಹೆಣ್ಣು ಕೇಳುತ್ತಾಳೆ. 'ನಿಮ್ಮ ಕರುಣೆಯ ಕುಡಿಯು ಒಂದೆಳೆಯು ಬೀರಿರಲು ಅದುವೆ ಹಗಲೆಂದೆಣಿಸಿ ನಾ ನಲಿವೆನು' ಎಂದು ಆಕೆ ಹೇಳುತ್ತಾಳೆ. 'ನಿಮಗೆ ಬೇಕೆಂದಿರಲಿ, ಬೇಡವಾಗುತಲಿರಲಿ, ನಿಮ್ಮೆಣಿಕೆ ತೂಕಕ್ಕೆ ನಾನೇರದಿರಲಿ, ಎನ್ನ ಬಾಳ್ ದಿನದಿನಕೆ ಸವಿಯಾಗುವಂದದಲಿ, ರಸವಿಟ್ಟು ಬಲಿಗೊಳುವ ಹರಕೆ ನೀಡಿ' ಎಂದು ಹೆಣ್ಣು ಬೇಡುತ್ತಾಳೆ. ಹೀಗೆ 'ಅಪಾತ್ರ', 'ದಾನಪಾತ್ರ' ಎರಡೂ ಮನದನ್ನ ಮನದನ್ನೆಯರ ಪರೇಂಗಿತ ಜ್ಞಾನದ ಪ್ರಣತೆಯಲ್ಲಿ ಹೊತ್ತಿಸಿದ ಎರಡು ಕುಡಿವೆಳಗುಗಳು.

ಹೀಗೆ ನಲ್ಲನಲ್ಲೆಯರ, ಮನದನ್ನ ಮನದನ್ನೆಯರ ಪ್ರೀತಿಯ ಸಂಸಾರ ಮುಂದುವರಿಯುತ್ತದೆ. ಆಗೀಗ ವಿನೋದಕ್ಕಾಗಿ ಸರಸಕ್ಕಾಗಿ ಗಂಡು, ಹೆಣ್ಣನ್ನು ಕುರಿತು ಚೆಲ್ಲಾಟವಾಡುತ್ತಾನೆ. ಆ ಚೆಲ್ಲಾಟದ ಒಂದು ರಮ್ಯವಾದ ಪ್ರಣಯ ಚೇಷ್ಟೆಯ ಚಿತ್ರ 'ಕೊಂಕು' ಎಂಬ ಕವಿತೆಯಲ್ಲಿ ರೂಪುಗೊಂಡಿದೆ. 'ಹುಬ್ಬು, ನುಡಿ, ಕಣ್ಣ ಕುಡಿನೋಟ ಒಂದು ಒಂದನು ಮೀರಿ ಕೊಂಕು ಕಡು ಕೊಂಕು' ಎಂದು ಪ್ರಾರಂಭವಾಗುವ ಈ ಪದ್ಯದಲ್ಲಿ ನಲ್ಲನಲ್ಲೆಯರ ಚೆಲ್ಲಾಟ ಹೃದ್ಯವಾಗಿ ನಿರೂಪಿತವಾಗಿದೆ. 'ನಿಡು ಬಯಕೆಯನ್ನು ಸಲ್ಲಿಸುತ್ತಿದ್ದರೆ ಒಲ್ಲೆ ಬೇಡವೆನ್ನುತ್ತೀರಿ. ಮನಕ್ಕೆ ಬೇಡಾದ್ದನ್ನೇ ಒಪ್ಪುತ್ತೀರಿ. ತೆರೆದ ಕಣ್ಣಿನಲ್ಲಿ ಇತ್ತ ನೋಡುತ್ತಿದ್ದೀರಿ ಎನ್ನಲು ಎಲ್ಲಿಯದನ್ನೋ ಯಾವುದನ್ನೋ ಕಾಣುತ್ತಿರುವಿರಿ. ಕಣ್ಣು ಮುಚ್ಚಿದ್ದಾರೆ ಎಂದು ಬೇರೆ ಕಡೆ ತಿರುಗಿದರೆ ಕೆಳಗಣ್ಣನೋಟದಲ್ಲಿ ಹೊಂಚುಕಾಯುತ್ತಿರುವಿರಿ. ಇದೇ ಸರಿ ನಿಶ್ಚಯ ಎಂದು ನಂಬಿದರೆ ಅಲ್ಲ ಅಲ್ಲ ಎಂದು ತಲೆಯಾಡಿಸುತ್ತೀರಿ' ಹೀಗೆ ಪದ್ಯ ಮುಂದುವರಿಯುತ್ತದೆ. ಕೇವಲ ಹುಡುಗಾಟಿಕೆಗಾಗಿ, ವಿನೋದಕ್ಕಾಗಿ ಇಂತಹ ಸೋಗು ನಲ್ಲನಲ್ಲೆಯರಲ್ಲಿ ನಡೆಯುವುದು ಸರ್ವಸಾಮಾನ್ಯ.

ನೀವು ಇಲ್ಲದ ಬಾಳ್ಗೆ ಶುಚಿಯುಂಟೆ ರುಚಿಯುಂಟೆ ?
ನಿಮ್ಮೊಡ್ಡು ಜಾಲದಿಂ ಬಿಡುಗಡೆಗಳುಂಟೆ ?

ಈ ಕೊನೆಯೆರಡು ಪಾದಗಳಲ್ಲಿ ಈ ಪ್ರೇಮಕೇಳಿಯ ಸೋಗಿಗೆ ಕೊನೆ ಮೊದಲಿಲ್ಲವೆಂದೂ ಈ ಆಟದಲ್ಲಿ ಸೋತವರೇ ಗೆದ್ದಂತೆ ಎಂದೂ, ಗೆದ್ದವರೇ ಸೋತಂತೆ ಎಂದೂ ಇಂತಹ ಲೀಲಾವಿನೋದಗಳಿಂದ ಒಬ್ಬರನ್ನೊಬ್ಬರು ಅರಿಯುವುದೂ, ಕಷ್ಟಕಿಲ್ಬಿಷಗಳನ್ನು ಮರೆಯುವುದು ಸಾಧ್ಯ ಎನ್ನುವುದೂ ಧ್ವನಿತವಾಗುತ್ತಿದೆ.

ಸತಿಪತಿಯರ ದಾಂಪತ್ಯಜೀವನ ಎಲ್ಲ ಕಾಲಕ್ಕೂ ಸುಖವಾಗಿರುತ್ತದೆ ಎಂದು ಹೇಳುವುದಕ್ಕಿಲ್ಲ—ಬಗೆಬಗೆಯ ಕಷ್ಟನಷ್ಟಗಳಿಂದ ಆಗಾಗ ವಿರಸದ ಸಂದರ್ಭಗಳು ಒದಗಿಬರುತ್ತವೆ. ಇಂತಹ ಒಂದು ವಿರಸದ ಚಿತ್ರವನ್ನು 'ಸವೆದ ಹರುಷ'ದಲ್ಲಿ ನಾವು ಕಾಣುತ್ತೇವೆ. ಸೃಷ್ಟಿ ಮೋಹಕವಾಗಿದೆ; ನಕ್ಷತ್ರಗಳು ಆಗಸದಲ್ಲಿ ಹೊಳೆಯುತ್ತಿವೆ; ಚಂದ್ರನು ಬೆಳಗುತ್ತಿದ್ದಾನೆ. ಗಂಡಿನ ಹೃದಯದಲ್ಲಿ ಪ್ರೇಮ ಉಕ್ಕೇರಿದೆ. ಆದರೂ ಹೆಣ್ಣು ಯಾವುದೋ ದುಃಖದಲ್ಲಿ ಮುಖವನ್ನು ಗಂಟಿಕ್ಕಿದ್ದಾಳೆ. ಕೆಟ್ಟ ಮಾತುಗಳನ್ನು ಆಡುತ್ತಾಳೆ. 'ಬಯಕೆ ಮೈ ತೆರೆದಿರುವ ಕಾಲಕೆ ನುಡಿಯು ಗರಗಸ ಕುಯ್ಯುತಿದೆ; ಹಾಡ ಹೊಮ್ಮಿಸಿ ಕೊರಲು ತೆರೆಯಲು ಬಿರುಬಿನುಬ್ಬಸ ತೊಡಕಿದೆ; ಚಿಮ್ಮಿ ಚಿಗಿಯುವ ಒಲುಮೆ ಒರತೆಯ ಕಟ್ಟೆ ಗರಳವು ಉಕ್ಕಿದೆ' ಎಂದು ಮುಂತಾಗಿ ಕವಿ ವರ್ಣಿಸಿದ್ದಾರೆ.

'ನಗುವ ಚಂದ್ರ' ಎನ್ನುವ ಕವಿತೆಯಲ್ಲಿಯೂ ಮುನಿದ ಮಡದಿಯನ್ನೇ ಕುರಿತು ನುಡಿಯುವ ಗಂಡಿನ ಒಂದು ಚಿತ್ರವಿದೆ. 'ನೀರೆ, ನಮ್ಮ ಸಿಟ್ಟು ನೋಡಿ ಬೆಳ್ಳಿ ಚಂದ್ರನು ನಗುತ್ತಾನೆ. ಇನ್ನು ನಿಮಿಷದ ಅರ್ಧದಲ್ಲಿ ನೀನು ಕರಗುತ್ತೀಯೆ' ಎನ್ನುತ್ತಾನೆ. ನಲ್ಲನು ತಮ್ಮ ಮುನಿಸನ್ನು ನೋಡಿ ಚಂದ್ರನು ನಗುವನೆಂದು ವರ್ಣಿಸಿರುವುದು ತೀರ ನೂತನವಾಗಿದೆ. ಜೊತೆಗೆ ನಲ್ಲನಿಗೆ ಒಪ್ಪಿಗೆಯಾದ ಉಡಿಗೆತೊಡಿಗೆಗಳನ್ನೇ ನಲ್ಲೆ ತೊಟ್ಟುಕೊಳ್ಳುತ್ತಿದ್ದಾಳೆಂದು ಚಂದ್ರ ಹೇಳುತ್ತಿದ್ದಾನೆ ಎನ್ನುವ ರೀತಿಯಲ್ಲಿ ನಲ್ಲನು ನಲ್ಲೆಯನ್ನು ಸಮಾಧಾನಪಡಿಸುತ್ತಿದ್ದಾನೆ. ಇದನ್ನು ಸರಿಯಾಗಿ ಅರ್ಥ ಮಾಡಿಕೊಂಡರೆ ಈ ಕವಿಕಲ್ಪನೆಯ ಸೊಬಗು ನಮಗೆ ವೇದ್ಯವಾಗುತ್ತದೆ. 'ನೀರನೀರೆಯರೊಲಿದು ಸೇರಲು ಮೂರು ಲೋಕವು ನಲಿಯದೆ; ಎರಡು ಬಾಳ್ಗಳು ಬೆರೆವ ಹರುಷದಿ ಇಳೆಯ ಹರುಷವು ಬೆಳೆಯದೆ?' ಎಂದು ಕವಿ ಕೇಳಿದ್ದಾರೆ. ಎರಡು ಜೀವಿಗಳು ಕೂಡಿ ಒಲಿದು ಬಾಳುವುದಕ್ಕಿಂತ ದೊಡ್ಡದು ಯಾವುದಿದೆ—ಜಗದಲ್ಲಿ?

'ಅಗಲಿಕೆ', 'ವಿರಹಿ' ಎಂಬೆರಡು ಕವನಗಳಲ್ಲಿ ಇಂತಹ ಅನ್ಯೋನ್ಯಾಶ್ರಯಿಗಳಾದ ಸತಿಪತಿಗಳ ವಿರಹಕಾಲದ ಮನೋಧರ್ಮದ ಚಿತ್ರವನ್ನು ಕೊಡಲಾಗಿದೆ. ಹೆಣ್ಣಿಗಾಗಲಿ, ಗಂಡಿಗಾಗಲಿ ಅಗಲಿಕೆಯೆನ್ನುವುದು ಸಹಿಸಲು ಸಾಧ್ಯವಿಲ್ಲದಷ್ಟು ನೋವಾಗುವುದು ಸಹಜ. 'ಮೇಘದೂತ'ದಲ್ಲಿ ಬರುವ ವಿರಹಿ ವಿರಹಿಣಿಯರ ಚಿತ್ರ ಜಗತ್ಪ್ರಸಿದ್ಧವಾದ್ದಷ್ಟೆ? ಅದಕ್ಕೆ ಕಡಿಮೆಯಿಲ್ಲದ ಬಣ್ಣದಲ್ಲಿ ನಮ್ಮ ಕಾಲಕ್ಕೆ ವಿಶಿಷ್ಟವಾದ ರುಚಿಯಲ್ಲಿ ಇಲ್ಲಿಯ ಚಿತ್ರ ರೂಪುಗೊಂಡಿದೆ.

ನೀನಾರೆ ?, ನಾಟ್ಯಾನುಕರಣ, ನಿನಗಾಗಿ, ಸೆಳೆ, ಇವಳು, ಕಣ್ಣು, ಆ ನೋಟ, ಬೇಡ—ಈ ಕವನಗಳಲ್ಲಿ ಬೇರೊಂದು ರೀತಿಯ ಪ್ರಣಯಪ್ರಪಂಚ ವ್ಯಕ್ತವಾಗಿದೆ ಎನ್ನಬಹುದು. ಹೊಳೆಹೊಳೆಯುವ ತಿಳಿಯ ಕಣ್ಣು, ಬೆದರನರಿಯದ ಸುಂದರ ಮೋಹ, ಸುಡಿವ ಚದುರಿನ ಸೆಳೆಯ ತುಟಿ, ನಡೆಗೆ ಬಳುಕುವ ನುಣುಪು ಕವಪು— ಮುಂತಾದವುಗಳಿಂದ ನೋಡಿದವರ ಚಿತ್ತವನ್ನು ಚಂಚಲಗೊಳಿಸುವ ಬಿಂಕಿಯೊಬ್ಬಳ ಚಿತ್ರ 'ನೀನಾರೆ' ಎಂಬ ಕವನದಲ್ಲಿ ರೂಪುಗೊಂಡಿದೆ. 'ಮಿನುಗು ಮೂಗುತಿ ಚೆಡಗಿ', 'ಚಿಗರಿನಡಗೆಯ ಹೆಣ್ಣೆ', 'ದಾರಿ ಕಣ್ಗಳ ಬಲೆ' ಎಂದು ಮುಂತಾಗಿ ಆಕೆಯನ್ನು ಸಂಬೋಧಿಸಿರುವ ರೀತಿ ತೀರ ಮೋಹಕವಾಗಿದೆ. 'ನಾಟ್ಯಾನುಕರಣ' ಇಂತಹ ಇನ್ನೊಬ್ಬ ಬಿಂಕಿ ನರ್ತಕಿಯನ್ನು ಕುರಿತು ಬರೆದದ್ದು, ರಾಗಪ್ರಚೋದಕವಾಗಿದೆ. ಉಂಗುರ–ಕಾಲ್ಗೆಜ್ಜೆ ಥಳಥಳ–ಝಣಝಣ ತಕತೈತ ಕುಣಿಯುತ—ಬರುತಾಳೆ! ಪನ್ನೀರಿನಲಿ ಮಿಂದು ಅತ್ತರು ಮೈಗಿಟ್ಟು ಕಸ್ತುರಿ ಮೊಗಕಿಟ್ಟು—ಬರುತಾಳೆ! ಸಿಂಗಾರಿ ಬರುತಾಳೆ, ಬಂಗಾರಿ ಬರುತಾಳೆ, ಚೆಂಗಾವಿ ಜರತಾರಿ ಉಡುತಾಳೆ! ಈ ನರ್ತಕಿ ತನ್ನ ಬಗೆಬಗೆಯ ಭಂಗಿಗಳಿಂದ ಭಾವುಕರನ್ನು ಸೂರೆಗೊಳ್ಳುತ್ತಾಳೆ. 'ಧಿತ್ತೋಂಗ ಝಣತೋಂಗ ಧಿತ್ತೈತ–ತಕತೈತ ತದ್ಧಿಮಿ–ಧಿಮಿಕಿಟ್ಟ–ಕಿಟತೋಂತ' ಎಂದು ನರ್ತಿಸುವ ಈ ಕಠಾರಿ, ಈ ಮಿಠಾರಿ, ಈ ಚಿನ್ನಾರಿ, ಈ ರನ್ನಾರಿ ರಸಿಕರ ವಿಲಾಸಿಗಳ ಕಣ್ಮನಗಳಿಗೆ ಹಬ್ಬವನ್ನೆಸಗುತ್ತಾಳೆ.

'ನಿನಗಾಗಿ' ಎನ್ನುವುದರಲ್ಲಿ ಗಂಡಿನ ಸಹವಾಸಕ್ಕಾಗಿ ಆರ್ತಳಾದ ಹೆಣ್ಣಿನ ಸರ್ವಾರ್ಪಣದ ಮನೋಧರ್ಮದ ಚಿತ್ರವೊಂದು ಮಾತಿನ ಆಕಾರವನ್ನು ತಳೆದು ಬಂದಿದೆ. ತನ್ನ ಒಡಲು, ಮನ, ಎದೆಕಾಮನಗಳೂ ಸುರಗಿ, ಸುರಹೊನ್ನೆ, ಜಾಜಿ, ಮೊನೆಮಲ್ಲೆ, ಗುಲಾಬಿ, ಇರವಂತಿ, ಪಾದರಿ ಮುಂತಾದ ಸುಮರಾಜಿಗಳೂ ಉಡಿಗೆ ತೊಡಿಗೆ ಗೆಜ್ಜೆ ಪರಮಾನ್ನ ಪಾಯಸ ಮಿರುಗು ನಲುಗು ಮುದ್ದು ನೆಲಮನೆಗಳೂ ನಿನಗಾಗಿವೆ ಎಂದು ನೀರನನ್ನು ಕರೆದು ಆತನಿಗೆ ಎರೆದು ಆತನ ಪ್ರಣಯವನ್ನು ಹೆಣ್ಣು ಯಾಚಿಸುತ್ತಾಳೆ. 'ನೂರು ಹಸಿವು ಬೇನೆಯನ್ನು ನಾವು ಇಲ್ಲಿ ತುಂಬೇವು, ನೂರು ಜನ್ಮದ ನೋವನ್ನು ಮಾಯಿಸಿ ಮರೆಸೇವು. ಎರಡು ಹುಟ್ಟಿನ ಕಥೆಯು ಸವಿಕಳೆ ಕಂಡೀತು. ಒಂದು ತಾನಕೆ ತೂಗಿ ತೊನೆದೀತು ನಲಿದೀತು' ಎನ್ನುವ ಆಕೆಯ ಮಾತಿನಲ್ಲಿ ಪ್ರೇಮದ ನಿಶ್ಚಲತೆಯ ಸತ್ವ ಎಷ್ಟು ಮಹತ್ವಪೂರ್ಣವಾದದ್ದು ಎನ್ನುವು ದನ್ನು ಕವಿ ಕಾಣಿಸಿದ್ದಾರೆ. ಸೆಳೆ ಎನ್ನುವ ಇನ್ನೊಂದು ಕವನದಲ್ಲಿ ಇಂತಹದೇ ಹೆಣ್ಣಿನ ಮತ್ತೊಂದು ಪ್ರಬಲವಾದ ಬೇಡಿಕೆ ಪ್ರಕಟವಾಗಿದೆ. ಚಿತ್ತವನ್ನು ನಾನಾ ವಿಧವಾದ ಪ್ರಲೋಭನೆಗಳಿಗೆ ಕುದಿಸುವಂತಹ ಪ್ರಕೃತಿಯ ಸನ್ನಿವೇಶದಲ್ಲಿ ಹೆಣ್ಣು ಗಂಡಿನ ಪ್ರೇಮವನ್ನು ಯಾಚಿಸಿದ್ದಾಳೆ:

ನೀರ ನಿನ್ನಯ ತೆಕ್ಕೆಯೆಳಸುತೆ
ಬಯಕೆ ಬಾಯ್‌ಬಾಯ್ಬಿಡುವುದು
ನಿನ್ನ ಕಾಣದ ಒಡಲ ಬೇಗೆಯು ನಿಟ್ಟನಿಲುವಿಗು ಸುಡುವುದು
ನಿನ್ನೆ ನಾಳೆಯ ಚಿಂತೆ ನಿಲ್ಲಲಿ
ಒಲ್ಲೆ ಹಿತಗಳ ತಡೆಯನು
ಬಂಡು ತುಂಬಿದ ಇಂದಿನೊಡಲನು ಹಿಂಡಿ ಕೆಳೆಯನು ಕಡೆವ ಬಾ.
ಹಿಂದು ಮುಂದಕೆ ತಿರುಗಿ ನೋಡದೆ
ಇಂದನಪ್ಪುತೆ ಬೆರವ ಬಾ
ನಾಳೆಯೇನೊ ನಾವ್ಗಳಾರೊ ಯಾರು ಕಂಡರು ಬೇಗ ಬಾ.
ಮಡದಿ ಮಕ್ಕಳ ಸಂಗ ದಿನವೂ
ಇದ್ದೆ ಇರುವುದು ಕೂಡು ಬಾ.
ಹತ್ತು ವರುಷದ ತಂಗಳೂಟವನೊಂದು ಹಬ್ಬದಿ ಮರೆವ ಬಾ

ಎಂಬಂತಹ ಸಾಲುಗಳಲ್ಲಿ ಪ್ರಕಟವಾಗಿರುವ 'ಸೆಳೆ'ಯ ಆಕರ್ಷಕ ಶಕ್ತಿ ಅದರ ಹಿಂದಿರುವ ಸ್ತ್ರೀಹೃದಯದ ಆರ್ತಸ್ವರ ಎದೆಯನ್ನು ಕೊರೆಯುವೆ.

ವೃದ್ಧ ಪಣ್ಯಾಂಗನೆಯೊಬ್ಬಳನ್ನು ಕುರಿತು ಹಾಡಿದ ಗೀತ 'ಇವಳು'. ಇವಳು ಎಷ್ಟೋ ಜನ ಆಣ್ಮರನ್ನು ಆಳಿದವಳು, ಆಡಿಸಿದವಳು, ಕಿರುಬೆರಳ ಸುತ್ತಿನಲ್ಲಿಯೇ ತಿರುಗಿಸಿದವಳು; ನೂರರ ಆಯುಷ್ಯವನ್ನು ಆರರಲ್ಲಿ ಕಳೆದವಳು. ಯಾರು ಇವಳನ್ನು ಇಂದು ಕೇಳುತ್ತಾರೆ, ಎಂಬ ಭಾವದಲ್ಲಿ ಪದ್ಯ ಆರಂಭವಾಗುತ್ತದೆ. ಭೋಗ ಜೀವನಕ್ಕಾಗಿಯೇ ಬಾಳುವೆ ಬಾಳಿ, ಬಳಿಗೆ ಬಂದವರ ಮನೆಮಾರುಗಳನ್ನೆಲ್ಲ ಸೂರೆ ಮಾಡಿ ತಾನೂ ದೈಹಿಕವಾಗಿಯೂ ಮಾನಸಿಕವಾಗಿಯೂ ಸರಳಿ ಈಗ ಕೇಳುವವರಿಲ್ಲದೆ, 'ಕೇರಿಗಳ ಕಂಗಾಳಿ ಜನವೆ ಮೇಲೆನಿಸಿ' ಬೀದಿಯಲ್ಲಿ ಹೋಗುತ್ತಿದ್ದಾಳೆ ಈಕೆ ಎಂದು ಇಂತಹ ಹೆಣ್ಣಿನ ವಿಷಯಕ್ಕೆ ಲೋಕದ ಅನುಕಂಪೆ ತಿರುಗುವಂತೆ ಇರುವ ಅವಳ ಅಧೋಗತಿಯನ್ನು ಚಿತ್ರಿಸಿದ್ದಾರೆ.

'ಕಣ್ಣು' ಎನ್ನುವುದರಲ್ಲಿ ವಿಫಲ ಪ್ರೇಮದ ಮತ್ತೊಂದು ಚಿತ್ರವಿದೆ. ಗಂಡು –ಹೆಣ್ಣು ಪರಸ್ಪರ ಪ್ರಥಮ ಸಂದರ್ಶನದಲ್ಲಿಯೇ ಒಲಿದರೂ ಹೆಣ್ಣಿನ ಕಡೆಯವರು ಆ ಹೆಣ್ಣನ್ನು ಬೇರೊಬ್ಬನಿಗೆ ಕೊಡಲೆಂದು ನಿಶ್ಚಯಿಸುತ್ತಾರೆ. ಇದು ಒಲಿದ ಹೆಣ್ಣು ಗಂಡುಗಳಿಬ್ಬರಿಗೂ ಸಮಾಧಾನವನ್ನುಂಟುಮಾಡುವುದಿಲ್ಲ. ಗಂಡು ಆ ಹೆಣ್ಣಿನ ಆ ಒಲುಮೆ ತುಂಬಿದ ಆ ಇನಿಯ ನೋಟವನ್ನೇ ನೆನೆನೆನೆದು ಕೊರಗುತ್ತಾನೆ:

ಇಂದು ನೀನೆಂತಿಹೆಯೊ ಏನ ಗೈಯುತಲಿಹೆಯೊ
ಆವಾವುದನ್ನೆಂತು ನೆನೆಯುತಿಹೆಯೊ
ಎನಗಿಲ್ಲಿ ದಿನದಿನವು ಮನದ ಏಕಾಂತದಲಿ
ಕೊರೆಯಿಕ್ಕಿ ನೆನಪುಕ್ಕಿ ನೆರೆಯುಪ್ಪುದು

ಎಂದು ಹತ್ತು ವರುಷದ ಮೇಲೂ ಆ ಹೆಣ್ಣನ್ನು ಕುರಿತು ಹಾಡುವ ಗಂಡಿನ ನಿಸ್ಪೃಹ ಪ್ರೇಮದ ಚಿತ್ರ ಕವಿ ಕೊಟ್ಟಿದ್ದಾರೆ.

'ಆ ನೋಟ' ಎನ್ನುವುದು ಬೇರೊಬ್ಬ ಗಂಡಿನ ಇನ್ನೊಂದು ಚಿತ್ತ ವೃತ್ತಿಯ ತಾಕಲಾಟವನ್ನು ತೋರುತ್ತದೆ. ತನ್ನ ನಚ್ಚುಮೆಚ್ಚಿನ ಮೊದಲನೆಯ ಹೆಂಡತಿ ಕಷ್ಟದ ದಿನಗಳಲ್ಲಿ ಬಾಳುವೆ ಮಾಡಿ ತೀರಿಕೊಂಡಾಗ ಎರಡನೆಯ ಹೆಂಡತಿ ಭಾಗ್ಯದ ದಿನಗಳಲ್ಲಿ ಮನೆಗೆ ಬರುತ್ತಾಳೆ. 'ಕೊರಲನ್ನು ಮೊಗವನ್ನು ಕೈಯುತ್ತ ಬಾಗಿಸುತೆ ಮುಂಗೈಯ ಬಳೆಗಳನು ತಿರುವುತ್ತ' ನಿಲ್ಲುತ್ತಾಳೆ. ಗಂಡು ಹಾಗೆ ನಿಲ್ಲಬೇಡ ಎನ್ನುತ್ತಾನೆ. 'ಅಸುಖವನ್ನಡಗಿಸುತೆ ಮರೆಮಾಡಿ' ಬಳಲುವ ಆಕೆಯನ್ನು ಹಾಗೆ ಬಳಲಬೇಡ ಎನ್ನುತ್ತಾನೆ. ತನ್ನನ್ನೇ ಕೊಲುವ ಕಣ್ಣುಗಳಿಂದ ನೋಡುವ ಎರಡನೆಯ ಮಡದಿಯನ್ನು 'ನೋಡಿ ಎನ್ನೆದೆಯಿರಿವ ನೆನಪುಗಳ ತಾರದಿರು ತುಳಿದು ಮರಸಿಹ ಕೆರಳುವೊಲು ಮಾಡದಿರು' ಎಂದು ಬೇಡುತ್ತಾನೆ. ಸೌಖ್ಯದ ದಿನಗಳಲ್ಲಿ ಎರಡನೆ ಹೆಂಡತಿ ಬಳಿಯಿದ್ದೂ ಮೊದಲ ಹೆಂಡತಿಯನ್ನೇ ನೆನೆಯುವ ಈತನ ಪ್ರೇಮ ಅಸಾಮಾನ್ಯ ಸಾಧಾರಣವಾದದ್ದು.

'ಬೇಡ' ಎನ್ನುವ ಕವಿತೆಯಲ್ಲಿ ಹೆಣ್ಣು ಗಂಡಿಗೆ ಹೇಳುವ ಮಾತು ಇದೆ. ಈ ಹೆಣ್ಣು ಈ ಗಂಡನ್ನು ಸೇರುವ ಮೊದಲೇ ಇವಳ ಪ್ರೇಮವೂ ಸುಖವೂ ಸಂತೋಷವೂ ಬೇರೊಬ್ಬ ಗಂಡಿನಲ್ಲಿ ಮುಗಿದಾಗಿಹೋಗಿತ್ತು. ಅವನ ಪ್ರೇಮವನ್ನು ಕೊನೆಯವರೆಗೂ ಸವಿಯುವ ಭಾಗ್ಯ ಇವಳಿಗೆ ಇರಲಿಲ್ಲ. ಅವನು ಅಗಲಿಹೋದ. ಈಗ ಈತ ಬಳಿ ಬಂದಿದ್ದಾನೆ. ಬೇಕು ಬೇಕಾದ ಭೋಗಗಳನ್ನು ಪ್ರೇಮಸುಖಗಳನ್ನು ನೀಡುತ್ತಿದ್ದಾನೆ. ಆದರೂ ಆಕೆಗೆ ಸುಖವಿಲ್ಲ.

ಆದರೆಂ ನಾ ನಿನ್ನ ಬಿಸಿತೆಕ್ಕೆಯಲ್ಲಿರಲು
ನಡುವೆ ನಿಲುವುದು ಬಂದು ಅವನ ರೂಪು;
ಅವನ ಕುರುಳುಗಳೊಲೆದು ನಗುವು ತೆರೆದು
ಅವನ ಕದಪಿನ ಕಾವು ಕದಪಿಗಿಳಿದು.
ಎಷ್ಟು ತಡೆದರು ಬಗೆಯು ಆ ಅವನನರಸುವುದು
ಏಗೈಯಲೇಗೈಯಲೆನ್ನ ಸಖನೆ!
ನಿನ್ನ ಕಣ್ಣಲಿ ಅವನ ಹಣೆ ಮುದ್ದು ಕಾಣುವುದು
ನಿನ್ನ ದನಿಯಲಿ ಅವನ ದನಿ ಕೇಳ್ವುದು.

* * *

ಅವನ ಮೋಹವು ಮುರಿದು ಮರೆದಾಗುವರೆಗೆನಗೆ
ನಿನ್ನ ಪ್ರೇಮದ ಋಣವು ಹೊರೆಯಪ್ಪುದು

ಹೀಗೆ ಈಕೆ ಮೊದಲ ಒಲುಮೆಯ ಇನಿಯನನ್ನು ಸ್ಮರಿಸಿ ತನ್ನ ಕಟ್ಟೆರಕವನ್ನು ಬಿಚ್ಚು ಮನಸ್ಸಿನಿಂದ ನುಡಿಯುತ್ತಾಳೆ.

ಈ ಮೇಲೆ ಹೇಳಿದ ಕೆಲವು ಕವಿತೆಗಳಲ್ಲಿ ಪ್ರೇಮ ಜೀವನದ ನಾನಾ ಮುಖಗಳನ್ನು ಕವಿ ಚಿತ್ರಿಸಿದ್ದಾರೆ. ಹೆಣ್ಣಿನ ಮತ್ತು ಗಂಡಿನ ಪ್ರೇಮದ ನಿಶ್ಚಲ ರೂಪವನ್ನು ವರ್ಣಿಸಿದ್ದಾರೆ. ಪ್ರೇಮಾರಾಧನದ ಮೂಲತತ್ವ ಸ್ಥಿರತೆ, ನಿಶ್ಚಲತೆ, ಅದರ ಅಡಿಪಾಯದ ಮೇಲೆ ಪ್ರೇಮಮಂದಿರ ಕಟ್ಟಬೇಕು ಎನ್ನುವುದು ಇಲ್ಲಿ ಅಡಕವಾಗಿರುವ ತತ್ವ. ಯಾವುದು ಪ್ರೇಮ ಯಾವುದು ಕಾಮ, ಯಾವುದು ಕಾತರ ಯಾವುದು ಆತುರ, ಯಾವುದು ಪೂರ್ಣ ಯಾವುದು ಅಪೂರ್ಣ, ಯಾವುದು ನಿಶ್ಚಲ ಯಾವುದು ಚಂಚಲ ಎಂಬ ವಿವೇಕಜ್ಞಾನ ಶುಚಿಜೀವನ ದರ್ಶನಕ್ಕೆ ಒಂದು ಕೈಗಂಬ. ಪ್ರೇಮದ ದಾರಿಯಲ್ಲಿ ನಡೆವ ಜನಗಳಿಗೆ ಬೆಳಕು ತೋರುವ ಒಂದು ಕಾವ್ಯದ ಮಣಿದೀಪವನ್ನು ಈ ಕವಿ ಇಲ್ಲಿ ಹೊತ್ತಿಸಿದ್ದಾರೆ.

೪

ಶುಚಿಜೀವನ ದರ್ಶನವನ್ನು ಕುರಿತು ಕವಿ ವ್ಯಕ್ತಪಡಿಸಿರುವ ರಾಷ್ಟ್ರಾಭಿಮಾನವನ್ನು ಕಡೆಯದಾಗಿ ಇಲ್ಲಿ ವಿವೇಚಿಸಿದೆ.

ಪರದಷ್ಟೇ ಇಹವೂ ಮುಖ್ಯವಾದದ್ದು; ಈ ಬಾಳು ಬಾಳುವುದಕ್ಕಾಗಿಯೇ ಇದೆ; ಇದನ್ನು ಆದಷ್ಟು ಒಳ್ಳೆಯ ರೀತಿಯಲ್ಲಿಯೇ ಬಾಳಬೇಕು. ಹೀಗೆ ಬಾಳಿ ತಾನೂ ದೇಶವೂ ಉದ್ಧಾರವಾಗುವ ಮಾರ್ಗವನ್ನು ಅನುಸರಿಸಬೇಕು. ಪ್ರತಿಯೊಬ್ಬನೂ ಧೈರ್ಯದಿಂದಲೂ, ವಿಶ್ವಾಸದಿಂದಲೂ ಬಾಳಿನ ದುರ್ಘರವಾದ ಕಷ್ಟಗಳನ್ನು ಸಹಿಸಿ, ಸುಖಸಂತೋಷಗಳನ್ನು ಕಲ್ಪಿಸಿಕೊಳ್ಳಬೇಕು. ಈ ಕಾರ್ಯದಲ್ಲಿ ತನಗೆ ತಾನೇ ಊರುಗೋಲಾಗಿ ತನ್ನ ಧೀಶಕ್ತಿ, ಆತ್ಮಶಕ್ತಿಗಳನ್ನೇ ನೆಚ್ಚಿಕೊಂಡು ಮುಂದುವರಿಯಬೇಕು. ಆ ಮತದವರು ಈ ಮತದವರು ಎನ್ನದೆ ಎಲ್ಲ ಮತದವರೂ ತಾವು ಭಾರತೀಯರೆಂಬ ಕಟ್ಟಭಿಮಾನದಿಂದ ದುಡಿಯಬೇಕು—ಈ ಮುಂತಾದ ತತ್ವಗಳನ್ನು ಕುರಿತು ಕಟ್ಟಿದ ಕವನಗಳನ್ನು ಒಂದು ಗುಂಪಾಗಿ ನೋಡಬಹುದು.

'ಏಳಿ', 'ದುಂದುಭಿ', 'ಅಭೀಃ', 'ಪರೀಕ್ಷೆಯಸಮಯ', 'ಹೆಮ್ಮರ', 'ಬದುಕು', 'ಗಡಿದಾಟು', 'ಶತಂ ಜೀವೇಮ ಶರದಃ', 'ಹಿನ್ನೋಟ'—ಈ ಮೊದಲಾದ ಕವಿತೆಗಳಲ್ಲಿ ಜನತೆಯನ್ನು ಬಡಿದೆಬ್ಬಿಸುವ ಒಂದು ಘೋಷ ಮೊಳಗುತ್ತದೆ. ಇನ್ನು ರೋದನ ಸಾಕು; ನಮ್ಮ ಸರ್ವಶಕ್ತಿಯೂ ಇನ್ನು ಕಾರ್ಯಮುಖೇನ ಅಭಿವ್ಯಕ್ತಿಯನ್ನು ಕಂಡುಕೊಳ್ಳಬೇಕು. ನಾವು ಹೋರಾಡದೆ ಇದ್ದರೆ, ನಾವು ದೇಶವನ್ನು ಕಾಯದೆ ಇದ್ದರೆ ಇನ್ನು ಯಾರು ಹೋರುತ್ತಾರೆ? ಉದರ ವೈರಾಗ್ಯ, ಅಭಾವ ವೈರಾಗ್ಯ, ಶ್ಮಶಾನ ವೈರಾಗ್ಯಗಳನ್ನು ದೂರಮಾಡಿ ಅಜ್ಞಾನ ತಿಮಿರವನ್ನು ದೂರಮಾಡಿ ಸುಜ್ಞಾನ ದೀಪವನ್ನು ಬೆಳಗಿ ಏಳಿರಿ ಎಂದು ಕವಿ ಹಾಡಿದ್ದಾರೆ. ಇದೇ ಭಾವ

'ದುಂದುಭಿ' ಎಂಬ ಕವನದಲ್ಲಿಯೂ ಮೊಳಗುತ್ತದೆ. ಆಲಸತನ, ಮದ, ಮತ್ಸರ, ವಿಪರೀತಮತಿ, ಕುಹಕ ಮುಂತಾದುವುಗಳಿಗೆ ಈಗ ಸಮಯವಿಲ್ಲ. ಇದು ಯುದ್ಧದ ಕಾಲ; ಕಾಳಗಕ್ಕೆ ನಾವು ಸಿದ್ಧರಾಗಬೇಕು. ನಮ್ಮ ನಾಡಿನ ಚರಿತ್ರೆ ದ್ರೋಹಗಳ ಕತೆಯಾಯ್ತು; ಬಹುಕಾಲ ಬೀಳಾಯ್ತು; ಹೇಡಿತನವಾಯ್ತು; ಹೊಲೆದಾಸ್ಯ ಪರತಂತ್ರ ತಿರುಕುತನವಾಯ್ತು; ಹಲಕಾಲ ಮಣ್ಮುಕ್ಕಿ ಕೂಲಿದ್ದುದಾಯ್ತು–ಇನ್ನು ಮುಂದೆ ನಾವು ಹೋರಾಡಿ ನಮ್ಮ ದೇಶದ ಕೀರ್ತಿ ಬೆಳಗುವಂತೆ ಮಾಡಬೇಕು ಎನ್ನುವ ಭಾವ ಇಲ್ಲಿ ಪ್ರಚೋದಿತವಾಗಿದೆ. 'ಅಭೀಃ' ಎನ್ನುವುದು ಎಂತಹ ಹೇಡಿಯ ನರನರಗಳಲ್ಲಿಯೂ ರಕ್ತದ ಕಣಕಣಗಳನ್ನು ಕುದಿಸುವಂಥ ಒಂದು ವೀರ ಉದ್ಘೋಷ. ಯಜ್ಞಶಾಲೆಗಳಿಂದಲೂ, ಬಲಿಯಿಂದಲೂ, ಸೆರೆಯಿಂದಲೂ, ಕಲ್ಲುಗಾಣಗಳಿಂದಲೂ, ಶಿಲುಬೆಗಳ ನೋವಿಂದಲೂ, ವಿಷಪಾತ್ರೆಯ ಒಡಲಿನಿಂದಲೂ, ಸುಡುವ ಉರಿಯ ಮಡಲಿನಿಂದಲೂ, ಅಭೀಃ ಅಭೀಃ ಅಭೀಃ ಎಂಬ ನುಡಿ ಏಳುತ್ತಿದೆ. ಬಲಹೀನರಾದವರು ಎಂದು ಆತ್ಮವನ್ನು ಗಳಿಸಿದ್ದಾರೆ? ಬಲಕ್ಕಾಗಿ ಕಾಯುತಕ್ಕವರು ಏನು ಮಾಡಿದ್ದಾರೆ? ಅಧಿಕಾರಕ್ಕೆ ಹೆದರುವವರು ಎಂದು ಏನು ಸಾಧಿಸಿದ್ದಾರೆ ಎಂದು ಈ ಅಭೀಃ ಮಂತ್ರ ನಮ್ಮನ್ನು ಕೇಳುತ್ತದೆ:

ಮಣಿಯದಿಹ ಮನವೊಂದು ಸಾಧಿಸುವ ಹಟವೊಂದು
ನಿಜದ ನೇರಕೆ ನಡೆವ ನಿಶ್ಚಲತೆಯೊಂದು—
ಅನ್ಯಾಯಕೆಂದೆಂದು ಬಾಗದೆಚ್ಚರವೊಂದು
ಮರುಕಕ್ಕೆ ಪ್ರೇಮಕ್ಕೆ ಚಿರತೆರದ ಎದೆಯೊಂದು
—ಅಭೀಃ! ಅಭೀಃ! ಅಭೀಃ! ಎಂಬ ತಾರಕವಾಕ್ಯ
ನಾಡಿಯಸು ನಡೆಸುತಿರೆ, ಬಾಳನ್ನು ತಿದ್ದುತಿರೆ
ನಡೆ ಮುಂದಕೆನ್ನುತ್ತೆ ಕೂಗುತಿದೆ ನುಗ್ಗುತಿವೆ

ಇದೇ ಉಪದೇಶ 'ಹಮ್ಮೀರ' ಎಂಬ ಕವಿತೆಯ ಕೊನೆಯ ಪಂಕ್ತಿಗಳಲ್ಲಿದೆ.

ಅವರವರ ಆತ್ಮವನು ಅವರೆ ಬಲಿಸಲು ಬೇಕು
ಅವರ ಅಕೃತಿಮೂರ್ತಿ ತಿದ್ದಿಕೊಳಬೇಕು
ಅವರವರ ದರ್ಶನಕೆ ಸಲ್ಲುವಾದರ್ಶಗಳ
ನೇಮಗಳ ಹೊತ್ತವರೆ ಸಾಧಿಸಲು ಬೇಕು.
ಕಲೆಯಲ್ಲಿ ಕುಲವಿಲ್ಲ ಕೆಳೆಯಲ್ಲಿ ಪದವಿಲ್ಲ
ಇಹಪರದಹಂಕಾರವೊಂದಿಲ್ಲ ಸಾಧನಗಳೆದುರು.
ತನ್ನ ಧರ್ಮವ ತಾನು ಅಪ್ಪಿಕೊಂಡೆತ್ತುತ್ತೆ
ಅಳುಕದೆಯೆ ಬಳುಕದೆಯೆ ಅಡಿಯಿಡಲುಬೇಕು.
ಸೋಲು ನೋವನು ನುಂಗಿ ಕಲ್ಲೆದೆಯ ಮಿದುಗೈದು
ಸಹನೆ ಕರುಣೆಗಳಮೃತ ಬೆರೆತಿರಬೇಕು

ಬೆಳಕು ನೆಳಲುಗಳಂತೆ ಏಳ್ಗೆ ಬೀಳೆನ್ನುತ್ತೆ
ಮನವ ಸಮತೆಗೆ ಹೂಡಿ ನಲಿಯುತಿರಬೇಕು—
ತಾಳಿಕೊಳ್ಳಲುಬೇಕು ಏನೆಲ್ಲವನು, ಮಗುವೆ,
ತಿರುಳ ಬಲಿಸಲುಬೇಕು ಓರಿಬಾಳನೆಳೆಸುವವರು.

ಈ ಸ್ವಾವಲಂಬನ, ಈ ಸ್ವಪ್ರಯತ್ನ, ಈ ಆತ್ಮವಿಶ್ವಾಸ, ಈ ಆತ್ಮಪ್ರತ್ಯಯ ಇವು ಬೆಳೆದಷ್ಟೂ ಬಾಳಿಗೆ ಒಳ್ಳೆಯದು. ಇವುಗಳನ್ನು ತುಂಬಿಕೊಂಡ ಜನರೇ ಸ್ವಾತಂತ್ರ್ಯವನ್ನು ಪಡೆಯಲು ಅರ್ಹರಾಗುತ್ತಾರೆ. ಅವರೇ ಇಹಲೋಕದ ಸರ್ವ ಸುಖಗಳನ್ನೂ ಪಡೆಯಲು ಶಕ್ತರಾಗುತ್ತಾರೆ. ಇಂತಹ ಬಾಳೇ ಸೌಖ್ಯಪ್ರದ ವಾದದ್ದು; ಸೌಭಾಗ್ಯದಾಯಿಯಾದದ್ದು. ಕವಿ ಇಂತಹ ತುಂಬು ಬಾಳಿನ ಕಡಲಿನಲ್ಲಿ ಮುಳುಗಬೇಕೆಂದು ಕೂಗಿ ಕರೆದು ಹೇಳುತ್ತಾರೆ. 'ಓ! ಮಗುವೆ; ಓ! ಪ್ರಿಯಳೆ; ಓ! ಎನ್ನ ಸಖರೆ; ಬನ್ನಿ ಬಾಳ್ಗಡಲಲ್ಲಿ ಮಿಂದು ಮುಳುಗಿ.'

ಹರಹರ ಮಹಾದೇವ, ಪ್ರಾರ್ಥನೆ, ವಿರೂಪಾಕ್ಷ ಎಂಬ ಕವನಗಳಲ್ಲಿ ದೇಶ ವನ್ನು ಸ್ವಾತಂತ್ರ್ಯಕ್ಕೆ ನಡೆಸು ಎಂದು ಮಹೇಶ್ವರನನ್ನು ಕುರಿತು ಪ್ರಾರ್ಥಿಸಿದ ಒಂದು ಭಾವ ಪ್ರಬಲವಾಗಿ ಪ್ರಕಟವಾಗಿದೆ. ಪರಹಿತವನ್ನು ಚಿಂತಿಸುವುದಕ್ಕೆ ವಿಶಾಲ ವಾದ ಬುದ್ಧಿಯನ್ನು ಕೊಡು ಎಂದೂ ಯಾವ ಸಮಯದಲ್ಲಿ ಯಾರು ಸಹಾಯ ಬೇಡಿದರೂ ಸಿದ್ಧರಾಗಿರುವ ವೃತ್ತಿಯನ್ನು ಕೊಡು ಎಂದೂ ಬಲಮದಾಂಧರ ಮುಂದೆ ಬಾಗದಂತೆಮಾಡು ಎಂದೂ ಬಲದಲ್ಲಿ ಸಂಪತ್ತಿನಲ್ಲಿ ವಿನಯವನ್ನು ನೀಡು ಎಂದೂ ಕವಿ ಪ್ರಾರ್ಥಿಸಿದ್ದಾರೆ. ಶಿವನನ್ನು ಸ್ತೋತ್ರಮಾಡಿದ ಇನ್ನೊಂದು ಕವಿತೆ ಯಲ್ಲಿ, ಈ ನಾಡು ನಿನ್ನದು; ಈ ನಾವು ನಿನ್ನ ಮಕ್ಕಳು ನಮ್ಮನ್ನು ನೀನು ದಿಗ್ವಿ ಜಯಕ್ಕೆ ನಡೆಸು ಎಂದು ಕವಿ ಕೋರಿದ್ದಾರೆ. ಶಿವನು ಇನ್ನೊಮ್ಮೆ ಇಲ್ಲಿಯ ವಿಷ ವನ್ನು ಕುಡಿಯಬೇಕು. ಇನ್ನೊಮ್ಮೆ ಹಣೆಗಣ್ಣನ್ನು ತೆರೆದು ಇಲ್ಲಿಯ ಅನೈಕ್ಯತೆ ಯನ್ನು ಸುಡಬೇಕು; ಇನ್ನೊಮ್ಮೆ ತನ್ನ ಜಡೆಯ ಗಂಗೆಯಿಂದ ನಮ್ಮ ಕರಣವನ್ನು ಶುಚಿಗೊಳಿಸಬೇಕು ಎಂದು ಮುಕ್ತವಾಗಿ ಪ್ರಾರ್ಥಿಸಿದ್ದಾರೆ. ನಾಳೆ ಹುಟ್ಟುವ ಮಕ್ಕಳಿ ಗಾದರೂ ಈ ನಾಡು ಸ್ವಾತಂತ್ರ್ಯ ಸ್ವರ್ಗದಂತಾಗುವಂತೆ ಕರುಣಿಸಬೇಕೆಂದು ಮೊರೆ ಯಿತ್ತಿದ್ದಾರೆ. 'ವಿರೂಪಾಕ್ಷ' ಎಂಬ ಕವಿತೆಯಲ್ಲಿಯೂ ಇದೇ ಭಾವ ಬೇರೆ ರೀತಿ ಯಲ್ಲಿ ವ್ಯಕ್ತವಾಗಿದೆ. ವೈಭವದ ಶಿಖರಕ್ಕೆ ಏರಿದ ವಿಜಯನಗರ ಅಧೋಗತಿಗೆ ಬಿದ್ದು ಸರ್ವನಾಶವಾಯ್ತು. ಈಗ ಮತ್ತೆ ಅದು ಎದ್ದು ಮೆರೆವುದು ಎಂದು? ಇದ ನ್ನೆಲ್ಲ ನೋಡುತ್ತಾ ಇನ್ನೂ ಸುಮ್ಮನೆ ಸುಯ್ಯದೆ, ಬೇಯದೆ ಈ ವಿರೂಪಾಕ್ಷ ಪೂಜೆಗೊಳ್ಳುತ್ತಿದ್ದಾನಲ್ಲ ಎಂದು ಕವಿ ಕೊಂಕುನುಡಿ ನುಡಿದಿದ್ದಾರೆ. 'ಹಾರೈಕೆ' ಎನ್ನುವ ಕವನದಲ್ಲಿಯೂ ನಮ್ಮ ದೇಶಕ್ಕೆ ಒಳ್ಳೆಯದಾಗಲಿ; ಈಗಿನ ಜಡತೆ, ಮಾಲಿನ್ಯ ಪಾಪ, ದ್ರೋಹ ಮುರಿದೋಡಲಿ; ಒಳಕೋಟಲೆ ನಿಲ್ಲಲಿ; ನುಡಿಗೆ ಒಂದು ಸಿಂಗ ರದ ಇಳೆಯೆದ್ದು ನಿಲ್ಲಲಿ ಎಂದು ಮುಕ್ತವಾಗಿ ಹಾರೈಸಿದ್ದಾರೆ.

'ಮೃಗಶಾಲೆಯ ಸಿಂಹಗಳು' ಸ್ವಾತಂತ್ರ್ಯದ ಅಪೇಕ್ಷೆಯನ್ನು ಬಹಳ ಮಾರ್ಮಿಕವಾಗಿ ಚಿತ್ರಿಸುವ ಒಂದು ಸೊಗಸಾದ ಕವಿತೆ. ಸ್ವತಂತ್ರರಾಗಿ ಬದುಕಿ ಬಾಳಿದ ಜನಾಂಗ ಪರಕೀಯರ ದಾಸ್ಯಕ್ಕೆ ಒಳಗಾದರೆ ಅವರ ಬಾಳ್ವೆ ಹೇಗಿರುತ್ತದೆ? ಅವರ ಮನಸ್ಸಿನ ಒಳತೋಟಿ ಎಂಥದು? ಎನ್ನುವುದಕ್ಕೆ ಪ್ರತಿಮೆಯಂತೆ ಮೃಗಶಾಲೆಯ ವೃದ್ಧ ಸಿಂಹ ಸಿಂಹಿಣಿಯರನ್ನು ಕವಿ ಚಿತ್ರಿಸಿದ್ದಾರೆ. ದಾಸ್ಯದಲ್ಲಿಯೇ ಹುಟ್ಟಿಬೆಳೆದ ಮಕ್ಕಳು ಸ್ವಾತಂತ್ರ್ಯದ ಸವಿಯನ್ನೇ ಅರಿಯದೆ ಹಿರಿಯರ ಮಹಿಮೆಗಳನ್ನು ಊಹಿಸಲೂ ಆರದೆ ದಾಸ್ಯವೇ ಸ್ವರ್ಗ ಸುಖತುಲ್ಯವೆಂದು ಗಣಿಸುವುದು ಸಹಜ; ಅಂತಹ ಮುಗ್ಧ ಜನರ ಪ್ರತೀಕಗಳಾಗಿ ಈ ಸಿಂಹ ಸಿಂಹಿಣಿಯರ ಮರಿಗಳನ್ನು ಕವಿ ಚಿತ್ರಿಸಿದ್ದಾರೆ. ಈ ಮರಿಗಳ ಮೌಢ್ಯವನ್ನು ನೋಡಿ ಹನಿಗಣ್ಣಾಗುವ ಸಿಂಹ ಸಿಂಹಿಣಿಯರ ಮನಸ್ಸಿನ ಉಮ್ಮಳ ಯಾರ ಕರುಳನ್ನಾದರೂ ಹಿಂಡುತ್ತದೆ. ಇಲ್ಲಿ ಸ್ವಾತಂತ್ರ್ಯದ ಸಹಜ ತೃಷೆಯ ತಹತಹವನ್ನು ಹೃದಯಸ್ಪರ್ಶಿಯಾಗಿ ಚಿತ್ರಿಸಿದ್ದಾರೆ.

ಭಾರತ ಜಗದಂಬ, ತಾಯಿದೇವಿ, ಹರಸುತಾಯಿ, ನಾಡ ತಾಯಿ, ಕನ್ನಡನಾಡು, ಭಾಗ್ಯತಾರೆ ಮುಂತಾದ ಕವನಗಳಲ್ಲಿ ಕವಿ ದೇಶಮಾತೆಯ ಪೂರ್ವ ವೈಭವವನ್ನೂ ಇಂದಿನ ಅವನತಿಯನ್ನೂ ಮುಂದಿನ ಸ್ವಾತಂತ್ರ್ಯದ ಶುಭೋದಯವನ್ನೂ ಪರಿಪರಿಯಾಗಿ, ಬಿಡಿಬಿಡಿಯಾಗಿ ಬಣ್ಣಿಸಿದ್ದಾರೆ. ಬಗೆಬಗೆಯ ವಾದನ ಸಾಮಗ್ರಿಗಳೊಡನೆ ಸಾಮೂಹಿಕವಾಗಿ ತಾರಸ್ವರದಲ್ಲಿ ಈ ದೇಶಭಕ್ತಿಗೀತೆಗಳನ್ನು ಹಾಡುತ್ತಿದ್ದರೆ ಎಂತಹ ಹಂದೆಯೂ ಕಲಿಯಾಗುತ್ತಾನೆ; ಎಂತಹ ನಾಲಗೆಹೆಳವನೂ ಸತತವಾಗಿ ಜಯಘೋಷಗಳ ಸುರಿಮಳೆಯನ್ನು ಕರೆಯುತ್ತಾನೆ.

ಭರತವರ್ಷ ಪರಕೀಯರದಾಸ್ಯದಿಂದ ಸಂಪೂರ್ಣವಾಗಿ ಬಿಡುಗಡೆಯನ್ನು ಪಡೆಯುವುದಕ್ಕಾಗಿ ಹೂಡಿದ ಸತ್ಯಾಗ್ರಹ ಸಮರದ ಸಂದರ್ಭವನ್ನು ನೆನೆದು ಹೊಂಪುಳಿಯೋಗಿ ರಕ್ತ ಕುದಿದ ವೇಳೆಯಲ್ಲಿ ರಚಿತವಾದ ಕವನ 'ಗಡಿದಾಟು' ಎನ್ನುವುದು. ಹೊಸ ಸತ್ವ, ಹೊಸ ಧಾತು, ಹೊಸ ಪೌರುಷ ಪರಾಕ್ರಮಗಳಿಂದ ದೇಶದ ಎಲ್ಲ ವರ್ಗದ ಎಲ್ಲ ವೃತ್ತಿಯ ಜನರೂ ಈ ಸತ್ಯಾಗ್ರಹದಲ್ಲಿ ಭಾಗವಹಿಸಿದರು. ಕೋವಿ, ಬಡಿಗೋಲುಗಳಿಗೆ ಬಾಗದೆ ಹಿಂಸೆಗೆ ಹೆದರದೆ ಬಿಡುಗಡೆಗಾಗಿ ಕೆಳಕ್ಕೆ ನುಗ್ಗಿದರು; ಹೊಸ ಬಾವುಟವನ್ನು ನಿಲ್ಲಿಸಿದರು; ಆಳರಸರ ಆಟೋಪವನ್ನು ಇಳಿವಸಿರು; ಹೊಸ ಚೇತನ, ಹೊಸ ಕಾಂತಿ, ಹೊಸ ಉತ್ಸಾಹಗಳನ್ನು ಮೆರೆದರು. ಈ ವೀರಪಡೆಯ ಆ ಕಾಲದ ಆಶಾದಾಯಕವಾದ ಮನೋಧರ್ಮದ ಸುಂದರ ಚಿತ್ರವನ್ನು ನಾವು ಈ 'ಗಡಿದಾಟು' ಕವಿತೆಯಲ್ಲಿ ಕಾಣುತ್ತೇವೆ.

'ವಿದ್ಯಾರ್ಥಿ' ಎನ್ನುವ ಕವನ ಸ್ವಾತಂತ್ರ್ಯಾನಂತರದಲ್ಲಿ ದೇಶ ಇಬ್ಭಾಗವಾಗಬೇಕೆಂಬ ಸೂಚನೆ ಹುಟ್ಟಿದ ವೇಳೆಯಲ್ಲಿ ಉಂಟಾದ ಮತೀಯ ಕಾಳಗದಲ್ಲಿ ಪರಸ್ಪರ ವೈರವನ್ನು ಬಿಟ್ಟು ಆ ಮತ ಈ ಮತ ಎನ್ನದೆ ಎಲ್ಲರೂ ಒಟ್ಟಾಗಿ ಬಾಳಬೇಕು

ಎಂಬ ತತ್ವವನ್ನು ಬೋಧಿಸಹೋಗಿ ಆ ಮತಾಂಧರಿಂದ ಹತನಾದ ವಿದ್ಯಾರ್ಥಿಯೊಬ್ಬನ ವೀರವ್ಯಕ್ತಿಯನ್ನು ನೆನೆದು ಬರೆದದ್ದು:

ಬದುಕಿ ಸತ್ತರು ಹಲರು
ಸತ್ತು ಬದುಕಿದನಿವನು
ಅಮರ ನಡೆ ಬಿತ್ತಿದನು
ಬಳಸಿ ಕಾಣುವುದವನ ಪೇರೊಲುಮೆ ಮೂರ್ತಿ

ಹೀಗೆಯೇ 'ಕ್ರೋಧಕೇತನ' ಎಂಬ ಇನ್ನೊಂದು ಪದ್ಯ ಬಂಡವಾಳ ಶಾಹಿಯ ಮೇಲೆ ದೇಶದ ಸಹಸ್ರ ಸಹಸ್ರ ದೀನದಲಿತ ವರ್ಗದವರು ಕೈಯೆತ್ತಿ ಸಮಾಜದಲ್ಲಿ ಒಂದು ಆರ್ಥಿಕ ಕ್ರಾಂತಿಯನ್ನು ನಡೆಸಿ ಸಮತೆಯನ್ನು ಬಿತ್ತುವರೆಂಬ ತತ್ವವನ್ನು ಪ್ರತಿಪಾದಿಸುತ್ತದೆ:

'ಬಂಡವಾಳದ ಭಂಡ ಬಾಳನು
ಮುಗಿಸಿ ನೆತ್ತರ ಸುರಿವೆವು
ದುಡಿದು ಕೊರಗುವ ದಣಿದು ಸೊರಗುವ
ಶ್ರಮದ ಶ್ರಮವನು ಹರಿಪೆವು'

ಎಂದು ಶ್ರಮಜೀವಿಗಳ ತಂಡ ಕ್ರೋಧಕೇತನ ಹಿಡಿದು ನುಗ್ಗುತ್ತದೆ. ಅವರನ್ನು ಕೋಟಿದೇವರ ಕುರುಡು ಕಣ್ಗಳೂ, ಷಂಢ ತೋಳ್ಗಳೂ ಕಾಯವು ; ಕೋಟಿ ಮೂವತ್ತೈದು ಮನುಜನ ನೋವು ಅಳಿಸದು ಸಿಗ್ಗನು; ಅವರು ಕೇಳುತ್ತಾರೆ: 'ಧರ್ಮದೇವರು, ಕಟ್ಟುಕಟ್ಟಳೆ ಯಾರಿಗೀ ಯಮಪಾಶವು. ಕರುಣೆಯಿಲ್ಲದ ಧಣಿಕ ರಾಯರ ಮನೆಯ ಕಾಪಿನ ತಂತ್ರವು.'

'ಇಂದ್ರ' ಎನ್ನುವ ಇನ್ನೊಂದು ಅಷ್ಟಷಟ್ಪದಿ ಬಂಡವಾಳ ಶಾಹಿಗೆ ಹಾಕಿದ ಮತ್ತೊಂದು ಸವಾಲು. 'ಸಿಡಿಲ ಕೈಯಲಿ ಹಿಡಿದು ಸೊಕ್ಕಿರುವೆ ಎಲೆ ಇಂದ್ರ; ನಿನ್ನ ಪದವಿಯ ದರ್ಪಕದು ಕುರುಹು ಎನುತೆ' ಎಂದು ಆರಂಭವಾಗುವ ಈ ಪದ್ಯದಲ್ಲಿ 'ಜಗವೆಲ್ಲ ಐಶ್ವರ್ಯ ಪದವಿ ಹಿರಿಪೆಮ್ಮೆಗಳು ಉಂಟಾದರೆಂಬಂತೆ ದಿವ್ಯತೆಯ ಸೊಬಗು. ಇಚ್ಛೆಬಂದಂತೆಲ್ಲ ತುಳಿಯುತಿರೆ ಎತ್ತುತಿರೆ ಮೆರೆದೀತೆ ದೇವತನ?' ಎಂಬ ಪ್ರಶ್ನೆಯಲ್ಲಿ ಕೊನೆಗೊಳ್ಳುತ್ತದೆ. ದುರ್ಮದೋದ್ಧತರಾದ ನಮ್ಮ ಸಮಾಜದ ಅಹಮಿಂದ್ರರಿಗೆ ಇಲ್ಲಿ ಕಲಿಯಬೇಕಾದ್ದು ಹೇರಳವಾಗಿದೆ.

'ಶತಂ ಜೀವೇಮ ಶರದಃ' ಎನ್ನುವ ಪದ್ಯ ತುಂಬ ಸೊಗಸಾದದ್ದು. ನಮ್ಮ ದೇಶದಲ್ಲಿ, ಉಪನಿಷತ್ತಿನ ಕಾಲದಲ್ಲಿ ಭಾರತೀಯರು ಜೀವನವನ್ನು ಹೇಗೆ ನಂಬಿದ್ದರು. ಜೀವನದಲ್ಲಿ ಸುಖ ಶಾಂತಿ ಹೇಗೆ ನೆಲಸಿದ್ದವು. ಸರ್ವತೋಮುಖವಾದ ಶಾಂತಿಸೌಖ್ಯಗಳನ್ನು ಅವರು ಹೇಗೆ ಕಂಡುಕೊಂಡಿದ್ದರು. ಜನ ಎಲ್ಲ ಕರಣಗಳನ್ನೂ ತೆರೆದು ಜೀವನದ ಒಂದೊಂದು ಸುಖವನ್ನೂ ಹೇಗೆ ಜಿಡಿಬಿಡಿಯಾಗಿ ಅನುಭವಿಸಿ ಸಂತೋಷಪಡುತ್ತಿದ್ದರು, ಇಹವನ್ನು ತೊರೆಯದೆ ಪರವನ್ನು ಮರೆ

ಯುವ ಚೇತನದ ವೀರಮೂರ್ತಿಗಳಾಗಿ, ನೂರು ಶರತ್ಕಾಲಗಳನ್ನು ಹೇಗೆ ಸುಖ ಸಂತೋಷಗಳಿಂದ ಕಳೆಯುತ್ತಿದ್ದರು ಎಂಬುದನ್ನೆಲ್ಲ ಕವಿ ಚಿತ್ರಿಸಿದ್ದಾರೆ. ಆದರೆ ಮುಂದೆ ಯಾವುದೋ ಕಾಲದಲ್ಲಿ ಯಾರೋ ಪಾತಕರು 'ಹುಟ್ಟು ವ್ಯಥೆ, ಬೆಳೆ ಮಾಯೆ, ಹಿರಿಬದುಕು ಅಸತ್ಯ, ಕರ್ಮ ನೂರಾರು ಜನಗಳನ್ನು ಅಟ್ಟಿಕೊಂಡು ಬರುತ್ತದೆ. ಎಲ್ಲವೂ ಹಣೆಬರಹ' ಎಂದು ಮುಂತಾಗಿ ಸಾರಿದರು. ನೆಲ, ನೀರು, ಗಿಡ, ಬೆಟ್ಟ, ಬಾಂಬಟ್ಟೆ, ಕಣ್ಣುಗಳು, ಎದೆ, ಮನವು, ಚೆಲುವೊಲವು, ನಯ, ನೇಹ, ಬಲ ಎಲ್ಲ ಸಾವಿಗೆ ಊಡುವ ಊಟ-ಬಂಜೆಯ ಬಸಿರಂತೆ. ವೀರ ಉತ್ಸಾಹಗಳ ಸೊಲ್ಲನ್ನು ನಿಲ್ಲಿಸಿ ಬರುವ, ಕೊಂದು ಕೂಗುವ ಮಸಣ ನುಡಿ ಇದೊಂದೇ ಸತ್ಯವಂತೆ ಎಂದು ಕವಿ ನೊಂದು ನುಡಿದಿದ್ದಾರೆ. ಮುಂದೆ ಭಾರತ ಇನ್ನೆಂದು ಎಚ್ಚರಗೊಳ್ಳುತ್ತದೆಯೋ, ದಾಸ್ಯ, ದಾರಿದ್ರ್ಯ, ಅಜ್ಞಾನಾದಿಗಳು ಎಂದು ತೊಲಗುತ್ತವೆಯೋ ಎಂದು ನಮ್ಮ ದೇಶ ಜಗತ್ತಿಗೆ ಭವ್ಯವಾಗುತ್ತದೆಯೋ ಎಂದು ಆಶಿಸಿದ್ದಾರೆ. ನಮ್ಮ ಬಾಳು ಅನಂತವಾದ ವೀರ್ಯದಿಂದಲೂ, ವರ್ಚಸ್ಸಿನಿಂದಲೂ, ವೈಭವ ಮಹಿಮೆಗಳಿಂದಲೂ ಶ್ರೇಯಕ್ಕೆ ನುಗ್ಗಿ ದೇಶ ಕಲ್ಯಾಣವನ್ನು ಪಡೆಯುತ್ತದೆಯೋ ಎಂದು ಕೇಳಿದ್ದಾರೆ.

ಚೀನಾ-ಭಾರತಗಳ ಜನತೆ ಜಗತ್ತಿನ ಜನಸಂಖ್ಯೆಯಲ್ಲಿ ಅರ್ಧದಷ್ಟು. ಆದರೆ ಜಗತ್ತಿನ ಎಲ್ಲ ಜಡತೆಗೂ ಇವು ತವರಾಗಿವೆ. ಒಂದು ಕಾಲದಲ್ಲಿ ಕಲೆ, ಧರ್ಮ, ನಯಗಳ ಹಬ್ಬವನ್ನು ಹಬ್ಬಿಸಿದ ಈ ನಾಡು ಬಡವಾಗಿದೆ; ಸೊರಗಿದೆ. ಉಸಿರು ಹೊತ್ತರೆ ಭಾಗ್ಯ ಬರಲಿಲ್ಲ. ಕೋಟಿ ಕೋಟಿ ಸಂಖ್ಯೆಗೆ ಮರಿಯುತ್ತರೆ ಆಗಲಿಲ್ಲ.

ನಾಡ ನಲಿಸುವ ಜೀವ ಬಾಳ ನಗಿಸುವ ಜನವು
ಹುಟ್ಟಿ ಮೆರೆಯುವವರೆಗು ಬದುಕು-ಬದುಕೆ?

ಈ ಪ್ರಶ್ನೆಯಲ್ಲಿಯೆ ಅದರ ಉತ್ತರ ಇದೆ.

ಹೀಗೆ ವಿ. ಸೀ. ಅವರು ತಮ್ಮ ಕವಿತೆಗಳಲ್ಲಿ ದೈವಪ್ರೇಮ, ಆತ್ಮಪ್ರೇಮ, ಮಾನವಪ್ರೇಮ, ರಾಷ್ಟ್ರಪ್ರೇಮಗಳ ಹಾಡು ಹಾಡಿ ಈ ಪ್ರೇಮದ ಚತುಷ್ಕೋಣದಲ್ಲಿ ಶುಚಿಜೀವನದ ಬಿಂಬವೊಂದನ್ನು ಮೂಡಿಸಿದ್ದಾರೆ. ದ್ರೋಣಪ್ರತೀಕದ ಮುಂದಿನ ಏಕಲವ್ಯನಂತೆ ನಾವೂ ವಿ. ಸೀ. ಅವರ ಕಂಡರಣೆಯ ಈ ಶುಚಿಜೀವನದ ಆದರ್ಶದಿಂದ ಪಾಠ ಕಲಿತು ಇಹದಲ್ಲಿಯೇ ಪರವನ್ನು ಅರಳಿಸಿ ಸಾರ್ಥಕವನ್ನು ಪಡೆಯಬೇಕಾದ್ದು ನಮ್ಮನ್ನೇ ಸೇರಿದೆ.

ಎಸ್. ವಿ. ಪರಮೇಶ್ವರ ಭಟ್ಟ

# ವಿ. ಸೀ. ಅವರ ಸಾಂಸಾರಿಕ ಕವನಗಳು

ಆಧುನಿಕ ಕಾವ್ಯ ಸಮೀಕ್ಷೆಯಲ್ಲಿ ಶ್ರೀಮಾನ್ ವಿ. ಸೀ. ಅವರ ಹೆಸರನ್ನು ಯಾರೂ ಮರೆಯುವಂತಿಲ್ಲ. ಗೀತಗಳು (೧೯೩೧), ದೀಪಗಳು (೧೯೩೩), ನೆಳಲು ಬೆಳಕು (೧೯೩೫), ದ್ರಾಕ್ಷಿ–ದಾಳಿಂಬೆ (೧೯೪೮), ಹೆಜ್ಜೆ ಪಾಡು (೧೯೫೮) ಮತ್ತು ಅರಲು-ಬರಲು (೧೯೭೨) ಎಂಬ ಆರು ಕವನ ಸಂಕಲನಗಳನ್ನು ಅವರು ಪ್ರಕಟಿಸಿರುತ್ತಾರೆ. ಶ್ರೀಯುತರು ನಾಡು ನುಡಿಗಳಿಗೆ ಸಂಬಂಧಿಸಿದಂತೆ, ಜೀವನದ ಹಲವಾರು ಸಮಸ್ಯೆಗಳಿಗೆ ಸಂಬಂಧಿಸಿದಂತೆ, ಪಟ್ಟಣವಾಸದ ಕವಿಯ ಕಣ್ಣಿಗೆ ಕಾಣುವ ಸುತ್ತಮುತ್ತಲಿನ ಸೃಷ್ಟಿ ಸೌಂದರ್ಯಕ್ಕೆ ಸಂಬಂಧಿಸಿದಂತೆ ಅನೇಕ ಕವಿತೆಗಳನ್ನು ರಚಿಸಿರುತ್ತಾರೆ. ಶ್ರೀಯುತರ ಕವಿತೆಗಳಲ್ಲಿ ರಾಷ್ಟ್ರಭಕ್ತಿಯನ್ನು ಕುರಿತ ಕೆಲವು ಕವಿತೆಗಳಂತೂ ಜನಾನುರಾಗಕ್ಕೆ ಪಾತ್ರವಾಗಿವೆ. ಇಂತೆಯೇ ಇವರ ರಚನೆಗಳನ್ನು ಸಹಾನುಭೂತಿಯಿಂದ ಪರಿಶೀಲಿಸಿದಾಗ ನಿತ್ಯ ಜೀವನದಲ್ಲಿ ಗಂಡು–ಹೆಣ್ಣುಗಳು ಗಂಡ–ಹೆಂಡತಿಯರಾಗಿ ಬಾಳಿ ಬದುಕುವ ಸಂಸಾರದ ವಿವಿಧ ಮುಖಗಳನ್ನೂ, ವಿಸ್ತಾರವಾದ ಈ ಜೀವನದಲ್ಲಿ ಸ್ತ್ರೀ–ಪುರುಷರಿಗೆ ಉಂಟಾಗುವ ನೋವು ನಲಿವುಗಳನ್ನೂ ಬಹಳ ಮಾರ್ಮಿಕವಾಗಿ ಚಿತ್ರಿಸಿರುವುದನ್ನು ಕಾಣಬಹುದು. ಪ್ರಕೃತದಲ್ಲಿ, ಈ ವಿಭಾಗಕ್ಕೆ ಸೇರಿದ ಕೆಲವು ಕವನಗಳನ್ನು ಇಲ್ಲಿ ಪರಿಚಯ ಮಾಡಿಕೊಡಲಾಗಿದೆ.

ಮಾನವನ ಬದುಕಿನಲ್ಲಿ ಮದುವೆಗೆ ವಿಶಿಷ್ಟವಾದ ಸ್ಥಾನವುಂಟು. ಈ ಬಗ್ಗೆ ಬೇರೆ ಬೇರೆ ಜನಾಂಗಗಳಲ್ಲಿ ಭಿನ್ನ ಸಂಪ್ರದಾಯಗಳಿದ್ದರೂ ಎಲ್ಲರ ಆಶಯವೂ ಒಂದೇ ಆಗಿದೆ. ನಮ್ಮಲ್ಲಿ ಈ ದಾಂಪತ್ಯ ಜೀವನದ ಆರಂಭ ಹಿರಿಯರ ಹರಕೆಯನ್ನು ಹೊತ್ತು ಅವರ ಬಯಕೆಯಂತೆ ನೆರವೇರುತ್ತದೆ. ಎಲ್ಲಿಯೋ ನೆಲಸಿದ್ದ ಅಪರಿಚಿತ ಗಂಡು–ಹೆಣ್ಣುಗಳು ಕಲ್ಯಾಣದ ಮೂಲಕ ಚಿರಪರಿಚಿತರಾಗಿ, ಆ ತರುವಾಯ ಸಂಸಾರದಲ್ಲಿ ಭಾಗಿಗಳಾಗುವ ಸೋಜಿಗ ಹೇಳತೀರದು. ಈ ಪದ್ಧತಿಯನ್ನು ವಿಚಾರಮಾಡಿದಂತೆಲ್ಲ ಕವಿಗೆ ಕುತೂಹಲ ಮಿಡಿಯುತ್ತದೆ. ವಿ. ಸೀ. ಅವರು ಈ ವಿಸ್ಮಯವನ್ನು 'ಸಪ್ತಪದಿ' ಎಂಬ ತಮ್ಮ ಕವಿತೆಯಲ್ಲಿ ಬಹಳ ಅರ್ಥವತ್ತಾಗಿ ನಿರೂಪಿಸಿರುತ್ತಾರೆ. ಗಂಡು, ತಾನು ಮದುವೆಯಾದ ಹೆಂಡತಿಯನ್ನು ಕುರಿತು ವ್ಯಕ್ತಪಡಿಸುವ ಭಾವನೆಗಳು ಹೃದಯಸ್ಪರ್ಶಿಯಾಗಿವೆ.

ಯಾರೋ ಎಲ್ಲೋ ಇದ್ದವರಿಬ್ಬರ
ತಂದರು ಸತಿಪತಿಗೈದಿಹರು
ಹೋಮವ ಹುಯ್ಯಿಸಿ ಹರಕೆಯನಿಕ್ಕುತೆ
ದಂಪತಿಗಳು ನೀವೆಂದಿಹರು.
ಮನಗಳನರಿಯೆವು ನಡೆಗಳ ಕಾಣೆವು
ಹಿರಿಯರ ಬಯಕೆಗೆ ಬಾಗಿಹೆವು
ಮುಂದಿನ ಬಾಳಿದ ಪಯಣದಲಿಬ್ಬರು
ತೆರಳುತೆ ದಾರಿಯು ನಡೆಯುವೆವು.

ಈ ರೀತಿ ಕಂಕಣಬದ್ಧರಾದ ಸಂಪತಿಗಳಿಗೆ ಮನಸ್ಸು ದೃಢವಾಗಲು ಅವರು ತಮ್ಮ ಜೀವನದ ರೂಪುರೇಷೆಗಳನ್ನು ನಿರ್ಮಿಸಿಕೊಳ್ಳುವರು. ಅವರಲ್ಲಿ ಪರಸ್ಪರ ಪ್ರೇಮ ಬೆಳೆಯಲು ಬದುಕು ಹಸನಾಗುವುದು.

ಒಬ್ಬರ ಗುಣಕಿನ್ನೊಬ್ಬರು ಸೋಲುತೆ
ಕುಂದನು ಲೆಕ್ಕಿಸದಿದ್ದೇವು
ಕುಂದಿಗೆ ಕೊರತೆಗೆ ಕೆರಳದ ತೆರದಲಿ
ದಿನವೂ ಸಹನೆಯ ಕಲಿತೇವು

ಎಂಬ ಮಾತಿನಲ್ಲಿ ದಾಂಪತ್ಯ ಜೀವನದ ಸಿದ್ಧಾಂತವೇ ಅಡಕವಾಗಿದೆ. ಈ ಗಂಡ-ಹೆಂಡತಿಯರು ಪರಸ್ಪರ ಗುಣಗ್ರಾಹಕರೇ ವಿನಾ ಕೊರತೆಯನ್ನು ಕೆದಕುವವರಲ್ಲ. ಈ ಸೂತ್ರದಿಂದಲೇ ಅವರು ಸಮೀಪವರ್ತಿಗಳಾಗುವರು.

ಹೆಜ್ಜೆಗಳೇಳನು ಈಗಿಡುವಂತೆಯೆ
ತಲೆಗಳನೇಳನು ನಡೆದೇವು
ಮಕ್ಕಳು ಮರಿ ಮೊಮ್ಮಕ್ಕಳ ಪಾಲಿಗೆ
ನಡೆನುಡಿ ಸಕ್ಕರೆ ಬೆರಸೇವು

(ಸಪ್ತಪದಿ)

ತಾವು ಕೃತಾರ್ಥರಾಗುವುದಲ್ಲದೆ ತಮ್ಮ ಅನುರೂಪವಾದ ದಾಂಪತ್ಯದಿಂದ ಮುಂದಿನ ಏಳು ತಲೆಮಾರಿನವರೆಗೂ ತಮ್ಮ ಸವಿಯನ್ನು ಹಂಚಿಕೊಡುವೆವು ಎಂಬ ಅವರ ಕಲ್ಪನೆ ಗುರುತರವಾದದ್ದು. ತಮ್ಮಿಬ್ಬರ ಹಿಗ್ಗಿನಿಂದ ಸುತ್ತಮುತ್ತಲಿದ್ದವರ ಸಂತೋಷವೂ ಹೆಚ್ಚಾದೀತು ಎಂಬ ನಂಬಿಕೆ ಅವರಿಗೆ ಉಂಟಾಗುತ್ತದೆ. ಆದ್ದರಿಂದಲೇ ಗಂಡನಾದವನು "ಎಮ್ಮಯ ಬಾಳೇ ಹೂಬಿಟ್ಟಂದದಿ ಎಲ್ಲರ ಮೊಗವೂ ಅರಳೀತು, ಎಮ್ಮಾ ನಗುವೇ ನೆರೆಯುಟ್ಟಂದದಿ ಎಲ್ಲಾ ತೆನೆ ಹಾಲಿಟ್ಟೀತು" ಎಂದು ತುಂಬಿದ ಕಂಠದಿಂದ ಸಾರಿ ಹೇಳಲು ಹಿಂತೆಗೆಯುವುದಿಲ್ಲ. ಒಟ್ಟಿನಲ್ಲಿ, ಮದುವೆಯೆನ್ನುವುದು ಕೇವಲ ಇಬ್ಬರು ವ್ಯಕ್ತಿಗಳ ಲಗ್ನ ಮಾತ್ರವಲ್ಲ. ಈ ಇಬ್ಬರನ್ನು ದಾಂಪತ್ಯ ಜೀವನಕ್ಕೆ ಅನುಗೊಳಿಸುವ ಮಾತಾಪಿತೃಗಳು, ಈ ಪವಿತ್ರ ಕಾರ್ಯದಲ್ಲಿ ಸಾಕ್ಷಿಗಳಾಗಿ ಭಾಗ

ವಹಿಸುವ ಇತರ ಬಂಧು ಬಳಗದವರು, ಆಪ್ತೇಷ್ಟರು, ಎಲ್ಲರೂ ಸರಿಸಮನಾಗಿ ಈ ಸಂತೋಷದಲ್ಲಿ ಒಟ್ಟುಗೂಡಿರುತ್ತಾರೆ. ಇಂಥ ನಮ್ಮ ಸಂಪ್ರದಾಯ ಆಪ್ಯಾಯಮಾನವಲ್ಲದೆ ಮತ್ತೇನು ?

ಅಪರಿಚಿತ ಗಂಡಿಗೆ, ತಮ್ಮ ಮನೆಯಲ್ಲಿ ಬೆಳೆದು ಬಾಳಿದ ಮಗಳನ್ನು ಒಪ್ಪಿಸಿ ಕೊಡುವ ಸಂದರ್ಭದಲ್ಲಿ ತಂದೆ ತಾಯಿಗಳ ಶಂಕೆ ಆತಂಕಗಳು ಮಿಡಿಯದಿರವು. ಈ ಸೂಕ್ಷ್ಮಾನುಭವವನ್ನು ವಿ. ಸೀ. ಅವರು ಹೃದಯ ಕರಗುವಂತೆಯೇ ಚಿತ್ರಿಸಿರುತ್ತಾರೆ.

ಎಮ್ಮ ಮನೆಯಂಗಳದಿ ಬೆಳೆದೊಂದು ಹೂವನ್ನು
ನಿಮ್ಮ ಮಡಿಲೊಳಗಿಡಲು ತಂದಿರುವೆವು;
ಕೊಳ್ಳಿರೀ ಮಗುವನ್ನು ಎಮ್ಮ ಮನೆ ಬೆಳಕನ್ನು
ನಿಮ್ಮ ಮನೆಯನು ತುಂಬಲೊಪ್ಪಿಸುವೆವು.

ಪ್ರೀತಿಯಿಂದ ಸಾಕಿ ಸಲಹಿದ ಸುಮಕೋಮಲವಾದ ಸುತೆಯನ್ನು ಒಪ್ಪಿಸಿಕೊಡುವ ಈ ಪದ್ಧತಿ ಎಷ್ಟು ಅರ್ಥವತ್ತಾಗಿದೆಯೋ ಅಷ್ಟೇ ಮಾರ್ಮಿಕವೂ ಆಗಿದೆ. ತಮ್ಮ ಮಗಳು ಮುಗ್ಧೆ, ಮೃದು ಎಂದು ತಿಳಿಯ ಹೇಳಿ, ಆಕೆಯನ್ನು ಸ್ವೀಕರಿಸಲಿರುವ ಗಂಡಿನಲ್ಲಿ "ನಿನ್ನ ಮಡದಿಯ ಕೊಂಡು ಸುಖವಾಗಿರೌ ಮಗುವೆ" ಎಂದು ವಿನಂತಿ ಮಾಡಿಕೊಳ್ಳುವರು. ಉಳಿದವರಲ್ಲಿಯೂ ಇದೇ ಪ್ರಾರ್ಥನೆಯನ್ನು ಸಲ್ಲಿಸಿ "ನಿಮ್ಮ ಕೀರುತಿ ಬೆಳೆಯಲಿವಳ ಸೌಜನ್ಯದಲಿ; ನಿಮ್ಮ ಕುಲಶೀಲಗಳು ಪರಿಮಳಿಸಲಿ" ಎಂದು ಆಶಿಸುವರು. ಮಗಳಿಗೆ ಕಡೆಯದಾಗಿ ಹೇಳುವ ಹಿತೋಕ್ತಿಯಾದರೂ ಇಷ್ಟೆ.

ಹೆತ್ತವರ ಮನೆಗಿಂದು ಹೊರಗಾದೆ ನೀ ಮಗಳೆ
ಈ ಮನೆಯೆ, ಈ ಇವರೆ ನಿನ್ನವರು ಮುಂದೆ;
ಇವರೆ ತಾಯ್ತಂದೆಗಳು ಸುಖರು ಭಾಗ್ಯವನು ಬೆಳೆಸುವರು
ಇವರ ದೇವರೆ ನಿನ್ನ ದೇವರುಗಳು. (ಮನೆತುಂಬಿಸುವುದು)

ಮದುವೆಯ ಮನೆಯಲ್ಲಿ ನೆರೆದಿದ್ದವರನೆಲ್ಲ ಒಂದು ತೆರನಾದ ಸಮ್ಮಿಶ್ರಭಾವದಿಂದ ಕಲಕುವ ಈ ವೇದನೆಯನ್ನು ಪ್ರಕೃತ ಕವಿಗಳು ಬಹಳ ನೈಜವಾಗಿ ರೂಪಿಸಿರುತ್ತಾರೆ. ಇಲ್ಲಿನ ಸರಳತೆ ಸ್ವಾಭಾವಿಕತೆಗಳಿಂದ ಈ ಭಾವಗೀತ ಇಂದಿಗೂ ಅತ್ಯಂತ ಜನಪ್ರಿಯವಾಗಿದೆ. ಶಕುಂತಲೆಗೆ ಕಣ್ವರಿತ್ತ ಉಪದೇಶದಂತೆಯೇ ಇಲ್ಲಿನ ಒಂದೊಂದು ನುಡಿಯೂ ಹೆಣ್ಣು ಹೆತ್ತ ಮಾತಾಪಿತೃಗಳ ಮನಸ್ಸನ್ನೇ ಬಿಚ್ಚಿಡುವಂತಿದೆ.

ದಾಂಪತ್ಯ ಜೀವನದಲ್ಲಿ ಹೊಸದಾಗಿ ಹೆಜ್ಜೆಯಿಟ್ಟ ಪ್ರಿಯರ ಸುಖ ಸಂತೋಷಗಳಿಗೆ ಇತಿಮಿತಿಗಳುಂಟೆ ?

ಎನ್ನರಸಿ ನೀನಲ್ಲಿ
ನಿನ್ನರಸ ನಾನಲ್ಲಿ
ಚಿನ್ನರಸಿ ನೀನಿರುವೆ
ಎನ್ನೊಲುಮೆ ರಾಜ್ಯದಲ್ಲಿ

ಎಂದು ಹಿಗ್ಗುವ ಗಂಡು "ಎನ್ನ ಹೃದಯವು ನೀನು ನಿನ್ನ ನಲ್ವನೆಯು ನಾನು" ಎಂದು ತನ್ನನ್ನು ತಾನೇ ಸಮರ್ಪಿಸಿಕೊಳ್ಳುವುದಲ್ಲದೆ

ಎನ್ನ ಪ್ರಾಣದ ಪುರುಳ
ನೆನ್ನ ಜೀವನ ರುಚಿಯು
ನೆನ್ನ ಗರಿಮೆಯು ತೆನೆಯು
ಕಾಣುತಿಹೆ ಸುಖವ

(ಪ್ರಿಯರು)

ಎಂದು ತನ್ನ ಆನಂದಾತಿಶಯವನ್ನು ಬಾಯಿ ಬಿಟ್ಟು ಹೇಳಲೂ ಸಂಕೋಚ ಪಡುವುದಿಲ್ಲ. ಇಂಥ ರಸಿಕನಿಗೆ ಇನಿಯಳ ಕಾಲುಂಗರದ ರವ ಕೇಳಿ ಕಿವಿ ನೆಟ್ಟಗಾಗುತ್ತದೆ.

ಉಂಗುರ ರವ ಕೇಳಿ, ಕಾಲುಂಗುರ ರವ–॥
ಸಂತಸವಾಂತೆದೆ ಮೊರೆಯುತಲಿವೆಯಿದೊ ॥
ಮೆಲು ಮೆಲು ನಡೆದು ನೀನಡಿಯಿಡುತಿರಲು
ಕಲು ನೆಲ ನಲಿವುದು ಮಾರುಲಿದು
ಉಲಿ ಮೆಲು ತಾನಕೆ ಮಿರುಗುವ ಕೈ ಬಳೆ
ಘಲು ಘಲು ನಿನದವು ಸೇರುತಿರೆ–ನಿನ್ನುಂಗುರ

(ಉಂಗುರ ರವ ಕೇಳಿ)

ಈ ಒಲವಿನ ಸೆಳೆತವಿರುವುದರಿಂದಲೇ ದಿನ ದಿನಕ್ಕೂ ಅನುರಾಗ ಕಳೆಯೇರುವುದು. ನಲ್ಲೆಯೊಬ್ಬಳು ಹತ್ತಿರವಿದ್ದರೆ ನಲ್ಲನಿಗೆ ಯಾವ ವಿಘ್ನದ ಭಯವೂ ಬಾಧಿಸದು. ಆಕೆಯನ್ನು "ಬಾ ಬಾ ಬಾ ಚೆಲುವೆ, ಬಾ ಕಮಲೆ ಮರೆಯುವ ಭವ ಭಯದಾಯಸವ" ಎಂದು ಆಹ್ವಾನಿಸುತ್ತಾನೆ. "ಧರೆ ಅರಕಳಚಲಿ, ಶರಧಿಗಳಿಂಗಲಿ, ಇರುಳ್ ಪಗಲಾಗದೆ ಕಾಲ ನಿಲ್ಲಲಿ....ಇಹಪರಗಳ ಬಿಗಿ ಸಡಿಲವಾಗಲಿ, ವಿಧಿಯ ಸೂತ್ರ ಕಡಿದು ಬೀಳಲಿ" ಈ ಪ್ರಿಯರಿಗೆ ಯಾವ ಶಂಕೆಯೂ ಇಲ್ಲ. ಏಕೆಂದರೆ "ಒಡಲೆರಡಾದರು ಒಂದೇ ಮನದಲಿ ಒಂದು ಹೃದಯದಲ್ಲಂತರಂಗದಲಿ ಹೊಂದಿ ಒಲಿದ ಮನದೊಂದು ದೃಢದಲಿ ಒಂದೇ ಒಲವಿನ ವೀರದಲಿ" ಅವರ ಬಾಳು ಬೆಸೆದಿರುತ್ತದೆ. ಆದ್ದರಿಂದ ಇಂಥ ದಾಂಪತ್ಯವನ್ನು ನೆಚ್ಚಿರುವ ನಲ್ಲನು

ಪ್ರಳಯ ಘನದವೊಲು ಕವಿದೆತ್ತೆತ್ತಲು
ಎಡರು ಅನಾದರ ಘೋಷಿಸಲಿ
ಬಳುಕದದಟಿ ನಿಂದೆದೆ ಬಲಿದಿಹೆನಿದೊ
ಚಲವೊಂದುಳಿದಿರೆ ಸಾಧಿಸುವೆ

(ಬಾ ಬಾ ಬಾ ಚೆಲುವೆ)

ಎಂದು ತನ್ನ ಆತ್ಮವಿಶ್ವಾಸವನ್ನು ಸಾರಿ ಹೇಳುತ್ತಾನೆ. ಒಲವಿನ ಆಸರೆಯಲ್ಲಿ

ತನ್ನ ಬಾಳಿನ ಸವಿಯನ್ನುಂಡು ಸುಖಿಸುವ ಪ್ರಿಯನಿಗೆ ತನ್ನ ಇಡೀ ದಿನದ ದುಡಿಮೆಯ ಆಯಾಸವೆಲ್ಲ ಸಂಜೆಯಾದ ಒಡನೆಯೇ ತನ್ನ ಪ್ರಿಯಳು ನೀಡುವ ಸ್ವಾಗತದಿಂದ, ಆಡುವ ಸವಿನುಡಿಗಳಿಂದ ಪರಿಹಾರವಾಗುತ್ತದೆ. ಅದೇ ಅವನ ಪಾಲಿನ ಅಕ್ಷಯವಾದ "ಸಿರಿ". ಅದನ್ನು ಕವಿಯ ಮಾತುಗಳಲ್ಲಿಯೇ ಕೇಳಿ ತಣಿಯಬೇಕು.

ಐದು ಘಂಟೆಗೆ ಮುಂಚೆ ಮನೆಗೆ ಬಾರದುದೇಕೆ
ಇಂದೇನು ಬಳಲಿಹಿರಿ ದನಿಯುದಾಸವಿದೇಕೆ
ಎಂದು ನೀ ಮೊಗವೆತ್ತಿ ಆದರವ ನುಡಿಯುತಿರೆ
ಆ ಕೆಳೆಯ ಆದರದ ಕಾತರವ ಸವಿಯುವುದು
—ಅದುವೆ ಸಿಂಗರವೆನ್ನ ಎದೆಯ ಸೊದೆಯು

ಇಂಥ ತೃಪ್ತ ಹೃದಯಕ್ಕೆ ತನ್ನ ನಲ್ಲೆ ಮಾಡಿಕೊಂಡ ಯಾವ ಸರಳ ಶೃಂಗಾರವಾದರೂ ಮನಸ್ಸಿಗೆ ಉಲ್ಲಾಸವನ್ನು ನೀಡಬಲ್ಲುದು. ಆಕೆಯ ಶೃಂಗಾರ ಚೆಲುವುಗಳು ಆತನಿಗೆ ಸಮಸ್ತ ಸಂಪತ್ತು. ಆದುದರಿಂದಲೇ ಹೃತ್ಪೂರ್ವಕವಾಗಿ ಆಕೆಯ ಸೌಂದರ್ಯವನ್ನು ಬಾಯ್ತುಂಬ ಹೀಗೆ ಸ್ತುತಿಸುವನು.

ಆ ಮೊಗವೆ ಆ ತುರುಬೆ ಆ ಹಣೆಯೆ ಮೂಗುತಿಯೆ
ಕೈ ಬಳೆಯೆ ಕುಂಕುಮವೆ ತಾಳಿಯರಿಸಿನವೆ
ನಿನ್ನ ನಗೆಬಾಳೆಂದು ಎನ್ನ ಬಾಳ್ಬೆಳಸೆಂದು
ನಿನ್ನ ಮಂಗಳದೆಲ್ಲ ಕುರುಹೆಂದು ಮೊಳಗುತಿರೆ
ಎನ್ನ ಗರಿಮೆಯ ಭಾರ ಹೊರೆ ಹೊರಿಪ್ಪುದು.

(ಸಿರಿ)

ಇನಿಯಳಿಗೆ ಯಾವುದು ಮಂಗಳಕರವಾದುವೋ ಅವೆಲ್ಲವೂ ಇನಿಯನಿಗೆ ಸಂತೋಷದಾಯಕವಾದುದು. ಅಷ್ಟೇ ಅಲ್ಲ; ಅದು ಅವನಿಗೊಂದು ಹೆಮ್ಮೆಯೂ ಹೌದು.

ಪತಿಗೆ ತನ್ನ ಪತ್ನಿಯ ಪಾತ್ರವನ್ನು ನೆನೆದಂತೆಲ್ಲ ಆಕೆಯಲ್ಲಿ ಅನುರಾಗದೊಂದಿಗೆ ಪೂಜ್ಯಭಾವನೆಯೂ ಮೂಡುತ್ತದೆ. ಆಕೆಯ ಸೇವೆ ಸಹಕಾರಗಳಿಗೆ ತಾನು ಎಷ್ಟು ಋಣಿ ಎನ್ನಿಸುತ್ತದೆ. ಈ ಅನಿರ್ವಚನೀಯವಾದ ಬಾಂಧವ್ಯವನ್ನು ಕುರಿತು ಅರ್ಥಗರ್ಭಿತವಾಗಿಯೇ ವರ್ಣಿಸಿರುತ್ತಾರೆ.

ಸರ್ವದಾ ನೀನಿರುವೆ
ಸಖಿಯಾಗಿ ಬಳಿಯಲ್ಲಿ
ಸುಖದಲ್ಲಿ ದುಃಖದಲಿ
ಸ್ನೇಹಮಯಿಯಾಗಿ

ಎಂದು ನಲ್ಲನಾದವನು ತನ್ನ ಮೆಚ್ಚುಗೆಯನ್ನು ವ್ಯಕ್ತಪಡಿಸಿ, ಆ ಪ್ರಿಯಳ ಸ್ವಾರ್ಥತ್ಯಾಗವನ್ನೆಲ್ಲ ವಿವರಿಸಿ, ಆಕೆಯ ಸಾನ್ನಿಧ್ಯದಿಂದ ತನಗಾದ ತಣಿವನ್ನು ಸ್ಪಷ್ಟಪಡಿಸಿ, ಕಡೆಗೆ ಕೃತಜ್ಞತೆಯಿಂದ

ಋಣವ ಹೊರಿಸುತ್ತಿರುವೆ ತೀರಿಸುವೆ ನಾನೆಂತು
ಎಂದಿಗಾ ಸೌಭಾಗ್ಯ ದೊರೆವುದೆನಗೆ.
ಧನ್ಯೆ, ತ್ಯಾಗವ ಗೈವೆ ನಿನ್ನಾತ್ಮವರ್ಪಿಸುವೆ
ಇನಿತು ಹಿರಿದಾನಕ್ಕೆ ಪಾತ್ರನಹೆನೆಂತು ?

(ಅಪಾತ್ರ)

ಎಂದು ಹೇಳಿ ಧನ್ಯನಾಗುತ್ತಾನೆ.

ಈವರಗೆ ದಾಂಪತ್ಯವು ಗಂಡಿಗೆ ನೀಡುವ ನಲಿವನ್ನು ಕಂಡಿದ್ದಾಯಿತು. ಇದರ ಇನ್ನೊಂದು ಮುಖವನ್ನೂ ನಾವು ನೋಡಬೇಕಾದುದು ಅಗತ್ಯವಷ್ಟೆ. ಈ ಸವಿ ಹೆಣ್ಣಿನ ಬಾಳಿಗೆ ಎಂತು ದೊರೆಯುತ್ತದೆಯೆನ್ನುವುದನ್ನೂ ಕವಿಗಳು ಇಷ್ಟೇ ಉಜ್ವಲ ವಾಗಿ ಚಿತ್ರಿಸಿರುತ್ತಾರೆ.

ಪತ್ನಿ ಪತಿಗೆ ಆತ್ಮಾರ್ಪಣೆಯನ್ನು ಮಾಡಿಕೊಳ್ಳುವ ಮೂಲಕ ಸಕಲ ಸುಖ ವನ್ನೂ ಪಡೆಯುವಳು. ಆಕೆಯ ಈ ಸಮರ್ಪಣ ಭಾವವನ್ನು ಪ್ರಕೃತ ಕವಿಗಳು ಉಚಿತವರಿತು ನಿರೂಪಿಸಿರುತ್ತಾರೆ.

ಈ ಎಲ್ಲ ನಿನಗಾಗಿ–ಓ ನೀರ ನಿನಗಾಗಿ
ಈ ಒಡಲೀ ಮನ–ಈ ಎದೆ ಕಾಮನ !

ಎಂದು ಹೃದಯ ತೆರೆದು ಹೇಳುವ ನಲ್ಲೆ ತಮ್ಮ ದಾಂಪತ್ಯವು ತಮಗೆ ಎಂಥ ಚೈತನ್ಯವೆನ್ನುವುದನ್ನೂ, ಆ ಮೂಲಕ ಸುತ್ತಮುತ್ತಲಿದ್ದವರಿಗೆ ತಾವು ಏನು ಸವಿ ಯನ್ನು ನೀಡಬಲ್ಲೆವು ಎನ್ನುವುದನ್ನೂ ಬಗೆಬಗೆಯಾಗಿ ಹೇಳಿ ಹಿಗ್ಗುತ್ತಾಳೆ.

ನೂರು ಹಸಿವು ಬೇನೆ–ನಾನಿಲ್ಲಿ ತುಂಬೇವು
ನೂರು ಜನ್ಮದ ನೋವ–ಮಾಯಿಸಿ ಮರಸೇವು
ಎರಡು ಹುಟ್ಟಿನ ಕಥೆ–ಸವಿ ಕೆಳೆ ಕಂಡೀತು
ಒಂದೆ ತಾನಕೆ ತೂಗಿ–ತೊನೆದೀತು ನಲಿದೀತು.
ಯುಗ ಯುಗಗಳ ಮೆಟ್ಟಿ–ನಡೆದೀತು ಬಲಿತೀತು
ನಗೆ ನೇಹದಕ್ಕರು–ಇಳೆಯಾವರಿಸೀತು

(ನಿನಗಾಗಿ)

ತಾವು ತಣಿಯುವುದಲ್ಲದೆ ಸಮಸ್ತ ಸೃಷ್ಟಿಯೂ ತಮ್ಮ ನಲವಿನಲ್ಲಿ ಪಾಲುಗೊಳ್ಳ ಬಹುದೆಂಬ ಕಲ್ಪನೆ ವಾಸ್ತವಿಕವಾಗಿ ಹಿರಿದಾದುದು. ತಾವು ಕೈಕೊಂಡಿರುವ ದಾಂಪತ್ಯ ಜೀವನ ಎಷ್ಟು ಶ್ರೇಷ್ಠವಾದುದೆಂದು ವಿದಿತವಾಗುವುದಲ್ಲದೆ, ನಲ್ಲನ ಹಂಬಲದಿಂದ ಮಿಡಿಯುವ ಎದೆಗೆ ಆತನಲ್ಲಿರುವ ನಚ್ಚು ಮೆಚ್ಚುಗಳನ್ನೂ ತೋರಿಸಿಕೊಡುತ್ತದೆ. ಆತನೊಬ್ಬನೇ ಆಕೆಗೆ ಈ ಲೋಕದಲ್ಲಿ ಸರ್ವಸ್ವ. ಆದ್ದರಿಂದ ಆಕೆ

ನೀವಿತ್ತರೆನಗುಂಟು ಇಲ್ಲದಿರಲೇನಿಲ್ಲ
ಬೇಡಿ ಗಳಿಸಲುಬಹುದೆ ಕೆಳೆಯ ಒಲವ?

ಎಂದು ವಿಜ್ಞಾಪಿಸಿಕೊಂಡು, ಪ್ರಕೃತಿಯಲ್ಲಿ "ತನ್ನಿಚ್ಛೆ ಬಂದಂತೆ ಗಾಳಿ ಊದುತೆ ಬರಲು ಎಳೆಯ ಹೊಂಗೆಯ ತಳಿರು ತಾನೊಲೆವುದು. ತನ್ನ ನಿಯಮಕೆ ತೆರೆದು ಹಗಲು ಬೆಳಕೀಯುತಿರೆ ಎಲ್ಲ ಲತೆ ಹೂ ಹಣ್ಣು ಕಳೆಯುಡುವುವು" ಎಂದು ಸೂಚಿಸಿ, ಹಾಗೆಯೇ "ನಿಮ್ಮ ಕರುಣೆಯ ಕುಡಿಯ ಒಂದೆಳೆಯು ಬೀರಿರಲು, ಅದುವೆ ಹಗಲೆಂದೆಣಿಸಿ ನಾ ನಲಿವೆನು" ಎಂದು ಭಾವಿಸುತ್ತಾಳೆ. ಸತಿಯಲ್ಲಿ ಎಷ್ಟೇ ಲೋಪ ದೋಷಗಳಿದ್ದರೂ ಅವುಗಳಾವುವನ್ನೂ ಗಣಿಸದೆ ತನಗೆ ಪ್ರೇಮದ ಸವಿಯನ್ನು ನೀಡಬೇಕೆಂದು ಪ್ರಾರ್ಥಿಸಿಕೊಳ್ಳುವಳು.

ನಿಮಗೆ ಬೇಕೆಂದಿರಲಿ ಬೇಡವಾಗುತಲಿರಲಿ
ನಿಮ್ಮೆಣಿಕೆ ತೂಕಕೆ ನಾನೇರದಿರಲಿ
ಎನ್ನ ಬಾಳ್ ದಿನದಿನಕೆ ಸವಿಯಾಗುವಂದದಲಿ
ರಸವಿಟ್ಟು ಬಲಗೊಳುವ ಹರಕೆ ನೀಡಿ

* * *

ಎನ್ನೆದೆಯ ಸೊಡಲಿದಕೆ ದೀಪ ಮುಡಿಸಿದರಂದು
ಎಂದೆಂದು ನಂದದಂತದು ಬೆಳಗಲಿ

(ದಾನಪಾತ್ರ)

ಭಾರತೀಯ ಸಂಸ್ಕೃತಿಯನ್ನು ಬಲ್ಲವರಿಗೆ ಪತ್ನಿಯಾದವಳ ಈ ದೈನ್ಯ ಧ್ವನಿಯ ಮೇಲ್ಮೆಯೇನೆಂಬುದು ಸ್ವವಿದಿತವಾಗುತ್ತದೆ. ಮನೆತುಂಬಿಸುವ ಸಮಯ ದಲ್ಲಿ ತಂದೆ ತಾಯಿಗಳು ಹೇಳಿದ ಹಿತೋಕ್ತಿಗಳನ್ನು ನೆನೆದರೆ, ಹೆಂಡತಿಯಾದವಳು ಯಾಕಾಗಿ ತನ್ನ ಗಂಡನ ಒಲವಿಗೆ ಹೀಗೆ ಹಂಬಲಿಸುತ್ತಾಳೆ ಎನ್ನುವುದು ವೇದ್ಯ ವಾಗುತ್ತದೆ. ದಾಂಪತ್ಯದಲ್ಲಿ ಪರಸ್ಪರ ಅನುಸರಣೆಯೇ ಪರಮ ಸೂತ್ರ; ಅದೇ ಎಂದೆಂದಿಗೂ ಪವಿತ್ರ.

ಗಂಡನಿಗಾಗಿ ಮಿಡಿಯುವ ಹೆಣ್ಣೆದೆಗೆ, ಮಡದಿಗೆ ಆತ ಕ್ಷಣಕಾಲ ಅಗಲಿದರೂ ಅದು ಸಹಿಸಲಸಾಧ್ಯವಾದ ಯಾತನೆ, ಇನ್ನು ಆತ ಊರಿನಲ್ಲಿ ಇಲ್ಲವೆಂದ ಮೇಲೆ ಹೆಂಡತಿಯ ಬೇಸರ ಹೇಳತೀರದು.

ನೀವಿಲ್ಲದ ಮನೆ ಬರಿದಾಗಿ ಕಾಂಬುದು
ನೀವಿದ್ದರೆ ಮನ ತುಂಬಿಹುದು;
ನೀವಿಲ್ಲದ ಮನೆ ಕೆಲಸಗಳಾಗವು
ನೀವಿಲ್ಲದೆ ಬಾಳು ಬೇಸರವು
ಊರಲಿದ್ದರೆ ಈಗ ಅನ್ನರೆಗಳಿಗೆಗೆ
ಇನ್ನೇನು ಬಂದೇ ಬರುವಿರೆಂದು
ಈ ಮನೆಯನು ಅಣಿಗೊಳಿಸುವೆ ಹರುಷದಿ
ನಿಮ್ಮ ನುಡಿಗೆ ಕಾದು ತವಕದಲಿ.

ಪ್ರತಿಸತ್ಯವೂ ಪತಿಯ ಪತ್ರವನ್ನು ನಿರೀಕ್ಷಿಸಿ, ನಿರಾಶಳಾಗಿ "ತನ್ನ ಹೊಣೆಯಲಿ ಮೂರು ಬಾರಿಗೆ ದಿನದ ಅಂಚೆಯೊ ಸರಿವುದು, ಯಾರಿಗಾರಿಗೊ ಓಲೆ ಪೋಪುದು ಏನ್ನ ಬನ್ನವು ನೀಗದು" ಎಂದು ಕೊರಗುವಳು. ಈ ಹೃದಯದ ತಲ್ಲಣ ಎಷ್ಟು ಸ್ವಾಭಾವಿಕವೋ ಅಷ್ಟೇ ಮನಕರಗಿಸುವಂತಿದೆ. ಸಂಜೆಯ ವೇಳೆಗೆ ಮನೆಗೆ ಬಂದಾಗ ಮಡದಿಯ ರೂಪ, ಚೆಲುವು, ಸವಿಮಾತುಗಳಿಂದ ಮನದನ್ನನಿಗೆ ಏನು ಆನಂದ ದೊರೆಯಬಲ್ಲುದೋ ಅದೇ ರೀತಿ ಮಡದಿಗೂ ಸಹ ತನ್ನ ಆಣ್ಮನ ಆಗಮನ ಸರ್ವದಾ ಸಂತೋಷಕಾರಿಯಾದುದು. ಗಂಡಸಿಗೆ ತನ್ನ ಬೇಸರವನ್ನು ಬಾಯಿಬಿಟ್ಟು ಹೇಳುವ ದಿಟ್ಟತನವಾದರೂ ಉಂಟು. ಹೆಣ್ಣು ಜೀವಕ್ಕೆ ಆ ಕೆಚ್ಚಿಲ್ಲ. ಸಂಕೋಚ ಹೃದಯವನ್ನು ಬಾಧಿಸುತ್ತದೆ. ಅದಕ್ಕಾಗಿಯೇ ಈ ಕುದಿಗೆ ಸಿಕ್ಕಿಬಿದ್ದ ಸತಿ ಸಹಜವಾಗಿ

ಹೇಳಲೆಂದರೆ ಜನ ಪರಿಹಾಸಗೈವರು
ಹೇಳದಿರಲು ಬೇನೆ ಮೊನೆಯಪ್ಪುದು

(ಮಡದಿ)

ಎಂದು ನುಡಿಯುತ್ತಾಳೆ. ಆದರೆ ಈ ಲಜ್ಜೆಯೇ ಲಲನೆಗೆ ಭೂಷಣವಲ್ಲವೆ ?

ನೂರಾರು ಮೈಲಿಗಳ ದೂರದಲ್ಲಿರುವ ನಲ್ಲನನ್ನು ನೆನೆದಾಗಲೂ ನಲ್ಲಳ ನೋವು ಹೇಳಲಳವಲ್ಲ. ಸಾಲದುದಕ್ಕೆ ಸುತ್ತಲೂ ಬೆಳುದಿಂಗಳು ಬೇರೆ ಚೆಲ್ಲಿದ್ದರೆ ಆ ಸಂಕಟ ಅಸಹನೀಯವೇ ಸರಿ.

ಒಂದೆರಡೇ ನಾಲ್ಕಾರೇ ನೂರಾರಿವೆ ಮೈಲಿ
ಎಲ್ಲಿರುವಿರಿ, ಓ, ದೂರದಿ, ಚೆಲ್ಲಿಹ ಬೆಳುದಿಂಗಳಲಿ

*       *       *

ನಿಮಿ ನಿಮಿಷಕೆ ಏರುತ್ತಿದೆ ಮೀರುತ್ತಿದೆ ಬೇನೆ;
ಕಿಲದಲ್ಲಿಯೆ ನೀವಿಲ್ಲದ ಕಂಗಾಲಿನ ಸೋನೆ.

*       *       *

ಏಕಂಡರು ನೀವ್ಯಾಕಂಬಿರಿ ಎದನಿಯೊಳು ನೀವೇ
ಬಾಳೆಲ್ಲವನಾವರಿಸುತಲೆಂದೆಂದಿಗು ನೀವೇ.

(ವಿರಹಿ)

ಇಂಥ ಒಂದೊಂದು ನುಡಿಯಲ್ಲೂ ವಿರಹದ ತಾಪ ತಾನಾಗಿಯೇ ವಿದಿತವಾಗುವುದು. ಈ ಕವಿತೆಯ ಲಯವೂ ಸಹ ಹೃದಯದ ಭಾರವನ್ನು ತಡೆತಡೆದು ಅಭಿವ್ಯಕ್ತಗೊಳಿಸುವುದಕ್ಕೆ ತಕ್ಕುದಾಗಿದೆ.

ಪ್ರಿಯನ ಹೃದಯದ ಕಾತರಗಳೂ ಹಲವಾರು ತೆರನಾದುವು. ಕವಿಗಳು ಇಂಥ ಒಂದೆರಡು ಪ್ರಸಂಗಗಳನ್ನು ಬಹು ಚಿತ್ರವತ್ತಾಗಿ ನಿರೂಪಿಸಿರುತ್ತಾರೆ. ಅಚ್ಚು ಮೆಚ್ಚಿನ ನೀರೆ ತುಸುಮುನಿಸಿಕೊಂಡರೂ ಸರಿಯೆ. ಆತನ ಆತಂಕ ಅಮಿತವಾದದ್ದು. ಗಂಡ–ಹೆಂಡಿರ ಕೋಪವನ್ನು ಬೇರಾರ ಮುಂದೆಯೂ ಹೇಳಿಕೊಳ್ಳುವಂತಿಲ್ಲ.

ಚತುರನಾದ ಇನಿಯು ಆಕಾಶದಲ್ಲಿ ನಗು ನಗುತ್ತಿರುವ ಚಂದ್ರನತ್ತ ಕೈತೋರಿ, ತನ್ನ ಇನಿಯಳನ್ನು ಎಚ್ಚರಿಸುವನು.

ನೀರೆ ಎವ್ಮಾ ಮುನಿಸ ನೋಡಿ
ಬೆಳ್ಳಿ ಚಂದ್ರನು ನಗುವನು–
ನೂರು ದೇಶದಿ ನೂರು ಕಾಲದಿ
ಕಂಡುಬಂದಿಹೆನೆಂಬನು.

ಆಕೆಯ ಒಂದೊಂದು ಚಲನವಲನವನ್ನೂ ಅವನು ನೋಡುತ್ತಿರುವನೆಂದು ಹೇಳಿ, ಮುನಿಸಿಕೊಂಡಿದ್ದರೂ ಆಕೆಯ ಅಲಂಕಾರಾದಿಗಳು ತನಗೆ ಹೇಗೆ ಮೆಚ್ಚುಗೆಯಾಗಿವೆ ಯೆಂದು ವರ್ಣಿಸುವನು. ತರುವಾಯ

ನಿನ್ನ ಕೋಪದ ಹೊಗೆಯ ಮುಗಿಲಲಿ
ಅಂಜಿ ಮರೆಯೊಳು ಅವಿತನು–
ಸಾಕು ಬಿಂಕದ ಬೀಗು ಜಾಗು
ಬೇಗ ಬಾ ಸಖಿ ಎನ್ನೆಡೆ.
ನೂರು ಹೂಗಳ ಸುರಭಿಯಿರುವುದು
ತೂಗಿ ಉಯ್ಯಾಲೆಯಾಡುವ–
ಒಯ್ಯ ನೂದುತೆ ಸುಳಿವ ಗಾಳಿಗೆ
ಎಮ್ಮ ಪ್ರೇಮವನುಸಿರುವ.

ಎಂದು ಸವಿ ನುಡಿಗಳಲ್ಲಿಯೇ ಸಂತೈಸುವನು. ಕಡೆಗೆ

ನಗುವ ಚಂದ್ರನ ನಗುವ ವಾರಿಸ
ಲಾವು ಮಾನಿಸರಾಪೆವೆ ?–
ನಿನ್ನ ಕಣ್ಣಿನ ನಗುವು ತೆರೆದರೆ
ಅಡಗಿ ತಗ್ಗುವನಾತನೆ !
ನೀರ ನೀರೆಯುರೊಲಿದು ಸೇರಲು
ಮೂರು ಲೋಕವು ನಲಿಯದೆ ?–
ಎರಡು ಬಾಳ್ಗಳು ಬೆರೆವ ಹರುಷದಿ
ಇಳೆಯು ಹರುಷವು ಬೆಳೆಯದೆ ?

(ನಗುವ ಚಂದ್ರ)

ಎಂದು ಮಡದಿಯ ಮನಸ್ಸನ್ನು ಒಲಿಸುವನು. ಈ ರೀತಿ ಚಂದ್ರನನ್ನು ಮುಂದೊಡ್ಡಿ ಮನದನ್ನೆಯ ಮುನಿಸನ್ನು ಕ್ರಮ ಕ್ರಮವಾಗಿ ನಿವಾರಿಸುವ ಪ್ರಿಯನ ಚಾತುರ್ಯ ಚಿತ್ತಾಕರ್ಷಕವಾಗಿದೆ.

ಹೆಂಡತಿಯ ಕೋಪ ಅಭೇದ್ಯವಾದರೆ ಅದಕ್ಕಾಗಿ ಪರಿತಪಿಸುವ ಪತಿಯ ಹದವೇ ಬೇರೆ.

ಮಡದಿಯ ಮೊಗವೇಕೊ ಅರೆಮಾಸಿ ಕೆದರಿದೆ
ಕದಪು ಕೆಂಪೇರಿದೆ, ಬಳಲಿದೆ.
ಕಪ್ಪು ಬಟ್ಟಲ ಕಣ್ಣು ತಪ್ಪ ಮರಸುವಂತೆ
ಇದೆ ಈಗ ಕಣ್ಣೀರಸೊರಸಿದೆ
ಯಾರ ಮೂದಲೆ ಚುಚ್ಚೊ, ಎದೆ ಸೆಕ್ಕಿಯೊ
ಯಾವ ಲೋಪದ ತಾಪ ಅಳು ನೆನಪೋ
ಯಾವ ಮೈಸೋಲೆಂತು ಯಾರ ಬಾಯಿಗೆ ಬಿತ್ತೊ
ಎಂದೂ ಕಾಣದ ನೋವು ಇಂದೇಕೋ

ಎಂದು ಬಗೆ ಬಗೆಯಾಗಿ ಪ್ರಶ್ನಿಸಿಕೊಳ್ಳುವನು. ಯಾವುದಕ್ಕೂ ಈ ಅಸಮಾಧಾನ ಮಾಯದಿರಲು ಆಗ ಆತನು

ಇಲ್ಲಿಂದ ಜಗುಳಿ ಬೇರೆಗೆ ಸಾಗುವಂತಿಲ್ಲ
ಇಲ್ಲೀಗ ನಿಜ ತೇಲುವಂತಿಲ್ಲ
–ತನ್ನ ಪಾಡಿಗೆ ತಾನು ಬಿಕ್ಕಲಿ, ಬೀಗಲಿ
ತಾನಾಗಿಯೆ ನಾಳೆ ತಿಳಿವುದೆಲ್ಲ

(ನಾಳೆ ತಿಳಿವುದು)

ಎಂದು ತನಗೆ ತಾನೇ ಸಮಾಧಾನ ಮಾಡಿಕೊಳ್ಳುವನು. ಪ್ರಣಯ ಪ್ರಪಂಚದಲ್ಲಿ ತಾಳಿ ಬಾಳುವುದೇ ಸೂಕ್ತವಾದುದು. ಆದ್ದರಿಂದ ಈ ನಿಲುವು ಇಬ್ಬರಿಗೂ ಹಿತಕಾರಿ.

ಪ್ರಣಯದ ಪ್ರೇರಣೆ ಪೋಷಣೆಗಳಲ್ಲಿ ಪ್ರಕೃತಿಯ ಪಾತ್ರವನ್ನು ನಾವು ಕಡೆ ಗಣಿಸುವಂತಿಲ್ಲ. ಸುತ್ತಮುತ್ತಲಿನ ಚೆಲುವು ಒಲವುಗಳು ಈ ಹೃದಯ ಮಾರ್ದವಕ್ಕೆ ತಮ್ಮ ಸಹಕಾರವನ್ನು ನೀಡುತ್ತವೆ. ಈ ರಹಸ್ಯವನ್ನೂ ಸ್ವಾರಸ್ಯವನ್ನೂ ಕವಿಗಳು 'ಕಾಮ-ಚಂದ್ರ' ಎಂಬ ಕವಿತೆಯೊಂದರಲ್ಲಿ ತಕ್ಕಮಟ್ಟಿಗೆ ದೀರ್ಘವಾಗಿಯೇ ಪ್ರತಿಪಾದಿಸಿರುತ್ತಾರೆ. ಕಾಮನು ಚಂದ್ರನನ್ನು ಕುರಿತು

ಅತ್ತ ನೀನು, ಇತ್ತ ನಾನು, ರಜತಕರನು, ಚೆಲುವು ಮೊಗನು
ಸೋಮ ನೀನು, ಕಾಮ ನಾನು, ಸುತ್ತಲೆಲ್ಲ ಸಂತಸವನು
ಬಿತ್ತುತಿರುವೆವು;
ಸಂತಸದಲಿ ಬೆಳೆದ ಬೆಳಸ ಹಂಚುತಿರುವೆವು

(ಕಾಮ–ಚಂದ್ರ)

ಎಂದು ಹೇಳಿರುವುದನ್ನು ಗಮನಿಸಿದರೆ, ಈ ಇಬ್ಬರೂ ಪ್ರೇಮಲೋಕದ ಸೂತ್ರಧಾರರು ಎಂದು ನಾವು ಒಪ್ಪಿಕೊಳ್ಳಬೇಕಾಗುತ್ತದೆ. ಹಿಂದೊಮ್ಮೆ ಕಾಮನು ತಾನು "ಸಾಂಗನಾಗಿ ನಿಂದು ಶಿವನ ಗೆಲ್ದೆನು" ಎಂದು ತಿಳಿಸಿ, "ಇಂದನಂಗನಾಗಿ ಜಗಕೆ ನೋಡಜೇಯನು" ಎಂದು ಭುಜ ತಟ್ಟಿಕೊಳ್ಳುತ್ತಾನೆ. ಕಾಮನೊಂದಿಗೆ ಚಂದ್ರನೂ ಕೂಡಿದ ಮೇಲೆ ಈ ರಮ್ಯ ಪ್ರಪಂಚದ ಪ್ರಶಸ್ತಿಯನ್ನು ಮತ್ತೆ ಹೇಳಬೇಕೆ!

## ೨

ಈವರೆಗೆ ಪ್ರಣಯದ ಸುಗಮ ಸ್ವರೂಪವನ್ನು ಪರಿಶೀಲಿಸಿದೆವು. ಆದರೆ ಇದು ಅನೇಕ ವೇಳೆ ದುರ್ಗಮವಾಗುವುದೂ ಉಂಟು. ಒಲವಿನ ಆಕರ್ಷಣೆಗೆ ಸಿಕ್ಕಿಬಿದ್ದ ಸ್ತ್ರೀ ಪುರುಷರು ತಮ್ಮ ಅಭೀಷ್ಟ ನೆರವೇರದಿದ್ದರೆ ಅವರು ಪಡುವ ಯಾತನೆ ಅಷ್ಟಿಷ್ಟಲ್ಲ. ಪ್ರಕೃತ ಕವಿಗಳು ಈ ದಾರುಣ ಸ್ವರೂಪದ ಕೆಲವು ಮುಖಗಳನ್ನೂ ಹೃದಯ ಕರಗುವಂತೆ ಚಿತ್ರಿಸಿರುತ್ತಾರೆ.

ಹತಾಶನಾದ ಗಂಡಿಗೆ ತನ್ನ ಪ್ರಿಯಳೊಡನೆ ಎಂದೋ ಕಳೆದ ಸುಖ ಕ್ಷಣಗಳೆಲ್ಲ ನಿನ್ನೆ ಮೊನ್ನೆ ನಡೆದ ಘಟನೆಗಳೋ ಎಂಬಂತೆ ಮೇಲಿಂದ ಮೇಲೆ ನೆನಪಾಗಿ ಹೃದಯವನ್ನು ಮೀಟುವುವು.

ನಿನ್ನೆ ನಡೆದಂತಿಹುದು ಮರೆವೆನೆಂತು ?
ಎನ್ನ ಕಂಗಳ ಮುಂದೆ ಚಿತ್ರ ಕಟ್ಟಿದೊಲಿಹುದು–
ಚಕ್ರವಾಕಗಳಂತೆ ಕೂಡಿ ಮೆಲ್ಲುಲಿದೆವೇ
ಮಿಕ್ಕ ಲೋಕವ ಮರೆತು ಒರ್ವರೊರ್ವರೊಳು ॥

ಎಂದು ಒಂದೊಂದೇ ಸಂದರ್ಭವನ್ನು ಸ್ಮರಿಸಿಕೊಳ್ಳುವನು. ಕಡೆಗೆ,

ಎನ್ನ ಮನದಲಿ ನೀನು ನಿನ್ನ ಮನದಲಿ ನಾನು
ಎಮ್ಮ ಕಣ್ ಪಾಪೆಯೊಳು ನಾವು ನಾವುಗಳು
ಚೆನ್ನರಿನಿಯರು ನಾವು ಏಕ ಜೀವದೊಳಲ್ಲಿ
ಪ್ರಿಯವ ಪ್ರೇಮವ ಸುಖವನುಸಿರುತಿದ್ದುದನು (ಅಳಿಸದ ನೆನಪು)

ಎಂದು ಕೊರಗಿ ತಮ್ಮ ಒಲವಿನ ಆಳವನ್ನು ತೋಡಿಕೊಳ್ಳುವನು. ಪ್ರಿಯಳ ನಡೆ ನುಡಿಗಳು ಮನಸ್ಸನ್ನು ಆವರಿಸಿಕೊಳ್ಳುತ್ತವೆ. ಆಕೆಯ ಸಾನ್ನಿಧ್ಯ, ಆಕೆ ತನಗೆ ನೀಡಿದ ತಂಪು ತಣಿವುಗಳೆಲ್ಲ ಮತ್ತೆ ಮತ್ತೆ ನೆನಪಾಗಲು, ತುತ್ತ ತುದಿಗೆ ಅದೊಂದೇ ತನಗಿಂದು ಉಳಿದಿರುವ ನಿಧಿಯೆಂದು ವೇದ್ಯವಾಗುವುದು. ಆಗ ಆತನು ನೆನಪಿಗೆ ತನ್ನ ಕೃತಜ್ಞತೆಯನ್ನು ಹೀಗೆ ನಿವೇದಿಸಿಕೊಳ್ಳುವನು.

ನೆನಪಿನಲ್ಲಿ ಜೀವವಿಹುದು
ನೆನಪಿನಲ್ಲಿ ಸೌಖ್ಯವಿಹುದು
ನೆನಪಿನಲ್ಲಿ ತಾಳ್ಮೆಯಿಹುದು
ನಿನ್ನ ಪಡೆವ ಭಾಗ್ಯವೆನಗೆ ಇಲ್ಲ ಇಲ್ಲ ಇಲ್ಲವಾದರೂ ಇನಿಯಳನ್ನು ಕುರಿತು
ಆಗದುದಕೆ ಚಿಂತೆಯೇಕೆ
ಆಗುವುದು ಆಗಲೇಳು
ನಿನ್ನ ಹೆಸರ ಹೇಳಿ ಕೊಡುವೆ
ನಿನ್ನದೀ ತನು–ನಿನ್ನದೀ ಧನ, ನಿನ್ನ, ನಿನ್ನ, ನಿನ್ನದೀ ಮನ (ಕಾಣಿಕೆ)

ಎಂದು ತನ್ನನ್ನು ತಾನೇ ಸಮರ್ಪಿಸಿಕೊಂಡು ಸಮಾಧಾನ ತಾಳುವನು.

ಪ್ರಣಯಿಗಳ ಬಾಳಿನಲ್ಲಿ ಕಣ್ಣಿಗೆ ಒಂದು ವಿಶಿಷ್ಟವಾದ ಸ್ಥಾನವುಂಟು. ನೋಟದಿಂದಲೇ ಈ ಲೋಕವೆಲ್ಲ ತನಗೆ ತಾನಾಗಿಯೇ ಅರಿವಾಗುವುದು. “ಹುಬ್ಬು, ನುಡಿ, ಕಣ್ಣು ಕುಡಿನೋಟ ಒಂದು ಒಂದನು ಮೀರಿ ಕೊಂಕು, ಕಡು ಕೊಂಕು” ಎನ್ನಿಸುವುದುಂಟು. ಆದರೆ ಈ ಕೊಂಕೇ ನಮಗೆ ಮಂಕು ಕವಿಸುತ್ತದೆ. ಅವರ ಲೀಲಾವಿಲಾಸವನ್ನೆಲ್ಲ ವರ್ಣಿಸಿದ ಮೇಲೆ ಪ್ರಿಯನು “ಕಣ್ಣ ಬಾಂಬಿಲ್ಲಳಲಿ ನೇಹವನು ಹೂಡುವಿರಿ ಕುದಿವ ಹೃದಯವ ಮಿಡಿಸಿ ಮೌನ ನುಡಿಸಿ” ಎಂದು ಸ್ತುತಿಸುವುದು ಒಂದು ಬಗೆಯಾದರೆ, ಪ್ರಣಯ ಫಲಿಸದ ಹೆಣ್ಣು ಹೃದಯವನ್ನೇ ಕಲಕುವಂತೆ ಬೀರಿದ ನೋಟದ ಚಿತ್ರ ಬೇರೊಂದು ಬಗೆಯಾದುದು. ಅದು ಭಗ್ನ ಪ್ರಣಯಿಗೆ ನೀಡುವ ನೋವು ಅಷ್ಟಿಷ್ಟಲ್ಲ.

ಎಲ್ಲಿ ಹೋದರು ಬಿಡದು ನಿನ್ನ ಕಣ್ಣು–
ಎಲ್ಲೆಲ್ಲು ಎನ್ನ ಬೆನ್ನಟ್ಟುತಿಹುದು
ಹತ್ತು ವರುಷದ ಹಿಂದೆ ಹಾಡ ಹಾಡುತ ನೀನು
ಹಾಡನೊಮ್ಮೆಗೆ ನಿಲಿಸಿ ನಟ್ಟಕಣ್ಣು.
ಎಮ್ಮಿಬ್ಬರಿಗೆ ಇದ್ದ ಅಂತರವನರಿತಿದ್ದು
ಎದೆಯಾಸೆಗಳನೆಲ್ಲ ತುಳಿದ ಕಣ್ಣು
ನಿನ್ನವರ ನಿಶ್ಚಯದಿ ನಿನಗಾದ ನೋವನ್ನು
ಎನ್ನ ಕಣ್ಣಿಗೆ ಎತ್ತಿ ಕಾಣಿಸಿದ ಕಣ್ಣು.

(ಕಣ್ಣು)

ಎಂಬ ಒಂದೊಂದು ನುಡಿಯೂ ಕಿಡಿಯನ್ನು ಮೀರಿಸುವಂತಿದೆ.

ಜೀವನದಲ್ಲಿ ನಾನಾ ತೆರನಾದ ಸಂದರ್ಭಗಳುಂಟು. ಎರಡನೆಯ ಬಾರಿಗೆ ಮದುವೆಯಾದವನ ಮನೋಧರ್ಮ ಬಹು ವಿಚಿತ್ರವೆನ್ನಿಸುತ್ತದೆ. ಹೊಸದಾಗಿ ಮನೆಗೆ ಬಂದ ಮಡದಿ ಬೀರಿದ ನೋಟ ತನ್ನ ಹಿಂದಿನ ಹೆಂಡತಿಯ ನೆನಪನ್ನು ತಂದು ಆತನ ಹೃದಯವನ್ನೇ ಹಿಂಡಿದಂತಾಗುವುದು. ಆಗ ಆತ

ನೋಡದಿರು ಎಲೆ ಹೆಣ್ಣೆ
ಕಣ್ಣನರಳಿಸಿ ಅಂತು
ನೋಡದಿರು ಮೌನದಲಿ
ಕೊಲುವ ಕಣ್ಣುಗಳಿಂದ
ನೋಡದಿರು ನೀನು
ನೋಡಿ ಎನ್ನೆದೆಯಿರಿವ
ನೆನವುಗಳ ತಾರದಿರು

ಎಂದು ಕೇಳಿಕೊಳ್ಳುವನು. ಹಿಂದಿನದೆಲ್ಲ ಕಣ್ಣಮುಂದೆ ಸುಳಿದಂತಾಗುವುದು.

ಅವಳಂತು ನೋಡಿದಳು
ಎನ್ನೆದೆಯ ದಹಿಸಿದಳು
ನುಡಿಯದೆಯೆ ಮರೆಮಾಡಿ
ಬೆಂದು ಬೂದಿಯಾದವಳು
ಬೂದಿಯಾದವಳು

(ಆ ನೋಟ)

ಎಂದು ತನ್ನ ಎದೆಯನ್ನೇ ಬಿಚ್ಚಿ ತೋರುವನು.

ತಾನು ಹಂಬಲಿಸಿದ ಹೆಣ್ಣು ಮತ್ತೊಬ್ಬನ ಪಾಲಿಗೆ ಸೇರಿದರೂ ಮನಸ್ಸಿಗೆ ಸಮಾಧಾನವೇ ಬಾರದೆ, ಪ್ರಿಯನು ಆಕೆಯನ್ನು ಅಂಗಲಾಚುವ ಒಂದು ಸನ್ನಿವೇಶ ನಮಗೆ ಸ್ವಲ್ಪ ವಿಸ್ಮಯವನ್ನುಂಟು ಮಾಡದೆ ಇರದು.

ಎಷ್ಟು ದೂರದಿ ನಿನ್ನನಟ್ಟಿ ಬಂದೆ!
ಕರಗು ಕರಗೋ ಹೆಣ್ಣೆ, ನನಗೆ.
ಏನು ಉಬ್ಬಸ ನಿನಗೆ? ನಿಂತಿನಿಸು ಮೆಲ್ಲುಲಿದು ನುಡಿಯೆಯಾ ಎನಗೆ?
ನೀನಂತು ಪಗೆಯೆ ನನಗೆ? ಏವಾಗ್ಯ ಮುಳುಗಿತ್ತು ನಿನಗೆ?
ಆ ಅವನದೇನೊಪ್ಪು–ಎನ್ನದೇಂ ಕೊರತೆ?
ಊರ ಮೊದಲಿಗನು ನಾನೆನ್ನ ಜನದಲ್ಲಿ; ಮಾನ ಅಭಿಮಾನದಲ್ಲಿ
ಆ ಕಡವೆ ತೊವಲವನನ್ನು ಮೆಚ್ಚಿ ಒಲಿದಿರುವವಳು
ಈ ಸುಣುಪು ಜಂತಕೆ ಸೆಡೆತು ಕೊಕ್ಕರಿಪೆಯೇಕೊ?
ಕುಲ, ಚಲವೆ, ರೂಪೆ?
ಮನೆ, ಮಾರು, ಬಿತ್ತರವೆ, ನಯವೆ?
ಎಲ್ಲವನು ಇದೊ, ಇತ್ತೆ–ನಿನಗಿತ್ತೆ
ಕೊಳ್ಳು ನೀನೆಲ್ಲವನು
ನನಗಾಗು ಹೆಣ್ಣೆ

(ಅಂಗಲಾಚು)

ಭಗ್ನ ಪ್ರಣಯದ ಉದ್ವೇಗ ಉದ್ರೇಕಗಳು ಹಲವಾರು ವಿಧವಾಗಿ ಹೊರೆಯಿಡುತ್ತವೆ. ಪ್ರಕ್ಷುಬ್ಧ ಚಿತ್ತಕ್ಕೆ ನ್ಯಾಯ ಅನ್ಯಾಯಗಳ ಪರಿವೆಯೇ ಮರೆತು ಹೋಗುವುದುಂಟು. ಪ್ರಕೃತ ಕವಿತೆಯಲ್ಲಿ ನಿರೂಪಿತವಾಗಿರುವ ವ್ಯಕ್ತಿಯ ವರ್ತನೆಯ ಬಗ್ಗೆ ನಮಗೆ ಭಿನ್ನಾಭಿಪ್ರಾಯ ಬರಬಹುದಾದರೂ, ಅವನ ಮಾತುಕತೆಗಳನ್ನೂ, ಅಂಗಲಾಚುವ ಬಗೆಯನ್ನೂ ಕಂಡರೆ ಅವನ ಅಸಹಾಯಕತೆಯನ್ನು ನೆನೆದು ಅನುಕಂಪ ವುಂಟಾಗುತ್ತದೆ.

ಇಂಥ ದುಃಸ್ಥಿತಿ ಹೆಣ್ಣಿಗೆ ಒದಗಿದಾಗಲೂ ಆಕೆಯ ಕುದಿ ಹೇಳತೀರದು. ಪ್ರಕೃತಿಯಲ್ಲಿ ಮಾಗಿ ಕಳೆದು ಚೈತ್ರ ಕಾಲಿಟ್ಟ ಕ್ಷಣದಲ್ಲಿ ಆಕೆಯ ವಿರಹಯಾತನೆ

ಮಿಡಿಯು ತೊಡಗುವುದು. ತನ್ನ ಪ್ರಿಯನನ್ನು ತಾನು ಕಂಡ ಕ್ಷಣದಿಂದ ಆ ಒಲವು ಹೇಗೆ ಬೆಳೆಯಿತು ಎಂಬ ನೆನಪು ಹಂತ ಹಂತವಾಗಿ ತಲೆದೋರಿ ಹೃದಯ ತತ್ತರಿಸು ವುದು. ಸುಮುಖವಾಗಬೇಕಾಗಿದ್ದ ಬದುಕು ಕಾರಣಾಂತರದಿಂದ ವಿಷಮಿಸಲು ಆಕೆಗೆ ಯಾವ ನೀತಿ ಭೀತಿಗಳೂ ಒಪ್ಪಿಗೆಯಾಗುವುದಿಲ್ಲ. ಇಂತ ವಿಪ್ಲವ ಸ್ಥಿತಿಯಲ್ಲಿನ ಹೆಣ್ಣಿನ ದನಿ ವ್ಯಗ್ರವಾಗುವುದು.

ನೀರ, ನಿನ್ನಯ ತೆಕ್ಕೆಯೆಳಸುತೆ
ಬಯಕೆ ಬಾಯ್ಬಾಯ್ ಬಿಡುವುದು
ನಿನ್ನ ಕಾಣದ ಒಡಲ ಬೇಗೆಯು ನಿಟ್ಟನಿಲುವಿಗು ಸುಡುವುದು.

* * *

ಹಿಂದು ಮುಂದಕೆ ತಿರುಗಿ ನೋಡದೆ
ಇಂದನಪ್ಪುತೆ ಬೆರೆವ ಬಾ
ನಾಳೆಯೇನೊ ನಾವ್ಗಳಾರೊ ಯಾರು ಕಂಡರು ಬೇಗ ಬಾ
ಮಡದಿ ಮಕ್ಕಳ ಸಂಗ ದಿನವೂ
ಇದ್ದೆ ಇರುವುದು ಕೂಡು ಬಾ
ಹತ್ತು ವರ್ಷದ ತಂಗಳೂಟವನೊಂದು ಹಬ್ಬದಿ ಮರೆವ ಬಾ

* * *

ಬಿಟ್ಟ ಹೆಣ್ಣವಳೆಂದು ಹಳಿಯದೆ
ನೆಟ್ಟನೀಗೆಡೆಗೂಡು ಬಾ
ಯಾರಿಗೇತರ ಕುಂದು ತಾರದ ಪ್ರೇಮಭಿಕ್ಷೆಯ ನೀಡು ಬಾ

(ಸೆಳೆ)

ನಿತ್ಯ ಜೀವನದ ಇತರ ಮುಖಗಳು ಜಟಿಲವಾದಂತೆಲ್ಲ ಸ್ತ್ರೀ ಪುರುಷರ ಸಂಬಂಧವೂ ಸಹ ಸಮಸ್ಯಾತ್ಮಕವಾಗತೊಡಗಿದೆ. ಇಂದು ಅನೇಕ ಬಗೆಯಾದ ತೊಡು ತೊಳಸು ಗಳು ತಲೆದೋರುತ್ತಿವೆ. ಕವಿಯ ದೃಷ್ಟಿಗೆ ಇಂಥ ನೂತನ ಸಂವೇದನೆಗಳು ತೋರಿ ಬಂದಾಗ ಅವುಗಳನ್ನು ಪ್ರಸ್ತಾಪಿಸುವುದು ಸಹಜವೇ ಸರಿ. ಮೇಲಿನ ಪದ್ಯದಲ್ಲಿ ವಿದಿತವಾಗುವ ಧಾಟಿ, ಸಾಮಾನ್ಯ ಹೆಣ್ಣಿಗೆ ಮೀರಿದಂತಹುದಾದರೂ, ಸಮಾಜದಲ್ಲಿ ಇಂಥ ವಿರಳ ಪ್ರಸಂಗಗಳನ್ನು ಕಂಡಾಗಲೋ ಕೇಳಿದಾಗಲೋ ಯಾರ ಮನಸ್ಸಾದರೂ ಕಲಕದಿರದು. ನೊಂದ ಜೀವಿಯ ತಾಪದ ಆಳವನ್ನು ಅರ್ಥಮಾಡಿಕೊಂಡಾಗ ಇಂಥ ವಿತಂಡವಾದದ ಸೆಲೆಯೇನು ಎನ್ನುವುದು ಅರಿವಾಗುವುದು.

ಸಮಾಜದಲ್ಲಿ ಬಲಾತ್ಕಾರದಿಂದ ಮದುವೆಗಳಾಗುವುದೇನೂ ಅಸಂಭವವಲ್ಲ. ಎಷ್ಟೋ ವೇಳೆ ಹೆಣ್ಣಿನ ಸಮ್ಮತಿಯನ್ನು ಕೇಳದೆಯೇ ಲಗ್ನಗಳು ನಡೆದು ಹೋಗು ತ್ತವೆ. ಸೂಕ್ಷ್ಮ ಮನಸ್ಸುಳ್ಳ ಹೆಣ್ಣಿಗೆ ಇದಕ್ಕಿಂತ ಬೇರೆ ನರಕವಿಲ್ಲ. ಅದರಲ್ಲಿಯೂ ಆಕೆ ತನ್ನ ಒಲವನ್ನೆಲ್ಲ ಮತ್ತೊಬ್ಬನಿಗೆ ಧಾರೆಯೆರೆದು ಬರಿದಾದ ಹೃದಯದಿಂದ

ಮದುವೆಯಾದ ಗಂಡನನ್ನು ಉಪಚರಿಸಬೇಕೆಂದು ತೊಡಗಿದಾಗ ಕ್ಷಣ ಕ್ಷಣವೂ ಮುಳ್ಳಿನ ಮೇಲೆ ನಿಂತಂತಾಗುವುದು. ಇಂಥ ವಿಷಮ ದಾಂಪತ್ಯದ ಬೇಗೆಯನ್ನು ಪ್ರಕೃತ ಕವಿಗಳು 'ಬೇಡ' ಎಂಬ ಕವಿತೆಯಲ್ಲಿ ಹೃದಯ ವಿದ್ರಾವಕವಾಗಿ ನಿರೂಪಿಸಿರುತ್ತಾರೆ.

ಎನ್ನ ಬಾಳಿನ ಕತೆಗೆ ನೀ ಬೆರೆದು ಬಹ ಮುನ್ನ
ಎನ್ನ ಪ್ರೇಮದ ಸುಗ್ಗಿಗಾಲ ಮುಗಿದಿತ್ತು.
ಎದೆಯ ಸಂತಸದೆಲ್ಲ ಕಾವು ಕುಗ್ಗಿತ್ತು
ಮನವು ಬೇರೊಬ್ಬನಿಗೆ ಸೂರೆವೋಗಿತ್ತು.

ಇಷ್ಟು ಹತಾಶಳಾದ ಹೆಣ್ಣು ತನ್ನ ಪತಿಯೊಂದಿಗೆ ಹೇಗೆ ತಾನೆ ಪ್ರಿಯವಾಗಿ ವರ್ತಿಸಿಕೊಂಡಾಳು ? ಅವಳ ನಿರುತ್ಸಾಹವನ್ನಾಗಲಿ, ತುಮುಲವನ್ನಾಗಲಿ ಮುಚ್ಚಿಡುವುದೂ ಕಷ್ಟ.

ನಾ ನಿನ್ನ ಬಿಸಿ ತೆಕ್ಕೆಯಲ್ಲಿರಲು
ನಡುವೆ ನಿಲುವುದು ಬಂದು ಅವನ ರೂಪು;
ಅವನ ಕುರುಲುಗಳೊಲೆದು ನಗುವು ತೆರೆದು
ಅವನ ಕದಪಿನ ಕಾವು ಕದಪಿಗಿಳಿದು
ಎಷ್ಟು ತಡೆದರು ಬಗೆಯು ಆ ಅವನನರಸುವುದು
ಏಗ್ಯೆಯಲೇಗ್ಯೆಯಲೆನ್ನ ಸಖನೆ !
ನಿನ್ನ ಕಣ್ಣಿಲಿ ಅವನ ಹಣೆ-ಮುದ್ದು ಕಾಣುವುದು
ನಿನ್ನ ದನಿಯಲಿ ಅವನ ದನಿ ಕೇಳ್ವುದು.

ಈ ಯಾತನೆಯನ್ನು ಕುರಿತು ಚಿಂತಿಸಿದಾಗ ಹೃತ್ಪೂರ್ವಕವಾದ ಒಲವಿಗೆ ತಕ್ಕ ಮನ್ನಣೆ ದೊರೆಯದಿದ್ದರೆ ಪ್ರಿಯರ ಬಾಳು ಎಷ್ಟು ದಾರುಣವಾದುದು ಎನ್ನಿಸುತ್ತದೆ. ಪ್ರಕೃತ ಹೆಣ್ಣಿಗೆ ತಾನು ಮಾತ್ರವೇ ನಡೆಯುವುದಲ್ಲದೆ ಸಮಾಜದಲ್ಲಿ ತನ್ನಂತೆಯೇ ಇನ್ನೂ ಎಷ್ಟು ಹೆಣ್ಣುಗಳು ಇಂಥ ಕಣ್ಣೀರಿನಲ್ಲಿ ಕೈತೊಳೆಯುತ್ತಿರುವರೋ ಎಂದು ಕಳವಳವಾಗುತ್ತದೆ.

ಎನ್ನಂತೆ ಎಷ್ಟು ಜನ ಹೆಣ್ಣುಗಳು ಮುರಿದಿಹರೊ
ಎಷ್ಟು ಹೃದಯಗಳೊಡೆದು ಕತ್ತಲಾಯ್ತೊ

ಮನಃಪೂರ್ವಕವಾಗಿ ತನ್ನ ಸರ್ವಸ್ವವನ್ನೂ ಒಪ್ಪಿಕೊಡುತ್ತಿರುವ ಗಂಡನನ್ನು ಕುರಿತು

ಹಸುಳೆಯುಂದದ ನಿನ್ನ ಮೊಗದಿ ಸುಳಿವುದು ನೋವು;
ನಿಡುಸುಯ್ವೆ; ಅದ ಕೇಳಿ ಸೈಸೆ ನಾನು;
ಹಾಳು ಚೆಲುವನ್ನೇಕೆ ವಿಧಿಯಿತ್ತನೋ ಎನಗೆ
ನಿನ್ನನಸುಖಕ್ಕೆಳೆದು ಬೇಯಿಸಲಿಕೆ ? (ಬೇಡ)

ಎಂದು ಒಂದೇ ಸಮನಾಗಿ ಪಶ್ಚಾತ್ತಾಪ ಪಡುವುದಲ್ಲದೆ "ಅವನ ಮೋಹವು ಮುರಿದು ಮರೆದಾಗುವರೆಗೆನಗೆ ನಿನ್ನ ಪ್ರೇಮದ ಋಣವು ಹೊರೆಯುಪ್ಪುದು" ಎಂಬುದಾಗಿ ಸ್ವಲ್ಪವೂ ಸಂಕೋಚವಿಲ್ಲದೆ ಹೇಳುವ ತರುಣಿಯ ಬಿಚ್ಚು ಮಾತುಗಳು ನಮ್ಮನ್ನು ಚಕಿತರನ್ನಾಗಿ ಮಾಡುತ್ತವೆ. ಸಮಾಜದಲ್ಲಿ ಕಂಡುಬರುವ ಇಂಥ ವಿರಸ ಸನ್ನಿವೇಶಗಳು ಪಶ್ಚಾತ್ತಾಪಯುತನಾದ ಕವಿಯ ಗಮನಕ್ಕೆ ಬಂದಾಗ ಆತ ಅದನ್ನು ಹೇಗೆ ಭಾವಿಸುತ್ತಾನೆ ಎನ್ನುವುದಕ್ಕೆ ಈ ಕವಿತೆ ಒಂದು ಉತ್ತಮ ನಿದರ್ಶನ.

ಹೆಣ್ಣು ಒಳ್ಳೆಯವಳಾಗಿದ್ದು ಎಷ್ಟೇ ವಿಹಿತವಾಗಿ ವರ್ತಿಸಲಿ "ಒಲ್ಲದ ಗಂಡನಿಗೆ ಮೊಸರಿನಲ್ಲಿ ಕಲ್ಲು" ಎಂಬಂತೆ ಆಕೆಗೆ ಸಂಸಾರ ಬಂಧನವೆನ್ನಿಸಬಹುದು. ಅಹಿತವನ್ನು ಅನುಭವಿಸುವುದಕ್ಕಿಂತ ತನ್ನನ್ನು ಬಿಟ್ಟುಕೊಡಿ ಎಂದು ಆಕೆ ಗೋಗರೆದರೆ ತಪ್ಪೇನಿಲ್ಲ. ಅಂಥ ಹೆಣ್ಣಿನ ಮೊರೆಯ ಪರಿಯೇ ಬೇರೆ.

ಒಳ್ಳೆ ಮಡದಿಯಾಗಿರಲು ಯತ್ನಿಸಿದೆ
ಬೇಸರಾದುದೆನಗೆ.
ಇದನೆ ಮಾಡು ಅದ ಬೇಡವೆನ್ನದಿರಿ
ಕಾಡಬೇಡಿರಿನ್ನು.
ತಾಯಿ, ತಂದೆ, ಮನೆ ಎಲ್ಲ ಬಿಟ್ಟು ನಾ
ನೀವೆ ಎಲ್ಲವೆಂದೆ.
ಇಲ್ಲೊ ಮಾಸ, ದಿನ, ವಾರ, ವರ್ಷವೂ
ನಿಮ್ಮ ವಿರಸವೆಂದೂ.

ಆಕೆಯು ಕಟ್ಟಿಕೊಂಡಿದ್ದ ದಾಂಪತ್ಯ ಜೀವನದ ಸುಖ ಸಂತೋಷಗಳೆಲ್ಲ ಮಣ್ಣು ಪಾಲಾದ ಬಳಿಕ ಇನ್ನು ತಾನು ಗಂಡನ ಮನೆಯಲ್ಲಿದ್ದೇನು ಪ್ರಯೋಜನ ಎಂಬ ಪ್ರಶ್ನೆ ಸಹಜವಾಗಿಯೇ ಉದಿಸುತ್ತದೆ.

ಮದುವೆಯಾಗಿ ಸಂತೋಷ ಬಡುವೆ
ಒಲಿದ ಗಂಡಗೆಂದೆ
ಗಂಡು ಕೈಯ ಒಣ ಬೊಂಬೆಯಾಟದಲಿ
ಬರಿದೆ ಗಾಸಿಗೊಂಡೆ

ಎಂದು ನಿಟ್ಟುಸಿರನ್ನು ಬಿಟ್ಟು ಅವರಲ್ಲಿ ಒಂದೇ ಒಂದು ವಿನಂತಿ ಮಾಡಿಕೊಳ್ಳುವಳು

ನಿಮ್ಮ ದಾರಿ ನೀವಿನ್ನು ನಡೆಯುತಿರಿ
ಎನಗೆ ಬಿಡುತೆ ನೀಡಿ.
ಸಾಕು ಈಸು ದಿನ ಕಂಡುದುಂಡುದೇ
ಪಾಡುಪಟ್ಟು ಬೇಡಿ.

(ಬಿಟ್ಟುಕೊಡಿ)

ಸಂಸಾರವನ್ನು ನಿರ್ವಹಿಸುವ ಗಂಡ–ಹೆಂಡತಿಯರಲ್ಲಿ ಸರಿಸಮನಾದ ಹೊಂದಾ

ಣೆಕೆಯಿಲ್ಲದಿದ್ದರೆ ಅದಕ್ಕಿಂತಲೂ ಮಿಾರಿದ ದುರಂತವಿನ್ನಿಲ್ಲ. ಯಾರೊಬ್ಬರು ತುಸು ಕೆರಳಿದರೂ ಸರಿಯೆ ಬಾಳು ಸೀಳುಸೀಳಾಗುವುದರಲ್ಲಿ ಸಂಶಯವಿಲ್ಲ.

ವಿರಸಕ್ಕೆ ವಿವಿಧ ಮುಖಗಳಿರುವಂತೆ, ವಿರಹಕ್ಕೆ ಬಗೆಬಗೆಯಾದ ನೆಪಗಳುಂಟು. ಯಾವುದೋ ಕಾರಣದಿಂದ ತನ್ನ ಮಗುವನ್ನೂ ತೊರೆದು ದೂರವಾಗಿರುವ ನಲ್ಲೆಯನ್ನು ನೆನೆಯುವ ನಲ್ಲನ ನೋವಿಗೆ ಇತಿಮಿತಿಗಳುಂಟೆ? ಹಿಡಿದಿಟ್ಟಿದ್ದ ಹಂಬಲ ಹುಚ್ಚು ಹೊಳೆಯಾಗಿ ಹೊಮ್ಮುತ್ತದೆ.

ಆಸೆಗಡಲುಕ್ಕಿ ಹರಿಯುತ್ತಿದೆ_ನಲ್ಲೆ
ನಿನ್ನೆಡೆಯ ತಡಿಗೋಡಲಲೆಯೆದ್ದಿದೆ;
ಮನವು ನಿನ್ನನು ಕೋರಿ ಮೈ ಚಾಚಿದೆ
ಕಲ್ಲಾಗಿ ಅದನೊಡೆದು ಕಳುಹದಿರು ಬರಿದೆ.

ಈ ಆರ್ತನಾದವೇ ಸಾಲದೆಂಬಂತೆ "ಬಳಿಗರೆದ ಮಗುವನ್ನು ಮುದ್ದಿಸುತಿರೆ ನಿನ್ನ ತುಟಿಯಲ್ಲೆಂದು ಬೇಸರುತಿದೆ" ಎಂಬ ಮಾತನ್ನು ಕೇಳಿದಾಗಲಂತೂ ಈ ಗಂಡಸಿನ ಪಾಡಿಗೆ ಹೃದಯ ತಲ್ಲಣಿಸುತ್ತದೆ. ಆತನಿಗೆ ಎಲ್ಲಿ ನೋಡಿದರೂ ನಲ್ಲೆಯ ರೂಪವೇ ಎದ್ದು ಕಾಣುತ್ತದೆ.

ದಾರಿಯಿಕ್ಕಡೆಯಲ್ಲು ನಿನ್ನ ಮೊಗವೇ
ಆಡುತಿಹ ನಿನ್ನ ನುಡಿ ನಿನ್ನ ನಡೆಯೇ
ದರ್ಶನದ ಹೊತ್ತಗೆಯಲೆದ್ದು ಕುಣಿದಾಡುತ್ತೆ
ಕಾಣುತಿವೆ ನಿನ್ನೊಲವೆ ಕಣ್ಣು ಮಿನುಗೇ.
ಗಾಳಿಯಲಿ ರೂಪನಾಂತಿದ್ದುತ್ತಿಹೆ
ಕೆನ್ನೆ ಸೋಂಕಿನ ಕಾವ ಸವಿಯುತ್ತಿಹೆ
ಗಾವುದಗಳನು ದಾಟಿ ಕೈ ಚಾಚುವೆ
ಬರಿದೆ ಶೂನ್ಯವ ಬಾಚಿ ಸೋಲುತ್ತಿದೆ.

ಈ ದಿಕ್ಕುಗೆಟ್ಟ ಸ್ಥಿತಿಯಲ್ಲಿರುವಾತನಿಗೆ ತನ್ನನ್ನೆ ತಾನು ವಿಮರ್ಶಿಸಿಕೊಂಡಾಗ "ಪರರ ಉಪದೇಶಕ್ಕೆ ಒಣಗಿದ್ದ ಜಾಣತನ ನಿನ್ನ ಅಗಲಿಕೆಯಲ್ಲಿ ಜಳ್ಳಾಗಿದೆ" ಎಂಬ ತಿಳಿವು ಮೂಡುತ್ತದೆ. "ಇದ್ದಾಗ ಕಾಣೆಸವು ಕೆಳೆಯ ಸೊಗಸು!" ಎಂಬ ನೀತಿಯೂ ಸ್ಫುರಿಸುತ್ತದೆ. ಹೇಳುವದನ್ನೆಲ್ಲ ಹೇಳಿ,

ಬೇಗ ಬಾ, ನೀರೆ ಬಾರೆನ್ನ ಕಡೆಗೆ
ಬಾ ಬಳುಕಿ ಮೆಲ್ಲುಲಿದು ನಗುವ ತೆರೆದು
ಬಾ ಕವಿದು ಅಬ್ಬರಿಪ ಶೂನ್ಯವನು ಚೆದರಿಸುತೆ
ಈ ಮನೆಯ ತುಂಬುತ್ತೆ ಮಂಕು ಹರಿಸೆ.

(ಅಗಲಿಕೆ)

ಎಂಬ ಬೇಡಿಕೆಯಲ್ಲಿ ಈ ಕವಿತೆ ಮುಕ್ತಾಯವಾಗುತ್ತದೆ. ಹೃದಯ ಸಮಸ್ಯೆ

ಯಲ್ಲಿ ಸಿಕ್ಕಿಬಿದ್ದಾಗ ಹೆಣ್ಣಾಗಲಿ, ಗಂಡಾಗಲಿ ಅನುಭವಿಸುವ ನೋವು ಏಕ ರೀತಿಯಾದದ್ದು. ಸಂಸಾರದ ಸುಖದುಃಖಗಳಲ್ಲಿ ಯಾರೊಬ್ಬರಲ್ಲಿಯೂ ತಾರತಮ್ಯವಿಲ್ಲ.

ಹೆಣ್ಣು ಚತುರೆಯಾದರೆ ತನಗೆ ಒಲ್ಲದ ಸಂಬಂಧವನ್ನು ಎಷ್ಟು ಜಾಣತನದಿಂದ ನಿವಾರಿಸಿಕೊಳ್ಳಬಲ್ಲಳು ಎಂಬ ಮನೋಹರವಾದ ಒಂದು ಚಿತ್ರವನ್ನು ಪ್ರಕೃತ ಕವಿಗಳು "ವಿಸರ್ಜನ" ಎಂಬ ಕವಿತೆಯಲ್ಲಿ ಬಹಳ ಸ್ವಾರಸ್ಯವಾಗಿ ನಮ್ಮ ಮುಂದೆ ಇಟ್ಟಿರುತ್ತಾರೆ. ನಾಲ್ಕು ಜನ ಗೆಳೆಯರು ಒಬ್ಬ ಹೆಣ್ಣನ್ನು ಒಲಿಸಿಕೊಳ್ಳಲು ನಾನಾ ತೆರನಾಗಿ ಪ್ರಯತ್ನಿಸುತ್ತಾರೆ. ಅವರ ಓರೆಕೋರೆಗಳನ್ನೆಲ್ಲ ಚೆನ್ನಾಗಿ ಗ್ರಹಿಸಿದ ಆ ಹೆಣ್ಣು ಅವರೆಲ್ಲರನ್ನೂ ನಿರಾಕರಿಸುವ ವಿಧಾನ ನಮಗೆ ವಿಸ್ಮಯವನ್ನುಂಟುಮಾಡದೆ ಇರದು.

ನೀವು ನಾಲುವರು ನನ್ನನರಸಿದಿರಿ
ಒಲಿಸಲೆಳಸಿದಿರಿ ದಿನವೂ
ನಾಲ್ಕು ನೂರು ಪರಿಗೋರಿಗೊಳಿಸಿದಿರಿ
ಬಾಳ ನುಡಿಸಿದಿರಿ, ಕೆದರಿ.
ನಾಲ್ಕು ತಿಂಗಳಾಯ್ತಾಗು ಹೋಗಿನಲಿ
ಸರಸದೌತಣವ ಬಡಿಸಿ,
ನಾಲ್ಕು ನೂರು ಪರಿ ನಾನು ತೂಗಿದೆನು
ಏನು ತೋರದೆಯೆ ಕೊನೆಗೂ.

ಹೀಗೆ ಪೀಠಿಕೆ ಹಾಕುವ ಈ ಚತುರೆ ಆ ನಾಲ್ವರಲ್ಲಿ ತಾನು ಕಂಡ ಕುಂದನ್ನು ಹೇಳುವ ಸೊಗಸು ಬಹಳ ರಮಣೀಯವಾಗಿದೆ.

ಬಣ್ಣ ನಿಲವು, ಕುಲದಲಯ್ಯನವರು ಇವ
ರೇನೊ ಚೆನ್ನಿಗರು; ಸರಿಯೇ.
ಏನಗೈವೆನೀ ಮನಸು ಒಪ್ಪದಿದೆ ನ
ಮ್ಮಾಸೆ ವಾಸಿಗಳು ಬೇರೆ.
ಊಟ, ಉಡುಗೆ, ನುಡಿ, ನೋಟ, ನಿಯಮ ಬಿಡಿ
ಹೊಂದದೆಮಗು ಅವರ್ಗು.
ರಾಯರಿವರ ನಾನೊಲಿವೆನೆನಲೆ, ಈ
ರಾಯರೀವಿ ಬಲು ಹೇಸಿ.
ಯಾರ ದರ್ಪತಾನಾರ ಮೇಲೇರಿ
ಹೊರಿಸೆ ನಡೆಯುವುದು ಇಂದು ?
ಹೆಣ್ಣು ಸಂತತವು ಸೋಲುತಿರಲಿ ಬೇ
ಕೆಂಬುದಾವ ನಯದ ಹದನು ?
ರಾಮು ಜಾಣರು; ಧರುಮರಾಯರು
ಲೋಕಕೆಲ್ಲ ಪ್ರಿಯರು.

ಲೋಕವೆಲ್ಲವನು ಸಲಹಿಕೊಳ್ಳುವರು
ಬಡವೆ ಎನ್ನ ಗತಿಯೇನು ?
ಇನ್ನಿವರ ವರಿಸಲೇ, ಉಹು, ದಿಗಿಲು ದಿಗಿಲು ಬಹು
ದೆಲ್ಲವೂ ಚೇಷ್ಟೆ ಇವರ್ಗೆ
ಯಾವುದಿವರ ಮನ ಹಿಡಿದು ನಿಲಿಸುವುದೊ
ದೇವರೇ ಅರಿಯಬಹುದು !

ಒಬ್ಬರು ತನಗಿಂತಲೂ ಭಿನ್ನ ದೃಷ್ಟಿಯುಳ್ಳವರು; ಇನ್ನೊಬ್ಬರು ತುಂಬ ದರ್ಪಶಾಲಿಗಳು; ಮತ್ತೊಬ್ಬರು ಅತಿ ಉದಾರಿಗಳು; ಮಗುದೊಬ್ಬರು ಚೇಷ್ಟೆ ಮಾಡುವುದರಲ್ಲಿ ಎತ್ತಿದ ಕೈ. ಅವರ ಮನಸ್ಸು ಸ್ತಿಮಿತವಿಲ್ಲ, ತಿಳಿವಳಿಕೆಯುಳ್ಳ ತರಳೆ ಈ ತೆರನಾಗಿ ಒಬ್ಬೊಬ್ಬರ ಸ್ವಭಾವವನ್ನೂ ತೂಗಿ ನೋಡಿ, ಕಡೆಗೆ

—ಇಲ್ಲ; ನಾನೊಲ್ಲೆನಾರುವನು
ಕ್ಷಮಿಸಿ ಗೆಳೆಯರಾ ಇನ್ನು;
ಕೆಳೆಯ ಸಂತಸವನೇಸೊ ಹಣಿಸಿದಿರಿ
ಸಾಕು ಗೊಡವೆ ನಿಮಗೆನ್ನ

ಎಂದು ತೀರ್ಮಾನಿಸಿ

ಸಾಕು; ಸಂದ ಸವಿಗೇಸೊ ಋಣಿಯು ನಾ
ಗಾಸಿಗೊಳಿಪೆನೇ ನಿಮ್ಮ ?
ಸಾಕು ಬೀಳ್ಕೊಡಿರಿ ಬಾಳು ಮುಗಿವವರೆ
ಗೊಳ್ಳಿತಾಗಲ್ಕೆ ನಿಮಗೆ.

(ವಿಸರ್ಜನ)

ಎಂಬುದಾಗಿ ನಗುನಗುತ್ತ ಎಲ್ಲರನ್ನೂ ಬೀಳ್ಕೊಡುವಳು.

ಒಲ್ಲದ ಮನಸ್ಸಿನಿಂದ ಮದುವೆಯಾಗಿ ಆಜೀವಪರ್ಯಂತ ಸಂಕಟಪಡುವುದಕ್ಕಿಂತ, ಒಲಿದು ಬಂದವರನ್ನು ತಾನು ಒಪ್ಪಲಾರದೆ ಹೀಗೆ ಹೇಳಿ ಕಳುಹಿಸುವುದು ಎಷ್ಟೋ ಮೇಲಲ್ಲವೆ ? ಆದರೆ, ನಮ್ಮ ಸಮಾಜದಲ್ಲಿ ಹೆಣ್ಣಿಗೆ ಇಷ್ಟು ಸ್ವಾತಂತ್ರ್ಯವುಂಟೆ ? ಒಮ್ಮೆ ಆಕೆ ಗಂಡಸಿಗೆ ಹೆಗಲಿಣೆಯಾಗಿ ನಿಂತ ಕಾಲಕ್ಕೆ, ಆಕೆಯ ಅಭಿಪ್ರಾಯಕ್ಕೂ ಮನ್ನಣೆದೊರೆಯುವ ಕಾಲಕ್ಕೆ ಇಂಥ ನಿರ್ಣಯಾಧಿಕಾರ ದೊರೆತೀತು.

ಶ್ರೀಮಾನ್ ವಿ. ಸೀ. ಅವರು ಚಿತ್ರಿಸಿರುವ ಈ ಒಂದೊಂದು ವಿರಸ ಪ್ರಸಂಗವೂ ಗಂಡು, ಹೆಣ್ಣಿಗೆ ಒದಗಬಹುದಾದ ವಿಚಿತ್ರ ಸಮಸ್ಯೆಯನ್ನು ಕುರಿತುದಾಗಿವೆ. ಇಂದಿನ ಜೀವನವು ಮುಂದುವರಿದಂತೆಲ್ಲ, ಪಾಶ್ಚಾತ್ಯರ ಪದ್ಧತಿಗಳ ಪ್ರಭಾವ ಅರಿತೋ ಅರಿಯದೆಯೋ ನಮ್ಮ ಸಮಾಜದ ಮೇಲೆ ಆದಂತೆಲ್ಲಾ ಇಂಥ ತೊಡಕುಗಳು ಉದ್ಭವಿಸುವುದು ಸಹಜವೇ ಸರಿ. ಈ ಒಂದು ಹೊಸ ನೋಟದಿಂದ ಈ ಕವಿತೆಗಳನ್ನು ಪರಿಶೀಲಿಸಿದಾಗ ಇವುಗಳ ಉದ್ದೇಶ ವೇದ್ಯವಾದೀತು.

ನಮಗೆ ಚಿರಪರಿಚಿತವಾಗಿರುವ ನಿತ್ಯ ಜೀವನದ ಒಂದು ಮುಖವೇ ಎಷ್ಟು ವಿವಿಧ್ಯಯುತವಾಗಿದೆ ಎನ್ನುವುದನ್ನು ಸಾಂಸಾರಿಕ ಕವನಗಳ ಪರಿಶೀಲನೆಯಿಂದ ತಿಳಿಯಬಹುದು. ಒಂದೇ ವಸ್ತುವಾದರೂ ಒಂದೊಂದರ ತಾನವೂ ಬೇರೆ ಬೇರೆಯಾಗಿದೆ. ಇದೇ ಕವಿಗಳು ಬೇರೊಂದೆಡೆಯಲ್ಲಿ ಏಕನಾದವನ್ನು ಒಲ್ಲದೆ "ಒಂದೆ ತಂತಿಯ ನೀವಿದೇತಕೆ ನುಡಿಸುತಿರುವಿರಿ ಸುಮ್ಮನೆ? ನಾಲ್ಕು ತಂತಿಯ ಮೀಟಿ ಕೆರಳಿಸಿ ಎಲ್ಲ ತಾಳಕು ನುಡಿಸಿರಿ" ಎಂದು ಹೇಳಿರುವಂತೆಯೇ ಈ ಕವಿತೆಗಳಲ್ಲಿ ಸ್ತ್ರೀ–ಪುರುಷರ ಸಂಬಂಧವನ್ನು ಕುರಿತ ವಿವಿಧ ಸಂಗತಿಗಳನ್ನು ಪ್ರಸ್ತಾಪಿಸಿರುವರು. ನಗುನಗುತ್ತ ಒಬ್ಬರನ್ನೊಬ್ಬರು ಮೆಚ್ಚಿ ಮದುವೆಯಾಗಿ ಸುಖವನ್ನು ಅನುಭವಿಸುವ ಸುಕೃತ ಹಲವರ ಪಾಲಿನದಾದರೆ, ಭಗ್ನ ಪ್ರಣಯದಿಂದ ಬವಣೆ ಪಡುವ ದೌರ್ಭಾಗ್ಯ ಕೆಲವರದಾಗಿರುತ್ತದೆ. ನಿಶಿತ ಪ್ರಜ್ಞೆಯುಳ್ಳ ಕವಿಗಳು ಈ ಎರಡರ ಅಂತರವನ್ನೂ, ಅಂತರಂಗವನ್ನೂ ಸಾಕಷ್ಟು ಸ್ಪಷ್ಟವಾಗಿಯೇ ನಿರೂಪಿಸಿರುತ್ತಾರೆ. ಶ್ರೀ ವಿ. ಸೀ. ಅವರ ಕವನಗಳಲ್ಲಿ ಕಂಡುಬರುವ ತಿಳಿಗನ್ನಡದ ಪ್ರಯೋಗ, ನೈಜಜೀವನ ಚಿತ್ರಣ, ನೇರವಾದ ನಿರೂಪಣೆಗಳು ಎಂದೆಂದಿಗೂ ಸ್ವಾಗತಾರ್ಹವಾದುವು. ಶ್ರೀಯುತರು "ನನ್ನ ಮನಸ್ಸು ದಿನ ಜೀವನಕ್ಕೆ ಮಣಿಯುತ್ತದೆ. ಇಲ್ಲಿನ ನೋವು, ನಿರಾಸೆ, ಪ್ರೀತಿ, ಇಲ್ಲಿಯ ಔದಾರ್ಯ, ಸ್ನೇಹದ ನೆರವು, ಕಾರುಣ್ಯ ನನಗೆ ತುಂಬಾ ಪ್ರಿಯ" ಎಂದು ಹೇಳಿ ಕೊಂಡಿದ್ದಾರೆ. ಪ್ರಕೃತ ಕವನಗಳನ್ನು ಕಂಡಾಗಲೂ ಅವರ ಈ ಗುರಿ ಎಷ್ಟರ ಮಟ್ಟಿಗೆ ಸಫಲವಾಗಿದೆಯೆಂಬುದು ದೃಢವಾಗುತ್ತದೆ.

ಜಿ. ವರದರಾಜರಾವ್

# ವಿ. ಸೀ. ಅವರ ನಾಟಕಗಳು

ವಿ. ಸೀ. ಅವರು ಮೂಲತಃ ಶುಚಿರುಚಿಗಳನ್ನುಳ್ಳ ಕವಿಗಳೂ, ಉತ್ತಮ ಗದ್ಯಶಿಲ್ಪಿಗಳೂ, ಶ್ರೇಷ್ಠ ವಿಮರ್ಶಕರೂ ಆಗಿರುವುದರ ಜತೆಗೆ ನಾಟಕಗಳನ್ನೂ ರಚಿಸಿದ್ದಾರೆ. ಅವರು ಈವರೆಗೆ ಬರೆದಿರುವ ಆರು ನಾಟಕಗಳಲ್ಲಿ ಸ್ವಂತವೆನ್ನಬಹುದಾದ ನಾಲ್ಕು ಕೃತಿಗಳೂ, ಎರಡು ಬರ್ನಾರ್ಡ್ ಷಾನ ನಾಟಕಗಳ ಅನುವಾದವೂ ಸೇರಿವೆ. ವಿ.ಸೀ. ಬಹು ದೊಡ್ಡ ವಿದ್ವಾಂಸರು. ಭಾರತೀಯ ಹಾಗೂ ಪಾಶ್ಚಾತ್ಯ ಸಾಹಿತ್ಯಗಳನ್ನು ತಲಸ್ಪರ್ಶಿಯಾಗಿ ಅಧ್ಯಯನ ಮಾಡಿ ಪ್ರೌಢಿಮೆಯನ್ನು ಗಳಿಸಿಕೊಂಡ ಪಂಡಿತರು. ಅರ್ಧ ಶತಮಾನಕ್ಕೂ ಹೆಚ್ಚು ಕಾಲ ನಾಟಕ ಸಾಹಿತ್ಯವನ್ನು ಓದಿ, ಸಾವಿರಾರು ವಿದ್ಯಾರ್ಥಿಗಳಿಗೆ ಪಾಠ ಹೇಳಿ, ಹಲವಾರು ಮಿತ್ರರಿಗೆ ಉತ್ತಮವಾದ ಓದಿನ ಗೀಳು ಹಿಡಿಸಿ ಪುಣ್ಯ ಕಟ್ಟಿಕೊಂಡವರು. ನಿಜವಾದ ಅರ್ಥದಲ್ಲಿ ಅವರು ಬಹುಶ್ರುತರು. ಅವರದು ಅಭಿಪ್ರಾಯ, ಅಭಿರುಚಿ ಮೊದಲಾದುವುಗಳಲ್ಲಿ ಎಳ್ಳಷ್ಟೂ ಸಂಕೋಚವಿಲ್ಲದ ವಿಶಾಲ ದೃಷ್ಟಿ. ಅವರ ವೈಚಾರಿಕ ನೋಟ ಅವರ ಬರೆವಣಿಗೆಯ ಹರಿವು–ಇವುಗಳ ಹರಹು ತುಂಬಾ ದೊಡ್ಡದಾದದ್ದು. ಅವರು ಯಾವಾಗಲೂ ತೆರೆದ ಕಣ್ಣು, ತೆರೆದ ಮನಸ್ಸು ಉಳ್ಳ ಸಾರಸಂಗ್ರಹಿ. ಅವರು ತಮ್ಮ ಬದುಕನ್ನು ಹಸನು ಮಾಡಿ ತಮಗೆ ಸುಖವನ್ನೂ, ಆನಂದವನ್ನೂ ತಂದುಕೊಟ್ಟಿರುವ ವೈವಿಧ್ಯಮಯವಾದ, ಲೋಕೋತ್ತರವಾದ ಹಲವಾರು ಸಾಹಿತ್ಯ ಕೃತಿಗಳಿಂದ ಆತ್ಮೋನ್ನತಿ ಕಂಡುಕೊಂಡಿರುವ ದೊಡ್ಡ ಜೀವ.

ಇಂಥ ಮಹನೀಯರು ನಾಟಕಗಳನ್ನು ಬರೆದದ್ದು ದೊಡ್ಡ ನಾಟಕಕಾರನಾಗಬೇಕೆಂಬ ಮಹದಾಸೆಯಿಂದಲ್ಲ. ನಿಜವಾಗಿ ಬರಿದಾದ, ಬಣಬಣವೆನ್ನುತ್ತಿದ್ದ ಕನ್ನಡ ನಾಟಕ ಪ್ರಕಾರಕ್ಕೆ ಕೋಡು ಮೂಡಿಸುತ್ತೇನೆಂಬ ಮಹತ್ಸಾಧನೆಯ ಅಭಿಲಾಷೆಯೂ ಅವರದಲ್ಲ. ಎಲ್ಲೋ ಕಂಡ, ಕೇಳಿದ ಅಥವಾ ಓದಿ ಸವಿದ ಉತ್ತಮ ನಾಟಕ ಅಥವಾ ಕಾವ್ಯದಲ್ಲಿನ ಒಂದು ರಸಮಯ ಘಟನೆಯೋ, ರಸಘಟ್ಟಿಯ ಮಾತೋ, ಪ್ರಬಲವಾಗಿ ಅವರ ಚಿತ್ತವನ್ನು ಕಲಕಿದ ಪಾತ್ರಗಳೋ, ಅವರ ನೆನಪಿನ ತಳದಲ್ಲಿ ಫಳಫಳಿಸುವ ಹರಳುಗಳಾಗಿ ಉಳಿದಾಗ ಅವು ನಾಟಕ ರೂಪವಾಗಿ ಹೊರಬಂದಿವೆ.

ಅವರ ಪ್ರಪ್ರಥಮ ಕೃತಿ 'ಸೊಹ್ರಾಬ್-ರುಸ್ತುಂ' ಬೆಳಕಿಗೆ ಬಂದದ್ದು ಹೀಗೆಯೇ. ಮಾಥ್ಯೂ ಆರ್ನಾಲ್ಡ್‌ರ 'ಸೊಹ್ರಾಬ್ ಅಂಡ್ ರುಸ್ತುಂ' ಎಂಬ ಸೀಳ್ಗವನವನ್ನು ಓದಿ ಮೆಚ್ಚಿದ ಅವರಿಗೆ ಬಹುಶಃ ಆ ಕವನದ ದುರಂತ ವಸ್ತು ಹಾಗೂ ನಾಟಕಸಾಧ್ಯವಾದ ಸಂಘರ್ಷಗಳು ಒಪ್ಪಾಗಿರಬಹುದು. ಆ ಕಥೆಯನ್ನು ನಾಟಕ ರೂಪದಲ್ಲಿ ಕನ್ನಡಿಗರಿಗೆ ಅರ್ಪಿಸಬೇಕೆಂಬ 'ಕುತೂಹಲ'ದಿಂದ ತಾವು ಅದನ್ನು ಬರೆದುದಾಗಿ ಅವರು ತಿಳಿಸಿದ್ದಾರೆ. 'ಕುತೂಹಲ'ವೆನ್ನುವ ಮಾತು ವಿ. ಸೀ. ಅವರ ಒಟ್ಟಾರೆ ಸಾಹಿತ್ಯ ದೃಷ್ಟಿಗೇ ಬಹುತೇಕ ಪ್ರೇರಣೆ ಒದಗಿಸಿರುವ ಒಂದು ಪುಷ್ಟಿದಾಯಕ ಪ್ರವೃತ್ತಿ. 'ಸೊಹ್ರಾಬ್-ರುಸ್ತುಂ' ಮಹತ್ವದ ಕೃತಿಯೇನಲ್ಲ. ಸರಳವಾದ ಸುಂದರವಾದ ಮಾತುಗಳಲ್ಲಿ ಬರೆದ ಆ ನಾಟಕಕ್ಕೆ ಒಂದು ಮಾನವೀಯ ದುರಂತ ಕಥೆ ವಸ್ತು. ಇಂಗ್ಲಿಷ್ ಕವನದಲ್ಲಿ ಬರುವ ಕಥೆಯ ಚೌಕಟ್ಟಿಗೆ ಸಣ್ಣಪುಟ್ಟ ಪ್ರಾಸಂಗಿಕ ಪಾತ್ರಗಳನ್ನು ಸೇರಿಸಿದ್ದಾರೆ. ಸೊಹ್ರಾಬನ ತಾಯಿ ತಹಮೀನಳ ಪಾತ್ರವನ್ನು ನಾಟಕದೊಳಕ್ಕೆ ತಂದು, ಅವಳ ಪಾತ್ರವನ್ನು ಹಿಗ್ಗಿಸಿ ಅವಳನ್ನು ನಾಟಕದಲ್ಲಿನ ಮುಖ್ಯ ಪಾತ್ರಗಳಲ್ಲೊಂದಾಗಿ ಮಾಡಿ, ಕಥೆಯ ಹರಹನ್ನು ಇನ್ನಷ್ಟು ಬಿಡಿಸಿ ತೋರಿಸಿದ್ದಾರೆ. ಅಂಕ, ದೃಶ್ಯ, ಎಂದು ಮುಂತಾದ ಸಾಂಪ್ರದಾಯಿಕ ವಿಭಜನೆಗೆ ಹೋಗದೆ, ನಾಟಕವನ್ನು ಹತ್ತು 'ನೋಟ'ಗಳಾಗಿ ಹರಡಿದ್ದಾರೆ. ಇದರಿಂದ ಕ್ರಿಯೆಯ ಸಹಜಗತಿಯನ್ನು ಸಾಗಿಸಿ ಕಥೆ ಸಲೀಸಾಗಿ ಹರಿದು ಹೋಗುವಂತಾಗಿದೆ. ತಾನು ಕಂಡರಿಯದ ತನ್ನ ತಂದೆ ರುಸ್ತುಮನನ್ನು ಹುಡುಕಲು ಸೊಹ್ರಾಬ್ ಹೊರಡುವುದು, ವಿಧಿಯ ಕೈವಾಡಕ್ಕೆ ಸಿಕ್ಕಿ ವಂಚಿತರಾಗುವ ತಂದೆ ಮಕ್ಕಳು ರಣರಂಗದಲ್ಲಿ ಮುಖಾಮುಖಿಯಾಗಿ ಹೋರಾಡುವುದು, ಕಾಳಗದಲ್ಲಿ ತಂದೆಯ ಕೈಯಿಂದಲೇ ಮಗನ ಮರಣ, ಯುದ್ಧರಂಗಕ್ಕೆ ಬಂದ ತಹಮೀನಳ ಅಪಾರ ಶೋಕ, ಸತ್ತ ಮಗುವಿನ ಬಳಿ ಗಂಡ ಹೆಂಡಿರ ಪುನಸ್ಸಮಾಗಮ ಇವು ನಾಟಕದ ಮುಖ್ಯ ಘಟನೆಗಳು.

ಆದರೆ ಮೂಲವಸ್ತುವಿನಲ್ಲಿ ನಾಟ್ಯ ಪ್ರಧಾನವಾದ ಅಂಶಗಳು ವಿರಳವಾಗಿ, ನಾಟಕದ ಮುಖ್ಯ ಘಟನೆಗಳ ವಿನ್ಯಾಸದಲ್ಲಿ ಹೆಚ್ಚುಗಾರಿಕೆ ಇಲ್ಲದಿರುವುದರಿಂದ ನಾಟಕ ಅಷ್ಟೊಂದು ಮಹತ್ವದ ಕೃತಿಯಾಗಲು ಸಾಧ್ಯವಾಗಿಲ್ಲ. ಭಾಷೆಯಲ್ಲಿ ಕಾವ್ಯಾತ್ಮಕತೆಯ ಕಾವು ಅಷ್ಟಾಗಿ ಕಾಣಿಸಿಕೊಳ್ಳದಿರುವುದೇ ಈ ನಾಟಕದ ಕೊರತೆಯಾಗಿದೆ. ಅವರು ಹೇಳುವಂತೆ 'ಸರಳ ರಗಳೆ ಪದ್ಯಗಳಲ್ಲಿಯೂ ಗದ್ಯ ಸಮ್ಮಿಶ್ರವಾದ ಸಾಂಪ್ರದಾಯಕ ರೀತಿಯಲ್ಲೂ ಬರೆಯದೆ, ನಮ್ಮ ನಾಡಿನ ದಿನಚರಿಯ ಭಾಷೆಯಲ್ಲಿಯೇ ಇದನ್ನು ಬರೆಯುವ ಯತ್ನ ಮಾಡಿದ್ದೇನೆ. ಕೃತಕತೆಗೆ ಸ್ವಲ್ಪವೂ ಅವಕಾಶ ಕೊಡದೆ ಸಂಪೂರ್ಣವಾಗಿ ರೂಢಿಯ ಮಾತುಗಳಲ್ಲೇ ಬರೆಯುವುದು ಆಗಿಲ್ಲವಾದರೂ ಬಹುಮಟ್ಟಿಗೆ ಹಾಗೆ ಮಾಡಲು ಪ್ರಯತ್ನ ನಡೆದಿದೆ. ಕೇವಲ ಈ ಬಳಕೆಯ ಭಾಷೆಯಲ್ಲಿಯೇ ಭಾವದ ಓಟ, ಮನಸ್ಸಿನ ಉದ್ವೇಗ, ಕಾರ್ಯಗಳ ತೀವ್ರತೆ ಮುಂತಾದುವನ್ನು ತರಲು ಸಾಧ್ಯವೇ ಎಂಬ ಪ್ರಶ್ನೆಯು ಈ ಪರೀಕ್ಷಾ ಪ್ರಯತ್ನಕ್ಕೆ ಪ್ರೇರಕ

ವಾಯಿತು. ಆರ್ನಾಲ್ಡ್‌ರ ಕವಿತೆಯ ಮೇಲಿನ ಪ್ರೀತಿಯು ಹೇಗೆಯೋ ಈ ಚಪಲದ ಬಾಧೆಯೂ ಹಾಗೆಯೇ ಈ ರೂಪಕದ ರಚನೆಯಲ್ಲಿ ಕಾರ್ಯಮಾಡಿದೆ.'

'ಆಗ್ರಹ' ವಿ. ಸೀ.ಯವರ ಎರಡನೆಯ ನಾಟಕ. ಅದರ ರಚನೆಯಾದದ್ದು ೧೯೩೧ರಲ್ಲಿ. ರಣರಂಗದಲ್ಲಿ ತೊಡೆ ಮುರಿದು ಬಿದ್ದ ದುರ್ಯೋಧನನ ದುರಂತವನ್ನು ಕಂಡು ಕಿಚ್ಚಿಗೆದ್ದ ಅಶ್ವತ್ಥಾಮನ ಕ್ರೋಧದಿಂದ ಪಾಂಡವರ ಪಾಳೆಯದಲ್ಲಿ ರಕ್ತದ ಕೋಡಿ ಹರಿಯಿತೆಂಬ ಕಥೆ ಸೌಪ್ತಿಕ ಪರ್ವದಲ್ಲಿ ಬರುತ್ತದೆ. ಉಪಪಾಂಡವರನ್ನು ಕೋಪ ಹಾಗೂ ಸೇಡಿನಿಂದ ಕೊಂದ ಅಶ್ವತ್ಥಾಮನು ಯಾವ ಸೌಮ್ಯ ನುಡಿಗಳಿಗೂ ಜಗ್ಗದೆ ಹೋದಾಗ ಕೃಷ್ಣನು ಆಗ್ರಹದಿಂದ ಅವನಿಗೆ ಶಾಪ ಕೊಡುತ್ತಾನೆ. ಅವನಿಂದ ಪಾಂಡವರಿಗೂ ಲೋಕಕ್ಕೂ ಆಗುತ್ತಿದ್ದ ಕೇಡನ್ನು ತಪ್ಪಿಸುತ್ತಾನೆ. ಮಹಾಭಾರತದ ಈ ಕಥೆಯನ್ನೇ ಬಹಳ ಮಟ್ಟಿಗೆ ವಿ. ಸೀ. ಅವರ ನಾಟಕದಲ್ಲೂ ನಾವು ಕಾಣಬಹುದು. ಜತೆಗೆ ಮೂಲದ ಹಲವು ಮಾತುಗಳನ್ನೂ ಉಳಿಸಿಕೊಳ್ಳಲಾಗಿದೆ. ಮೂಲ ಭಾರತದ ಅಶ್ವತ್ಥಾಮನ ಪಾತ್ರವನ್ನು ಕುರಿತು ವಿವೇಚಿಸುತ್ತ ವಿ. ಸೀ. ಹೀಗನ್ನುತ್ತಾರೆ: 'ಕೃಷ್ಣನ ಕೋಪವನ್ನು ಹೊತ್ತಿಸಿ ಮೂರು ಸಾವಿರ ವರ್ಷಗಳ ಕಾಲ ಅನುಭವಿಸಬೇಕಾದ ಶಾಪವನ್ನು ಹೊತ್ತ ಅಶ್ವತ್ಥಾಮನ ಗತಿಯನ್ನು ಕಂಡು ಕನಿಕರಪಟ್ಟು ನಾನಂತೂ ಭಯದಿಂದ ನಡುಗಿದ್ದೇನೆ. ಹಾಗೆಯೇ ಅದನ್ನು ನೋಡ ನೋಡುತ್ತ ಯಾವ ದೇವರ ದಯದಿಂದಲಾದರೂ ಮಾನವನ ಮನೋದೌರ್ಬಲ್ಯಗಳು ಅವನನ್ನು ಮುಳುಗಿಸದಂತೆ ಅವನ ಬದುಕು ನೇರವಾಗಿ ಮಂಗಳಕ್ಕೆ ತಿರುಗಲಿ ಎಂದು ಬಯಸಿದ್ದೇನೆ. ಆದರೆ ಬದುಕು ಎಷ್ಟು ಬಯಸಿದರೇನು? ರಾಗದ್ವೇಷಗಳ ದಾಳಿಯಲ್ಲಿ ಸಾತ್ವಿಕಕ್ಕೆ ತಿರುಗಬೇಕಾದ ಪ್ರವೃತ್ತಿಗಳೆಲ್ಲಾ ತಾಮಸಕ್ಕೆ ಎಳೆಯುವವು; ಬುದ್ಧಿಯ ಹದ ಕೆಡುವುದು; ದುರ್ಬಲ ಮನುಷ್ಯನ ಆತ್ಮ-ನಾಶವು ಆಗುತ್ತಲೇ ಇರುವುದು. ಅಂತಹ ದೃಶ್ಯವೊಂದು ಈ ನಾಟಕದಲ್ಲಿ ಕಣ್ಣಿಗೆ ಕಾಣಿಸಬಹುದೆಂದು ನನ್ನ ನಂಬಿಕೆ.'

ವಿ. ಸೀ.ಯವರು ಮಹಾಭಾರತದ ಕಥೆಯಲ್ಲಿ ಕಾಣುವ ಈ ದುರಂತತೆಯ ನೋಟವನ್ನು ಶ್ರೀಯವರು ತಮ್ಮ 'ಅಶ್ವತ್ಥಾಮನ್' ನಾಟಕದಲ್ಲಿ ಅದ್ಭುತವಾಗಿ ಬಿಡಿಸಿ ತೋರಿಸಿದ್ದಾರೆ. ಗ್ರೀಕ್ ರುದ್ರನಾಟಕದ ಭವ್ಯ ಚೌಕಟ್ಟಿಗೆ ಭಾರತದ ಕಥೆಯನ್ನು ಸಮುಚಿತವಾಗಿ ಸೇರಿಸಿ, ಗಂಭೀರವಾದ ಶೈಲಿಯಲ್ಲಿ ಕನ್ನಡಕ್ಕೆ ಒಂದು ಅಪೂರ್ವ ಕಾಣಿಕೆ ಕೊಟ್ಟಿದ್ದಾರೆ. ಆದರೆ ಅಲ್ಲಿ ಕಾಣುವ ನಾಟಕದ ಹರಹಾಗಲೀ, ದೃಷ್ಟಿಯ ಭವ್ಯತೆಯಾಗಲೀ ಇಲ್ಲಿಲ್ಲ. ಅವು ಒಂದೇ ಕಥೆಯ ಎರಡು ಬೇರೆ ಬೇರೆ ಮುಖಗಳಾದರೂ, ಒಂದರ ಆಕಾರ, ಅಳತೆ, ರೂಪ, ಬಣ್ಣ ಇನ್ನೊಂದಕ್ಕಿಲ್ಲ. 'ಅಶ್ವತ್ಥಾಮನ್' ನಾಟಕವನ್ನು ಓದಿದ ಮೇಲೆ ಮಹಾಭಾರತದಲ್ಲಿ ಬರುವ ಕಥೆಯ ಸ್ವಾರಸ್ಯವೇನು, ಅದರ ನಾಟಕೀಯತೆಯ ಲಕ್ಷಣವೇನು ಎಂದು ಕಾಣಬಯಸುವವರಿಗೆ 'ಆಗ್ರಹ' ನಾಟಕದಲ್ಲಿ ಅದರ ಸೊಗಸನ್ನು ಎತ್ತಿ ತೋರಿಸಲಾಗಿದೆ.

ಪುರಾಣೇತಿಹಾಸದ ಬುನಾದಿಯ ಮೇಲೆ ಕಟ್ಟಿದ, ವಿ. ಸೀ.ಯವರ ಇನ್ನೊಂದು ಇತ್ತೀಚಿನ ನಾಟಕ 'ಚ್ಯವನ' ೧೯೭೦ರಲ್ಲಿ ಪ್ರಕಟವಾಗಿದೆ. ಹಿಂದೆ ಹೇಳಿದಂತೆ, ವಿ. ಸೀ. ಅವರ ಕುತೂಹಲ ಮತ್ತು ಹಳತನ್ನು ಹೊಸದಾಗಿ ಕಾಣುವ ಹಂಬಲಗಳೇ ಇಲ್ಲಿಯೂ ಪ್ರೇರಕವಾಗಿವೆ. 'ಆಗ್ರಹ', 'ಸೊಹ್ರಾಬ್ ರುಸ್ತುಂ' ನಾಟಕಗಳಲ್ಲಿ ಸಾಲವು ಎನ್ನಿಸಿದ ಒಂದು ಅಪೂರ್ವ ನಾಟ್ಯಪ್ರಜ್ಞೆ ಇಲ್ಲಿ ಕಾರ್ಯ ಪ್ರವೃತ್ತ ವಾಗಿದೆ. ಚ್ಯವನ-ಸುಕನ್ಯೆಯರ ಕಥೆ ಮಹಾಭಾರತದಲ್ಲಿನ ನೂರಾರು ರಸಮಯ ಉಪಾಖ್ಯಾನಗಳಲ್ಲೊಂದು. ಆ ಕಥೆಯನ್ನೆ ವಿ. ಸೀ. ಹಲವು ವರ್ಷಗಳ ಹಿಂದೆ 'ಭಾರತದ ಐವರು ಮಹನೀಯರು' ಎಂಬ ಪುಸ್ತಿಕೆಯಲ್ಲಿ ಒಪ್ಪವಾಗಿ ಕಾಣಿಸಿದ್ದರು. ಆ ಕಥೆಯ ಸಂಕೀರ್ಣವಾದ ಚೌಕಟ್ಟು, ಬುದ್ಧಿಭಾವಗಳೆರಡನ್ನೂ ಪ್ರಚೋದಿಸು ವಂಥ ಅಲ್ಲಿನ ಸನ್ನಿವೇಶ–ಅವರಿಗೆ ಬಹು ಪ್ರಿಯವೆನಿಸಿರಬೇಕು. ಅದರ ಫಲಶ್ರುತಿ– ಈ ನಾಟಕ. ಇಲ್ಲಿ ಎರಡು ಮುಖ್ಯವಾದ ಅಂಶಗಳು ಬೆರೆತಿವೆ. ನಾಟಕದಲ್ಲಿನ ವಸ್ತು ಎರಡು ಮುಖವಾಗಿ ರೂಪುಗೊಂಡಿದೆ. ಒಂದು ಚ್ಯವನ, ಸುಕನ್ಯೆ ಅಶ್ವಿನೀ ದೇವತೆ ಗಳ ನಡುವಣ ಪ್ರೇಮದ ದಿವ್ಯವನ್ನು ಕುರಿತದ್ದು. ಇನ್ನೊಂದು ಸ್ವರ್ಗಾಧಿಪತಿ ಇಂದ್ರನ ನಿರಂಕುಶಾಧಿಕಾರ ಹಾಗೂ ಅದನ್ನು ಎದುರಿಸಿ ಗೆಲ್ಲುವ ಸಾಹಸಿಗಳಾದ ಋಷಿ ದೇವತೆಗಳ ಕಥೆಗೆ ಸಂಬಂಧಿಸಿದ್ದು. ಮೊದಲ ಮೂರು ಅಂಕಗಳಲ್ಲಿ ಮೊದಲ ನೆಯ ಕಥೆ ವಿಸ್ತಾರವಾಗಿದ್ದು, ಮೈತುಂಬಿಕೊಂಡಿದೆ ಎರಡನೆಯ ಕಥೆ ಕೊನೆಯ ಅಂಕದಲ್ಲಿ ಸೂಚ್ಯವಾಗಿ, ತೀರಾ ಸಂಕ್ಷೇಪವಾಗಿ ಮಿಂಚಿ ಹೋಗಿದೆ.

ಸುಕನ್ಯೆ ಚ್ಯವನನ ಕಣ್ಣಿಗೆ ಬಿದ್ದು ಅನಿವಾರ್ಯ ಸನ್ನಿವೇಶದಲ್ಲಿ ಅವನ ಬಯ ಕೆಯ ಹೆಣ್ಣಾಗುತ್ತಾಳೆ. ಸುಕುಮಾರಿಯಾದ ರಾಜಪುತ್ರಿ ಶ್ರದ್ಧೆಯಿಂದಲೂ ಹೃದ ಯವಂತಿಕೆಯಿಂದಲೂ ಪತಿಸೇವೆಯಲ್ಲಿ ನಿರತಳಾಗುತ್ತಾಳೆ. ಋಷಿ ಹೃದಯವನ್ನು ಗೆಲ್ಲುತ್ತಾಳೆ. ಆದರೆ ತಾನು ಅವಳನ್ನು ಬಲವಂತದಿಂದ ವಶಪಡಿಸಿಕೊಂಡೆ ಎಂಬ ಕೊರತೆ ಋಷಿಯ ಮಾನವ ಹೃದಯವನ್ನು ಬಹುವಾಗಿ ಕಾಡಿಸಿರಬೇಕು. ಅವಳು ಅಶ್ವಿನೀ ದೇವತೆಗಳ ಕಣ್ಣಿಗೆ ಬಯಸುವ ಹೆಣ್ಣಾಗಿ ಕಂಡಾಗ, ಚ್ಯವನನಿಗೆ ಒಂದು ಸುಲಭವಾದ ಸಮಾಧಾನವಾಗಿ ಪರಿಣಮಿಸಿರಬಹುದು. ದೇವತೆಗಳ ಅನುಗ್ರಹ ದಿಂದ ಭೇಷಜ ಪಡೆದು ಅವನು ಯೌವನವನ್ನು ಗಳಿಸುತ್ತಾನೆ. ಸುಕನ್ಯೆಯ ಪತಿ ಪ್ರೇಮ, ನಿಷ್ಠೆ, ಧರ್ಮಪ್ರಜ್ಞೆ–ಮೂರೂ ಪರೀಕ್ಷೆಗೆ ಗುರಿಯಾಗುತ್ತವೆ. ಈ ಅಗ್ನಿ ಪರೀಕ್ಷೆಯಲ್ಲಿ ಪಾರಾಗಿ ತನ್ನ ಸತೀತ್ವವನ್ನು ಉಳಿಸಿಕೊಂಡ ಸುಕನ್ಯೆಯ ಬದುಕು ಪುಟವಿಟ್ಟ ಬಂಗಾರವಾಗುತ್ತದೆ. ಆದರೆ ಈ ಪರೀಕ್ಷೆಯ ಕಾಲದಲ್ಲಿ ಅವಳು ಅನು ಭವಿಸುವ ಪರಿತಾಪ, ಒಳತೋಟಿ, ಧರ್ಮ ಸಂಕಟ ಸಾಮಾನ್ಯವಾದುವಲ್ಲ. ಅವಳ ಅಂತರಂಗದ ಲೋಕವನ್ನು ನಾಟಕದಲ್ಲಿ ವಿ. ಸೀ. ಚೆನ್ನಾಗಿ ಚಿತ್ರಿಸಿದ್ದಾರೆ. ಸುಕನ್ಯೆ, ಚ್ಯವನ, ಸುಮನಸರೂ, ಉದಾತ್ತ ಹೃದಯಿಗಳೂ ಆದ ಅಶ್ವಿನೀ ದೇವತೆಗಳು, –ಈ ಪಾತ್ರಗಳು ತುಂಬಾ ಸೊಗಸಾಗಿ ಮೂಡಿಬಂದಿವೆ. ನಾಟಕದ ಎರಡನೆಯ

ಭಾಗದಲ್ಲಿ ನಾಟಕದ ವಸ್ತುವಿನ ಇನ್ನೊಂದು ಅಂಶವನ್ನು ಕುರಿತ ಚಿತ್ರಣವಿದೆ. ಇದನ್ನು ವಿ.ಸೀ.ಯವರೇ 'ಸಮಾನತೆ ಬೇಡುವ ವ್ಯಕ್ತಿವರ್ಗ ಅಧಿಕಾರ ಮಂಡಲ ಗಳು, ಜನವರ್ಗಗಳು ಕೊಡದವರ ಮೇಲೆ ಹೇಗೆ ಎದುರು ಬೀಳುತ್ತವೆ ಎಂಬು ದನ್ನು ಲೋಕ ಕಂಡಿದೆ; ದಿನಾ ಕಾಣುತ್ತಿದೆ. ಈ ಗಳಿಕೆಯ ಅಂಥ ಒಂದು ಚಿತ್ರ ಇಲ್ಲಿ ದೊರೆಯಬಹುದೆಂದಿದ್ದೇನೆ' ಎಂದು ತಿಳಿಸಿದ್ದಾರೆ. ಮೊದಲ ಕಥೆಯಲ್ಲಿ ಕಾಣ ಸಿಗುವ ರಸಪುಷ್ಟಿ, ಅನನ್ಯವಾದ ರೂಪಣಕಲ್ಪನೆ, ಮಿಂಚಿನಂಥ ಮಾತುಗಾರಿಕೆ ಎರಡನೆಯ ಭಾಗದಲ್ಲಿಲ್ಲ. ಎರಡನೆಯ ಕಥೆಯು ಬೆಳವಣಿಗೆ ತೀರಾ ಒಮ್ಮುಗ್ಗಲಾಗಿದೆ. ಸಂಘರ್ಷಕ್ಕೊಳಗಾಗುವ ಎರಡು ಬಣಗಳ ನಡುವೆ ಬೌದ್ಧಿಕವಾದ, ಭೌತಿಕವಾದ ಅಸಮತೆ ಅಸಮತೋಲನಗಳಿದ್ದು ಕಾಣಿಸುವುದರಿಂದ ಇಂದ್ರನ ಪಾತ್ರ ಕಲ್ಪನೆ ಒಮ್ಮುಖವಾದದ್ದು ಅನಿಸುತ್ತದೆ. ಅಧಿಕಾರಕ್ಕೆ ಹೋರಾಡುವ ಸ್ವರ್ಗದೊಡೆಯನ 'ಕೇಸು' ತುಂಬಾ ಕ್ಷೀಣವಾಗಿರುವುದರಿಂದ, ಇಂದ್ರನ ಪಾತ್ರವನ್ನು ಸ್ಪಷ್ಟವಾಗಿ ಮೂಡಿಸಲು ಬೇಕಾದ ಕಾರ್ಯಾತ್ಮಕತೆಯ ಬೆನ್ನೆಲುಬು ಇಲ್ಲವಾಗಿರುವುದರಿಂದ, ಈ ಸಂಘರ್ಷದಲ್ಲಿ ಹೆಚ್ಚಿನ ನಾಟಕೀಯತೆ ಉಳಿದಿಲ್ಲ. ಆದರೆ ಬೆಳವಣಿಗೆಯ ದೃಷ್ಟಿ ಯಿಂದ ಹಿಂದೆಲ್ಲೂ ಕಾಣಿಸದ ಗಂಭೀರ ದೃಷ್ಟಿ, ವಿಚಾರಗಳ ತಾಕಲಾಟ ವಿ. ಸೀ. ಅವರ ಈ ನಾಟಕದಲ್ಲಿ ನಿಚ್ಚಳವಾಗಿ ಕಾಣಿಸಿಕೊಂಡಿದೆ.

ವಿ.ಸೀ. ಅವರ ಅತ್ಯುತ್ತಮ ಕೃತಿ ಎಂದು ಹೇಳಲಾಗಿರುವ 'ಶ್ರೀಶೈಲ ಶಿಖರ' ರಚಿತವಾದದ್ದು ೧೯೬೦ರಲ್ಲಿ. ವಿ. ಸೀ.ಯವರ ಆಪ್ತ ಸ್ನೇಹಿತರೂ ಒಡನಾಡಿಗಳೂ ಆಗಿದ್ದ ದಿ. ಮೋಟಗಾನಹಳ್ಳಿ ಸುಬ್ರಹ್ಮಣ್ಯ ಶಾಸ್ತ್ರಿಗಳು ಈ ಕಥೆಯನ್ನು ಹೇಳಿದ್ದ ರಂತೆ. ಶ್ರೀಶೈಲಕ್ಕೆ ಸಂಬಂಧಿಸಿದ ಆ ಕಥೆಯನ್ನು ನಾಟಕವಾಗಿ ಮಾಡಿ ತೋರಿಸುವ ಪ್ರಯತ್ನ ಇಲ್ಲಿದೆ. ವಿ. ಸೀ. ತಮ್ಮ ಮುನ್ನುಡಿಯಲ್ಲಿ ಬರೆಯುತ್ತಾ ಅಲ್ಲಿ ಸೂಚಿತ ವಾಗುವ ಹೆಣ್ಣಿನ ಬಾಳು ತಮಗೆ ದೊಡ್ಡದಾಗಿ ಕಾಣಿಸಿತೆಂದು ಹೇಳಿದ್ದಾರೆ. ಲೋಕದ ದೃಷ್ಟಿಯಲ್ಲಿ ಅಪವಿತ್ರಳಾಗಿ ಕಂಡ ಹೆಣ್ಣು ನಿಜವಾಗಿ ಧರ್ಮನಿಷ್ಠಳೂ, ಕ್ರಿಯಾವಂತಳೂ ಆಗಿರಬಹುದು ಎಂಬ ವಿಚಾರವನ್ನು ಕುರಿತ ಕಥಾನಕ ರೂಢಿ (ಮೋಟಿಫ್) ಸಾಹಿತ್ಯದಲ್ಲಿ ಚಿರಂತನವಾದದ್ದು. ಸಂಸ್ಕೃತ ನಾಟಕದ ವಸಂತಸೇನೆ ಈ ಆಶಯದ ಒಂದು ಅಭಿವ್ಯಕ್ತಿಯಾದರೆ, ಬ್ರೆಕ್ಟನ 'ದಿ ಗುಡ್ ವುಮನ್ ಆಫ್ ಸೆಜುವಾನ್'ನಲ್ಲಿ ಬರುವ ವೇಶ್ಯೆ ಷೆಂಟೆಯ ಪಾತ್ರ ಅದರ ಇನ್ನೊಂದು ಮುಖ ವನ್ನು ಉಜ್ವಲವಾಗಿ ಅಸ್ವಾದ್ಯಕವಾಗಿ ಕಾಣಿಸುತ್ತದೆ. ಎರಡು ನಾಟಕಗಳ ಉದ್ದೇಶ, ವಸ್ತು ವಿನ್ಯಾಸ, ರೀತಿ ನೀತಿಗಳೆಲ್ಲವೂ ತೀರಾ ಭಿನ್ನವಾಗಿದ್ದರೂ ಅಲ್ಲಿ ನಾಟಕಕಾರರು ಕಾಣಬಯಸುವ ಮಾನವೀಯ ಮೌಲ್ಯಗಳು ಒಂದೇ ರೀತಿಯ ಅರ್ಥವಂತಿಕೆಯಿಂದ ಬೆಳಗಿ ಬಂದಂಥವು. ಇಲ್ಲಿ ಇಂಥದೇ ರಸಸಾಧ್ಯತೆಯನ್ನು ಕಾಣುವ ಪ್ರಯತ್ನ ವಿ. ಸೀ. ಅವರದು.

ಅದ್ಭುತ–ಅಲೌಕಿಕ ಅಂಶಗಳನ್ನು ಲೌಕಿಕ ಜೀವನದ ಪಾತ್ರ, ಘಟನೆಗಳೊಂದಿಗೆ ಬೆರೆಸಿ ಒಂದು ಮಾನವೀಯ ಲೋಕವನ್ನು ವಿ. ಸೀ. ಇಲ್ಲಿ ಸೃಷ್ಟಿಸಿದ್ದಾರೆ.

ಮೊದಲ ಅಂಕದಲ್ಲಿ ಶಿವನು ಗೌರಿಗೆ ಲೋಕದ ಜನಸಾಮಾನ್ಯರಿಗೆ ಆತ್ಮೋದ್ಧಾರ ಎಷ್ಟು ಸುಲಭವಾಗಿ ತೆಕ್ಕೆಗೊದಗುವಂಥದು ಎಂಬುದನ್ನು ತೋರಿಸಲು ಶ್ರೀಶೈಲಕ್ಕೆ ಬರುತ್ತಾನೆ. ಇದು ನಾಟಕಕ್ಕೆ ಚೌಕಟ್ಟನ್ನು ಒದಗಿಸುವ ತಂತ್ರವಾಗುತ್ತದೆ. ಶಿವಗೌರಿಯರು ಮುದುಕ ಮುದುಕಿಯರ ವೇಷ ಧರಿಸಿ ದೇವಸ್ಥಾನದ ಪುಷ್ಕರಿಣಿಯ ಬಳಿಯಲ್ಲಿನ ನೂಕು ನುಗ್ಗಲಿನಲ್ಲಿ ಸೇರಿಕೊಳ್ಳುತ್ತಾರೆ. ಮುದುಕ ಈಜುವಾಗ ಕಾಲುಸೋತು ನೀರಿನಲ್ಲಿ ಮುಳುಗಿ ಹೋಗುವಂತಾದಾಗ ಅವನನ್ನು ಬಚಾಯಿಸಲು ನಾಲ್ಕಾರು ಮುಂದೆ ಮುಂದೆ ನುಗ್ಗುತ್ತಾರೆ. ಅತ್ಯಂತ ಭಾವುಕವಾದ ಒಂದು ನಿರ್ಣಯದ ತುತ್ತತುದಿಯಲ್ಲಿ, ನೀರಿಗೆ ಹಾರಲು ನಿಂತ ವ್ಯಕ್ತಿಗಳ ಅಂತರಂಗದಲ್ಲಿ ತುಡಿವ ಭಾವನೆಗಳು, ಆ ವ್ಯಕ್ತಿಗಳ ನಿಲುವು, ಅವರ ಒಳಬದುಕಿನ ಸ್ಥಿತಿಗತಿ–ಇವುಗಳು ಮನೋಜ್ಞವಾಗಿ ಚಿತ್ರಿತವಾಗಿವೆ. ಒಂದು ಮುಖ್ಯ ಘಟನೆಯ ಹೊರ ಪದರದಲ್ಲಿ ಬಿಡಿಬಿಡಿಯಾಗಿ ಬಿಚ್ಚಿಕೊಳ್ಳುವ ಆರು ದೃಶ್ಯಗಳ ಒಳ ಪದರಗಳು, ಮೂರು ಬೇರೆ ಬೇರೆ ನಿಲುವುಗಳನ್ನು ಪ್ರತೀಕಿಸುವ ರೆಡ್ಡಿ, ರಾವ್, ಶಾಸ್ತ್ರಿ–ಈ ಮೂವರ ಪಾತ್ರಗಳು, ಕಥೆಗೆ ಸೂತ್ರವಾಗಿರುವ ಮುದುಕ ಮುದುಕಿಯರು, ಎಲ್ಲಕ್ಕೂ ಕೇಂದ್ರವಾಗಿ ಬರುವ ವೇಶ್ಯೆ ಕಮಲಾಸಾನಿ ಇವುಗಳ ಸಮಗ್ರ ನೋಟ ನಾಟಕದ ಜೀವಶಕ್ತಿಯಾಗಿ ಕೆಲಸ ಮಾಡುತ್ತದೆ. ಕಳಂಕಭರಿತಳಾಗಿದ್ದ ಹೆಣ್ಣು ತನ್ನ ಲೋಕ ಕಾರುಣ್ಯದ ಮೂಲಕ, ಮಾನವ ಅನುಕಂಪೆಯ ಮೂಲಕ ಹೇಗೆ ಲೋಕದ ಕಣ್ಣು ತೆರೆಯಿಸುವಂಥ ತ್ಯಾಗವನ್ನು ಮಾಡಿದಳು ಎಂಬುದನ್ನು ಇಲ್ಲಿನ ಒಂದು ಒಟ್ಟು ಸಂದರ್ಭ ಧ್ವನಿಸುತ್ತದೆ. ಮೇಲುನೋಟಕ್ಕೆ ಸರಳವೆನಿಸಿದರೂ ನಾಟಕದ ಒಳ ಲೋಕದಲ್ಲಿ ಹತ್ತೆಂಟು ವಿಚಾರ ಸಂಘರ್ಷಗಳು ಅಲೆಯಲೆಯಾಗಿ ಸುಳಿಯುತ್ತವೆ. ದೇವಾಲಯದ ಪುಣ್ಯ ಪವಿತ್ರ ಪರಿಸರ, ಪುಷ್ಕರಿಣಿಯ ಜನಸಂದಣಿಯ ಗುಜುಗುಜು, ಮಾತು, ನೋಟ, ಪುನಃ ಮಾತಿನ ಸದ್ದು, ಒಳನೋಟ–ಇವು ತರಂಗ ತರಂಗವಾಗಿ ಮೇಲೆದ್ದು ಒಂದು ವಿಶಿಷ್ಟ ಅನುಭವಕ್ಕೆ ಸಾಧನಗಳಾಗುತ್ತವೆ–ಅತ್ಯುತ್ತಮ ರೇಡಿಯೋ ನಾಟಕವಾಗಿರುವ 'ಶ್ರೀಶೈಲ ಶಿಖರ'ದಲ್ಲಿ ವಿಸ್ತಾರವಾದ ರಂಗನಾಟಕದ ಅಮೂಲ್ಯ ಸರಕಿದೆ.

'ಪಿಗ್ ಮ್ಯಾಲಿಯನ್' (೧೯೬೩), 'ಮೇಜರ್ ಬಾರ್ಬರ' (೧೯೬೮)–ವಿ.ಸೀ. ಮಾಡಿರುವ, ಷಾ ನಾಟಕಗಳ ಎರಡು ಅನುವಾದಗಳು. ಈ ಅನುವಾದ ಕಾರ್ಯದಲ್ಲೂ ವಿ. ಸೀ. ಅವರನ್ನು ಪ್ರೇರಿಸಿದ್ದು ಅವರ ಕುತೂಹಲ ದೃಷ್ಟಿ. ಒಳ್ಳೆಯದನ್ನು ಕಾಣಬೇಕೆಂಬ ಆಸೆ, ತಾವು ಕಂಡುದು ಖುಷಿ ಪಟ್ಟದ್ದನ್ನು ಹತ್ತು ಜನರು ನೋಡಿ ನಲಿಯಲಿ ಎಂಬ ಆಕಾಂಕ್ಷೆಗಳೇ ಅವರನ್ನು ಈ ಅನುವಾದ ಕಾರ್ಯಕ್ಕೆ ಹಚ್ಚಿದವು ಎನ್ನಬಹುದು. ಅನುವಾದಕಾರ್ಯ ಎಷ್ಟು ಕಠಿಣವಾದದ್ದು ಅದಕ್ಕೆ ಎಂಥ

ಬೆಲೆ ತೆರಬೇಕಾಗುವುದು ಎಂಬೆಲ್ಲ ಮಾತೂ ವಿ. ಸೀ.ಯವರಿಗೆ ತಿಳಿದದ್ದೇ. ಅದು ಅವರ ಮುನ್ನುಡಿಯಲ್ಲಿ ಸ್ಪಷ್ಟವಾಗಿದೆ: 'ನಮ್ಮಲ್ಲಿ ಈಗ ಎಲ್ಲೆಲ್ಲಿಯೂ ಇಂಥವರು ನಮ್ಮ ಷೆಲಿ, ನಮ್ಮ ಇಬ್ಸೆನ್, ನಮ್ಮ ಷಾ ಎಂಬಂತೆ ಬೆಲೆ ಎಣಿಕೆ ಮಾಡುವುದುಂಟು. ಇಂಗ್ಲಿಷ್ ನಾಟಕ ಪರಿಚಯವಿರುವವರು ಸಮಾಜ ವಿಮರ್ಶೆ, ಹಾಸ್ಯಗಳನ್ನು ಬೆಳಸಿ ರೀತಿ, ನೀತಿ, ಅಭಿಪ್ರಾಯ ವಿಮರ್ಶೆ ಮಾಡುವ ನಾಟಕ ಕರ್ತೃಗಳನ್ನು ಕನ್ನಡದ ಷಾ, ಬಂಗಾಳಿ ಷಾ ಎಂದು ನಿರ್ದೇಶಿಸುವುದುಂಟು. ಇದು ಇಬ್ಬರಿಗೂ ಕೀರ್ತಿ ತರುವ ಪ್ರಸಂಗವಲ್ಲ. ಆದರೂ ಅಷ್ಟು ಕೀರ್ತಿ ಇರುವ ನಾಟಕಕಾರನ ಒಂದು ನಾಟಕವೂ ಕನ್ನಡಕ್ಕೆ ಬಂದಿಲ್ಲ. ಬೇರೆ ಭಾಷೆಗಳಲ್ಲಿ ಬಂದಿವೆಯೋ ಇಲ್ಲವೋ ನಾನರಿಯೆ. ಬಹುಶಃ ಇಲ್ಲ. ಆತನನ್ನು ಮುಟ್ಟುವ ಧಾರ್ಷ್ಟ್ಯ ಅವಿವೇಕಿಯ ಸಾಹಸ. ಅಂಥ ಅವಿವೇಕ ಸಾಹಸವೊಂದನ್ನು ನಾನು ಈ ಭಾಷಾಂತರದಲ್ಲಿ ಮಾಡಿದ್ದೇನೆ. ಮೂಲದ ಜೀವ ಗುಣವನ್ನೂ ಅರ್ಥವನ್ನೂ ಕನ್ನಡಕ್ಕೆ ಪೂರ್ತಿ ತರುವುದು ಶಕ್ಯವಾಗಿಲ್ಲ. ಆನೆ ನಡೆದು ಹೋದ ಜಾಡು ಇದು–ಎಂದು ಕಾಣಿಸಲು ಅದು ನೆರವಾಗುವುದಾದರೆ ನಾನು ಕೃತಾರ್ಥ. ನನಗಿಂತ ಶಕ್ತರಾದವರು ನಾಳೆ ಅದನ್ನು ಮಾಡಲಿ. ಇದು ಆರಂಭ.'

ವಿ. ಸೀ. ಅವರ ಮಾತಿನಲ್ಲಿ ಭಾಷಾಂತರಕಾರನ ನೋವಿದೆ, ಹೊಣೆಗಾರಿಕೆಯ ಅರಿವಿದೆ–ಎಲ್ಲಕ್ಕೂ ಮಿಗಿಲಾಗಿ ವಿದ್ವತ್ಸಹಜವಾದ ಆಡಂಬರರಾಹಿತ್ಯವಿದೆ. ಮೂಲವನ್ನು ಭಾಷಾಂತರದೊಟ್ಟಿಗೆ ಇಟ್ಟು ತಾಳೆನೋಡಿ ರಂಧ್ರಾನ್ವೇಷಣಕ್ಕೆ ಹೊರಡುವ ಸಾಹಸಕ್ಕೆ ವಿ. ಸೀ. ಅವರ ಅನುವಾದದಲ್ಲಿ ಅಲ್ಲಲ್ಲಿ ಸಾಕಷ್ಟು ಸಾಮಗ್ರಿ ಸಿಕ್ಕಬಹುದು. ಆದರೆ ನೇರವಾಗಿ ಅನುವಾದವನ್ನು ಓದಿದಾಗ ಅಲ್ಲಿ ಮಿಂಚುವ ಉಕ್ತಿಯ ಚತುರತೆ, ಸೊಗಸಾದ ವಾಕ್ಯ ಬಂಧಗಳು, ಕನ್ನಡದ ನುಡಿಗಟ್ಟನ್ನು ಅವರು ದುಡಿಸಿಕೊಂಡಿರುವ ರೀತಿ—ನಮಗೆ ಹೃದ್ಯವೆನಿಸುತ್ತವೆ. ಉದಾಹರಣೆಗೆ 'ಪಿಗ್‌ಮ್ಯಾಲಿಯನ್' ನಾಟಕದ ಕೆಲವು ಮಾತುಗಳು ಹೀಗೆ ಕನ್ನಡ ರೂಪತಾಳಿ ನಮಗೆ ತೀರಾ ಹತ್ತಿರವಾಗಿ ಬಂದಿವೆ. ನಾಟಕದ ಕೊನೆಯ ದೃಶ್ಯದಲ್ಲಿ ಹಿಗ್ಗಿನ್ಸ್ ಮತ್ತು (ಹೂ ಮಾರುವ ಹುಂಬ ಹುಡುಗಿ ಲೋಕವನ್ನು ಬೆರಗುಗೊಳಿಸುವ ಶಿಷ್ಟತೆ, ಸೊಗಸು, ಲಾವಣ್ಯಗಳ ಪುತ್ಥಳಿಯಾಗಿಬಿಡುವ) ಎಲಿಸ್–ಇವರ ನಡುವಣ ಸೆಣೆಸಾಟ ಇಲ್ಲಿದೆ:

ಎಲಿಸ: ಪ್ರತಿ ಹುಡುಗಿಗೂ ಪ್ರೀತಿ ಪಡೆಯಲು ಅಧಿಕಾರವುಂಟು.

ಹಿಗ್ಗಿನ್ಸ್: ಏನು! ಅಂಥ ಅವಿವೇಕಿಗಳಿಂದ?

ಎಲಿಸ: ಫ್ರೆಡ್ಡಿ Fool ಅಲ್ಲ. ಅವನು ಬಡವನಾಗಿರಬಹುದು. ದುರ್ಬಲನಾಗಿರಬಹುದು. ಅವನು ನನ್ನನ್ನು ಬಯಸುತ್ತಾನೆ. ಬಹುಶಃ, ಅಂತಸ್ತಿನಲ್ಲಿ ನನಗಿಂತ ಉತ್ತಮರಾಗಿ ನನ್ನ ಮೇಲೆ ದಬ್ಬಾಳಿಕೆ ಮಾಡುವ, ನಾನು ಬೇಡವಾಗಿರುವವರಿಗಿಂತ ಹೆಚ್ಚು ಸುಖವಾಗಿ ನನ್ನನ್ನು ಇಟ್ಟುಕೊಂಡಾನು.

ಹಿಗ್ಗಿನ್ಸ್: ನಿನ್ನನ್ನು ಏನಾಗಿಯಾದರೂ ಅವನು ಮಾಡಿಯಾನೆ? ಅದು ಸಂಗತಿ.

ಎಲಿಸ: ನಾನು ಅವನನ್ನು ಏನನ್ನಾದರೂ ಆಗಿ ಮಾಡಬಹುದಲ್ಲ! ಆದರೆ ಪರಸ್ಪರವಾಗಿ ಒಬ್ಬರು ಇನ್ನೊಬ್ಬರನ್ನು ರೂಪಿಸುವ ವಿಚಾರವನ್ನು ನಾವು ಎಂದೂ ಯೋಚಿಸಿಲ್ಲ. ನೀವೋ, ಇನ್ನೇನನ್ನೂ ಯೋಚಿಸುವುದೇ ಇಲ್ಲ. ಸಹಜವಾಗಿರುವುದು ಮಾತ್ರ ನನಗೆ ಬೇಕಾಗಿದೆ....

ಹಿಗ್ಗಿನ್ಸ್: ಇನ್ನು ಯಾವ ಹಾಳು ಶನಿ ಸಂಗತಿಗಾಗಿ ನಾವು ಜಗಳವಾಡುತ್ತಿರುವುದು?

ಎಲಿಸ: ನಾನು ಬೇಡುವುದು ಸ್ವಲ್ಪ ದಯೆಯನ್ನು. ನನಗೆ ಗೊತ್ತಿದೆ, ನಾನು ಸಾಮಾನ್ಯ ಹುಡುಗಿ, ಅಜ್ಞಾನಿ- ಎಂದು. ನೀವು ಪುಸ್ತಕದ ಓದು ಕಲಿತ ದೊಡ್ಡ ಮನುಷ್ಯರು. ಆದರೆ ನಿಮ್ಮ ಕಾಲ ಕೆಳಗಿನ ಕಸ ಅಲ್ಲ ನಾನು........ನಾನು ಮಾಡಿದಿನಿ (ತಿದ್ದಿಕೊಂಡು) ಅಲ್ಲ....ನಾನು ಮಾಡಿದ್ದು — ಉಡುಪುಗಳಿಗಾಗಿ ಅಲ್ಲ. ಟ್ಯಾಕ್ಸಿಗಳಿಗೂ ಅಲ್ಲ. ಜೊತೆಯಲ್ಲಿ ನಾವು ಸಂತೋಷವಾಗಿ ಇದ್ದುದರಿಂದ. ನಂಗಾಗನಿಸ್ತು—ಅಲ್ಲ, ನನಗೆ ಆಗ ಅನ್ನಿಸಿತು–ನಿಮ್ಮ ವಿಷಯದಲ್ಲಿ ಅಕ್ಕರೆ ಹುಟ್ಟಿದುದರಿಂದ ನನ್ನನ್ನು ನೀವು ಪ್ರೀತಿಸಬೇಕು ಎಂಬ ಇಷ್ಟದಿಂದ ಅಲ್ಲ. ನಮ್ಮಿಬ್ಬರ ನಡುವೆ ಇರುವ ವ್ಯತ್ಯಾಸವನ್ನು ನಾನು ಮರೆಯಲಾರೆ. ಆದರೆ ಹೆಚ್ಚು ಸ್ನೇಹವನ್ನು ಬಯಸಿದೆ.

ನಾಟಕದ ಜೀವಾಳವಾಗಿರುವ, ಮೊದಲ ಭಾಗದ ಹೂ ಮಾರುವ ಹುಡುಗಿಯ 'ಕಾಕ್ನಿ' ಭಾಷೆಯ ಸೊಗಡು, ರಂಜಕತೆ, ನಾಟ್ಯಧ್ವನಿ ಮತ್ತು ಆ ಮೇಲೆ ಮಾರ್ಪಾಡಾಗುವ ಬಿನ್ನಾಣಗಿತ್ತಿಯ ಅತಿ ಶಿಷ್ಟಮಾತಿನ ಚಮತ್ಕಾರ–ಎರಡರ ನಡುವಣ ವೈದೃಶ್ಯ–ವಿ. ಸೀ. ಅವರ ಭಾಷಾಂತರದಲ್ಲಿ ರೂಪಗೊಂಡಿಲ್ಲವೆನಿಸಿದರೂ ಅನುವಾದದ ಉಳಿದೆಲ್ಲ ಭಾಗಗಳೂ ಗಂಭೀರ ಹಾಸ್ಯದ ರೇಕು ರೇಕುಗಳಾಗಿ ಪಡಿಮೂಡಿವೆ.

ಷಾರ 'ಮೇಜರ್ ಬಾರ್ಬರಾ' ಗಂಭೀರ ಸಮಾಜ ದರ್ಶನವನ್ನು ಮೂಡಿಸುವ ಒಂದು ಪರಿಣತ ಕೃತಿ. ವಿ.ಸೀ. ಅವರ ಗದ್ಯ ಶೈಲಿ ಆ ನಾಟಕವನ್ನು ಸಮರ್ಥವಾಗಿ ಅರಗಿಸಿಕೊಂಡು ಅದನ್ನು ನಮ್ಮ ಭಾಷೆಯ ರೂಢಿ ನುಡಿಗಟ್ಟುಗಳ ಹತ್ತಿರಕ್ಕೆ ತರುವುದರಲ್ಲಿ ಯಶಸ್ಸು ಸಾಧಿಸಿದೆ. ನಾಟಕದ ರಸಶಿಖರವಾದ ಕಥಾನಾಯಕ ಅಂಡರ್ ಷಾಫ್ಟ್‌ನ ಭಾಷಣ, ಎಷ್ಟು ಸೊಗಸಾಗಿ ಮೂಲದ ಚೆಲುವನ್ನೂ ಚತುರತೆಯನ್ನೂ ಉಳಿಸಿಕೊಂಡಿದೆ ಎಂದು ಇಲ್ಲಿ ಕಾಣಬಹುದು.

ಕಸಿನ್ಸ್: ಬಡತನವನ್ನು ಪಾತಕವೆಂದು ಕರೆಯುತ್ತೀರಾ?

ಅಂಡರ್‌ಷಾಫ್ಟ್: ಅತಿ ದೊಡ್ಡ ಪಾತಕ ಅದು. ಅದಕ್ಕೆ ಹೋಲಿಸಿದರೆ ಇತರ ಪಾತಕಗಳೆಲ್ಲ ಸದ್ಗುಣಗಳು; ಅದಕ್ಕೆ ಹೋಲಿಸಿದರೆ ಇತರ ಅಗೌರವಗಳೆಲ್ಲ ಧರ್ಮ

ಸಾಹಸಗಳು. ಬಡತನ ಒಟ್ಟು ಪಟ್ಟಣಗಳನ್ನು ನಾಶಮಾಡುತ್ತದೆ; ಭಯಂಕರ ಪೀಡೆಗಳನ್ನು ಹರಡುತ್ತದೆ; ಅದರ ಕಣ್ಣಿಗೆ ಬಿದ್ದ, ಅದರ ಶಬ್ದ ಕೇಳಿದ, ಅದರ ವಾಸನೆಯ ಹತ್ತಿರದ ಎಲ್ಲದರ ಆತ್ಮಗಳನ್ನೂ ಒಡಿದು ಕೊಲ್ಲುತ್ತದೆ. ನೀನು ಪಾತಕ ವೆಂದು ಕರೆಯುವುದು ದೊಡ್ಡದಲ್ಲ. ಇಲ್ಲೊಂದು ಕೊಲೆ, ಅಲ್ಲೊಂದು ಕಳ್ಳತನ; ಈಗೊಂದು ಪೆಟ್ಟು, ಆಗೊಂದು ಶಾಪ—ಅವುಗಳಿಂದೇನು? ಬಾಳಿನ ಆಕಸ್ಮಿಕಗಳು ಅವು. ರೋಗರುಜಿನಗಳು ಮಾತ್ರ. ಲಂಡನ್ನಿನಲ್ಲೇ ಅವನ್ನೇ ನಿಜವಾದ ವೃತ್ತಿ ಮಾಡಿಕೊಂಡಿರುವ ೫೦ ಜನ ಪಾತಕಿಗಳಿಲ್ಲ. ಆದರೆ ಹತ್ತಾರು ಲಕ್ಷ ಮಂದಿ ಬಡವರಿ ದ್ದಾರೆ; ಆರ್ತರಿದ್ದಾರೆ; ಕೊಳಕರಿದ್ದಾರೆ; ಪೋಷಣೆ ಸಾಲದವರು, ಬಟ್ಟೆ ಸಾಲದ ವರೂ ಇದ್ದಾರೆ....

ನಿನಗಾಗಿ ಅವನ ಆತ್ಮವು ಪುನಃ ಮುಕ್ತಿಗೆ ತಿರುಗುವಂತೆ ನಾನು ಎಳೆಯುತ್ತೇನೆ. ಮಾತುಗಳಿಂದಲ್ಲ; ಕನಸುಗಳಿಂದಲ್ಲ. ವಾರಕ್ಕೆ ೩೦ ಷಿಲಿಂಗ್ ಕೊಟ್ಟು, ನೋಡಲು ಚೆನ್ನಾಗಿರುವ ಬೀದಿಯೊಂದರಲ್ಲಿ ಒಂದು ಒಳ್ಳೆಯ ಮನೆಕೊಟ್ಟು ಮಾಡಲು ಖಾಯಂ ಕೆಲಸ ಒಂದನ್ನು ಕೊಡುತ್ತೇನೆ. ೩ ವಾರಗಳಲ್ಲಿ ತನಗೆ ಖುಷಿತರುವ ಒಂದು ಕುಡತ ಹೊಲಿಸಿಕೊಳ್ಳುತ್ತಾನೆ. ಮೂರು ತಿಂಗಳಲ್ಲಿ ಅವನು ಒಂದು ಎತ್ತರದ ಹ್ಯಾಟ್ ಕೊಳ್ಳುತ್ತಾನೆ; ಚರ್ಚಿನಲ್ಲಿ ಹೋಗಿ ಕುಳಿತುಕೊಳ್ಳುತ್ತಾನೆ; ವರ್ಷ ಮುಗಿಯುವುದ ರೊಳಗಾಗಿ ಪ್ರಿಮ್‌ರೋಸ್ ಲೀಗ್ ಸಭೆಯಲ್ಲಿ ಒಬ್ಬ ಶ್ರೀಮಂತಳ ಕೈ ಕುಲುಕು ತ್ತಾನೆ; ಕನ್ಸರ್‌ವೇಟಿವ್ ಪಕ್ಷಕ್ಕೆ ಸೇರಿಕೊಳ್ಳುತ್ತಾನೆ."

ಇಂಥ ವಾಕ್ಯ ಸಮುದಾಯಗಳನ್ನೂ, ಬಸಿಯಾದ ಆಡು ಮಾತನ್ನೂ ಮೂಲ ದೊಂದಿಗೆ ಹೋಲಿಸುವಾಗ, ಭಾಷಾಂತರಕಾರರು ಸಾಧಿಸಿಕೊಂಡಿರುವ ಗೆಲುವು ಸಾಮಾನ್ಯವಾದುದಲ್ಲ ಅನಿಸುತ್ತದೆ. ಆಗ, 'ಕುರುಡೋ ಕುಂಟೋ ಆಗಿ ಷಾ ನನ್ನ ಈ ಎರಡು ನಾಟಕಗಳಲ್ಲಿ ಕನ್ನಡಕ್ಕೆ ಇಳಿದಿದ್ದಾರೆ' ಎನ್ನುವ ವಿ. ಸೀ. ಯವರ ನಿರಾಡಂಬರ, ಸಂಕೋಚಪ್ರವೃತ್ತಿ ನಮಗೆ ಇನ್ನಷ್ಟು ಪ್ರಿಯಕರವೆನಿಸುತ್ತವೆ.

ಎಚ್. ಕೆ. ರಾಮಚಂದ್ರಮೂರ್ತಿ

# ಆಚಾರ್ಯ ಪುರುಷ

ವಿ. ಸೀತಾರಾಮಯ್ಯನವರೆಂದರೆ ನಿಜವಾಗಿಯೂ ಅಯ್ಯನವರು, ಆರ್ಯರು, ಆಚಾರ್ಯರು. ಅವರ ಜ್ಞಾನ ಸಂಚಯದಲ್ಲಿ ಇಂತಹ ವಿಷಯ ಇಲ್ಲವೆಂಬುದಿಲ್ಲ. ವಯೋಮಾನದ ಎಂಟನೆಯ ದಶಕದಲ್ಲಿಯೂ ಅದ್ಯತನವಾದದ್ದನ್ನು ಸಂಗ್ರಹಿಸ ಬೇಕೆಂಬ ಅವರ ಸತತ ಪರಿಶ್ರಮಕ್ಕೆ ವಿರಾಮವಿಲ್ಲ. ಮೊದಲು ಸಂಗ್ರಹಿಸಿದ್ದನ್ನು ಸತತವಾಗಿ ಶೋಧಿಸಿ ಖಚಿತವಾಗಿ ಇಟ್ಟಿರುವದಕ್ಕೂ ಹೊಸತರಲ್ಲಿ ಖಚಿತವಾದ ದ್ದನ್ನು ಪ್ರಮಾಣಿಸಿ ಸಂಗ್ರಹಿಸುವದಕ್ಕೂ ಅವರಿಗೆ ಯಾವ ವೆಚ್ಚವೂ ಹೆಚ್ಚಲ್ಲ; ಯಾವ ಶ್ರಮವೂ ಲೆಕ್ಕಕ್ಕಲ್ಲ.

ಈ ಅಪಾರವಾದ ಜ್ಞಾನಕೋಶದ ಯಾವದೇ ಒಂದು ಭಾಗವನ್ನಾದರೂ ಪ್ರತಿಷ್ಠೆಗಾಗಲಿ ಲಾಭಕ್ಕಾಗಲಿ ಪ್ರದರ್ಶನ ಮಾಡುವದಕ್ಕೆ ಅವರೆಂದೂ ಸಿದ್ಧರಾಗ ಲಿಲ್ಲ. ಇಂದಿಗೂ ಸಿದ್ಧರಿಲ್ಲ. ಏಕೆಂದರೆ, ಅದು ಅವರ ಮೂಲಸಿದ್ಧಾಂತಕ್ಕೇ ವಿರುದ್ಧ ವಾದದ್ದು. ಆ ಸಿದ್ಧಾಂತವೆಂದರೆ ಚಿಂತನದ ಯಾವ ಮಾರ್ಗದಲ್ಲಿಯೇ ಆಗಲಿ, ಕೊನೆಯ ಮಾತು ಎಂಬುದನ್ನು ಯಾರೂ ಎಂದೂ ಹೇಳಿಲ್ಲ, ಹೇಳುವದು ಸಾಧ್ಯ ವಿಲ್ಲ, ಎಂಬುದು. ಆದ ಕಾರಣವೇ ಆಚಾರ್ಯ ಸ್ಥಾನದಲ್ಲಿರುವವನಿಗೆ ಅಧ್ಯಾಪನ ದಷ್ಟೇ ಅಧ್ಯಯನವೂ ನಿತ್ಯ ವಿಧಿಯಾಗಿರಬೇಕಾದದ್ದು.

ಬಯಲಿನಲ್ಲಿ ನಿಂತವರಿಗೆ ಒಂದೊಂದು ಬಂಡೆಯೇ ದೊಡ್ಡ ಪರ್ವತವಾಗಿ ತೋರುತ್ತದೆ. ಆದರೆ ಎಲ್ಲ ದಿಕ್ಕುಗಳಲ್ಲೂ ಕ್ಷಿತಿಜದವರೆಗೆ ವಿಸ್ತರಿಸಿದ ಪರ್ವತ ಶ್ರೇಣಿಗಳಲ್ಲಿ ಸಂಚರಿಸುವವರಿಗೆ ಯಾವ ಎತ್ತರವೂ ಒಂದು ಅದ್ಭುತವೆಂದು ತೋರು ವದೇ ಇಲ್ಲ. ಅವರ ಗಮನ ಅದಕ್ಕಿಂತ ಎತ್ತರವಾದ ಶಿಖರದೆಡೆಗೇ ಇರುತ್ತದೆ. ಹೀಗಾಗಿ ವಿ.ಸೀ.ಯವರ ವಿದ್ಯಾರಣ್ಯವಲ್ಲಿ ಪ್ರವೇಶ ಪಡೆದವರಿಗೂ ಕೂಡ ಅಲ್ಲಿ ಎತ್ತರವಾದ ಶಿಖರ ಯಾವದು? ಸಾಹಿತ್ಯವೊ? ಸಂಗೀತವೊ? ಅರ್ಥಶಾಸ್ತ್ರವೊ? ತತ್ವಶಾಸ್ತ್ರವೊ? ನಿಷ್ಠುರವಾದ ನ್ಯಾಯವೊ? ಹೆಂಗರುಳಿನ ಲೋಕ ಕಾರುಣ್ಯವೊ? ಯಾವುದೊ? ಯಾವುದೊ? ಎಂದು ದಿಗಿಲಾಗುತ್ತದೆ. ಆ ಪ್ರದೇಶಕ್ಕೆ ಪ್ರವೇಶಿ ಸುವ ಭಾಗ್ಯ ಒಮ್ಮೆ ದೊರೆತರೆ ಆ ಗುರು ತನ್ನ ಶಿಷ್ಯನ "ಯೋಗಕ್ಷೇಮಂ ವಹಾ

ವ್ಯಹಂ" ಎನ್ನುತ್ತಾರೆ. ಅವರ ಜತೆ ನಡೆಯುವಾಗ ಎಷ್ಟು ಎತ್ತರಕ್ಕೆ ನಮ್ಮನ್ನು ಏರಿಸಿದ್ದಾರೆಂಬುದೇ ತಿಳಿಯುವದಿಲ್ಲ. ಶಕ್ತವಾದ ಆ ಬುದ್ಧಿಯ ಸಂಚಾರ ಅಷ್ಟು ಲೀಲಾಜಾಲವಾಗಿ ನಡೆಯುತ್ತದೆ.

ಆದರೆ ಈ ಸಂಚಾರಕ್ಕೆ ಟಿಕೆಟ್ಟುಗಳು ಯಾವ ಪ್ರವಾಸಿ ಸಂಸ್ಥೆಯಲ್ಲೂ ದೊರೆಯುವದಿಲ್ಲ. ಸಮಿತ್ಪಾಣಿಯಾಗಿ ಸತ್ಯಕಾಮನಾಗಿ ಬಂದವನಿಗೆ ಮಾತ್ರ ಪ್ರವೇಶ. ಡಂಭವನ್ನೂ, ಆಢ್ಯತೆಯನ್ನೂ ಕಂಡರೆ ಅವರಿಗಾಗದು. ಹಾಗೆಂದು ಬಾಯಿಬಿಟ್ಟು ಅಪ್ರಿಯವಾದ ಮಾತನ್ನಾಡರು. ಆ ಸುಸಂಸ್ಕೃತ ಬೌದ್ಧಿಕ ವಾತಾವರಣದಲ್ಲಿಯ ಅದೃಶ್ಯವಾದ ಎಕ್ಸರೇ ಪ್ರಕಾಶದಲ್ಲಿ ಸುಳಿಯುವದು ಎಷ್ಟೇ ಭದ್ರವಾಗಿ ಅಲಂಕರಿಸಿಕೊಂಡರೂ ಸುಳ್ಳಿಗೂ, ಪೊಳ್ಳಿಗೂ ಸಾಧ್ಯವಾಗದು. ಅಂಥವರು ತಾವೇ ದೂರವಾಗುತ್ತಾರೆ. ತಮ್ಮ ಜ್ಞಾನದ ಇತಿ ಮಿತಿಗಳನ್ನು ಅರಿತ ಅಲ್ಪಜ್ಞರಿಗೂ ಇಲ್ಲಿ ಸ್ವಾಗತವಿದೆ. ಕಲಾವಿದ ವೆಂಕಟಪ್ಪನವರು ಹೇಳಿದ್ದೆಂದು ಈ ಗುರುಗಳು ಹೇಳುವ ಒಂದು ಮಾತು ಅಕ್ಷರಶಃ ಇವರಿಗೇ ಅನ್ವಯಿಸುತ್ತದೆ: "ವಿದ್ಯಾರ್ಥಿಗಳನ್ನು ನೋಡಬೇಕು. ಅವರು ಎಷ್ಟುಮಟ್ಟಿಗೆ ಕಲಿತವರು, ಅಭ್ಯಾಸವುಳ್ಳವರು, ಎಂಥ ಮನೋಧರ್ಮವುಳ್ಳವರು, ಅವರ ಅಗತ್ಯಗಳೇನು–ಎಂದು ವ್ಯಕ್ತಿಶವಾಗಿ ಅರಿತ ಹೊರತು ಏನನ್ನು ಹೇಳುವುದೂ ತರವಲ್ಲ." ಅವರ ಮಾತು ಯಾವಾಗಲೂ ಹೀಗೆಯೇ. ಯಾವದೇ ಅಭಿಪ್ರಾಯವನ್ನು ತಮ್ಮದೆಂದು ಹೇಳುವದಕ್ಕಿಂತ ಅದು ಇಂತಹ ಒಬ್ಬ ಮಹನೀಯರದು ಎಂದು ಹೇಳುವದರಲ್ಲಿ ಅವರಿಗೆ ಹೆಚ್ಚು ಸಂತೋಷ. ನಮ್ಮ ಪರಂಪರೆಯ ಆಚಾರ್ಯ ಮಾರ್ಗವೂ ಅದೇ. ನಮ್ಮಂಥವರೆಲ್ಲ ದಿನದಿನವೂ ಹೇಳುತ್ತ ತಿರುಗುವ ಅಭಿಪ್ರಾಯಗಳಲ್ಲಿ ನಿಜವಾಗಿ ನಮ್ಮವು ಅನ್ನುವಂಥವು ಎಷ್ಟು ಇರುತ್ತವೆ? ಬೇರೆಯವರದನ್ನು ನಮ್ಮದೇ ಎಂಬಂತೆ ಹೇಳುವಾಗ ನಮಗೆ ಅದರ ಮೂಲ ಎಲ್ಲಿಯದೆಂದು ತಿಳಿಯುವಷ್ಟು ಅಧ್ಯಯನವಾಗಲಿ ತಟ್ಟನೆ ಜ್ಞಾಪಿಸಿಕೊಳ್ಳುವ ನೆನಪಿನ ಶಕ್ತಿಯಾಗಲಿ ಎಷ್ಟು ಜನಕ್ಕಿದೆ? ನಿಜವಾಗಿಯೂ ಅಂತಹ ಅಭಿಪ್ರಾಯಗಳು ಯಾವವೊ ಪತ್ರ ಪತ್ರಿಕೆಗಳಿಂದ ಎತ್ತಿಕೊಂಡ ಪುನರುಕ್ತಿಗಳಾದ ಕಾರಣ ಅವುಗಳ ಮೂಲ ಎಲ್ಲಿಯೆಂಬುದು ತಿಳಿಯದ್ದಕ್ಕೆ ಅವನ್ನು ನಮ್ಮವೇ ಎಂಬಂತೆ ಬಳಸಿದರೆ ನಮ್ಮವಾದವೆ? ಅಂತಹ ಮಾತಿಗೆ ಮೂಲದ ಸಂದರ್ಭವನ್ನೆತ್ತಿ ಅದೇ ಭಾಷೆ ಅವೇ ಶಬ್ದಗಳನ್ನು ಹೇಳುವಾಗ ಬರುವ ಸೊಗಸನ್ನೂ, ಶಕ್ತಿಯನ್ನೂ ಹಾಗೆ ಹೇಳಬಲ್ಲ ಆಚಾರ್ಯಪುರುಷರ ಮುಖದಿಂದ ಕೇಳಿಯೇ ಸುಖಿಸಬೇಕು.

ಎನ್.ಎಸ್. ಸುಬ್ಬರಾಯರನ್ನು ಕುರಿತು ಈ ಆಚಾರ್ಯರು ಒಂದು ಮಾತನ್ನು ಹೇಳಿದ್ದಾರೆ: "ಆ ಮನಸ್ಸು, ಆ ಸಾಕಲ್ಯ ದೃಷ್ಟಿ, ಆ ಅಡಕ, ಆ ವಿದ್ವತ್ತು ಎಷ್ಟು ಕೆಲಸ ಮಾಡಿ ಎಷ್ಟು ಬರವಣಿಗೆಯನ್ನು ದೇಶಕ್ಕೆ ಕೊಡಬಹುದಿತ್ತೊ ಅಷ್ಟನ್ನು ಕೊಡಲಿಲ್ಲ. ಅದಕ್ಕೆ ಕಾರಣ ಅವರಿಗೆ ತಿಳಿವಳಿಕೆ ಸಾಲದೆಂದಲ್ಲ. ನಮ್ಮ ನಾಡಲ್ಲಿ ಬರೆದು ಪ್ರಖ್ಯಾತರಾದವರು ಅವರಿಗಿಂತ ವಿದ್ವಾಂಸರು ಎಂಬುದೂ ಅಲ್ಲ. ತಾವು

ಹೇಳಬಹುದಾದ್ದನ್ನು ಒಬ್ಬ ಮಾರ್ಶಲ್, ಒಬ್ಬ ಕೇನ್ಸ್, ಒಬ್ಬ ಪಿಗೋ, ಒಬ್ಬ ರಸ್ಸೆಲ್ ಇನ್ನೆಷ್ಟೋ ಚೆನ್ನಾಗಿ ಹೇಳಿದ್ದಾರೆ ಎಂಬ ನೆನಪು ಬರುತ್ತದೆ. ಅದನ್ನು ನಮ್ಮ ಸಪ್ಪೆ ಮಾತಿನಲ್ಲಿ ಇನ್ನೇನು ಹೇಳುವದು? ಎನ್ನುತ್ತಿದ್ದರು."

ಇದೇ ಮಾತನ್ನು ವಿ.ಸೀ. ಅವರಿಗೆ ಅನ್ವಯಿಸಬಹುದಾದರೂ ವಿ.ಸೀ. ಅವರ ಇನ್ನೊಂದು ಕೊರಗು ಬೇರೆ ತರಹದ್ದು. ಹೇಳಬೇಕು, ಬರೆಯಬೇಕು; ಎಷ್ಟಾದರೂ ಸಾಲದು. ಆ ಅಪಾರ ಜ್ಞಾನರಾಶಿಯಲ್ಲಿ ನಮ್ಮ ಜನಕ್ಕೆ ಸಿಲುಕಿರುವದು ಒಂದು ಕಣವೂ ಅಲ್ಲ. ಆದರೇನು? ಅಷ್ಟರಲ್ಲಿಯೇ ಸರ್ವಜ್ಞತೆಯ ಜಂಭವನ್ನು ಹೊತ್ತು ಬೀಗುತ್ತಿದ್ದಾರಲ್ಲ! ಇವರಿಗೇನು ಮಾಡೋಣ? ನಾನು ಹೇಳುವಷ್ಟನ್ನೇ ಆದರೂ ಕೇಳುವವರು ಎಲ್ಲಿದ್ದಾರೆ? ನಾನು ಬರೆಯಬಲ್ಲಷ್ಟನ್ನೇ ಪ್ರಕಟಿಸುವವರು ಎಲ್ಲಿದ್ದಾರೆ? ಇದು ವಿ.ಸೀ. ಅವರ ಕೊರಗು.

* * * *

ಯಾರೇ ಕೇಳಲಿ, ಕೇಳಿದವರಿಗೆ ನಿರ್ವ್ಯಾಜನೆಯಿಂದ ಬರೆದುಕೊಟ್ಟಿದ್ದಾರೆ. ವಯಸ್ಕರ ಶಿಕ್ಷಣಕ್ಕೆ ಮೂವತ್ತಾರು ಪುಟಗಳ ಕನ್ನಡ ಪುಸ್ತಿಕೆಯಲ್ಲಿ ಎಷ್ಟು ಹೇಳಬಹುದು? ಹಾಗೆಂದು ಅವರಿಗೆ ತಾತ್ಸಾರವಿಲ್ಲ. "ಧರ್ಮಶಾಸ್ತ್ರ" ಎಂಬ ಪುಸ್ತಿಕೆಯಲ್ಲಿ ಹೇಳುತ್ತಾರೆ: "ಹಿಂದೂ ಧರ್ಮಶಾಸ್ತ್ರವನ್ನು ಕುರಿತು ಬರೆಯುವವರಿಗೆ ಡಾ. ಪಿ. ವಿ. ಕಾಣೆ ಅವರ ಬರವಣಿಗೆಗಳು ಅಮೂಲ್ಯವಾದ ಗಣಿ. ಅವರ ಬರವಣಿಗೆಯ ಋಣ ಈ ಪುಸ್ತಕದ ತುಂಬ ಇದೆ." ಇದು ಉಪಚಾರಕ್ಕೆ ಹೇಳಿದ ಮಾತಲ್ಲ. ಅವರು ಬರೆದದ್ದನ್ನು ಇವರು ಓದಿ ಅರಗಿಸಿಕೊಂಡಷ್ಟನ್ನು ಅದೇ ವಿಷಯದಲ್ಲಿ ನಿಷ್ಣಾತರೆನ್ನುವವರಲ್ಲಿಯೂ ಕಾಣುವದು ವಿರಳ. ಇದನ್ನು ಇವರ ಮಾತಿನಲ್ಲಿಯೂ ಬರಹದಲ್ಲಿಯೂ ಉಲ್ಲೇಖಿಸುವ ಅನೇಕ ಸಂದರ್ಭಗಳಲ್ಲಿ ತಿಳಿಯಬಹುದು. ಅವರೆ ಬರೆದದ್ದು ಇಷ್ಟೇ ಏಕೆ? ಹೆಚ್ಚಿನದನ್ನು ಬಯಸಿ ಯಾರೂ ಬರಲಿಲ್ಲ. ಇಲ್ಲಿ ಬರೆದ ಮೂವತ್ತಾರು ಪುಟಗಳಲ್ಲಿ ಕೇವಲ ಅಕ್ಷರಸ್ಥರಾದವರೂ ತಿಳಿಯಬಹುದಾದ ವಾಕ್ಯಗಳಲ್ಲಿ ಒಂದನ್ನು ಬಿಡುವದಾಗಲಿ ಸಂಕ್ಷೇಪಿಸುವದಾಗಲಿ ಶಕ್ಯವಿಲ್ಲ. ಒಂದೊಂದೂ ಒಂದು ಸೂತ್ರ. ಹೆಚ್ಚಿನ ವಿಷಯವನ್ನು ತಿಳಿಯಬಲ್ಲವರಿಗಾಗಿ ಒಂದೊಂದನ್ನೂ ವಿಸ್ತರಿಸಿ ನೂರಾರು ಪುಟ ಬರೆಯಬಹುದು. ಗಂಟೆ ಗಟ್ಟಲೆ ಮಾತಾಡಬಹುದು.

ಮಾದರಿಗಾಗಿ ನೋಡಬಹುದು—

"ಪ್ರತಿ ದಿನವೂ ಪ್ರತಿಯೊಬ್ಬನೂ ಹಾಸಿಗೆಯಿಂದ ಏಳುವಾಗಿನಿಂದ ಹಿಡಿದು ತಿರುಗಿ ರಾತ್ರಿ ಮಲಗುವವರೆಗೂ, ಮಲಗಿದಾಗಲೂ, ಯಾವ ರೀತಿ ನಡೆದರೆ ಅಥವಾ ನಡೆಯದಿದ್ದರೆ ಸರಿ, ಯಾವ ರೀತಿ ಸರಿಯಲ್ಲ, ಧರ್ಮಕ್ಕೆ ಒಪ್ಪಿತವಲ್ಲ ಎಂಬುದನ್ನು ಧರ್ಮಶಾಸ್ತ್ರಗಳು ತಿಳಿಸುತ್ತವೆ. ಆಪತ್ಕಾಲದಲ್ಲಿ ಹೀಗೆ ನಡೆಯಬಹುದು ಎಂಬ ಅವಕಾಶಗಳು ಪಟ್ಟಿಯಾಗಿರುತ್ತವೆ. ಪ್ರತಿಯೊಬ್ಬನ ಬದುಕಿನಲ್ಲಿಯೂ ಧರ್ಮ ನೆಲೆಗೊಂಡರೆ ಸಮಾಜದ ಬದುಕು ಭದ್ರವಾಗುವುದು, ಶುಚಿ

ಯಾಗುವುದು, ಲೋಕದ ಸುಖ, ಶಾಂತಿ, ಕಾಂತಿ ಹೆಚ್ಚುವುದು, ಎಲ್ಲರಿಗೂ ಇಹ ಪರದ ಎಲ್ಲ ಸೌಖ್ಯಗಳೂ ಉಂಟಾಗುವವು ಎಂಬುದು ಧರ್ಮಶಾಸ್ತ್ರಗಳ ಉಪದೇಶ."

ಇನ್ನೊಂದು—

"ನಮ್ಮ ದೇಶದಲ್ಲಿ ಮನುಷ್ಯನ ಬದುಕೆಲ್ಲ ಅರ್ಥ, ಕಾಮ, ಧರ್ಮ ಎಂಬ ಮೂರು ಪುರುಷಾರ್ಥಗಳನ್ನು ಸಾಧಿಸುವುದರಲ್ಲಿ ತೊಡಗುತ್ತದೆ. ಸಮಾಜದಲ್ಲಿ ಸಂಸಾರಿಗಳಾಗಿ ಬದುಕುವ ಎಲ್ಲರಿಗೂ ಈ ಸಾಧನೆ ಹಿತ ಮಿತದಲ್ಲಿ ಸಲ್ಲುವದು. ಧರ್ಮಕ್ಕೆ ಒಳಪಟ್ಟು ಇತರ ಎರಡನ್ನೂ ಪಡೆದು ಸುಖಿಸಬಹುದು ಎಂಬ ಅವಕಾಶ ಹಿಂದೂ ಧರ್ಮ ಜನಕ್ಕೆ ಮಾಡಿರುವ ದೊಡ್ಡ ಉಪಕಾರ."

ಮತ್ತೊಂದು—

"ಸಂಸ್ಕಾರವೆಂದರೆ ಮೇಲ್ಪಾಡು, ತಿದ್ದುಪಾಡು ಯೋಗ್ಯತೆ ಅಥವಾ ಅಧಿಕಾರ ಸಂಪಾದನೆ, ದೋಷ ಕಳೆದು ಗುಣ ಸಂಪಾದನೆ ಮಾಡಿಕೊಂಡು ಶುದ್ಧವಾಗುವುದು ಎಂಬುದು ಇನ್ನೊಂದು ಅರ್ಥ. ಪ್ರತಿ ದಿನವೂ ಪ್ರತಿ ಸಂಬಂಧದಲ್ಲಿಯೂ ಮನು ಷ್ಯನ ಮನಸ್ಸು ಶುದ್ಧವಾಗಿ ಮೃದುವಾಗಿ ಲೋಕಹಿತಕ್ಕೆ ಸಜ್ಜಾಗಬೇಕು ಎಂಬುದು ತತ್ವ. ಗರ್ಭಾಧಾನದಿಂದ ಹಿಡಿದು ಅಂತ್ಯಕರ್ಮದವರೆಗೂ ಉಪನಯನ, ವಿವಾಹ ಮುಂತಾದ ಅನೇಕ ಸಂಸ್ಕಾರಗಳು ನಡೆಯಬೇಕೆಂದು ವಿಧಿಸಿರುವರು. ಶಿಲ್ಪಿಯ ಉಳಿಯ ಪೆಟ್ಟು ಬಿದ್ದಂತೆಲ್ಲ ಕಲ್ಲಿನಲ್ಲಿ ಮೂರ್ತಿ ಹೇಗೆ ಕಡೆದು ರೂಪುಗೊಂಡು ಚೆಲುವಾಗುವುದೋ ಹಾಗೆ ಈ ಸಂಸ್ಕಾರಗಳು ಮನುಷ್ಯನ ಜೀವವನ್ನು ರೂಪಿಸು ವವು. ಸಮಾಜದಲ್ಲಿ ಅವನಿಗೆ ಸ್ಥಾನ ಗೌರವ ಉಂಟಾಗುವವು."

ಮತ್ತೊಂದು—

"ಶ್ರುತಿ, ಸ್ಮೃತಿ, ಸದಾಚಾರ, ತನ್ನ ಮನಸ್ಸಿಗೂ ಆತ್ಮಕ್ಕೂ ತುಷ್ಟಿ ತರು ವಂಥದು–ಇವು ನಾಲ್ಕು, ಧರ್ಮಕ್ಕೆ ಮೂಲವೆಂದು ಒಂದು ಸ್ಮೃತಿ ಹೇಳುತ್ತದೆ. ಸದಾಚಾರ, ಶಿಷ್ಟಾಚಾರವೆಂದರೆ ಹಿರಿಯರಾದ ಸಜ್ಜನರ ನಡತೆ. ಸ್ವಂತ ತುಷ್ಟಿಗೆ ಅಥವಾ ತನ್ನ ಆತ್ಮಕ್ಕೆ ಪ್ರಿಯವಾದುದು ಎಂದರೆ ಧರ್ಮಿಷ್ಠರಾದವರ ಮನಸ್ಸಿಗೆ ಯಾವದು ಸರಿ ಎಂದು ತೋರಿ ತೃಪ್ತಿ ಉಂಟು ಮಾಡುತ್ತದೆಯೋ ಅದು."

ಮತ್ತೊಂದು—

"ರಾಜನೇ ರಾಷ್ಟ್ರಕ್ಕೆ ಕಾರಣ. ಅವನೇ ಕಾಲಕ್ಕೆ ಕಾರಣ ಎಂಬಂತೆ ಆತನು ಯಾವ ಬಗೆಯಲ್ಲಿ ಧರ್ಮವನ್ನು ಪೋಷಿಸುತ್ತಾನೆಯೋ ಅದಕ್ಕೆ ಹೊಂದಿಕೊಂಡು ಜನದ ಸುಖ–ಸಂಪತ್ತಿ ಬೆಳೆಯುವುವು. ಜನಕ್ಕೆ ರಾಜನೇ ವಿಷ್ಣುವಾದರೆ ರಾಜನಿಗೆ ಸರ್ವ ಪ್ರಜೆಗಳು ವಿಷ್ಣುಸ್ವರೂಪ ಎಂಬುದು ನಂಬಿಕೆ. ಪಟ್ಟಾಭಿಷೇಕ ಕಾಲದಲ್ಲಿ ಆತನು ಮಾಡಿದ ಪ್ರತಿಜ್ಞೆಗಳನ್ನು ನಡೆಸದೆ ಇದ್ದರೆ ಆತನನ್ನು ಶಿಕ್ಷೆಗೆ ಈಡು ಮಾಡಿದ ಸಂದರ್ಭಗಳುಂಟು."

ಕೊನೆಯದಾಗಿ—

"ಆಚಾರ ವ್ಯವಹಾರಗಳಲ್ಲಿ ಕಾಲ ಕಾಲಕ್ಕೆ ಜನದ ಮನಸಿನಲ್ಲಿಯೇ ವ್ಯತ್ಯಾಸಗಳೂ, ಆಯಾ ಸಂದರ್ಭಕ್ಕೆ ತಕ್ಕಂತೆ ಧರ್ಮದ ಆಚರಣೆ ಹೆಚ್ಚು ಸ್ಪಷ್ಟಗೊಳ್ಳುವವೂ ರೂಢಿಯಾಯಿತು....ಅರಿಯದೆ ಇಷ್ಟವಿಲ್ಲದೆ ಬಲವಂತದಿಂದ ಧರ್ಮಭ್ರಷ್ಟರಾದವರನ್ನೂ ಹಾಗೇ ಬಲಾತ್ಕಾರದಿಂದ ಕೆಟ್ಟ ಹೆಂಗಸನ್ನೂ ಉಳಿಸುವ ಮತ್ತು ಹಿಂದಕ್ಕೆ ತೆಗೆದುಕೊಳ್ಳುವ ಅವಕಾಶಗಳನ್ನು ಅವರು (ಶಾಸ್ತ್ರಗಳ ವ್ಯಾಖ್ಯಾನಕಾರರು) ಕಲ್ಪಿಸಿದರು. ಪರದೇಶ ಪರಧರ್ಮಗಳವರು ಇಲ್ಲಿ ಬಂದು ನೆಲಸಿ ಈ ಪದ್ಧತಿ ಸಂಪ್ರದಾಯಗಳನ್ನು ಒಪ್ಪಿ ನಡಸಿಕೊಂಡರೆ ಅವರನ್ನು ಒಳಕ್ಕೆ ಸೇರಿಸಿಕೊಂಡರು. ಶಾಸ್ತ್ರಗಳಿಗೆ ವ್ಯಾಖ್ಯಾನ ಮಾಡುವಾಗಲೂ ಅರ್ಥ ವಿವರಣೆ ಮಾಡುವಾಗಲೂ ಬರಿಯ ಶಾಸ್ತ್ರದ ಮಾತಿಗಾಗಿ ಕಚ್ಚಾಡದೆ ಅದರ ಹೃದಯವನ್ನು ಹಿಡಿದು ಯುಕ್ತಿಯಿಂದ ಪ್ರಯೋಗವನ್ನು ಕಂಡುಕೊಳ್ಳಬೇಕೆಂದು ಸಾರಿದರು."

ಇಂತಹ ಅನರ್ಘ್ಯ ರತ್ನಗಳ ಮೂವತ್ತಾರೇ ಪುಟಗಳ ಒಂದು ಸಂಗ್ರಹ ಇತ್ತೆಂಬುದನ್ನು ನಮ್ಮ ಸಾಹಿತ್ಯಪ್ರಪಂಚ ಇಂದು ಮರೆತಿದೆ. ಏಕೆಂದರೆ ಇದನ್ನು ಮೊದಲು ಪ್ರಕಟಿಸಿದಾಗ ಯುದ್ಧ ಕಾಲದ ಕಾರ್ಪಣ್ಯ, ಕೋರಿ ಕಾಗದ. ಬೆಲೆ ಕೇವಲ ಒಂದೂವರೆ ಆಣೆ. ಬರೆದದ್ದು ಯಾರಿಗಾಗಿ? ವಯಸ್ಕರಾದ ಮೇಲೆ ಅಕ್ಷರ ಕಲಿಯುವವರಿಗಾಗಿ. ಇಂತಹದೊಂದು ಪುಸ್ತಿಕೆ ಪಂಡಿತರ ಕಣ್ಣಿಗೆ ಹೇಗೆ ಕಂಡೀತು? ದಿನ ಪತ್ರಿಕೆಗಳ ತುಂಡುಗಳನ್ನು ಕತ್ತರಿಸಿ ಹೊಳಪು ಕಾಗದದಲ್ಲಿ ಅಚ್ಚು ಹಾಕಿಸಿ ಥಳುಕಿನ ಬೈಂಡು ಹಾಕಿಸಿ ಇಪ್ಪತ್ತು–ಮೂವತ್ತು ರೂಪಾಯಿ ಬೆಲೆ ಇಟ್ಟು ರಾಜಕೀಯದಲ್ಲಿಯೂ ವ್ಯಾಪಾರದಲ್ಲಿಯೂ ಪಳಗಿದ ಪ್ರಕಾಶಕರು ಅವುಗಳನ್ನು ನಮ್ಮ ಪಂಡಿತರುಗಳಿಗೆ ಬಿಟ್ಟಿಯಾಗಿ ಸರಬರಾಜು ಮಾಡಿದರೆ ಆಗ "ಅಹೋ ರೂಪಂ ಅಹೋ ಧ್ವನಿಃ" ಎಂದು ಕುಣಿದಾಡುವ ಈ ಡಬಡ್ಡಾಳಿಕೆಯ ಸಾಹಿತ್ಯಪ್ರಪಂಚಕ್ಕೆ ನಿಜವಾದ ಪಾಂಡಿತ್ಯದ್ದಾಗಲಿ, ಮಾತಿನ ನಿಖರತೆಯದಾಗಲಿ, ನಯಗಾರಿಕೆಯದಾಗಲಿ ಅರಿವು ಮೂಡುವದು ಹೇಗೆ ಸಾಧ್ಯ? ಅದೊಂದು "ಸಂದ ಜೀವನದ ರೀತಿ"ಯಾಗಿ ಹೋಗಿದೆ. ನಮ್ಮ ತಲೆಮಾರಿನವರು ಇರುವವರೆಗೆ ಎಂದಾದರೊಮ್ಮೆ ನೆನಸಿಕೊಂಡು ಈ ದುರವಸ್ಥೆಗೆ ಕಣ್ಣೀರಿಡುವದಕ್ಕಿಂತ ಹೆಚ್ಚಿನದೇನೂ ಆಗಲಾರದೆಂದು ತೋರುತ್ತದೆ.

ಈ 'ಧರ್ಮಶಾಸ್ತ್ರ'ಕ್ಕೆ ಸರಿದೂಗಬಲ್ಲ 'ಕಾನೂನು', 'ನ್ಯಾಯ' ಎಂಬ ಇನ್ನೆರಡು ಪುಸ್ತಿಕೆಗಳನ್ನು ಅದೇ ಅಕ್ಷರ ಕಲಿಯುವ ವಯಸ್ಕರಿಗಾಗಿ ಬರೆದುಕೊಟ್ಟಿದ್ದಾರೆ. ಭಿಕ್ಷುಕರ ತಂಡದಲ್ಲಿ ಮರೆಯಾದ ಅವಧೂತರಂತೆ ಇಂತಹ ಎಷ್ಟು ಕೃತಿಗಳು ಕಣ್ಮರೆಯಾಗಿವೆಯೋ ಗೊತ್ತಿಲ್ಲ. ಏಕೆಂದರೆ ತನ್ನ ಕೃತಿಗಳಿಂದ ತನಗೆ ಬರುವ ಕೀರ್ತಿ ಮುಖ್ಯವಲ್ಲ, ಧನ ಮುಖ್ಯವಲ್ಲ, ತನ್ನ ಚರಿತಾರ್ಥಕ್ಕಾಗುವಷ್ಟು ಬಂದರೆ ಬರಲಿ, ಬರದಿದ್ದರೆ ಬೇಡ, ಜಗತ್ತಿನಲ್ಲೆಲ್ಲಾ ತನ್ನ ಅಳವಿನೊಳಗೆ ಬರುವಷ್ಟು ಜ್ಞಾನ

ಭಂಡಾರವನ್ನು ಸೂರೆ ಮಾಡಿ ಕೇಳಿದವರಿಗೆಲ್ಲ ಕೊಡುಗೈಯಿಂದ ನೀಡುವುದು ಅವರ ಧರ್ಮ. ಮರಾಟಿಗರ ಮಾತಿನಲ್ಲಿ ಪ್ರೀತಿಯ ಗುರು ಶಿಷ್ಯ–ಸಂಬಂಧವನ್ನು ಸೂಚಿಸುವದಕ್ಕೆ ಒಂದು ಮಾತಿದೆ–'ಗುರು ಮಾವುಲೀ' ಎಂದು. ಮಾವುಲೀ ಎಂದರೆ ಎಳಕಂದಿ, ಸದ್ಯದಲ್ಲಿಯೇ ಕರು ಹಾಕಿದ ಹಸು. ಶ್ರೀರೂಪಿಣಿಯೂ ವಿದ್ಯಾರೂಪಿಣಿಯೂ ಆದ ಜಗನ್ಮಾತೆಯ ವಾತ್ಸಲ್ಯವನ್ನು ವರ್ಣಿಸುವಾಗ 'ಯಥಾ ಹಿ ಪುತ್ರ ವಾತ್ಸಲ್ಯಾತ್ ಜನನೀ ಪ್ರಸ್ನುತಸ್ತನೀ, ವತ್ಸಂ ತ್ವರಿತಮಾಗತ್ಯ ಸಂಪ್ರೀಣಯತಿ ವತ್ಸಲಾ' ಎಂಬ ಮಾತಿದೆ. ಹಸಿದ ಕರು ಅಂಬಾ ಎನ್ನುವ ಮೊದಲೇ ಹಸು ತನ್ನ ಕೆಚ್ಚಲಿನಲ್ಲಿ ಹಾಲಿನ ಒತ್ತಡವನ್ನು ತಡೆಯಲಾರದೆ ಧಾವಿಸಿ ಬಂದು ಮೊಲೆಯೂಡುವಂತೆ ಶಿಷ್ಯವತ್ಸಲನಾದ ಗುರು ತನ್ನ ಶಿಷ್ಯನಿಗೆ ವಿದ್ಯೆಯನ್ನೂಡುತ್ತಾನೆ. ಇಲ್ಲವೆ ಊಡುತ್ತಿದ್ದ ಎನ್ನಬೇಕೊ? ಕರುಗಳನ್ನು ಸಾಯಿಸಿ ಹಾಲನ್ನೆಲ್ಲಾ ಮಾರಾಟಕ್ಕೆ ಕರೆಯುವ ಗೌಳಿಗರ ಕೈಯಲ್ಲಿ ಇಂದು ನಮ್ಮ ಹಸುಗಳು ತಮ್ಮ ಚರಿತಾರ್ಥವನ್ನು ಪಡೆಯಬೇಕಾಗಿ ಬಂದಾಗ ಕರು ಬದುಕಿದರೇ ದೊಡ್ಡದು. ವಾತ್ಸಲ್ಯದ ಮಾತೆಲ್ಲಿ?

* * * *

ಸುಮಾರು ಇಪ್ಪತ್ತು ವರ್ಷಗಳ ಹಿಂದಿನ ಮಾತು. ನನಗೆ ಅಯ್ಯನವರ ಪರಿಚಯವಾಗಿ ಆರೆಂಟು ವರ್ಷ ಕಳೆದಿರಬಹುದು. ಕಾಲೇಜಿನಲ್ಲಿಯೂ, ಕಚೇರಿ(ಆಫೀಸು)ಗಳಲ್ಲಿಯೂ ಮೆರೆದು "ಕೋಽಸ್ತ್ಯನ್ಯೋಽಸ್ತಿ ಸದೃಶೋ ಮಯಾ" ಎಂದು ಬೀಗುತ್ತಿದ್ದ ತಾರುಣ್ಯ ಹಸಿಹಸಿಯಾಗಿದ್ದ ಕಾಲ. ಸಾಹಿತ್ಯ ಸಂಸ್ಕೃತಿಗಳ ತಿಳುವಳಿಕೆಯೂ ಅಷ್ಟೇ ಹಸಿ ಹಸಿ. ಇದನ್ನು ಮಾಗಿಸಬೇಕೆಂಬ ಹಂಬಲ ಗುರುಗಳಿಗೆ. ದೆಹಲಿಯಿಂದ ಬೆಂಗಳೂರಿಗೆ ಹೊರಟವರು ಮುಂಬಯಿಯಲ್ಲಿದ್ದ ನನಗೆ ಕಾಗದ ಬರೆದರು. ಇಂತಹ ಒಂದು ಥಿಯೇಟರಿನಲ್ಲಿ ಇಂತಹ ಒಂದು ಪ್ರಖ್ಯಾತವಾದ ಒಪೆರಾದ ಮೂಲ ಪ್ರಯೋಗವೇ ಸಮಗ್ರವಾಗಿ ಟೆಕ್ನಿಕಲರಿನಲ್ಲಿ ಮಾಡಿದ ಚಿತ್ರ ನಡೆಯುತ್ತಿದೆ, ಎರಡು ಸೀಟು ಕಾಯ್ದಿರಿಸಿರು. ನೀನೂ ನೋಡಲೇಬೇಕು ಎಂದು. ಬಂದರು. ಇಪ್ಪತ್ತು ನಾಲ್ಕು ಗಂಟೆಗಳ ರೈಲಿನ ಪ್ರವಾಸದ ದಣಿವನ್ನೂ ಗಣಿಸದೆ (ಆಗಲೇ ಅವರು ನಿವೃತ್ತರಾಗಿ ಕೆಲವು ವರ್ಷಗಳೇ ಸಂದಿದ್ದವು) ಸ್ನಾನ ಊಟ ತೀರಿಸಿ ಥಿಯೇಟರಿಗೆ ಹೋದೆವು. ಇಂದು ಅದೇ ಚಿತ್ರವನ್ನು ಗುರುಗಳ ಜತೆಯಾಗಿ ನೋಡುವ ಭಾಗ್ಯ ನನ್ನದಾದರೆ ಅದು ಹೇಗೆ ಕಂಡೀತೋ ಹೇಳಲಾರೆ. ಅಂದು ಮಾತ್ರ ಆ ಸಂಗೀತದ ಆರ್ಭಟೆ, ಆಕ್ರೋಶ, ಹುಯಿಲು, ಅವನ್ನೂ ಮೀರಿಸುವ ಕಣ್ಣೆರಿಯುವ ಆ ಬಣ್ಣಗಳ ಬೆಳಕು ಅಸಹನೀಯವೆಂದೇ ನನಗೆ ತೋರಿದವು. ನನ್ನ ಅದಮ್ಯವಾದ ಅರಸಿಕ ರನಿಂಗ್ ಕಾಮೆಂಟರಿಯಿಂದ ಗುರುಗಳಿಗೆ ಎಂಥ ಹಿಂಸೆಯಾಯಿತೊ ಕಾಣೆ. ಮೇಲಿಂದ ಮೇಲೆ ಪಿಸ್ತಾ, ಬೀಜಗಳನ್ನೊ, ಚಾಕಲೇಟುಗಳನ್ನೊ, ಐಸ್ ಕ್ರೀಮುಗಳನ್ನೊ ಒಂದೇ ಸಮನೆ ಸರಬರಾಜು ಮಾಡಿದರು. ಚಿತ್ರ ಪಟ ಮುಗಿದ ಮೇಲೆ ಎರಡು ಮೂರು ಗಂಟೆ ಸುತ್ತಾಡಿ, ಕೂತು, ನಿಂತು, ಮಾತಾಡಿ (ಈ ಅವಕಾಶಕ್ಕೆಂದೇ ಆ

ಎರಡು ಗಂಟೆಯ ಹಿಂಸೆಯನ್ನು ಸಹಿಸಿದ್ದು) ಆ ಅಸುಖವನ್ನು ಸರಿದೂಗಿಸಿಕೊಂಡೆ. ಅದರ ನಂತರ ಅಪೆರಾಗಳನ್ನು ನೋಡಿದ್ದೇನೆ. ಬಿಳಿಯರ ಕರಿಯರ ಸಂಗೀತಗಳನ್ನೆಲ್ಲಾ ಕೇಳಿದ್ದೇನೆ. ಅದರಿಂದ ಸ್ವಲ್ಪವಾದರೂ ಸುಖಿಸುವ ಯೋಗ್ಯತೆ ನನಗೆ ಬಂದಿದ್ದರೆ ಅದು ನನ್ನ ಈ ಗುರುಗಳ ಕೃಪೆಯಿಂದಲೇ.

ಹೇಳುವದಕ್ಕೆ ಕಾರಣವೆಂದರೆ, ತಾನು ಕಂಡು ಸುಖಿಸಿದ್ದನ್ನು ತನಗೆ ಪ್ರೀತಿ ಪಾತ್ರರಾದವರಿಗೆ ತೋರಿಸಬೇಕು. ತಾನು ತಿಳಿದದ್ದನ್ನೆಲ್ಲಾ ತನ್ನವರಿಗೆ ತಿಳಿಸಬೇಕು. ತನ್ನವರ (ತನ್ನ ನಾಡವರ) ಬಾಳು ಸಂಮೃದ್ಧವಾಗಬೇಕು, ಸುಸಂಸ್ಕೃತವಾಗಬೇಕು, ಶುಚಿಯಾಗಬೇಕು, ಸುಖಿಯಾಗಬೇಕು ಎಂಬ ಹಂಬಲವನ್ನು ಮಾತಿನಿಂದ ಕೃತಿಗಿಳಿಸಿದ ಇಂತಹ ಇನ್ನೊಬ್ಬರನ್ನು ನಾನು ಕಂಡಿಲ್ಲ. ಇದು ಎಲ್ಲರಿಗೂ ನಿಲುಕಬಲ್ಲ ಜೀವನದ ರೀತಿ ಎಂದು ಅವರ ತಿಳುವಳಿಕೆ. ತನ್ನ ಜೀವನ ದಾರಿ ದೀಪವಾಗಬೇಕೆನ್ನುವದು ಅನಕ್ಕೆ. ಸಾಹಿತ್ಯ ಶಾಸ್ತ್ರಗಳಲ್ಲಿ ಮೇರು ಕೃತಿಗಳನ್ನು ರಚಿಸಿ ತಾನು ದೊಡ್ಡವನೆನಿಸ ಬಹುದು. ಆದರೆ ಅದರಲ್ಲಿ ತನ್ನ ಹಿಂದೆ ನಡೆಯಬಲ್ಲ ಸಾಮರ್ಥ್ಯ, ಅವಕಾಶಗಳು, ಎಷ್ಟು ಜನರಿಗಿದ್ದಾವು? ಅದರಿಂದ ಆ ದಾರಿ ತನ್ನದಲ್ಲ.

ನಾಟಕಗಳನ್ನು ಬರೆದಿದ್ದಾರೆ. ನಮ್ಮ ಪುರಾತನ ಸಾಹಿತ್ಯದಲ್ಲಿ ನಾಟಕೀಯವಾದ ಎಂತಹ ಸನ್ನಿವೇಶಗಳಿವೆ ನೋಡಿ ಎಂದು ತೋರಿಸುವದಕ್ಕೆ. ಆ ಜನಗಳ ಶೀಲ ತೇಜ ಯಾವ ನೆಲೆಯದು ಎಂದು ತೋರಿಸುವದಕ್ಕೆ. ಕೆಲವು ನಾಟಕಗಳನ್ನು ಇಂಗ್ಲಿಷಿನಿಂದ ಭಾಷಾಂತರಿಸಿದ್ದಾರೆ. ನೋಡಿ, ಅವರಲ್ಲಿ ಎಷ್ಟು ಸುಂದರವಾದ ನಾಟಕಗಳಿವೆ, ಆ ನಾಡಿನ ಜನಸಾಮಾನ್ಯರ ಪ್ರಜ್ಞೆ ಆಸಕ್ತಿಗಳು ಎಷ್ಟು ಗಾಢವಾಗಿವೆ ಎಂದು ತೋರಿಸುವದಕ್ಕೆ. ಅರ್ಥಶಾಸ್ತ್ರ, ತತ್ವಶಾಸ್ತ್ರ, ಅಲಂಕಾರ ಶಾಸ್ತ್ರಗಳಲ್ಲಿ ಬರವಣಿಗೆಯನ್ನು ಮಾಡಿದ್ದಾರೆ. ಉದ್ದೇಶ ಯಾವಾಗಲೂ ಅದೇ. ನಾನೆಷ್ಟು ತಿಳಿದಿದ್ದೇನೆ ನೋಡಿ ಎಂಬುದಲ್ಲ. ಪ್ರಪಂಚದಲ್ಲಿ ಎಲ್ಲೆಲ್ಲಿ ಏನೇನು ನೋಡಬೇಕಾದದ್ದಿದೆ, ತಿಳಿಯಬೇಕಾದದ್ದಿದೆ, ಅನುಕರಿಸಬೇಕಾದದ್ದಿದೆ ಎಂದು ತೋರಿಸುವದಕ್ಕೆ ಎಷ್ಟು ಬೇಕೋ ಅಷ್ಟೇ. ಆ ಎಲ್ಲ ಕೃತಿಗಳನ್ನು ಕುರಿತು ನನಗಿಂತಲೂ ಹೆಚ್ಚು ತಿಳಿದವರಾದ ನನ್ನ ಅನೇಕ ಮಿತ್ರರು ಬರೆದಿದ್ದಾರೆ. ಗುರುಗಳು ಕೇವಲ ತಮ್ಮ ಸಂತೋಷಕ್ಕೆಂದು ಬರೆದುವು ಕವಿತೆಗಳು ಮಾತ್ರ ಎಂದು ತೋರುತ್ತದೆ. ಅಲ್ಲಿ ಕೂಡ ಆ ಸಂತೋಷವನ್ನು ಇನ್ನೊಬ್ಬರಿಗೆ ಹಂಚಿಕೊಡಬಹುದಾದರೆ ಅವರ ಸಂತೋಷ ಹೆಚ್ಚಾಗಿ ಉಕ್ಕುತ್ತದೆ. ಅಂತಹ ಒಂದು ಕೃತಿ ಅವರ ಲಾಲ್‌ಬಾಗ್ ಕುರಿತದ್ದು. ಅದನ್ನು ಓದಿ ಸಾವಿರಾರು ಜನ ಸಂತೋಷ ಪಟ್ಟಿದ್ದಾರೆ. ಆದರೆ ಆ ಕವಿಯ ಜತೆ ಲಾಲ್‌ಬಾಗ್ ನೋಡುವ ಭಾಗ್ಯ ಎಷ್ಟು ಜನಕ್ಕೆ ದೊರೆಯುವದು ಸಾಧ್ಯ? ಅದನ್ನು ಪಡೆದ ಭಾಗ್ಯಶಾಲಿಗೆ ಅದರ ನೆನಪು ಒಂದು ಜೀವಮಾನದ ಆಸ್ತಿ. ಚಾಮರಾಜಪೇಟೆಯ ಅವರ ಮನೆಯಿಂದ ಸಾಹಿತ್ಯ ಪರಿಷತ್ತಿನ ಕಟ್ಟಡವನ್ನು ಬಲಗೊಂಡು ಲಾಲ್‌ಬಾಗ್ ವರೆಗಿನ ಮಾರ್ಗವನ್ನು ಅವರೆಷ್ಟು ಜನರ ಜತೆ ಎಷ್ಟು ಸಾವಿರ ಸಲ ನಡೆದಿದ್ದಾರೋ!

ಪ್ರತಿ ಸಲವೂ ಅವರಲ್ಲಿ ಅದೇ ಉಲ್ಲಾಸ ಉತ್ಸಾಹಗಳು ಉಕ್ಕುತ್ತವೆ. (ಇದರಲ್ಲಿ ಒಂದು ಕಾಲಗತಿಯಲ್ಲಿ ಅನಿವಾರ್ಯವಾದ ವಿಕಲ್ಪವನ್ನು ಹೇಳದಿದ್ದರೆ ಅವರು ನನ್ನನ್ನು ಕ್ಷಮಿಸಲಾರರು. ಅದು ಮೋಟಗಾನಹಳ್ಳಿ ಸುಬ್ರಹ್ಮಣ್ಯ ಶಾಸ್ತ್ರಿಗಳ ಅಗಲಿಕೆ. ಆ ದಾರಿ ವರ್ಷಾನುವರ್ಷ ಅವರಿಬ್ಬರೂ ಜತೆಯಾಗಿ ನಡೆದ ದಾರಿ. ಶಾಸ್ತ್ರಿಗಳ ಅಗಲಿಕೆಯಾದ ಮೊದಲ ಕೆಲವು ವರುಷಗಳಲ್ಲಿ ಆ ದಾರಿಯಲ್ಲಿ ನಡೆಯುವದೇ ಅವರಿಗೆ ಅಸಹನೀಯವಾದ ವೇದನೆಯಾಗಿದ್ದನ್ನು ಕಂಡಿದ್ದೇನೆ. ಕಾಲಗತಿಯಿಂದಲೂ ಸಂತತವಾದ ಅವರ ಜೀವನ ಸಂಸ್ಕಾರದಿಂದಲೂ ಇಂದು ಆ ಭಾವವೂ ರಸಸ್ಥಿತಿಗೆ ನಿಲುಕಿದೆ ಎಂದುಕೊಂಡಿದ್ದೇನೆ.) ದಾರಿಯುದ್ದಕ್ಕೂ ಒಂದೊಂದು ಮರ ಮೊದಲು ಹೇಗಿತ್ತು, ಇಂದು ಹೇಗಿದೆ, ಇಂದು ಇಲ್ಲವಾದ ಮರಗಳು ಎಲ್ಲಿದ್ದವು, ಅವುಗಳಲ್ಲಿ ಒಂದೊಂದಕ್ಕೂ ವಿಶಿಷ್ಟವಾಗಿದ್ದ ಚೆಲುವು ಎಂತಹುದು, ಯಾವ ಮನೆಗಳಲ್ಲಿ, ಯಾವ ಹಿರಿಯ ಜೀವಗಳು ವಾಸಿಸಿದ್ದವು, ಎಲ್ಲಿ ಯಾವ ಸಾಹಿತ್ಯ ಸಂಗೀತ ಸಲ್ಲಾಪಗಳಲ್ಲಿ ಯಾರು ಭಾಗಿಗಳಾಗಿದ್ದರು, ಆಯಾ ಸಂದರ್ಭದ ವಿಶಿಷ್ಟ ಆಕರ್ಷಣೆ ಯಾವುದಾಗಿತ್ತು ಎಂದೆಲ್ಲಾ ಅವರು ವಿವರಿಸುತ್ತ ಹೊರಟರೆ ಅರ್ಧ ಶತಮಾನದ ಬೆಂಗಳೂರಿನ ಸಾಮಾಜಿಕ ಸಾಹಿತ್ಯಿಕ ಸಾಂಸ್ಕೃತಿಕ ಇತಿಹಾಸ ಕಣ್ಣೆದುರಲ್ಲಿ ಕುಣಿಯುತ್ತದೆ. ಅದನ್ನೆಲ್ಲ ಅಂದಂದೇ ವಿವರವಾಗಿ ಬರೆದಿಟ್ಟಿದ್ದರೆ ನನಗೂ ಒಬ್ಬ ಪ್ಲೇಟೋನ ಕೀರ್ತಿ ಬರುತ್ತಿತ್ತೇನೋ. ಆ ಬುದ್ಧಿ ನನಗೆ ಬರಲಿಲ್ಲ. ಆಗ ನನ್ನ ಕಚೇರಿ ಕಾರ್ಖಾನೆ ಕಾರುಭಾರೇ ದೊಡ್ಡದೆಂದುಕೊಂಡೆ. ಮನುಷ್ಯಪ್ರಪಂಚವೇ ಹೀಗೆ ಎಂದುಕೊಂಡಿದ್ದೇನೆ. ತನ್ನ ಅನೇಕ ಭಾಗ್ಯಗಳಲ್ಲಿ ದೊಡ್ಡ ಭಾಗ್ಯ ಯಾವುದು ಎಂದು ತಿಳಿಯುವದಕ್ಕೇ ಬಹುಕಾಲ ಕಳೆಯುತ್ತದೆ. ಉಳಿದದ್ದೆಷ್ಟು ಎನ್ನುವ ಭರವಸೆ ಯಾರು ಕೊಡಬಲ್ಲರು? ಹೀಗೆ ಎಷ್ಟು ಜನರ ಎಷ್ಟು ಆಕಾಶಕುಸುಮಗಳು ಆಕಾಶದಲ್ಲಿಯೇ ಕರಗಿ ಹೋಗಿವೆಯೋ ಯಾರು ಬಲ್ಲರು? ಹೋಗಲಿ. ಲಾಲ್‌ಬಾಗ್ ತಲುಪಿದ ಮೇಲೆಯೂ ಪ್ರತಿಯೊಂದು ಗಿಡ ಮರ ಹೂವಿನಲ್ಲಿ ಇಂದು ಈಗ ನೋಡಬೇಕಾದದ್ದೇನು, ವರುಷದ ಬೇರೆ ಬೇರೆ ತಿಂಗಳುಗಳಲ್ಲಿ ಅದು ಹೇಗೆ ಕಾಣುತ್ತದೆ, ದಿನ ರಾತ್ರಿಯ ಬೇರೆ ಬೇರೆ ಜಾವಗಳಲ್ಲಿ ಹೇಗೆ ಕಾಣುತ್ತದೆ, ಎಂದು ಯಾವ ಹಕ್ಕಿ ಎಲ್ಲಿ ಹೇಗೆ ನುಡಿಯುತ್ತದೆ, ಹುಲ್ಲುಗಾವಲಿನಲ್ಲಿ ಎಲ್ಲಿ ಯಾವಾಗ ಮೈಗೆ ಹಿತವಾಗಿರುತ್ತದೆ, ಎಳಬಿಸಿಲಿನ ಕಾಂತಿಯನ್ನೂ ಕಡುಬಿಸಿಲಿನ ತೇಜವನ್ನೂ ಇಳಿಬಿಸಿಲಿನ ಶಾಂತಿಯನ್ನೂ ಎಲ್ಲಿ ನಿಂತು ಹೇಗೆ ಅನುಭವಿಸಬೇಕು, ಎಂದೆಲ್ಲಾ ಅವರಿಗೆ ಗೊತ್ತು. ಅದನ್ನು ಬರಿಯ ವರ್ಣಿಸಿದ ಮಾತ್ರಕ್ಕೆ ಅವರಿಗೆ ತೃಪ್ತಿಯಿಲ್ಲ. ಸಾಧ್ಯವಿದ್ದಷ್ಟನ್ನೆಲ್ಲಾ ನಿಮಗೆ ನಿಮ್ಮ ಮೈ ಮನಸುಗಳಿಗೆ ಕಾಣಿಸಿದಷ್ಟೂ ಅವರಿಗೆ ತೃಪ್ತಿಯೆಂಬುದಿಲ್ಲ. ನನ್ನ ಬಡ ಕಣ್ಣು ಕಿವಿ ಮೂಗು ಮೈಗಳಿಗೆ ಇಷ್ಟೊಂದು ಪ್ರಯೋಜನಗಳುಂಟೆ? ಅವುಗಳಿಗಾಗಿ ಪ್ರಪಂಚದಲ್ಲಿ ಇಷ್ಟೊಂದು ಭಾಗ್ಯವನ್ನು ಯಾರು ಸೂರೆ ಮಾಡಿದ್ದಾರು? ವಿಶ್ವರೂಪ ದರ್ಶನವೆಂದರೆ ಇಂಥಾದ್ದೇ ಏನೋ ಇದ್ದೀತೇನೋ ಎಂದುಕೊಂಡಿದ್ದೇನೆ.

ಶಾಶ್ವತವೆಂದು ತಿಳಿದುಕೊಂಡಿರುವ ಕೀರ್ತಿಗಿಂತ ತತ್ಕಾಲಕ್ಕೆ ಓತಕಾರಿಯಾದ ಜ್ಞಾನಪ್ರಸಾರ ಮುಖ್ಯ ಎಂಬ ಅವರ ನಿಲುವಿನಿಂದಾಗಿ ಕೇಳಬಯಸುವವರಿಗೆ ಹೇಳುವದಕ್ಕೂ ಪತ್ರ ಪತ್ರಿಕೆಗಳಲ್ಲಿ ಬರೆಯುವದಕ್ಕೂ ತಾತ್ಕಾಲಿಕ ಪ್ರಚಾರ ಸಾಹಿತ್ಯವೊದಗಿಸುವದಕ್ಕೂ ಅವರು ಬೇಸರ ಪಟ್ಟವರಲ್ಲ. ಅಂತಹ ಒಂದು ಕೃತಿ "ಭಾರತದ ರಾಜ್ಯಾಂಗ ರಚನೆ". ನಿಮ್ಮ ರಾಜ್ಯವನ್ನು ನಿಮಗೆ ಒಪ್ಪಿಸಿ ಹೋಗುತ್ತೇವೆ ಎಂದು ಬ್ರಿಟಿಷರು ಭಾರತೀಯರಿಗೆ ಹೇಳಿದ ನಂತರ ಅಧಿಕಾರದ ಹಸ್ತಾಂತರ ನಡೆಯುವವರೆಗಿನ ಹದಿನಾರು ಹದಿನೆಂಟು ತಿಂಗಳ ಮಧ್ಯಂತರದಲ್ಲಿ ಪ್ರಕಟವಾದ ೧೦೦+೨೪ ಪುಟಗಳ ಪ್ರಕಟನೆ. ಆಗ ಇನ್ನಾವ ವಿದ್ವಾಂಸರನ್ನು ಕೇಳಿದ್ದರೂ ಸ್ವಲ್ಪ ಇರಿ, ಇಂದು ಹೀಗೆ ಇದ್ದದ್ದು ನಾಳೆ ಹೇಗೋ, ಈಗ ಬರೆದು ಏನು ಪ್ರಯೋಜನ, (ಬರೆದವನಿಗೆ?) ಎನ್ನಬಹುದಿತ್ತು. ಅದು ತನ್ನ ಜವಾಬ್ದಾರಿಯನ್ನು ಅರಿತ ರಾಷ್ಟ್ರಕನ ಮಾತಲ್ಲ ಎಂದಾರು ವಿ. ಸೀ. ರಾಜ್ಯಾಂಗಸಭೆ ನಡೆಯುತ್ತಿದೆ. ಸಿಕ್ಕಾಪಟ್ಟೆ ವಾದಗಳನ್ನು ಮಂಡಿಸುತ್ತಿದ್ದಾರೆ. ಇದರಲ್ಲಿ ಸರಿ ಯಾವುದು, ತಪ್ಪು ಯಾವುದು, ನಮ್ಮ ಜನಕ್ಕೆ ತಿಳಿಯಬೇಡವೆ? ಸರಿಯಾದದ್ದನ್ನು ಅವರು ಸಮರ್ಥಿಸಬೇಡವೆ? ಸರಿಯಾದದ್ದು ಸಮರ್ಥನೆಯಿಲ್ಲದೆ ಬಿದ್ದುಹೋದರೆ ನಮ್ಮ ರಾಷ್ಟ್ರದ ಕಲ್ಯಾಣ ಹೇಗಾದೀತು? ಆ ಕಲ್ಯಾಣ ಸಾಧಿಸುವುದಕ್ಕೆ ಹೇಳಬೇಕಾದದ್ದೆಲ್ಲವನ್ನೂ ಒಂದೇ ನೂರು ಪುಟಗಳಲ್ಲಿ ಎಷ್ಟು ಅಡಕವಾಗಿ ಎಷ್ಟು ನಿಖರವಾಗಿ ಎಂತಹ ವಿಚಕ್ಷಣೆಯಿಂದ ಹೇಳಿದ್ದಾರೆನ್ನುವದನ್ನು ಮೂಲಕೃತಿಯನ್ನೇ ಆಮೂಲಾಗ್ರವಾಗಿ ಓದದೆ ತಿಳಿಯುವದು ಕಷ್ಟ. ಆದರೂ ಕೆಲವು ಅವತರಣಿಕೆಗಳನ್ನು ಕೊಡುವ ಸಾಹಸ ಮಾಡುತ್ತೇನೆ. (೧೯೪೬ರಲ್ಲಿ) ಹಿಂದಿನ ದ್ವೇಷಾಸೂಯೆಗಳನ್ನು ನೆನೆಯುವುದು ತಕ್ಕುದಲ್ಲ ಎನ್ನುವದಕ್ಕೆ—

"ಬ್ರಿಟಿಷರು ಉಳಿದ ಏನನ್ನೂ ಮಾಡಲಿ, ಬಿಡಲಿ, ಸಮಗ್ರ ಭರತಖಂಡವು ಒಂದು ಆಳಿಕೆಗೆ ಒಳಪಟ್ಟು ಒಂದು ಬಗೆಯ ಲೌಕಿಕ ಜೀವನವನ್ನು ಬೆಳಸುವ ವ್ಯಕ್ತಿತ್ವವು ಈ ನಾಡಿಗೆ ಬರುವಂತೆ—ನೇರವಾಗದಿದ್ದರೆ ಪರೋಕ್ಷವಾಗಿ ಉಂಟಾಗುವಂತೆ —ಮಾಡಿದರು. ಸುಮಾರು ನೂರು ವರ್ಷಗಳ ಕಾಲ ನಾಡಿನಲ್ಲಿ ಒಂದು ಶಾಂತಿ ನೆಲಸಿತು. ಜನಕ್ಕೆ ಸುರಕ್ಷಣೆ ದೊರೆಯಿತು. ಈ ಕಾಲದಲ್ಲಿ ನಾಡಿನ ಬೇರೆ ಜನವರ್ಗಗಳವರು ತಮ್ಮ ಕೆಲಸಗಳಲ್ಲಿ ತೊಡಗಿ ವಿದ್ಯೆ, ವಿಜ್ಞಾನ, ಯಂತ್ರನಿರ್ಮಾಣ, ರಾಜಕೀಯ ಪ್ರಭಾವ ಸಾಧನೆ, ವ್ಯಾಪಾರ, ವ್ಯವಹಾರ, ದೇಶವಿದೇಶ ಪ್ರಯಾಣ, ಲೋಕಪರಿಜ್ಞಾನ ಮುಂತಾದ ಜೀವನದ ನೂರಾರು ಮುಖಗಳಲ್ಲಿ ತಮ್ಮ ಸ್ಥಿತಿ-ಗತಿಗಳನ್ನು ಉತ್ತಮಗೊಳಿಸಿಕೊಳ್ಳಲು ಅವಕಾಶ ದೊರಕಿತು."

ಬ್ರಿಟನ್ನು ಸ್ನೇಹಸಂಧಾನಕ್ಕೆ ಏಕೆ ಮುಂದಾಯಿತು ಎಂದು ಹೇಳುತ್ತ: "ತಾವು ದರ್ಪ ದಬ್ಬಾಳಿಕೆಗಳಿಂದ ಮಾತ್ರವೇ ನಡೆದರೆ ಈ ದೇಶದ ಹದ ಕೆಟ್ಟು ಈ ಜನತೆ ಪೂರ್ತಿ ತಮ್ಮ ವಿರೋಧಿ ಮಂಡಲಗಳ ಆಶ್ರಯವನ್ನೂ ಸಹಾಯವನ್ನೂ

ಬಯಸಿ ಹೋಗಬಹುದು; ಆ ಇತರ ಪ್ರಭಾವ ಮಂಡಲಗಳಿಗೆ ಸೇರಿಕೊಳ್ಳಬಹುದು. ಇದನ್ನು ಬೇರೆ ತಪ್ಪಿಸಬೇಕಾಗಿದೆ. ತಮ್ಮ ವ್ಯಾಪಾರ ಮತ್ತು ಸಾಂಪತ್ತಿಕ ಸ್ಥಿತಿಗಳು ಒಟ್ಟಿನಲ್ಲಿ ಕೆಡದಂತೆಯೂ, ತಮ್ಮ ಉದ್ಯೋಗ ಲೌಕಿಕಜೀವನ ಸುಸೂತ್ರವಾಗಿ ನಡೆಯುವಂತೆಯೂ ಎಲ್ಲೆಲ್ಲಿಯೂ ಮೈತ್ರಿಗಳನ್ನೂ ವಿಶ್ವಾಸಗಳನ್ನೂ ಉಳಿಸಿಕೊಳ್ಳ ಬೇಕಾಗಿದೆ. * * * ತನ್ನ ದೇಶದೊಳಗೆ ತನ್ನ ಮನೆಯನ್ನು ಬಲಪಡಿಸಿಕೊಂಡು ಹಸನುಮಾಡಿಕೊಳ್ಳಬೇಕಾದ ಅಗತ್ಯ ಹಾಸುವಷ್ಟು ಹೊದೆಯುವಷ್ಟು ಇದೆ. * * * ಯುರೋಪಿನಲ್ಲಿಯೇ ಅವರ ಸ್ಥಾನಮಾನಗಳನ್ನು ಉಳಿಸಿಕೊಳ್ಳಲು ಬೇಕಾದಷ್ಟು ಸಂಕಟಗಳಿವೆ. ರಷ್ಯಾ ಅಮೆರಿಕಾ ನಡುವೆ ಸಿಲುಕಿ ಆ ಮಹಾರಾಷ್ಟ್ರಗಳ ಮೈತ್ರಿ ಗಳನ್ನು ಒಂದು ಹದದಲ್ಲಿ ನಡಸಬೇಕಾದ ಅಗತ್ಯ ಸ್ವಂತವಾಗಿ ತನ್ನ ಕ್ಷೇಮ ಲಾಭ ಗಳಿಗೂ ಶಾಂತಿಗೂ ಬೇಕು.”

ಈ ಕಾರಣಗಳಿಂದಾಗಿ ಅವರು ನಮಗೆ ಅಧಿಕಾರವನ್ನೊಪ್ಪಿಸಿದರೆ ನಾವು ಎಂತಹ ಸರಕಾರವನ್ನು ರಚಿಸಿಕೊಳ್ಳಬೇಕು ಎಂದು ಹೇಳುತ್ತ—

“ಎಲ್ಲಿ ದೇಶದ ವಯಸ್ಕರೆಲ್ಲರೂ ನೇರವಾಗಿಯೋ ಕಾಲಕಾಲಕ್ಕೊ ತಮ್ಮ ಅಭಿಮತಗಳನ್ನು ಧಾರಾಳವಾಗಿ ನಿರಾತಂಕವಾಗಿ ತಿಳಿಸಿಕೊಡಲು ಅವಕಾಶವಿರು ತ್ತದೆಯೊ; ಅಂಥವರ ಬಹುಮತಕ್ಕೆ ಒಳಪಟ್ಟ ರಾಜ್ಯಾಧಿಕಾರ ನಡೆಯುತ್ತದೆಯೊ; ಯಾವಲ್ಲಿ ಅಧಿಕಾರಿ ವರ್ಗಗಳವರು ಮೂಲಭೂತವಾದ ಹಕ್ಕುಗಳನ್ನೂ ಸ್ವಾತಂತ್ರ್ಯ ಗಳನ್ನೂ ಜನಸಾಮಾನ್ಯರೆಲ್ಲರಿಗೂ ಒದಗಿಸಲು ನಿಯಮಬದ್ಧರಾಗಿರುವರೊ; ಎಲ್ಲಿ ಒಂದು ಕಾನೂನಿಗೆ ಪ್ರಾಧಾನ್ಯವಿದ್ದು ಕಾನೂನಿನ ಎದುರು ಹಿರಿಕಿರಿಯರು, ಸಿರಿ ವಂತರು ಬಡವರು, ಗಂಡಸರು, ಹೆಂಗಸರು, ಎಲ್ಲರೂ ಸಮವೊ; ಎಲ್ಲಿ ಜೀವನ ಮತ್ತು ಏಳ್ಗೆಯ ಎಲ್ಲ ಅವಕಾಶವೂ ಪಕ್ಷಪಾತಗಳಿಲ್ಲದೆ ಸಮವಾಗಿ ಏರ್ಪಡುವವೊ; ಎಲ್ಲಿ ಈ ಬಗೆಯ ಜೀವನವನ್ನು ಸಾಧಿಸಲು ಅನುಕೂಲ ವಿದ್ಯಾಶಿಕ್ಷಣವೂ ಸೌಲಭ್ಯಗಳೂ ಜೀವನದ ಬಗೆಬಗೆಯ ಪರೀಕ್ಷಾ ಪ್ರಯೋಗ ಮಾಡುವ ಅವಕಾಶಗಳು ಇರುತ್ತ ವೆಯೋ; ಎಲ್ಲಿ ಅಧಿಕಾರ ವರ್ಗಕ್ಕೆ ವಿರೋಧವಾದಾಗ ಕೂಡ, ಸದ್ಯದ ಸಮಾಜ ವ್ಯವಸ್ಥೆಗೆ ವಿರೋಧವೆಂಬಂತೆ ಕಂಡಾಗ ಕೂಡ, ಬೆಳೆದು ಪ್ರಬಲಿಸಲು ಯೋಜನಾ ಸ್ವಾತಂತ್ರ್ಯವೂ, ವ್ಯಕ್ತಿಸ್ವಾತಂತ್ರ್ಯ, ಸಭಾಸ್ವಾತಂತ್ರ್ಯ, ಕ್ರಿಯಾಸ್ವಾತಂತ್ರ್ಯ, ಪೂಜಾಸ್ವಾತಂತ್ರ್ಯ, ಸಂಸ್ಥೆಗಳನ್ನು ರಚಿಸುವ ಸ್ವಾತಂತ್ರ್ಯ ಇರಬಲ್ಲವೊ ಅಲ್ಲಿ ಪ್ರಜಾ ಪ್ರಭುತ್ವ ನಡೆಯುತ್ತದೆ.”

ಆ ಮೇಲೆ ಫೆಡರಲ್ ಎನಿಸುವ ವ್ಯವಸ್ಥೆಗಳು ಎಷ್ಟು ಬಗೆಯಾಗಿರಬಹುದು, ನಮ್ಮ ದೇಶದಲ್ಲಿ ಬೆಳೆದು ಬಂದ ವ್ಯವಸ್ಥೆಗಳಿಂದ ಅನುಕೂಲವೆಷ್ಟು, ಪ್ರತಿಕೂಲ ವೆಷ್ಟು, ಇಂದು ನಮ್ಮ ಮುಂದಿರುವ ಸಾಧ್ಯಾಸಾಧ್ಯತೆಗಳೇನು, ಅಂತಹ ವ್ಯವಸ್ಥೆ ಯನ್ನು ರೂಪಿಸುವ ರಾಜ್ಯಾಂಗ ಸಭೆಯ ಲಕ್ಷಣಗಳೇನು ಎಂಬುದನ್ನೆಲ್ಲ ವಿವರಿಸಿ—

“ಈಗ ಇಂಡಿಯಾ ದೇಶದವರ ಮುಂದೆ ಇರುವ ಕನ್‌ಸ್ಟಿಟ್ಯುಯೆಂಟ ಅಸ್ಸೆಂಬ್ಲಿ

ಯಲ್ಲಿ ಈ ಜಾಪ ಮುಖ್ಯ ಲಕ್ಷಣಗಳೂ ಇಲ್ಲ. ಸರ್ವಸ್ವತಂತ್ರ ಪರಮಾಧಿಕಾರವುಳ್ಳ, ವಯಸ್ಕರಾದ ಎಲ್ಲ ಪ್ರಜೆಗಳೂ ಆರಿಸಿದ ಪ್ರತಿನಿಧಿಗಳುಳ್ಳ ಸಮಿತಿ ಅಲ್ಲ ಅದು. ತನ್ನ ಇಷ್ಟಕ್ಕೆ ಒಳಪಟ್ಟು ಅದು ಬೇಕಾದಂತೆ ಕಾರ್ಯಾಲೋಚನೆ ಪ್ರಯತ್ನ ನಿರ್ಣಯ ಮಾಡುವಹಾಗಿಲ್ಲ. ಅದನ್ನು ನಡೆಸುವ ಸ್ಟಿಯರಿಂಗ್ ಕಮಿಟಿಯವರು ಸ್ವತಂತ್ರ ಸರ್ವಾಧಿಕಾರವುಳ್ಳವರಲ್ಲ. ಅದಕ್ಕೆ ಎಲ್ಲ ಪಕ್ಷಗಳವರೂ ಇನ್ನೂ ಸೇರಿಲ್ಲ. ಅದರಲ್ಲಿ ಭಾಗವಹಿಸುತ್ತಿರುವ ಎಲ್ಲ ಜನದ ಚಿತ್ತಭೂಮಿಯೂ ಒಮ್ಮನವಾದದ್ದಲ್ಲ.”

ಈ ಅನನುಕೂಲಗಳನ್ನೆಲ್ಲ ಎದುರಿಸಿ ತನಗೆ ಅನ್ಯರ ಸರಕಾರ ವಿಧಿಸಿದ ಕಟ್ಟಿನಲ್ಲಿ ಒಂದು ರಾಜ್ಯಾಂಗ ರೂಪಿಸುವದಕ್ಕೆ ಈ ಸಭೆ ಯತ್ನಿಸುತ್ತಿರುವಾಗ—

“ಇನ್ನೂ ಬ್ರಿಟಿಷ ಸರ್ಕಾರದವರೇ ಒಡೆಯರಾಗಿ ಮೇಲೆ ಕುಳಿತು ಕಾರ್ಯಗಳನ್ನು ನಡೆಸುತ್ತಿದ್ದಾರೆ * * * ನಡುಗಾಲದ ಆಡಳಿತ ಮಂಡಲದ ರಚನೆಯಲ್ಲಿ ಮೂಲತಃ ವಿರಸವಿದೆ. ಮುಸ್ಲಿಂ ಲೀಗ ಪಕ್ಷದವರಿಗೂ ಉಳಿದವರಿಗೂ ಉದ್ದೇಶದಲ್ಲಿಯೂ, ಭಕ್ತಿಯಲ್ಲಿಯೂ ತಂತ್ರದಲ್ಲಿಯೂ ಸಂಪೂರ್ಣ ಭಿನ್ನತೆ ಇದೆ. ಈ ವಿರಸ ಮುರಿಯದಾದರೆ ಆಡಳಿತದ ಹದ ಕೆಡುವದು. ಈ ಸಂಧಿಕಾಲದಲ್ಲಿ ರಾಜಕೀಯ ದೃಷ್ಟಿಯಿಂದಂತೂ ಪರಮ ದುರ್ಬಲತೆಯ ಕುರುಹು ಅದು. ನಾಡಿನಲ್ಲಿ ಪ್ರಬಲಿಸಿರುವ ವಿಷಮ ಅನೈಕ್ಯತೆ - ಈ ಕೇಂದ್ರಾಡಳಿತದಲ್ಲಿಯೂ ನಾಡನ್ನು ಒಡೆಯುವ ಸಂಕೇತವಾಗಿ ಪ್ರಭಾವವಾಗಿ ನಿಲ್ಲುವುದು.”

ಆಗಬಾರದೆಂದದ್ದು ಆಗಿಯೇ ಹೋಯಿತು.

ಇಂತಹ ಇಕ್ಕಟ್ಟಿನಲ್ಲಿ ಇಂತಹ ಜವಾಬುದಾರಿ ಕೆಲಸ ನಡಸುವದಕ್ಕೆ ನಮ್ಮ ನಾಯಕರು ಒಪ್ಪಿದ್ದೇಕೆ ಎಂದು ವಿವರಿಸುತ್ತ—

“ಇದಕ್ಕೆ ಒಪ್ಪದಿದ್ದರೆ ದೇಶದಲ್ಲಿ ಮುಖ್ಯ ಪಕ್ಷಗಳವರಿಗೆ ಕಾದಾಟವೇ ಸಿದ್ಧ. ಅಶಾಂತಿ - ರಕ್ತಪಾತಗಳೇ ಗತಿ. ಅಂತಹ ಸನ್ನಿವೇಶ ಒದಗಿ ಬ್ರಿಟಿಷರು ತಮ್ಮ ಸೈನ್ಯದೊಡನೆ ಪ್ರಭಾವಯುತರಾಗಿ ಒಳಗೇ ಉಳಿದಿದ್ದರೆ ಪರಿಸ್ಥಿತಿಯ ತೊಡಕು ಮತ್ತೂ ಭೀಕರವಾಗುವದು. ತಮ್ಮ ಅಧಿಕಾರ ನಡೆಯುವವರೆಗೂ ಒಳಗೆ ಕ್ರಾಂತಿ - ಅರಾಜಕತೆ ಅರಕ್ಷಣೆಗಳನ್ನು ನಿವಾರಿಸಬೇಕಾದ ಪ್ರಥಮ ಕರ್ತವ್ಯವನ್ನು ಹೊತ್ತ ಅಗತ್ಯ. ಇಲ್ಲಿಯೋ ಕೋಮುವಾರು ಕಲಹಗಳಲ್ಲಿ ಒಂದು ಕಡೆ ಕೋಮುವಾರಾದ, ಇನ್ನೊಂದು ಕಡೆ ಪ್ರಾಂತಗಳ ಸ್ವಾಧೀನತೆಯನ್ನು ಮುಟ್ಟ ಮಾಡುವ ವ್ಯವಹಾರದಲ್ಲಿ ಕೈಹಾಕಿದಂತಾಗುತ್ತದೆ. ಪಕ್ಷಪಾತದ ದೂರೂ ಸಂಶಯಗಳೂ ಹಬ್ಬುವದು ಖಂಡಿತ. ಉದಾಸೀನರಾಗಿ ತಟಸ್ಥರಾಗಿ ಇರುವೆವೆಂದರೆ ಅದೂ ಕಷ್ಟ.”

ಇದನ್ನು ಬರೆದ ಇಪ್ಪತ್ತೇಳು ವರ್ಷಗಳ ನಂತರ ಎಲ್ಲ ಅನರ್ಥಗಳೂ ನಡೆದಾದ ಮೇಲೆ, ಅಂದಿನ ಕಾಲದಲ್ಲಿ ಸಂಯುಕ್ತ ಬಂಗಾಳದ ರಾಜ್ಯ ಸಚಿವಾಲಯದಲ್ಲಿ ಆಯ ಕಟ್ಟಿನ ಸ್ಥಾನದಲ್ಲಿ ಅಧಿಕಾರಿಗಳಾಗಿದ್ದ ಶ್ರೀ ಮಾಥುರ್ ಎಂಬವರು ಅಂದಿನ

ಕಲಕತ್ತೆಯ ಮಾರಣಹೋಮದಲ್ಲಿ ಒಂದುಕಡೆ ಮುಖ್ಯ ಮಂತ್ರಿಗಳೂ ಇನ್ನೊಂದು ಕಡೆ ಸೈನ್ಯಾಧಿಕಾರಿಗಳೂ, ಮತ್ತೊಂದುಕಡೆ ಗವರ್ನರೂ ಹೇಗೆ ಇಂತಹ ಸಂಕೋಚಗಳಿಂದಾಗಿ ಅಸಹಾಯರಾಗಿದ್ದರು ಎಂಬದನ್ನು ವಿವರವಾಗಿ ವರ್ಣಿಸಿದ್ದಾರೆ.

ವಿ. ಸೀ. ಅವರು ಅದನ್ನು ಬರೆಯುತ್ತಿದ್ದ ಕಾಲದಲ್ಲಿ ಇನ್ನೂ ನಡೆಯದೆ ಇದ್ದದ್ದೆಲ್ಲಾ ಮುಂದೆ ನಡೆದದ್ದೆಲ್ಲಾ ಒಂದು ರೀತಿಯಲ್ಲಿ ಹೇಗೆ ಅನಿವಾರ್ಯವಾಗಿತ್ತೆಂಬುದನ್ನೂ ಅಂದೇ ಅವರು ಊಹಿಸಬಲ್ಲವರಾಗಿದ್ದರು—

"ರಾಜಕೀಯ ಪಕ್ಷಗಳಿಗೆ ಒಂದು ಚರಿತ್ರೆ ಇದೆ. ಅವುಗಳ ಹುಟ್ಟು, ಬೆಳವಣಿಗೆ, ಆಸೆ, ಆಕಾಂಕ್ಷೆಗಳು ತಮ್ಮ ಉದ್ದೇಶಗಳ ಸಾಧನೆಗಾಗಿ ಅವರು ಕೈಗೊಂಡ ಕಾರ್ಯವಿಧಾನ ಅವುಗಳಿಂದ ಪರಸ್ಪರವಾಗಿ ಉಂಟಾದ ಲಾಭ ನಷ್ಟ, ಮನಸ್ಸಂಕೋಚ, ಹಟ ಸಂಶಯಗಳು ಎಲ್ಲ ಸೇರಿ ಇವೊತ್ತಿನ ಪರಿಸ್ಥಿತಿಯನ್ನು ಉಂಟುಮಾಡಿವೆ. *** ವ್ಯಕ್ತಿಗಳಿಗೆ ಹೇಗೆ ಒಂದು ಭಾಗ್ಯಕರ್ಮ ಮತ್ತು ಕರ್ಮಫಲ ಪರಂಪರೆ ಇವೆ ಎನ್ನುತ್ತಾರೋ ಹಾಗೆಯೇ ಸಂಸ್ಥೆಗಳಿಗೂ ದೇಶಗಳಿಗೂ ಈ ಕರ್ಮ ಪರಂಪರೆ ಉಂಟು."

ಇದನ್ನು ಬರೆದಾದ ನಂತರ ಇಪ್ಪತ್ತೆರಡು ವರ್ಷಗಳಲ್ಲಿ ಎರಡೂ ದೇಶಗಳಲ್ಲಿ ನಡೆದ ಕರ್ಮಫಲ ಪರಂಪರೆಯನ್ನು ಅಧ್ಯಯನ ಮಾಡಿದ ಡಾ. ಗುನ್ನಾರ್ ಮಿರ್ಡಾಲ್ ಎಂಬ ಜಗದ್ವಿಖ್ಯಾತ ವಿದ್ವಾಂಸರು ತಮ್ಮ 'ಏಷಿಯನ್ ಡ್ರಾಮಾ' ಎಂಬ ಪ್ರಮಾಣ ಗ್ರಂಥದಲ್ಲಿ ಇವೇ ವಿಧಾನಗಳನ್ನು ಹೆಚ್ಚು ಕಡಿಮೆ ಇದೇ ಶಬ್ದಗಳಲ್ಲಿ ಹೇಳಿ ವಿಸ್ತಾರವಾದ ದಾಖಲೆಗಳೊಡನೆ ವಿವರಿಸಿದ್ದಾರೆ.

"ಭಾರತದ ರಾಜ್ಯಾಂಗರಚನೆ"ಯಂತಹ ಪ್ರಬಂಧಗಳನ್ನು ಅಂದಿನ ಸನ್ನಿವೇಶ ಸರಿದುಹೋಯಿತೆಂಬ ಒಂದೇ ಕಾರಣದಿಂದ ಮರೆತುಬಿಡೋಣವೆ? ನಮ್ಮ ತಲೆಮಾರಿನಲ್ಲಿ ನಮ್ಮ ದೇಶದ ಭಾಗ್ಯ ಪ್ರಾಮಾಣಿಕವಾದ ವಿಚಕ್ಷಣೆಯುಳ್ಳ ದೂರದರ್ಶಿಯಾದ ಚಿಂತನ ಪ್ರಪಂಚದಲ್ಲಿಯೂ, ಯಾವ ಆಸೆ, ಆಮಿಷ, ದೌರ್ಬಲ್ಯ, ಪಕ್ಷಪಾತಗಳಿಗೂ ಬಗ್ಗದ ಸಮರ್ಥವಾದ ಕ್ರಿಯಾಶಕ್ತಿಯಲ್ಲಿಯೂ ಎಷ್ಟು ದೊಡ್ಡದಾಗಿತ್ತು; ಅಷ್ಟೆಲ್ಲಾ ಇರುತ್ತಲೂ ಯಾವ ಆತುರ, ಅಚಾತುರ್ಯ, ಸ್ವಾರ್ಥ, ದೌರ್ಬಲ್ಯಗಳಿಂದಾಗಿ ಯಾವ ಅವಕಾಶಗಳು ಕಳೆದುಹೋದವು ಎಂಬುದನ್ನೆಲ್ಲಾ ಸಮಕಾಲೀನ ಪಕ್ಷಪಾತಗಳಿಂದ ದೂರವಾದ ಐತಿಹಾಸಿಕ ದೃಷ್ಟಿಯಿಂದ ವಿಮರ್ಶಿಸುವ ಕಾಲವೊಂದು ಬಂದೇ ಬರುವದು. ಆಗ ಇಂತಹ ಸಮಕಾಲೀನ ಪ್ರಬಂಧಗಳು ಮೌಲಿಕ ದಾಖಲೆಗಳಾದಾವು. ನಮ್ಮ ಪೂರ್ವಿಕರಿಗೆ ಐತಿಹಾಸಿಕ ಪ್ರಜ್ಞೆಯಿರಲಿಲ್ಲವೆಂದು ಯಾವ ಸಾಹೇಬರು ಹೇಳಿದರೂ ನಾವು ನಿಜ ನಿಜ ಎಂದು ತಲೆದೂಗುತ್ತೇವೆ. ಆದರೆ ಅವರು ಯಾವುದಕ್ಕೆ ಐತಿಹಾಸಿಕ ಪ್ರಜ್ಞೆಯೆನ್ನುವರೋ ಅದನ್ನು ನಾವಾದರೂ ಬೆಳೆಸಿಕೊಳ್ಳುತ್ತಿದ್ದೇವೆಯೆ? ಹೋಗಲಿ, ಅದೇನೆಂಬುದನ್ನಾದರೂ

ತಿಳಿದಿದ್ದೇವೆಯೆ? ಇತ್ತೀಚೆಗೆ ದೆಹಲಿಯಲ್ಲಿ ಇತಿಹಾಸದ ಕಥನವೊಂದನ್ನು ಸಮಸ್ತ ರಾಜವೈಭವದೊಡನೆ ವಾದ್ಯ ಮಂತ್ರಘೋಷಗಳೊಡನೆ ದಹನ ಮಾಡಿದರಂತೆ!

ಭಾಗವತವನ್ನು ಪುರಾಣವೆಂದೂ ಮಹಾಭಾರತವನ್ನು ಇತಿಹಾಸವೆಂದೂ ಕರೆದವರ ಇತಿಹಾಸಪ್ರಜ್ಞೆ ನಮ್ಮ ದೇಶಕ್ಕೆ ವಿಶಿಷ್ಟವಾದದ್ದು. ವಿ. ಸೀ. ಅವರಿಗೆ ಮಹಾಭಾರತ ಪ್ರಿಯವಾದ ಗ್ರಂಥ. ಕೃಷ್ಣನ ವ್ಯಕ್ತಿತ್ವ, ಸಾಧನೆಗಳು ಮತ್ತು ಜೀವನ ದರ್ಶನವನ್ನು ಕುರಿತು ಅವರು ಮಾಡಿದ ಅಧ್ಯಯನ ವಿಸ್ತಾರವಾದದ್ದು, ಚಿಂತನ ಆಳವಾದದ್ದು. ಅದೆಲ್ಲಾ ಬರವಣಿಗೆಯಲ್ಲಿ ಮೂಡಿ ಪ್ರಕಟವಾಗುವ ಭಾಗ್ಯ ಎಂದು ಬರುವದೊ ಕಾಣೆ. ಇಲ್ಲಿಯೂ ಅವರ ದೃಷ್ಟಿ ಆಚಾರ್ಯರ ರೀತಿಯದೇ. ನಾನು ಹೇಳಿದ್ದೇ ಸಮಗ್ರವೆಂದು ಭಾವಿಸಬೇಡಿ, ಉತ್ತಮವೆನಿಸಿದ್ದನ್ನು ಎತ್ತಿ ತೋರಿಸಿದ್ದೇನೆ, ಅದರ ಉದ್ದೇಶ ಇನ್ನೂ ಅಂತಹದು ಎಷ್ಟಿದೆ ಎಂಬುದನ್ನು ನೋಡಿ, ಎಂಬದೇ ಅವರ ದೃಷ್ಟಿ. ಮಹಾಭಾರತದಲ್ಲಿಯ ಐದು ಉಪಾಖ್ಯಾನಗಳನ್ನು ಎತ್ತಿ ಹೇಳುತ್ತ ಆ ಪುಸ್ತಕದ ಪ್ರಸ್ತಾವನೆಯಲ್ಲಿ ಹೇಳುತ್ತಾರೆ---

"ಇಂದಿನವರ ಮುಂದೆ ಹಲವು ಸಮಸ್ಯೆಗಳಿವೆ. ಅವನ್ನು ಪೂರ್ತಿಮಾಡುವಾಗ ಹಿಂದಿನ ಕಾಲದ ಆದರ್ಶವನ್ನು ಗಮನಕ್ಕೆ ತಂದುಕೊಳ್ಳುವದು ಒಳ್ಳೆಯದು. ಆಯಾ ದೇಶದ ಚರಿತ್ರೆ ಅವರವರಿಗೆ ಹೆಚ್ಚು ಹತ್ತಿರವಿದ್ದದ್ದು; ಅವರ ರಕ್ತದಲ್ಲಿ ಬೆರೆತದ್ದು; ಅವರ ಮೂಳೆಯ ರಚನೆಗೆ ಕಾರಣವಾದ್ದು; ಅವರನ್ನು ರೂಪಗೊಳಿಸಿ ಅವರ ಪಕ್ವ ಪಾತಗಳಿಗೆ ತಳಹದಿಯಾಗಿರುವದು. ಆ ದ್ದ ರಿಂ ದ ಈ ಕಥೆಗಳಲ್ಲಿನ ಸತ್ತ್ವವೂ ಬೆಳಕೂ ಇಂದಿಗೂ ಶಕ್ತಿಯನ್ನೂ ಬೆಳಕನ್ನೂ ಕೊಟ್ಟಾವೆಂದು ತಿಳಿದು ಈ ಕಾರ್ಯವನ್ನು ಕೈಕೊಂಡಿದೆ. ಹಳೆಯದರಲ್ಲಿ ಹೊಸ ದರ್ಶನವನ್ನು ಕಾಣಿಸುವ ಬಗೆ ಇದು."
***"ಐದನೆಯ ಕಥೆಯಲ್ಲಿ ಚ್ಯವನ ಇಂದ್ರ ಅಶ್ವಿನಿಯರ ಸಂಬಂಧದಲ್ಲಿ ಒಂದು ರಾಜಕೀಯ ಪ್ರಸಂಗ ಬೆಳೆಯುತ್ತದೆ***ಯಜ್ಞಗಳಲ್ಲಿ ಆ ಮುಂಚೆ ಅಶ್ವಿನೀ ದೇವತೆಗಳಿಗೆ ಇಂದ್ರನ ಪಂಕ್ತಿಯಲ್ಲಿ ಸೋಮಪಾನ ಮಾಡುವ ಅಧಿಕಾರವೂ ಮರ್ಯಾದೆಯೂ ಇರಲಿಲ್ಲವಂತೆ. ಚ್ಯವನರು ಉಂಟುಮಾಡಿಕೊಟ್ಟರು. ಇಂಥವರೇ ಹೊಸ ಮಾರ್ಗಗಳನ್ನು ರೂಢಿಸುವವರು."

ಈ ವಿಧಾನಗಳನ್ನು ಸಮರ್ಥಿಸುವದಕ್ಕೆ ಕಥೆಗಳ ಮೂಲದಲ್ಲಿರುವ ರಚನೆಯನ್ನಾಗಲಿ ಮಾತನ್ನಾಗಲಿ ಹಿಗ್ಗಿಸುವ ರೀತಿ ಅವರದಲ್ಲ. ವೆಂಕಟಪ್ಪನವರ ಮಾತನ್ನೂ ಸುಬ್ಬರಾಯರ ಮಾತನ್ನೂ ಇದ್ದಕ್ಕಿದ್ದಂತೆ ಹೇಳುವವರು ವ್ಯಾಸರ ಮಾತನ್ನು ಬದಲಿಸುವದು ಸಾಧ್ಯವೆ? "ಮಹಾಭಾರತದ ಮಾತು ಕಥೆಗಳನ್ನು ಇಲ್ಲಿ ಬಹುಮಟ್ಟಿಗೆ ಅನುಕರಿಸಿರುವುದರಿಂದ ಅಲ್ಲಿನ ಪುನರುಕ್ತಿ, ಆವರಣ, ಹೆಸರು, ರೀತಿ, ವರ್ಣನೆಗಳು ಕಾಣುವುದು ಸಹಜ. ಅವು ಕಾಂತಿಗುಂದದೆ ಕಂಡರೆ ಅದೇ ದೊಡ್ಡ ಪುಣ್ಯ." ಅವು ಕಾಂತಿಗುಂದದೆ ಹೇಗೆ ಕಾಣುತ್ತವೆಂಬುದನ್ನು ತೋರಿಸಲಿಕ್ಕೆ ಒಂದೆರಡು ಉದಾಹರಣೆಗಳನ್ನು ಮಾತ್ರ ಇಲ್ಲಿ ಕೊಡಬಹುದು. ನಳದಮಯಂತಿಯ ಕಥೆಯಲ್ಲಿ ಹಸಿವಿ

ನಿಂದಲೂ ದಣಿವಿನಿಂದಲೂ ದುಃಖದಿಂದಲೂ ಕಂಗಾಲಾದ ನಳನು ತನ್ನ ಉಟ್ಟ ಬಟ್ಟೆಯನ್ನೂ ಕಳೆದುಕೊಂಡಾಗ ತಾನು ಪಡುತ್ತಿದ್ದ ಪಾಡು ತನ್ನ ಹೆಂಡತಿಗಾದರೂ ಬೇಡ ಎಂದುಕೊಂಡು ಕಾಡಿನಲ್ಲಿ ನಡೆಯುತ್ತ ಅನೇಕ ದಾರಿಗಳನ್ನು ತೋರಿಸುತ್ತ ಅವಳ ತವರಿನ ದಾರಿಯನ್ನೂ ತೋರಿಸುತ್ತಾನೆ. ಆ ಸೂಚನೆಯನ್ನು ಗ್ರಹಿಸಿದ ದಮಯಂತಿಯ ಕಣ್ಣೀರು ತಡೆಯದಾಯಿತು. ಕರುಣೆ ಉಕ್ಕಿತು. ಧ್ವನಿ ನಡುಗಿತು. ಆಕೆ ಹೇಳಿದಳು—

"ನನ್ನರಸ, ನಿಮ್ಮ ಸಂಕಲ್ಪವನ್ನು ಪುನಃಪುನಃ ಚಿಂತಿಸಿ ನನ್ನ ಹೃದಯ ಕಂಪಿಸುತ್ತಿದೆ. ಮೈಯ ಅಂಗ ಕುಸಿಯುತ್ತಿದೆ. ಇಂದು ನಿಮಗೆ ರಾಜ್ಯವಿಲ್ಲ. ದ್ರವ್ಯವಿಲ್ಲ. ಬಟ್ಟೆಯಿಲ್ಲ. ಹಸಿವಿನ ಶ್ರಮ ಬಾಧಿಸುತ್ತಿದೆ. ಜನವಿಲ್ಲದ ಈ ವನದಲ್ಲಿ ನಿಮ್ಮೊಬ್ಬರನ್ನು ಬಿಟ್ಟು ನಾನು ಹೇಗೆ ಹೋದೇನು? ಮಹಾರಾಜ, ಶ್ರಮದಿಂದಲೂ ಹಸಿವಿನಿಂದಲೂ ಕೂಡಿದ ನಿಮ್ಮ ಬಳಿಯಲ್ಲಿ ಹಿಂದಿನ ಸುಖಗಳನ್ನೆಲ್ಲ ನೆನೆದು ನಿಲ್ಲುತ್ತೇನೆ. ಘೋರವಾದ ಈ ವನದಲ್ಲಿ ನಿಮಗೆ ಸುಖವನ್ನು ಕೊಡುತ್ತಿರುತ್ತೇನೆ. ಬಳಲಿಕೆಯನ್ನು ನಿವಾರಿಸುತ್ತೇನೆ. ಆರ್ತನಾದ ಗಂಡಸಿಗೆ ಹೆಂಡತಿಗೆ ಸಮಾನಳಾದ ವೈದ್ಯರು ಬೇರೊಬ್ಬರಿಲ್ಲ. ಎಲ್ಲ ದುಃಖಸಮಯಗಳಲ್ಲಿಯೂ ಈ ಮಾತು ಸತ್ಯ. ಏತಕ್ಕೆ ನೀವು ಮರಳಿ ಮರಳಿ ಇದು ವಿದರ್ಭಕ್ಕೆ ದಾರಿ ಇದು ಕೋಸಲಕ್ಕೆ ದಾರಿ ಎಂದು ನನಗೆ ಹೇಳುತ್ತಿದ್ದೀರಿ?"

ಶಕುಂತಲೆಯ ಕಥೆಯಲ್ಲಿ ದುಷ್ಯಂತನು ಕಣ್ವಾಶ್ರಮಕ್ಕೆ ಬಂದು 'ಒಳಗೆ ಯಾರು ?' ಎಂದು ಕೂಗಿದ ಕೂಡಲೆ—

"ರಾಜನ ಧ್ವನಿಯ ನಾದದಿಂದ ವನ ತುಂಬಿತು. ಈ ಧ್ವನಿಯನ್ನು ಕೇಳಿ ಲಕ್ಷ್ಮಿಯಂತಹ ರೂಪವುಳ್ಳ ಒಬ್ಬ ಕನ್ಯೆ ಹೊರಕ್ಕೆ ಬಂದಳು. ಆಕೆ ತಾಪಸಿಯಂತೆ ಉಟ್ಟು ತೊಟ್ಟು ಇದ್ದಳು. ಆಶ್ರಮದ ಬಾಗಿಲಿಗೆ ಬಂದು ನಿಂತಾತನ ಆಕಾರವನ್ನೂ ಲಕ್ಷಣವನ್ನೂ ರೆಪ್ಪೆಯಿಡದೆ ಒಂದುಕ್ಷಣ ನೋಡಿ ಆತನು ಮಹಾರಾಜನೇ ಆಗಿರಬೇಕೆಂದು ಊಹಿಸಿದಳು. ಒಳಗೆ ಬರಬೇಕೆಂದು ವಿನಯದಿಂದ ಹೇಳಿ ಉಚಿತವಾದ ಪೀಠದಲ್ಲಿ ಕೂಡಿಸಿ ಅರ್ಘ್ಯ ಪಾದ್ಯಗಳನ್ನು ಕೊಟ್ಟು ಗೌರವಿಸಿದಳು. ಕ್ಷೇಮಸಮಾಚಾರಗಳನ್ನು ವಿಚಾರಿಸಿದಳು. ಒಳ್ಳೆಯ ಕುಲದಲ್ಲಿ ಹುಟ್ಟಿ ಒಳ್ಳೆಯ ವಿದ್ಯೆ ಕಲಿತ ಹೆಣ್ಣುಮಕ್ಕಳಿಗೆ ಒಪ್ಪುವ ರೀತಿಯಲ್ಲಿ ಆತನಿಗೆ ತೋರಿಸಬೇಕಾದ ಮಾನಮರ್ಯಾದೆಯನ್ನೆಲ್ಲ ತೋರಿಸಿ ಆಯಿತು. ಮುಗುಳು ನಗೆಯಿಂದ 'ತಾವು ಯಾರು? ಏತಕ್ಕಾಗಿ ಆಶ್ರಮಕ್ಕೆ ದಯಮಾಡಿಸಿದ್ದೀರಿ? ನಾವು ಮಾಡಬಹುದಾದುದೇನು?' ಎಂದು ಕೇಳಿದಳು. ಸವಿಯಾಗಿ ಆಡಿದ ಮಾತನ್ನು ರಾಜನು ಕೇಳಿದನು. ಆಕೆಯ ಉಪಚಾರಕ್ಕೆ ತೃಪ್ತಿಪಟ್ಟನು."

ಇಂತಹ ಬರವಣಿಗೆಯಲ್ಲಿ ಮೂಲಕ್ಕೆ ಪ್ರಾಮಾಣಿಕವಾಗಿರುವದೆಂಬ ಒಂದೇ ಗುಣವನ್ನು ಗುರುತಿಸಿದರೆ ಸಾಲದು. ಅದರ ವಸ್ತುವಿನ ಬಗ್ಗೆ ಪ್ರೀತಿಯುಳ್ಳ ಲೇಖಕರು

ಸುಲಭವಾದ ಆಡುಮಾತಿಗೆ ಯಾವ ಕಾವ್ಯಶಕ್ತಿಯನ್ನೂ ಗದ್ಯಕ್ಕೆ ಸರಳ ಸುಭಗವಾದ ಎಂತಹ ಲಯವನ್ನೂ ಊಡಬಲ್ಲರೆಂಬುದನ್ನೂ ಗುರುತಿಸಬೇಕು. ಹೀಗೆ ಕಥೆಗಳನ್ನು ಮೂಲದಲ್ಲಿ ಇದ್ದಂತೆಯೇ ಹೇಳಿ ಆಯಾ ಕಥೆಯ ಕೊನೆಯಲ್ಲಿಯೋ ಇಲ್ಲವೆ ಕೊನೆಯಲ್ಲಿ ಅದಕ್ಕೆಂದೇ ಸೇರಿಸಿದ ಎರಡು ಪ್ರಕರಣಗಳಲ್ಲಿಯೋ ಆ ಕಥೆಗಳ ಶೀಲ ಸಂಪತ್ತನ್ನು ಕುರಿತು, ಸನಾತನವಾದ ತಥ್ಯಗಳನ್ನೂ ಐತಿಹಾಸಿಕವಾದ ತಥ್ಯಗಳನ್ನೂ ಕುರಿತು ತಮ್ಮ ನಿಲುವನ್ನು ವಿವರಿಸಿದ್ದಾರೆ. ಈ ಎಲ್ಲ ವಿವರಣೆಯ ಓಸ್ಲೆಲಿಯಲ್ಲಿ ನುಡಿಯುವ ಶ್ರುತಿ ಒಂದೇ. ನಮ್ಮ ಜೀವನ ಸುಭಗವಾಗಬೇಕಾದರೆ, ಸಾಧನೆ ದೊಡ್ಡದಾಗಬೇಕಾದರೆ, ಎಲ್ಲ ದೇಶ ಎಲ್ಲ ಕಾಲಗಳಲ್ಲಿಯೂ ದೊಡ್ಡದೆನಿಸಿದ್ದನ್ನು ಗುರುತಿಸಬೇಕು, ಪ್ರೀತಿಸಬೇಕು, ಪೂಜಿಸಬೇಕು.

* * * *

ಹೀಗೆ ಪುರಾತನ ಕಥೆಗಳಲ್ಲಿ ಅವರು ಗುರುತಿಸಿ ಪೂಜಿಸಿದ ಗುಣಶೀಲಗಳನ್ನು ತಮ್ಮ ಸಮಕಾಲೀನರಾದ ಮಹನೀಯರುಗಳಲ್ಲಿಯೂ ಗುರುತಿಸಿ ಪೂಜಿಸಿದ್ದಾರೆ. ಇದು ಮೊದಲಿನದಕ್ಕಿಂತಲೂ ಹೆಚ್ಚಿನ ಸಾಧನೆ. ಪುರಾತನ ವ್ಯಕ್ತಿಗಳ ಗುಣಗಳು ನಮಗೆ ಹತ್ತಿರವಾಗಿದ್ದಷ್ಟು ಅವರ ಲೋಪಗಳು ನಮಗೆ ಹತ್ತಿರವಾಗಿಲ್ಲ. ಅಲ್ಲಿ ನಮ್ಮ ವೈಯಕ್ತಿಕ ಅಭಿಮಾನ ಪ್ರೀತಿ ಅಪ್ರೀತಿ ಆಸೆ ನಿರಾಸೆಗಳ ಕೋಟಲೆಗಳಿಲ್ಲ. ಸಮಕಾಲೀನ ಮಹನೀಯರ ಸಂಪರ್ಕಗಳಲ್ಲಿ ಅನಿವಾರ್ಯವಾದ ಇವನ್ನೆಲ್ಲ ಮೀರಿ ಗುಣಗಳನ್ನೇ ಎತ್ತಿ ಪೂಜಿಸುವದು ಬಹು ದೊಡ್ಡ ಸಾಧನೆ. ಅದಕ್ಕೆ ಸ್ವ-ಪರ ಭೇದವನ್ನು ಮೀರಿದ ವಿರಕ್ತಿ (ಅನುರಕ್ತಿಯೋ?) ಬೇಕು. ಭಾಗವತದಲ್ಲಿ ಒಬ್ಬ ಮಹಾಭಾಗವತನನ್ನು ವರ್ಣಿಸುವಾಗ "ಮಹದುಪಾಸಕಃ" ಎಂಬ ಮಾತು ಬರುತ್ತದೆ. ಇಂದು ಮುಖಸ್ತುತಿಯೇ ಅನೇಕರಿಗೆ ಜೀವನೋಪಾಯವಾಗಿರುವ ಕಾಲದಲ್ಲಿ ನಿಜವಾದ ಮಹದುಪಾಸನೆ ಏನೆಂಬದನ್ನು ತಿಳಿಯಬೇಕಾದರೆ ವಿ. ಸೀ. ಯವರು ಬರೆದ ಮಹನೀಯರ ವ್ಯಕ್ತಿಚಿತ್ರಗಳನ್ನು ಓದಬೇಕು. ಉಪಾಸನೆಗೂ ಮುಖಸ್ತುತಿಗೂ ಇರುವ ವ್ಯತ್ಯಾಸವನ್ನು ತಿಳಿಸುವಂತಹ ಒಂದು ಮಾತನ್ನು ಅದೇ ಭಾಗವತದಲ್ಲಿ ಅದೇ ಮಹಾಭಾಗವತನು ಹೇಳುತ್ತಾನೆ—ಅದೂ ಕೂಡ ಬೇಕಾದ ವರವನ್ನು ಕೇಳು ಎಂದು ಮುಂದೆ ನಿಂತ ಭಗವಂತನಿಗೆ—ನನ್ನನ್ನು ಪರೀಕ್ಷಿಸುತ್ತಿದ್ದೀಯೆ, ನನ್ನ ಉಪಾಸನೆಗೆ ಪ್ರತಿಯಾಗಿ ನಿನ್ನಿಂದ ಏನನ್ನಾದರೂ ನಾನೂ ಪಡೆದರೆ ನಾನೆಂತಹ ಭಕ್ತ? ನಾನೊಬ್ಬ ವ್ಯಾಪಾರಿಯಾದೇನು, ಅದು ನನಗೆ ಬೇಕಿಲ್ಲ ಎನ್ನುತ್ತಾನೆ. ವ್ಯಾಪಾರದಲ್ಲಿ ನ್ಯಾಯವಾದ ಬೆಲೆಯನ್ನು ಮಾತ್ರ ಕೊಡುವ ಪರಮಾತ್ಮ ಇಂಥವರಿಗೆ ತನ್ನನ್ನೇ ಕೊಟ್ಟುಬಿಡುತ್ತಾನಂತೆ. ಅಂತಹ ಶ್ರದ್ಧೆ ಅರ್ಥವಾಗಬೇಕಾದರೆ ವಿ. ಸೀ. ಅಂತಹ ಸುಸಂಸ್ಕೃತ ಜೀವಿಯ ಒಡನಾಟ ಬೇಕು.

ದೊಡ್ಡದೆಂಬುದರ ಉಪಾಸನೆ ಎಂದೆ. ಅದು ಕೇವಲ ಆಕೃತಿಯೇ ಆಗಿದ್ದರೂ ದೊಡ್ಡದೇ ಅಲ್ಲವೆ? "ಸುಬ್ಬರಾಯರದು ದಿಟ್ಟವಾಗಿ ನಿಂತ ನಿಲವು. ನಡೆದ ನಡೆ.

ಎಷ್ಟು ಎತ್ತರ ಬೆಳೆದಿದ್ದರೋ ಎಷ್ಟು ಗುಂಡಗೆ ಬಲಿತಿದ್ದರೊ ಅಷ್ಟು ಪೂರ್ತಿಯಾಗಿ ಅವರ ವ್ಯಕ್ತಿ ಪ್ರಭಾವ ತುಂಬಿರುತ್ತಿತ್ತು. ಹುಡುಗತನದಲ್ಲಿ ತುಂಬಾ ಚೆಲುವರಿದ್ದಿರಬೇಕು. ೧೯೧೫–೧೬ರಲ್ಲಿ ಮಹಾರಾಜಾ ಕಾಲೇಜಿನ ಉಪಾಧ್ಯಾಯರು ತೆಗೆಸಿಕೊಂಡ ಫೋಟೋ ಕಾಲೇಜು ಮಹಡಿಯ ಮೇಲಿದ್ದ ಉಪಾಧ್ಯಾಯರ ಕೋಣೆಯಲ್ಲಿ ತಗುಲಿ ಹಾಕಿತ್ತು. ಅವರ ಆಕೃತಿಯ ಗೆಲವನ್ನೂ ನಲಿವನ್ನೂ ಅಲ್ಲಿ ನೋಡಬೇಕು."

ಟಿ. ಎಸ್. ವೆಂಕಣ್ಣಯ್ಯನವರನ್ನು ಕುರಿತು—

"ವೆಂಕಣ್ಣಯ್ಯನವರನ್ನು ಕಂಡ ಯಾರಿಗೇ ಆಗಲಿ ಅವರು ಎಲ್ಲರಿಗಿಂತ ಎಷ್ಟು ಎತ್ತರದ ಮನುಷ್ಯರು ಎಂಬುದು ಕಾಣುತ್ತಿತ್ತು. ಆಕೃತಿಯ ನಿಲುವು ಹೇಗೋ ಮನಸ್ಸು ನಡವಳಿಕೆಗಳಲ್ಲಿಯೂ ಹಾಗೇ. ಅಂತಹ ಉನ್ನತಿಯನ್ನು ನಾನು ಹೆಚ್ಚು ಜನರಲ್ಲಿ ಕಂಡಿಲ್ಲ * * * ದಪ್ಪ, ಎಂದಿಗೇ ಆಗಲಿ ಅಯ್ಯನವರದಲ್ಲ. ಅವರದು ಅಗಲವಾದ ಚಪ್ಪಟೆಯ ದೇಹ. ಕಣ್ಣು, ಮೂಗು, ಮುಖದ ನೆಲಸು; ಆ ಹಲ್ಲು ಸಾಲಿನದು ಒಂದು ವಿಶಿಷ್ಟ ಸೊಗಸು—ಯಾವುದಾದರೂ ಸಂತೋಷದಲ್ಲಿ ಅಥವಾ ಮೆಚ್ಚಿಕೆಯಲ್ಲಿ ಅವರು ನಕ್ಕರೆ, ಅದರಲ್ಲಿ ಹಸುಳೆಯ ನಿಷ್ಕಪಟತೆ ಇರುತ್ತಿತ್ತು. ಮುಖದ ಮೇಲಿನ ಹಳ್ಳಗಳು ತುಂಬಿಕೊಂಡು ಯಾವುದೋ ದೇವತೆಯ ಪ್ರಸಾದ ತೆರೆದಂತಿರುತ್ತಿತ್ತು."

ವೀಣೆ ಶೇಷಣ್ಣನವರನ್ನು ಕುರಿತು—

"ಅವರನ್ನು ಕೈಹಿಡಿದು ಕರೆದೊಯ್ಯುವ ಭಾಗ್ಯ ಅಕಸ್ಮಾತ್ ನನ್ನ ಪಾಲಿಗೆ ಬಂತು. ಬಲಗೈ ತೋಡ ಹಾಗೇ ಇತ್ತು. ಕಪ್ಪು ಹಸಿರು ಉಲ್ಲನ್ ಅಂಗಿ, ಜರತಾರಿ ಪಂಚೆ, ಕಾಲಿಗೆ ಜಡಾವು, ತಲೆಗೆ ಹಸಿರು ಜರತಾರಿಯ ರುಮಾಲು—ಅವರು ಬಿಳಿಯ ರುಮಾಲೆ ಹಾಕಿದುದನ್ನು ನಾನರಿಯೆ—ಕೈಯಲ್ಲಿ ನಶ್ಯದ ಡಬ್ಬಿ, ಬೆಳ್ಳಿಕಟ್ಟಿನ ಕೋಲು. ಕಾಣದ ಕಣ್ಣಿನ ನೆಲಸೂ ಪ್ರಭಾವವೂ ಠೀವಿಯವೇ; ನರೆಗೂದಲ ಮಳೆಯಂತೆ ದಟ್ಟವಾದ ಹುಬ್ಬು; ಗರುಡ ಮೂಗು; ಹುಬ್ಬಿನ ನಡುವೆ ಫಾಲತಟದಲ್ಲಿ ಕುಂಕುಮ, ತೆರೆದ ಮಹಾನುಭಾವ ಲಕ್ಷಣದ ಮುಖ ಯಾರಿಗೂ. ಅಲ್ಲಿನ ಗರಿಮೆ, ಹಿರಿಮೆ ಪ್ರಕಾಶಕವಾದ್ದೇ."

ಹೊರಗಿನ ಆಕೃತಿಯ ಸುಭಗತೆ ನಿಚ್ಚಳವಾಗಿ ಕಾಣುವಂತೆಯೇ ಅವರಿಗೆ ಅಂತರಂಗದ ಹಿರಿಮೆಯೂ ನಿಚ್ಚಳವಾಗಿಯೇ ಕಾಣುತ್ತದೆ.

ಸುಬ್ಬರಾಯರನ್ನು ಕುರಿತು—

"ಆತನ ಗುಣ, ಆತನ ಲೋಪ ಎರಡೂ ದೊಡ್ಡವು. ಮೌಂಟ್ ಎವರೆಸ್ಟ್‌ಗೆ ತಾನೇ ೩೦,೦೦೦ ಅಡಿಯ ಪ್ರಪಾತ ಕಂದರ ಇರಬೇಕಾದರೆ?—ಎನ್ನಿಸುತ್ತದೆ. ಆ ಭಾತಿಯನ್ನೂ ಆ ಗುಣವನ್ನೂ ನೆನಸಿಕೊಂಡರೆ, ಒಮ್ಮೆ ಆ ಪ್ರೀತಿಯನ್ನು ಸವಿದವರಿಗೆ ಅದರ ಅಚ್ಚಳಿಯದ ನೆನಪು. ಭೀಕರವಾಗಿ ಕಣ್ಣಿಗೆ ಇರುತ್ತಿದ್ದುದು ಆಕೃತಿ. ಆದರೆ ಅವರ ಆ ಪ್ರೀತಿ, ಪ್ರೀತಿಯಿಂದ ಮಾತನಾಡುವಾಗಲೂ ಸಾಧಾರಣ್ಯ

ದಲ್ಲಿಯೂ ಎಷ್ಟು ಸವಿಯಾಗಿ ಮೃದುವಾಗಿ ಪ್ರೇಮಲವಾಗಿ ಇರಬಲ್ಲುದಾಗಿತ್ತು ಎಂಬುದನ್ನು ಆ ಧ್ವನಿಯನ್ನು ಕೇಳಿದವರು ಬಲ್ಲರು."

ಪಂಜೆ ಮಂಗೇಶರಾಯರನ್ನು ಕುರಿತು—

"ಅವರನ್ನು ನಾವು ನೆನೆಯುವದು ಅವರ ವ್ಯಕ್ತಿತ್ವಕ್ಕಾಗಿ, ಅವರ ಸರಸ ಸಂಪರ್ಕಕ್ಕಾಗಿ, ಮಗುವಿನಂತಹ-ದೇವರಂತಹ, ಅವರ ಮಾತು ಒಡನಾಟಗಳಿಗಾಗಿ. ಎಲ್ಲರಿಗಿಂತಲೂ ದೊಡ್ಡದು ಆ ಜೀವ ಗುಣ. ಮಗನಾಗಿ, ತಂದೆಯಾಗಿ, ಗುರುವಾಗಿ, ಅಧಿಕಾರಿಯಾಗಿ, ಚಿಕ್ಕವರೂ, ದೊಡ್ಡವರೂ, ಹೆಣ್ಣು ಮಕ್ಕಳು, ಅರಿಯದ ಜನ, ಬೀದಿಯವರು, ಕೂಲಿಯವರು, ವಿದ್ವಾಂಸರು—ಎಂಥವರೊಡನೆಯೂ ಅವರು ಬೆರೆತು ಹತ್ತು ನಿಮಿಷದಲ್ಲಿ ಇದು ಅನನ್ಯಸಾಧಾರಣವಾದ ಒಂದು ಸತ್ವ, ಲೋಕದ ಅತಿ ವಸ್ತುಗಳಲ್ಲಿ ಒಂದು ಎಂದು ಭಾಸವಾಗುತ್ತಿದ್ದವರು."

ವೆಂಕಣ್ಣಯ್ಯನವರನ್ನು ಕುರಿತು—

"ಆ ಜೀವದ ಸ್ವರೂಪವನ್ನು ಅರಿತುಕೊಳ್ಳಬೇಕಾದರೆ ಅವರ ಜೊತೆಯಲ್ಲಿ ಏಕಾಂತದಲ್ಲಿರಬೇಕಿತ್ತು. ನಾಲ್ಕು ಜನರಿರುವ ಕಡೆಯಲ್ಲಿ ಕೂಡ ಅವರ ಮಾತು ಆಗ ಈಗ ಒಂದೊ ಎರಡೊ. ಆಡಿದ ಮಾತು ಮಾತ್ರ ಆಯಾ ಸಂದರ್ಭಕ್ಕೆ ಉಪಕಾರಕವಾಗುತ್ತಿತ್ತು. ಆರಿಸಿದ ಮಾತು—ಹತ್ತು ಕಟ್ಟುವ ಕಡೆ ಒಂದು ಮುತ್ತು ಕಟ್ಟು ಎಂಬಂತೆ. ಆ ಮಾತಿನಲ್ಲಿ ಅಬ್ಬರವಿಲ್ಲ. ಅದರಲ್ಲಿ ಲೋಕ ಪರಿಜ್ಞಾನ, ಸಜ್ಜನಿಕೆ, ವಿಶದತೆ, ಆಪ್ತತೆ ಸೇರಿಕೊಂಡಿರುತ್ತಿತ್ತು. * * * ಆ ಮನಸ್ಸಿನ ನವುರು ಕಾವ್ಯ ರಸಾಸ್ವಾದನಕ್ಕೆ ಅಲ್ಲಿನ ನಯ ಸೂಕ್ಷ್ಮಗಳ ಗ್ರಹಣಕ್ಕೆ ಒಲಿಯುತ್ತಿದ್ದ ರೀತಿ ಒಂದು ಕಲಾದೇವಿಯ ವಾತ್ಸಲ್ಯದಂತೆ ಇರುತ್ತಿತ್ತು. * * * ತಾನು ಮಾಡುವ ಎಲ್ಲ ಕಾರ್ಯಕ್ಕಿಂತಲೂ ಮನುಷ್ಯ ದೊಡ್ಡವನಾಗಿರಬಲ್ಲನೆಂಬುದಕ್ಕೆ ಅಯ್ಯನವರು ಒಂದು ಮಹಾ ನಿದರ್ಶನ. ಅವರು ಬಿಟ್ಟು ಹೋಗಿರುವ ಲೇಖನ ಕಾರ್ಯವನ್ನು ಮಾತ್ರ ನೋಡಿದರೆ ಇಷ್ಟೇಯೆ ಎನ್ನಿಸುತ್ತದೆ. ಅವರು ಏನಾಗಿದ್ದರು ಏನು ಮಾಡಿಸಿದರು, ಯಾರ್ಯಾರಿಂದ ಎಂಥೆಂಥದನ್ನು ಮಾಡಿಸಬಲ್ಲವರಾಗಿದ್ದರು ಎಂಬ ಲೆಕ್ಕವನ್ನು ಮಾಡಿದರೆ ಆ ಜೀವ ಎಷ್ಟು ದೊಡ್ಡದು ಎಂಬುದನ್ನು ನೆನಸಿದರೆ, ಹೊರಗಿನ ಪ್ರಪಂಚಕ್ಕೆ ಕಾಣದ, ಆದರೆ ತುಂಬಾ ಅಗತ್ಯವಾದ ಸ್ನಿಗ್ಧವಾದ ಈ ಕಾರ್ಯ ಗೊತ್ತಾಗುತ್ತಿತ್ತು. ಬೆಲ್ಲದ ಸವಿಯನ್ನು ಮೆಲ್ಲುವವರು ಮಾತ್ರ ಬಲ್ಲರು ಎಂಬಂತೆ ಆ ಸ್ನೇಹದಂಥ ಸವಿಯನ್ನು ಅನುಭವಿಸಿಯೇ ಅರಿಯಬೇಕಾಗುವುದು."

ಹೀಗೆ ಅವರು ಕಂಡ ಮಹನೀಯರ ಎಲ್ಲ ಮಹಾ ಗುಣಗಳನ್ನು ನೆನಸಬೇಕಾದರೆ ಅವರ ಸುಮಾರು ಇನ್ನೂರೈವತ್ತು ಪುಟಗಳನ್ನೇ ಇಲ್ಲಿ ಇಳಿಸಬೇಕಾದೀತು. ಆ ಮೃಷ್ಟಾನ್ನದ ಒಂದೆರಡು ಅಗುಳುಗಳನ್ನು ಎಷ್ಟು ತೋರಿಸಬಹುದೋ ಅಷ್ಟೆ. ಹೀಗೆ ದೊಡ್ಡ ಗುಣಗಳ ಉಪಾಸನೆಯಿಂದ ವ್ಯಕ್ತಿಯು ತನ್ನ ಜೀವದ ಯೋಗ್ಯತೆಯನ್ನೂ ದೊಡ್ಡದಾಗಿಸಬಹುದಂತೆ. ಅನುಭಾವಿಗಳೆಂದು ಪ್ರಸಿದ್ಧರಾದ ಗುರುಗಳು

ತಮ್ಮ ಶಿಷ್ಯರಿಗೆ ಯಾವ ಅನುಭಾವ ದರ್ಶನ ಮಾಡಿಸುತ್ತಾರೋ ನಾನು ಅರಿಯೆ. ಆದರೆ ಎಲ್ಲರಿಗೂ ತಿಳಿಯಬಹುದಾದ ಅರ್ಥದಲ್ಲಿ ಅನುಭಾವ, ಕೃಷ್ಣಾನುಭಾವ ಕೃಷ್ಣನಂತಾಗುವದು, ಕೃಷ್ಣನಲ್ಲಿ ತನ್ಮಯರಾಗುವದು ಎಂಬ ಮಾತು ಭಾಗವತದಲ್ಲಿ ಬರುತ್ತದೆ. ಕೃಷ್ಣನಲ್ಲಿಯ ದೊಡ್ಡ ಗುಣಗಳ ಅತಿಶಯವಾದ ಅನುಸಂಧಾನದಿಂದ ಅವನ ಗತಿಯನ್ನು ಪಡೆದರಂತೆ ಗೋಪಿಯರು. ಅತಿಶಯವಾದ ಪ್ರಣಯದಿಂದ ಅದನ್ನು ಪಡೆದರೆಂದರೆ ಇರಬಹುದು ಎಂದು ತಿಳಿಯುತ್ತೇವೆ. ಆದರೆ ಅತಿಶಯ ವಾದ ಸ್ನೇಹದಿಂದ ಪಾಂಡವರೂ, ಅತಿಶಯವಾದ ದ್ವೇಷದಿಂದ ಕಂಸ ಶಿಶುಪಾಲಾದಿ ಗಳೂ ಅದೇ ಗತಿಯನ್ನು ಪಡೆದರೆಂದರೆ ತಿಳಿಯುವದು ಕಷ್ಟ. ಏಕೆಂದರೆ ಯಾವದೇ ವ್ಯಕ್ತಿಯ ಆ ಉನ್ನತಿಯನ್ನು, ಗುಣೋತ್ಕರ್ಷವನ್ನು ನಾವು ತಿಳಿದಿಲ್ಲ. “ಮೌಂಟ್ ಎವರೆಸ್ಟ್‌ಗೆ ತಾನೇ ೩೦,೦೦೦ ಅಡಿಯ ಪ್ರಪಾತ ಕಂದರ, ಇರಬೇಕಾದರೆ?” ಎಂಬ ವಿ.ಸೀ. ಅವರ ಮೇಲಿನ ಮಾತನ್ನು ನೆನೆಯಬಹುದು. ಆದ ಕಾರಣವೇ ಇದ್ದೀತು ಭಕ್ತಿ ಎಂದ ಮಾತ್ರಕ್ಕೆ ಭಕ್ತಿಯಲ್ಲ, ಯಾವ ವಸ್ತುವನ್ನು ಆ ಭಕ್ತಿ ಆಶ್ರಯಿಸು ವದೋ ಅದರ ಮಾಹಾತ್ಮ್ಯ ಜ್ಞಾನವು ಭಕ್ತನಿಗಿದ್ದರೆ ಮಾತ್ರ ಅದು ನಿಜವಾದ ಭಕ್ತಿ ಎಂದು ಆನಂದತೀರ್ಥರು ಹೇಳಿದ್ದು. ಇಷ್ಟು ಖಚಿತವಾದ ಮಾತನ್ನು ವಿ.ಸೀ. ಅನುಮೋದಿಸುವರೋ ಇಲ್ಲವೊ. ಅವರ ನಿಲುವು, ಎಲ್ಲರೂ ಒಪ್ಪಬೇಕಾದ ನಿಲುವು, ಅವರ ಒಡನಾಟದಲ್ಲಿ ಸಾನ್ನಿಧ್ಯದಲ್ಲಿ (ಉಪನಿಷತ್) ಸ್ಪಷ್ಟವಾದಂತೆ ಮಾತಿನಿಂದಾಗಲಿ ಬರವಣಿಗೆಯಿಂದಾಗಲಿ ಸ್ಪಷ್ಟ ಪಡಿಸುವದು ಅಸಾಧ್ಯ. ಅವರು ಯಾವ ಗುರುವಿನಲ್ಲಾಗಲಿ, ದೇವರಲ್ಲಾಗಲಿ, ಮತದಲ್ಲಾಗಲಿ, ಆಚಾರದಲ್ಲಾಗಲಿ, ಸ್ಪಷ್ಟವಾದ ಪಕ್ಷಪಾತವನ್ನು ತೋರಿದ್ದನ್ನು ನಾನು ಕಂಡಿಲ್ಲ. ಯಾರಾದರೂ ಅಂತಹದನ್ನು ತೋರಿದರೆ ಅದಷ್ಟೇ ಅಲ್ಲ ಎಂದುಬಿಟ್ಟಾರು. ಆದರೆ ತ್ರಿಕರಣ ಶುದ್ಧ ವಾದ ಜೀವನದಲ್ಲಿ, ಸೌಜನ್ಯ ದಾಕ್ಷಿಣ್ಯದಲ್ಲಿ, ಶಮ ದಮದಲ್ಲಿ, ಪ್ರೀತಿ ಕಾರುಣ್ಯ ಗಳಲ್ಲಿ, ಸ್ಥೈರ್ಯ ಧೈರ್ಯಗಳಲ್ಲಿ ಅವರನ್ನು ಮೀರಿಸಿದ ಎಂತಹ ಕರ್ಮಠ ಆಸ್ತಿಕ ರನ್ನೂ ನಾನು ಕಂಡಿಲ್ಲ. ಮಾಸ್ತಿಯವರ 'ಪಂಡಿತನ ಮರಣ ಶಾಸನ' ಎಂಬ ಕಥೆಯ ಕೊನೆಯಲ್ಲಿಯ ಒಂದು ಮಾತು ನೆನಪಾಗುತ್ತದೆ. ಪಂಡಿತನು ಜೈನರ ಪ್ರತಿನಿಧಿ ಯಾದ ಮಂತ್ರಿಯೆಂದೂ, ತಾನು ವೈಷ್ಣವರ ಪರವಾದ ಮಂತ್ರಿಯೆಂದೂ ತಿಳಿದಿದ್ದ ಮಹನೀಯರೊಬ್ಬರು ಮಹಾರಾಜರ ಜೊತೆಯಾಗಿ ಪಂಡಿತನ ಕೊನೆಯ ಗಳಿಗೆ ಗಳಲ್ಲಿ ಅವನನ್ನು ಕಂಡು ತಿರುಗಿ ಬರುವಾಗ “ಮಹಾಪ್ರಭೂ, ಪಂಡಿತನು ನಾಸ್ತಿಕ ನಾಗಿದ್ದಿರಬಹುದೆ?” ಎಂದು ಅಚ್ಚರಿ ಪಡುತ್ತಾನೆ. ಇಂತಹ ಸಂದರ್ಭಗಳಲ್ಲಿಯೇ ಇದ್ದೀತು “ಮಾಽತಿ ಪ್ರಾಕ್ಷೀಃ” ಎಂದು ಯಾಜ್ಞವಲ್ಕ್ಯರು ಹೇಳುತ್ತಿದ್ದದ್ದು. “ದೂರಾದ್ದೂರತರಂ ಯತ್ತು ತದೇವಾಂತಿಕಮಂತಿಕಾತ್” ಎಂದು ಆನಂದತೀರ್ಥರು ಹೇಳಿದ್ದು.

ಪಿ. ವಿ. ಜೋಷಿ

# ವಿ. ಸೀ. ವಿಮರ್ಶಕ ದೃಷ್ಟಿ

"Quickly the night wind sweeps us away, and the traces of us!...."

ಆಧುನಿಕ ಕನ್ನಡ ಸಾಹಿತ್ಯದ ಪ್ರಾದುರ್ಭಾವ ಈ ಶತಮಾನದ ಮೊದಲ ದಶಕಗಳಲ್ಲಿ ತಲೆದೋರಿತೆಂದು ಸ್ಥೂಲವಾಗಿ ನಿರ್ದೇಶಿಸಬಹುದು. ನವೋದಯದ ಮೊದಲ ತಲೆಮಾರಿನ ಕವಿಗಳಲ್ಲಿ ವಯೋಮಾನದಲ್ಲಿ ಕಿರಿಯರೂ, ಹಿಂದಿನ ನಮ್ಮ ಹಿರಿಯ ಕವಿಗಳಲ್ಲಿ ಒಬ್ಬರೂ ಆಗಿರುವ ಶ್ರೀ ವಿ. ಸೀ. ಅವರು ಇದೇ ಅಕ್ಟೋಬರ್ ೨ ರಂದು ಎಪ್ಪತ್ತೈದನೆಯ ವರ್ಷದಲ್ಲಿ ಕಾಲಿರಿಸಿದರು. ಅವರನ್ನಾಗಲಿ, ಅವರ ಧೀಮಂತ ಹಾಗೂ ಸಾರ್ಥಕ ಬದುಕನ್ನಾಗಲಿ ಪರಿಚಯ ಮಾಡಿಕೊಡುವ ಅಗತ್ಯವಿಲ್ಲ. ಕನ್ನಡದ ಪ್ರಾಧ್ಯಾಪಕರಾಗಿ, ಕವಿ, ವಿಮರ್ಶಕ, ನಾಟಕಕಾರರಾಗಿ, ಸಾಹಿತ್ಯ ಸಮ್ಮೇಳನದ ಅಧ್ಯಕ್ಷರಾಗಿ, ಸಾಹಿತ್ಯ ಅಕಾಡೆಮಿ ಮತ್ತು ಭಾರತೀಯ ಜ್ಞಾನಪೀಠಗಳಂಥ ಉನ್ನತ ಸಂಸ್ಥೆಗಳಿಗೆ ಸಲಹೆಗಾರರಾಗಿ ವಿ. ಸೀ. ಕನ್ನಡ ನಾಡಿನಲ್ಲಿ ಚಿರಪರಿಚಿತರಾಗಿದ್ದಾರೆ. ಕನ್ನಡದ ಕವಿಯೊಬ್ಬರು ಎಪ್ಪತ್ತೈದು ವಸಂತಗಳನ್ನು ಕಂಡ ಸವಿನೆನಪಿನಲ್ಲಿ, ಅವರಲ್ಲಿ ಇಟ್ಟಿರುವ ಪ್ರೀತ್ಯಾದರಗಳ, ಅಭಿಮಾನ–ಗೌರವಗಳ ಸಂಕೇತವಾಗಿ ಪ್ರಕಟವಾಗುತ್ತಿರುವ ಈ ಸಂಭಾವನೆಯ ಗ್ರಂಥದಲ್ಲಿ ಈ ಕಿರುಬರಹದ ಮೂಲಕ ನನ್ನ ವೈಯಕ್ತಿಕ ಕೃತಜ್ಞತೆಯನ್ನೂ ಸಲ್ಲಿಸಬಯಸುತ್ತೇನೆ.

ಆಧುನಿಕ ಕನ್ನಡ ಸಾಹಿತ್ಯದಲ್ಲಿ ವಿ. ಸೀ. ಯವರ ಹೆಸರು ಮನೆಮಾತಾಗಿದೆಯೆಂದರೂ ತಪ್ಪಾಗಲಾರದು. ಅವರ ಪಾಂಡಿತ್ಯ. ಪ್ರತಿಭೆಗಳು ಒಂದು ಕ್ಷೇತ್ರಕ್ಕೆ ಸೀಮಿತವಾದುವಲ್ಲ; ಒಂದು ಭಾಷೆಗೆ ಸೀಮಿತವಾದುವಲ್ಲ. ಹಲವಾರು ಕ್ಷೇತ್ರಗಳಲ್ಲಿ ಅವರು ಕೈಹಾಕಿ ಸಿದ್ಧಿ ದೊರಕಿಸಿಕೊಂಡಿದ್ದಾರೆ. ಹಲವು ಭಾಷೆಗಳನ್ನು ಅರಿತು ಪ್ರಭುತ್ವ ಸಂಪಾದಿಸಿಕೊಂಡಿದ್ದಾರೆ. ಅವರಂತೆ ವಿವಿಧ ಕ್ಷೇತ್ರಗಳಲ್ಲಿ ಯಶಸ್ಸು ಗಳಿಸಿದವರ ಸಂಖ್ಯೆ ಬಹು ವಿರಳ....ಅವರ ಕವಿ ಪ್ರತಿಭೆಯ ಮತ್ತು ಸಹೃದಯತೆಯ ಫಲವಾಗಿ ಹಲವಾರು ಕವನ ಸಂಕಲನಗಳು ಅರಳಿ ನಿಂತು, ತಮ್ಮ ಸೌರಭವನ್ನು ಎಲ್ಲೆಡೆ ಬೀರುತ್ತಿವೆ. 'ಗೀತಗಳ'ನ್ನು ಹಾಡಿ, 'ನೆಳಲು–ಬೆಳಕ'ನ ಹಾದಿಯಲ್ಲಿ ನಮಗೆ

ಆಹ್ವಾನ ನೀಡಿ, ಮಧುರವಾದ 'ದ್ರಾಕ್ಷಿ-ದಾಳಿಂಬೆ'ಗಳನ್ನುಣಿಸಿ, ಬದುಕಿನ 'ಹೆಜ್ಜೆ ಪಾಡು'ಗಳನ್ನು ತಾವು ಕಂಡು, ನಮ್ಮ ಬಾಳಿಗೂ ಸಾರ್ಥಕತೆಯನ್ನು ದೊರಕಿಸಲೆಂದು 'ದೀಪಗಳ'ನ್ನು ತೋರಿ, ಅನಂತ ಕರುಣೆಯ ಬೆಳಕಾಗಿ ಬಂದು, ಶುಚಿಜೀವನದ ದರ್ಶನವನ್ನು ತಮ್ಮ ಕವಿತೆಗಳಲ್ಲಿ ವಿ. ಸೀ. ಮಾಡಿಸುತ್ತಾರೆ.

ಅವರ ಪದ್ಯದಂತೆ ಗದ್ಯವೂ ಪ್ರಸಿದ್ಧವಾದುದು. ಅವರ 'ಪಂಪಾಯಾತ್ರೆ' ಹಾಳು ಹಂಪೆಯನ್ನು ಕಾಣದವರಿಗೂ ಸಮರ್ಥ ರೀತಿಯಲ್ಲಿ ಯಾತ್ರೆ ಮಾಡಿಸ ಬಲ್ಲದು. ಪ್ರತಿಯೊಂದನ್ನೂ ಸವಿವರವಾಗಿ ವಿವರಿಸಿ, ಮನಸ್ಸಿನಲ್ಲಿ ಅಚ್ಚಳಿಯದಂತೆ ಪ್ರಭಾವ ಬೀರಬಲ್ಲ ವರ್ಣನಾ ವೈಖರಿಯನ್ನು ಅಲ್ಲಿ ನಾವು ಕಾಣಬಹುದು. ಕಥನ ರೀತಿಯ ಸೊಗಸು ಓದಿದಾಗ ಮಾತ್ರ ಸ್ವಯಂ ವೇದ್ಯವಾಗುತ್ತದೆ. 'ಭಾರತದ ಐವರು ಮಹನೀಯರು'-ಹೆಸರೇ ಸೂಚಿಸುವಂತೆ ಮಹಾಭಾರತದ ಪ್ರಮುಖ ವ್ಯಕ್ತಿ ಗಳೈವರ ಬದುಕಿನ ಆದರ್ಶದ ಪಡಿನೆಳಲನ್ನು ಪ್ರತಿಬಿಂಬಿಸುತ್ತದೆ. ಅಲ್ಲಿ ಅವರು ಬೆಳಸಿರುವ ವಾದ, ತೋರಿಸುವ ವ್ಯಕ್ತಿ ಚಿತ್ರಣ, ಬಾಳಿನ ಉತ್ಥಾನತೆ ಸುಸಂಸ್ಕೃತ ವಾದವು. ಅವರ 'ಬೆಳುದಿಂಗಳು' ಮತ್ತು ಇತರ ಪ್ರಬಂಧಗಳು ವಸ್ತುವೈವಿಧ್ಯ, ಉತ್ತಮ ರಚನಾಬಂಧ, ನವುರಾದ ಶುಚಿಯಾದ ರುಚಿಯಾದ ತಿಳಿಹಾಸ್ಯ, ವ್ಯಂಗ್ಯ ಗಳಿಗೆ ಹೆಸರಾಗಿರುವಂತೆಯೇ ಕಲೆಗಾರಿಕೆಯ ನಯಚಾತುರ್ಯಗಳಿಗೂ ಸಾಕ್ಷಿ ಯಾಗಿದೆ. 'ಮೈಸೂರು ರುಮಾಲು' ಓದುಗನನ್ನು ಆಕರ್ಷಿಸಿದರೆ, 'ದೋಸೆ'ಬಾಯಲ್ಲಿ ನಿರೂರಿಸುತ್ತದೆ; 'ಮಳೆ' ಮನಸೆಳೆದರೆ, 'ಕೋಳಿ'ಯನ್ನು ಕುರಿತ ಈ ಮಡಿಬ್ರಾಹ್ಮ ಣರ ಕಲ್ಪನಾವಿಲಾಸ ಬೆರಗು ತರುತ್ತದೆ.

ವಿ. ಸೀ. ಯವರ ಶಾಸ್ತ್ರೀಯ ಪಾಂಡಿತ್ಯಕ್ಕೆ ಶಾಶ್ವತ ಕುರುಹಾಗಿರುವ ಕೃತಿ ಅವರ 'ಹಣಪ್ರಪಂಚ'. ಅತಿ ತೊಡಕಿನ ವಸ್ತುವನ್ನು ಆಯ್ದುಕೊಂಡು, ವಸ್ತು, ಭಾಷೆ, ಪಾರಿಭಾಷಿಕ ಪದಗಳ ಕ್ಲಿಷ್ಟತೆ, ಕೊರತೆಗಳಿದ್ದರೂ ಎಲ್ಲವನ್ನೂ ಸರಿದೂಗಿಸಿ ಕೊಂಡು, ಹಣದ ವಿವಿಧ ಕಾರ್ಯಕಲಾಪ, ರೂಪರೇಷೆ ಮತ್ತು ಅದರ ಪ್ರಭಾವ ಗಳನ್ನು ಕುರಿತು ವಿದ್ವತ್ಪೂರ್ಣವಾದ ಶೈಲಿಯಲ್ಲಿ ಅತಿಸಮರ್ಪಕವಾಗಿ ನಿರ್ವಹಿಸಿ ವಿ. ಸೀ. ಇಲ್ಲಿ ಹೆಚ್ಚಿನ ಯಶಸ್ಸನ್ನು ಗಳಿಸಿದ್ದಾರೆ. ಬಹುಶಃ ನಮ್ಮ ದೇಶಭಾಷೆ ಯಲ್ಲಿ ಹಣವನ್ನು ಕುರಿತಂತೆ ಪ್ರಕಟವಾದ ಮೊದಲ ಶಾಸ್ತ್ರೀಯ ಕೃತಿ ಅದಿರಬೇಕು. ಅಲ್ಲಿನ ಭಾಷೆಯ ಸೊಬಗು ಕನ್ನಡ ಗದ್ಯಕ್ಕೇ ಗೌರವ ತರುವಂಥದು.

ಅವರ ವಿವಿಧ ಪ್ರತಿಭೆಗಳನ್ನು ಇಕ್ಕಿ ಮೆಟ್ಟಿದೆ ಅವರ ವಿಮರ್ಶಕ ಪ್ರಜ್ಞೆ. ವಿ. ಸೀ. ಕನ್ನಡದ ಕೆಲವೇ ಉತ್ತಮ ಸಹೃದಯ ವಿಮರ್ಶಕರಲ್ಲಿ ಒಬ್ಬರಾಗಿದ್ದಾರೆ. ಅವರಲ್ಲಿ ವಿಮರ್ಶಕ ಪ್ರಜ್ಞೆಯ ತೀವ್ರತೆ ಹೆಚ್ಚು ಕಂಡು ಬರುತ್ತದೆ. ವಿಮರ್ಶನ ಕಾರ್ಯದಷ್ಟು ಹೆಚ್ಚು ಗುರುತರವಾದ, ಜವಾಬ್ದಾರಿಯುತವಾದ ಕಾರ್ಯ ಬಹುಶಃ ಮತ್ತೊಂದಿಲ್ಲವೇನೋ. ಏಕೆಂದರೆ ಅದರ ವ್ಯಾಪ್ತಿ ಮತ್ತು ಮಿತಿಗಳು ಅಷ್ಟು ದೊಡ್ಡವು. ಅವರಲ್ಲಿಯೂ ವಿಮರ್ಶೆಯನ್ನು ವಿಮರ್ಶಿಸುವ ಕಾರ್ಯವಂತೂ

ಮತ್ತೂ ಕಷ್ಟಸಾಧ್ಯವಾದ ಕೆಲಸ. ವಿ.ಸೀ.ಯವರ ಮಾತಿನಲ್ಲಿಯೇ ಹೇಳುವುದಾದರೆ "ವಿಮರ್ಶೆಯು ವಿಮರ್ಶೆ ಗಾಟಿಕ್ಕುವ ಕೆಲಸ." ಆದುದರಿಂದ ಅವರ ಕೃತಿಗಳನ್ನು, ಅದರಲ್ಲಿಯೂ ವಿಮರ್ಶಾಗ್ರಂಥಗಳನ್ನು ಕುರಿತ ವಿಸ್ತೃತ ವಿಮರ್ಶೆ ಇದು ಎನ್ನುವುದಕ್ಕಿಂತ, ಅವುಗಳ ಪರಿಚಯಾತ್ಮಕ ಅವಲೋಕನವೆನ್ನುವುದು ಹೆಚ್ಚು ಸಮರ್ಪಕವಾಗುತ್ತದೆ. ಅದಕ್ಕೆ ಮೊದಲು ವಿ.ಸೀ. ಯವರ ದೃಷ್ಟಿಯಲ್ಲಿ ವಿಮರ್ಶೆಯ ಸ್ವರೂಪ ಮತ್ತು ಅರ್ಥವೇನು ಎಂಬುದನ್ನು ಅವರ ಮಾತುಗಳಲ್ಲಿಯೇ ತಿಳಿದುಕೊಳ್ಳುವುದು ಹೆಚ್ಚು ಉಚಿತವಾಗುತ್ತದೆ.

ಸಾಹಿತ್ಯದೊಡನೆಯೇ ಸಾಹಿತ್ಯ ವಿಮರ್ಶೆಯೂ ಹುಟ್ಟಿಕೊಳ್ಳುತ್ತದೆ. ಕವಿಯ ನಿರ್ಮಾಣ ಕ್ರಿಯೆಯಲ್ಲಿಯೇ ಅಂತರ್ಗತವಾಗಿ ನಡೆಯುವುದು ಒಂದುವಿಧ. ಕರ್ತೃವಿನಿಂದ ಬೇರೆಯಾಗಿ ಇನ್ನೊಬ್ಬರ ವಾಚನಕ್ಕೆ, ಕೇಳ್ಮೆಗೆ ಕೃತಿ ದೊರಕಿದಾಗ, ಅವರು ಬೆಲೆ ಕಟ್ಟುವಾಗ ನಡೆಯುವ ವಿಮರ್ಶೆ ಇನ್ನೊಂದು ವಿಧ. ತನ್ನ ಅನುಭವ ಮತ್ತು ತಿಳಿವಳಿಕೆಯ ಆಳ, ವಿಸ್ತಾರಗಳು ಹೆಚ್ಚಾಗಲು ಮತ್ತು ಹಿಂದಿನ ಕೃತಿಗಳ ವಿಷಯ ವಿನ್ಯಾಸ, ರೀತಿ, ರಚನೆ, ದೃಷ್ಟಿ, ತಂತ್ರ, ಸಾಧನೆ ಇವುಗಳಲ್ಲಿರುವ ಲೋಪ ದೋಷಗಳನ್ನು ಸ್ವಯಂ ಕಂಡುಕೊಳ್ಳಲು ಹಾಗೂ ಕೈಮುನ್ಸುಗಳನ್ನು ಪಳಗಿಸಿಕೊಳ್ಳಲು ಕೃತಿಕಾರನಿಗೆ ಮೊದಲನೆಯ ರೀತಿಯ ವಿಮರ್ಶೆ ಹೆಚ್ಚು ಸಹಕಾರಿಯಾಗುತ್ತದೆ. ಕವಿಯ ಕೃತಿಯನ್ನು ಕುರಿತು ಇನ್ನೊಬ್ಬನು ವಿವರಿಸುವಾಗ, ವ್ಯಾಖ್ಯಾನಿಸುವಾಗ ಈ ಎರಡನೆಯವನ ಅಭಿಮಾನ, ಕಾಣ್ಕೆ, ಅಭಿರುಚಿ, ವಿವೇಕಗಳ ಪ್ರದರ್ಶಿತವಾಗುತ್ತದೆ. ಇಂಥವನನ್ನು 'ಸಹೃದಯ'ನೆಂದು ಕರೆಯಬಹುದು. ಒಂದು ಕೃತಿಯ ಅರ್ಥವನ್ನು ಅರಿಯದೆ, ಯಾರಿಗೇ ಆಗಲಿ, ಅದನ್ನು ವಿಮರ್ಶಿಸುವುದು ಅಸಾಧ್ಯವಾಗುತ್ತದೆ. ಏಕೆಂದರೆ 'ಒಂದು ಕೃತಿಯ ಅರ್ಥವೇನೆಂಬುದೇ ನಮಗೆ ಸರಿಯಾಗಿ ಗೊತ್ತಾಗದ ಮೇಲೆ ಅದಕ್ಕೆ ಬೆಲೆ ಕಟ್ಟುವ ಯತ್ನ ಹೇಗೆ ಸರಿಯಾದೀತು? ಅಂಥಲ್ಲಿ ವಿಮರ್ಶೆಗೆ ಯಾವ ಬೆಲೆ ಬಂದೀತು?' ಎನ್ನುತ್ತಾರೆ ವಿ. ಸೀ. ಅಂದರೆ ಅರ್ಥ ಮೊದಲು, ಬೆಲೆ ಅನಂತರ ಎಂದಾಯಿತು.

ಕೃತಿಯ 'ಅರ್ಥ'ವೆಂದರೆ ಏನು?—ಎಂಬ ಪ್ರಶ್ನೆ ಈಗ ಏಳುತ್ತದೆ. ಒಂದು ಸಾಹಿತ್ಯಕೃತಿ ಹುಟ್ಟಿದಂದಿನಿಂದ ಎಲ್ಲಿಯವರೆಗೆ ಅದರ ಅರ್ಥಗ್ರಹಣ, ಭಾವಗ್ರಹಣ, ರಸಗ್ರಹಣ ನಡೆಯುತ್ತಿರುವುದೊ, ಅಲ್ಲಿಯವರೆಗೂ ಆ ಕೃತಿಯ ಅರ್ಥ ಬೆಳೆಯುತ್ತ ಹೋಗುತ್ತದೆ. ಬೇರೆ ಬೇರೆ ಕಾಲ ದೇಶ ಪರಿಸ್ಥಿತಿಗಳಿಗೆ ತಕ್ಕಂತೆ, ಬೇರೆಬೇರೆ ಓದುಗರ ಯೋಗ್ಯತೆ, ಸಂಸ್ಕಾರ, ಅನುಭವಗಳಿಗೆ ತಕ್ಕಂತೆ ಆ ಅರ್ಥಗ್ರಹಣ ವ್ಯತ್ಯಾಸಗೊಳ್ಳುತ್ತದೆ. ಹೀಗಾಗಿ ಅಲ್ಲಿ ತಾರತಮ್ಯ ಕಾಣಿಸುವುದುಂಟು. ಕೃತಿಯ ಅರ್ಥ ಇಂಥದೇ ಎಂದು ನಿರ್ದೇಶಿಸುವುದಾಗಲಿ, ನಿರ್ಣಯಿಸುವುದಾಗಲಿ ಅಶಕ್ಯ. ಏಕೆಂದರೆ ಅಲ್ಲಿ ಕವಿಯದೇ ಆದ ಒಂದು ಅರ್ಥವಿರಬಹುದು; ಕೃತಿಯಲ್ಲಿ ರೂಪುಗೊಂಡ ಅರ್ಥ ಮತ್ತೊಂದಿರಬಹುದು; ರಸಾಸ್ವಾದನೆಗಾಗಿ ಓದುವ ಸಹೃದಯನ ಅರ್ಥವೇ

ಬೇರೊಂದಾಗಬಹುದು. ಇಂಥ ಸಂದರ್ಭದಲ್ಲಿ 'ಯಾರ ಅರ್ಥ? ಯಾವುದರ ಅರ್ಥ? ಯಾರಿಗೆ ಅರ್ಥ? ಯಾವ ಸನ್ನಿವೇಶದಲ್ಲಿ?' ಎಂಬ ಪ್ರಶ್ನೆಗಳು ಹುಟ್ಟಿಕೊಳ್ಳುತ್ತವೆ.

ಕೃತಿಕಾರನ ಅರ್ಥ ಕೃತಿಯಲ್ಲಿ ಆಕೃತಿಗೊಂಡು, ಸಹೃದಯನಾದವನು ಅದನ್ನು ಸ್ವೀಕರಿಸುವಂತಾಗಿ ಅರ್ಥವತ್ತಾದಾಗ ವಿಮರ್ಶೆ ಸಂಪನ್ನವಾಗುತ್ತದೆ; ಹಾಗಾಗ ದಾದರೆ ಕೃತಿಕಾರನಲ್ಲಿಯೊ, ಕೃತಿಯಲ್ಲಿಯೊ, ಸ್ವೀಕರಿಸುವವನಲ್ಲಿಯೊ ಲೋಪ ದೋಷಗಳಿರಬೇಕು-ಎಂದು ವಿ. ಸೀ. ಅಭಿಪ್ರಾಯಿಸುತ್ತಾರೆ.

ಕೃತಿಯ ವಿಮರ್ಶೆಗೆ ಅದರ ಅರ್ಥಗ್ರಹಣ ಮೊದಲ ಅವಶ್ಯಕತೆ ಎಂದಾ ಯಿತು. ಅರ್ಥಗ್ರಹಣದಿಂದ ವಿವೇಚನೆ ರೂಪುಗೊಳ್ಳುತ್ತದೆ. ವಿವೇಚನೆಗೆ ತೊಡ ಗಿದಾಗ ಬೌದ್ಧಿಕಾಂಶವಾಗಿ ಬೆಲೆ ಕಟ್ಟುವ ಕಾರ್ಯ ಆರಂಭವಾಗುತ್ತದೆ. ಈಗ ಪುನಃ ಪ್ರಶ್ನೆಗಳು ಏಳುತ್ತವೆ. "ಬೆಲೆ ಕಟ್ಟುವವರು ಯಾರು? ಈ ಬೆಲೆ ಬೆಲೆಯೇ ಕಾಯಿತು? ಬೆಲೆಗಳು ಯಾವುವು? ಇಂಥಿಂಥ ಬೆಲೆ ಇಲ್ಲಿ ಇಲ್ಲಿ ಸರಿಯೇ? ಸಾಧುವೆ?" ಹಿಂದೆಯೇ ತಿಳಿಸಿದಂತೆ ಒಂದು ಕೃತಿ ಹುಟ್ಟಿದಂದಿನಿಂದ ಯಾರು ಯಾರು ಎಂದಿನ ವರೆಗೆ ಅದನ್ನು ಹೇಗೆ ಹೇಗೆ ಅರ್ಥೈಸಿಕೊಂಡು ತಮ್ಮ ತಮ್ಮ ಬಗೆಯಲ್ಲಿ ಬೆಲೆ ಕಟ್ಟು ವರೊ, ಅದೆಲ್ಲವೂ ವಿಮರ್ಶೆಯೇ ಆಗುತ್ತದೆ; ಆ ಕೃತಿಯನ್ನು ಕುರಿತ ಬೆಲೆಗಟ್ಟು, ಮೌಲ್ಯವಿವೇಚನೆಯಾಗುತ್ತದೆ. "ಅವರಿಗಾದ ಅರ್ಥವೆಲ್ಲ ಅರ್ಥವೇ; ಅವರ ಕಟ್ಟುವ ಬೆಲೆಗಳೆಲ್ಲ ಬೆಲೆಗಳೇ."

ವಿಮರ್ಶೆಯಲ್ಲಿ ಕಾಣುವ ತಾರತಮ್ಯಗಳಿಗೆ ಹೀಗೆ ಕಾರಣಗಳನ್ನು ನೀಡುತ್ತಾರೆ:

"ಒಬ್ಬರಿಗೆ ಆಗುವ ಅರ್ಥ ಸ್ವಲ್ಪ; ಅದಕ್ಕೆ ಅವರ ಎಳವಯಸ್ಸೊ ಅಪಕ್ವ ತೆಯೊ ಮಡ್ಡಿತನವೊ ಕಾರಣವಿರಬಹುದು. ಒಬ್ಬರಿಗೆ ಅತಿಶಯ ತೋರಬಹುದು. ಅವರ ಮನಸ್ಸು ಸಜಾತೀಯವಾದ್ದರಿಂದ ಅಥವಾ ಲಲಿತವಾದ, ಆರ್ದ್ರವಾದ ಕಾರಣದಿಂದ ವಿಲಕ್ಷಣವಾಗಬಹುದು, ಗ್ರಹಿಸುವ ಬುದ್ಧಿಯ ವಕ್ರತೆಯಿಂದಾಗಿ. ಒಬ್ಬರದು ವಿಚಾರ ರಮಣೀಯ; ಒಬ್ಬರದು ಆಳ, ಗಂಭೀರ. ಪೂರ್ತಿ ತಿಳಿವಳಿಕೆ ಯಿಂದಾದ್ದು; ಒಬ್ಬರದು ಹೊರನೋಟ, ಇನ್ನೊಬ್ಬರದು ಒಳನೋಟ; ಒಬ್ಬರದು ಉಗ್ರ, ವಿರಸ, ವಿರುದ್ಧ; ಮತ್ತೊಬ್ಬರದು ಮೃದು ಸಂಸ್ಕಾರ, ನಯವುಳ್ಳದ್ದು." ಅವರ ಅಭಿಪ್ರಾಯದಂತೆ ಬೆಲೆಯ ಈ ತಾರತಮ್ಯಗ್ರಹಣ ವಿದಗ್ಧರಿಗೆ ಮತ್ತು ಪ್ರಬುದ್ಧರಿಗೆ ಮಾತ್ರ ಶಕ್ಯ; ಅದಕ್ಕೆ ಹೆಚ್ಚಿನ ಪರಿಪಾಕ, ಶಿಕ್ಷಣ ಅಗತ್ಯ ಎನ್ನುತ್ತಾರೆ.

ಅರ್ಥಗ್ರಹಣದಂತೆ ಬೆಲೆಗಟ್ಟುಗಳು ನಿರ್ಣಯಿಸಲ್ಪಡುತ್ತವೆ ಎಂಬುದನ್ನು ಒಪ್ಪಿಕೊಂಡಾಗಲೂ ಕೆಲವು ಪ್ರಶ್ನೆಗಳು ಉಳಿಯುತ್ತವೆ. "ಯಾವ ಅರ್ಥ ಸರಿ? ಯಾವುವಲ್ಲ? ಯಾವ ಬೆಲೆ ಸರಿ? ಯಾವುದಲ್ಲ? ಅದನ್ನು ನಿರ್ಣಯಿಸುವವರು ಯಾರು? ಗೊತ್ತುಮಾಡುವ ವಿಧಾನ ಯಾವುದು?" ಇದಕ್ಕೆ ವಿ. ಸೀ. ಯವರ ಉತ್ತರ ಹೀಗಿದೆ:

"ಕೃತಿಯ ಸ್ವರೂಪಕ್ಕೆ ಹೊಂದುವಂತೆ ವಿಪರೀತವಾಗಿ ಭಾವಿಸದೆ-ಸೌಹಾರ್ದ

ದಿಂದ ಅನುಭವಿಸುತ್ತಿರುವವರಿಗೆ ಯಾವುದೆಲ್ಲ ಹೊಳೆದು ಪ್ರಕಟವಾಗುವುದೊ ಯುಕ್ತವೆನಿಸುವುದೊ ಅದೆಲ್ಲ ಅದರ ಅರ್ಥಮಂಡಲ–ಅದೆಲ್ಲ ಬೆಲೆಯ ಕಲ್ಪನೆಯ. ಹೊಂದದ್ದು ಅನುಚಿತ, ವಿರಸ, ಅಸಂಗತ.”

ಈ ಎಲ್ಲ ಪ್ರಶ್ನೆಗಳನ್ನೂ ವಿ.ಸೀ. ಸಾಹಿತ್ಯ ವಿಮರ್ಶೆಗೆ ಸಂಬಂಧಿಸಿದ ಮೂಲಭೂತ ಪ್ರಶ್ನೆಗಳೆನ್ನುತ್ತಾರೆ. “ಇವಕ್ಕೆ ಉತ್ತರಗಳನ್ನು ತಾತ್ಕಾಲಿಕವಾಗಿಯಾದರೂ ಕಂಡುಹಿಡಿದು ಒಂದೊಂದರ ಸೀಮೆಯನ್ನೂ ತೀರ್ಮಾನಿಸದಾದರೆ ವಿಮರ್ಶೆ ದಾರಿ ತಪ್ಪುತ್ತದೆ; ಬರಿಯ ಮಾತಿನ ಬಾಜಾರಬುಣಗಾಗುತ್ತದೆ; ವ್ಯರ್ಥವಾಗುತ್ತದೆ” ಎನ್ನುತ್ತಾರೆ. ವಿಮರ್ಶೆಯಲ್ಲಿ ಶುಚಿ, ನಿಷ್ಠೆ ಅಗತ್ಯವೆಂದು ಅವರು ಸಾರುತ್ತಾರೆ.

ಸಾಹಿತ್ಯ ವಿಮರ್ಶೆಯಲ್ಲಿ ‘ಹದ’ ಕೆಡುವ ಪ್ರಸಂಗಗಳನ್ನು ಕುರಿತು ವಿ. ಸೀ. ಪ್ರಸ್ತಾಪಿಸಿರುವುದುಂಟು. ಅಂಥ ಒಂದೆರಡು ನಿದರ್ಶನಗಳನ್ನು ನೀಡುವುದರ ಮೂಲಕ ಅತ್ತ ನಮ್ಮ ದೃಷ್ಟಿಯನ್ನು ಹರಿಸಿ, ಎಚ್ಚರಿಸಲೆತ್ನಿಸಿದ್ದಾರೆ. ವಿಮರ್ಶೆಯೆಂದರೆ ವ್ಯಕ್ತಿಪೂಜೆ ಸಲ್ಲಿಸುವ ಅಂಧಾನುಯಾಯಿ ಶಿಷ್ಯವರ್ಗಗಳ ಅತಿಪ್ರಶಂಸೆಯ ವಾಕ್ಯಲ್ಲ; ರಾಗದ್ವೇಷ, ಪಕ್ಷಪಾತ, ಪೂರ್ವಗ್ರಹಪೀಡಿತರಾದವರ ನುಡಿಗಳಿಗೆ ಸಿಕ್ಕಿದ ಅಸಮರ್ಪಕ ವಿಚಾರಣೆಯಲ್ಲ; ಗಣಿತಜ್ಞನಂತೆ ೨+೨=೪ ಎಂದು ಪ್ರತಿಪಾದಿಸುವುದಾಗಲಿ, ವೈಯಾಕರಣಿಯಂತೆ ಶುಷ್ಕಪಾಂಡಿತ್ಯವನ್ನು ಮೆರೆಸಹೋಗುವುದಾಗಲಿ ಎಂದಿಗೂ ವಿಮರ್ಶೆಯೆನಿಸಿಕೊಳ್ಳದು. “ಅಧಿಕಾರಸ್ಥಾನಗಳಲ್ಲಿದ್ದು ಪುರಸ್ಕಾರ ತಿರಸ್ಕಾರಗಳನ್ನು ಬೆಲೆಗಳ ವಿತರಣೆಯನ್ನು ಮಾಡುವವರ ನಡವಳಿಕೆಯೂ ದೋಷಯುತ, ಧೃಷ್ಟ–ಆಗಬಲ್ಲದು.” ಇಂಥ ‘ಧೃಷ್ಟತನ’ದ ಒಂದು ಉದಾಹರಣ ಇಲ್ಲಿದೆ. “ನಾನೂ ನನ್ನಂಥ ಇನ್ನಿತರ ೯,೦೦೦,೦೦೦ ಮಂದಿ ಕವಿಗಳೂ ಕಡಿದಿರುವುದು ಇಷ್ಟೇ ತಾನೆ? ವಿಶ್ವಸಾಹಿತ್ಯದ ಸಾಮಗ್ರಿಯಲ್ಲಿ ಇದಕ್ಕೆ ಹೊರತಾದುದು ಇನ್ನು ಏನಾದರೂ ಇದೆಯೆ?” ಎಂದು ಕವಿ–ವಿಮರ್ಶಕ ಪೌಂಡ್ ಕೇಳುತ್ತಾನೆ.

(೧) ವಸಂತದ ಚೆಲುವು; ಹೂ ಚಿಗುರು, ತಳಿರು ಇತ್ಯಾದಿ. (೨) ಯುವ ಹೃದಯದ ಕಲ್ಪನಾ ವಿಲಾಸಗಳು. (೩) ಪ್ರೀತಿಯ ಅಗಾಧ ಸ್ವರೂಪ, ಅದರ ತುಡಿತಗಳು, ಹಗಲು ರಾತ್ರಿ ಇತ್ಯಾದಿ. (೪) ನಿಸರ್ಗ ಒದಗಿಸಿರುವ ವೈವಿಧ್ಯಮಯವಾದ ದೃಶ್ಯಗಳು; ಗಿಡ, ಮರ, ಬೆಟ್ಟ, ಬಯಲು ಇತ್ಯಾದಿ. (೫) ಇವೆಲ್ಲವುಗಳ ಮೇಲೆ ಓಲಾಡುವ ಮಳೆ ಮುಗಿಲು, ಗಾಳಿ ಬೆಳಕುಗಳ ಲೀಲೆ. (೬) ಹೆಂಗಸಿಗಾಗಿ ಗಂಡಸಿನ ಹಂಬಲ; ಹೀಗೆ ಆರನ್ನು ಪಟ್ಟಿ ಹಾಕಿ, ಅದಕ್ಕೆ ಇನ್ನೆರಡನ್ನು, (೭) ಜನಗಳು ತೊಡಗುವ ಜಗಳಗಳು, ಯುದ್ಧಗಳು ಇತ್ಯಾದಿ. ಮತ್ತು (೮) ಜನಗಳು ಕೈಕೊಳ್ಳುವ ಯಾತ್ರೆಗಳು, ಎಂದು ಸೇರಿಸಿ, ತನ್ನ ಬುದ್ಧಿವಂತಿಕೆಯನ್ನು ಮೆರೆದಿರುವ ಕವಿ–ವಿಮರ್ಶಕ ಎಜ್ರಾ ಪೌಂಡ್. ಅಥವಾ “ಲೆವಿಸ್ ಅಂತಹ ವಿಮರ್ಶಕನ ಕೈಗೊ, ಎಜ್ರಾ ಪೌಂಡ್ ಅಂತಹ ತೀಕ್ಷ್ಣ ವಿಮರ್ಶಕನ ಕೈಗೊ ಆಧುನಿಕ ಕನ್ನಡ ಕವಿತೆ ಸಿಕ್ಕಿದರೆ ಎಷ್ಟು ಉಳಿದೀತು? ಬೇಂದ್ರೆಯವರದು ಒಂದು ಹತ್ತು, ಕುವೆಂಪು

ಅವರದೊಂದು ಐದು, ಅಡಿಗರದೊಂದು ಎರಡು–ಮೂರು, ಕೆ. ಎಸ್. ನ. ಅವರ ದೊಂದು ನಾಲ್ಕಾರು ಉಳಿದಾವೇನು? ಇಷ್ಟೇ ತಾನೇ ಸರಕು?" ಎಂದೋ, "ಸಾವಿರದೈನೂರು ವರ್ಷಗಳ ಸಾಹಿತ್ಯ ಚರಿತ್ರೆಯುಳ್ಳ ಕನ್ನಡದಲ್ಲಿ ಪಂಪ, ಕುಮಾರ ವ್ಯಾಸ ಇಬ್ಬರನ್ನು ಬಿಟ್ಟರೆ, ಹೆಸರು ಹೇಳಲು ಅರ್ಹರಾದ ಮೂರನೆಯವರು ಯಾರಿದ್ದಾರೆ? All minor poets!" ಎನ್ನುವ ಮಹಾನುಭಾವರು ನಮ್ಮಲ್ಲಿ ಸಾಕಷ್ಟು ಜನವಿಲ್ಲದೆ ಇಲ್ಲ–ಎಂಬುದೇ ಇದಕ್ಕೆ ನಿದರ್ಶನವಾಗಬಲ್ಲದು.

ವಿಮರ್ಶೆ ಧಾತುಗೆಡುವ ಇನ್ನೊಂದು ಸಂದರ್ಭ ಇದು: "ಸಾಹಿತ್ಯಕ್ಕೇ ವಿಶೇಷ ವಾಗಿ ಸಲ್ಲದ ಲೋಕೋತ್ತರ, ಆಧ್ಯಾತ್ಮ, ಬ್ರಹ್ಮಾನಂದ, ರಸಸಿದ್ಧಿ, ಮೇರುಕೃತಿ– ಮುಂತಾದ ಮಾತುಗಳನ್ನು ತಿಳಿದವರೆಂಬವರೂ ಪಂಡಿತ ಅಲ್ಲದವರೂ–ಅಗ್ಗ ಮಾಡಿ ಬಳಸುವಾಗ ವಿಮರ್ಶೆ ಕೆಡುತ್ತದೆ." ಇಂಥ ಜಾರ್ಗನ್ನುಗಳ ಬಳಕೆಯೇನೂ ನಮ್ಮ ಸಾಹಿತ್ಯ ವಿಮರ್ಶೆಯಲ್ಲಿ ಸಾಕಷ್ಟು ಕಂಡುಬರುತ್ತದೆ; ಇತ್ತೀಚೆಗೆ ಇವನ್ನು ಬಳಸುವ ಚಟ ಹೆಚ್ಚಾಗಿಯೂ ಇದೆ. ಆ ಪಟ್ಟಿಗೆ ಇನ್ನೂ ಕೆಲವನ್ನು ಸೇರಿಸಬಹುದು: ದರ್ಶನ ಧ್ವನಿ, ದರ್ಶನ ವಿಮರ್ಶೆ, ಸಮಗ್ರದೃಷ್ಟಿ, ಸಮಷ್ಟಿ ದೃಷ್ಟಿ, ಪೂರ್ಣದೃಷ್ಟಿ– ಇತ್ಯಾದಿ. ಸಾಹಿತ್ಯದಲ್ಲಿಯಾಗಲಿ, ವಿಮರ್ಶೆಯಲ್ಲಿಯಾಗಲಿ, ಅಥವಾ ಜೀವನದ ಯಾವುದೇ ವಿಷಯದಲ್ಲಿಯಾಗಲಿ ಪೂರ್ಣದೃಷ್ಟಿ, ಸಚ್ಚಿದಾನಂದ, ಬ್ರಹ್ಮಾನಂದ ಮುಂತಾದ ಅಬ್ಬರದ ಮಾತುಗಳನ್ನು ಬಳಸುವುದನ್ನು ವಿ. ಸೀ. ಸಹಿಸರು. "ಯಾರ ದೃಷ್ಟಿ ಪೂರ್ಣ?" ಎಂದು ಅವರು ಪ್ರಶ್ನಿಸುತ್ತಾರೆ; "ಅಂಥ ಪೂರ್ಣವೆಂದು ಒಪ್ಪುವ ನಾಲ್ಕಕ್ಕೆ ಘರ್ಷಣೆ ಬಂದರೇನು ಗತಿ?" ಎಂದು ಸವಾಲು ಹಾಕುತ್ತಾರೆ.

ಒಂದು ಸಂಗತಿ ನೆನಪಾಗುತ್ತದೆ. ಇಂದು ನಮ್ಮ ವಿಮರ್ಶಕರಲ್ಲಿ ಹಲವರು ಪಾಶ್ಚಾತ್ಯ ವಿಮರ್ಶೆಯನ್ನು ವಿಮರ್ಶಕರನ್ನು ಆರಾಧಿಸುತ್ತಿರುವುದುಂಟು; ಕಣ್ಣು ಮುಚ್ಚಿಕೊಂಡು ಅನುಕರಿಸುತ್ತಿರುವುದುಂಟು; ಅಲ್ಲಿಯು ಎಷ್ಟು ಮಂದಿಯೊ ಅಥಾರಿಟಿಗಳು! ಫ್ರೆಂಚ್ ಸ್ಕೂಲಿನವರು, ಸೈಂಟ್ಸ್‌ಬರಿಯ ಚಾರಿತ್ರಿಕ ಸ್ಕೂಲಿ ನವರು, ರಿಚರ್ಡ್ಸ್, ಅಬರ್‌ಕ್ರಾಂಬಿ, ಪೌಂಡ್, ಎಲಿಯಟ್, ಎಫ್. ಆರ್. ಲೆವಿಸ್, ಬ್ರೂಕ್ಸ್, ವಿಲಿಯಮ್ಸ್, ವೆಲ್ಲೆಕ್–ವಾರೆನ್–ಒಬ್ಬೊಬ್ಬರದೂ ಒಂದೊಂದು ಬಗೆಯ ದೃಷ್ಟಿಯ, ಸೃಷ್ಟಿಯ ವಿಮರ್ಶೆ! ಇವರಲ್ಲಿ ಯಾರ ವಿಮರ್ಶಾ ದೃಷ್ಟಿಯನ್ನು, ರೀತಿ ವಿಧಾನವನ್ನು, ಸಮರ್ಪಕವೆಂದು ಮತ್ತು ಯಾರದು ಸಾಕಲ್ಯ ವಾದ ಸಂಪನ್ನವಾದ ವಿಮರ್ಶೆಯೆಂದು ಒಪ್ಪುವುದು? ನಮ್ಮಲ್ಲಿ ಧಾರಾಳವಾಗಿ ಇಂದು ಉದ್ಧರಿಸುತ್ತಿರುವ ಪೌಂಡ್–ಎಲಿಯಟ್‌ರನ್ನು ಕುರಿತು, ಅವರ "ಇನ್ನಿಂಗ್ಸ್ ಎಂದೊ ಮುಗಿದುಹೋಯಿತು" ಎಂದು ೧೯೪೦ ರಷ್ಟು ಹಿಂದೆಯೇ ಜಾರ್ಜ್ ಆರ್ವೆಲ್ ನುಡಿಯುತ್ತಾನೆ....ಇವೊತ್ತು ಸ್ಪೆಂಡರ್, ಫುಲ್ಲರ್ ಹೇಳುತ್ತಿರುವುದೂ ಅದನ್ನೇ....ಇಂಥಲ್ಲಿ ಯಾವ ರೀತಿಗೆ, ವಿಧಾನಕ್ಕೆ, ವಿಮರ್ಶನ ಪದ್ಧತಿಗೆ ಬೆಲೆ ಕೊಡು ವುದು? ಇನ್ನು "ಬ್ರಹ್ಮಾನಂದ": "ಕಾವ್ಯದಲ್ಲಿ ಅಂಥದೆಲ್ಲಿ ಬರಬೇಕು? ಒಂದು ಒಗ್ಗ

ರಣೆಯ ವಾಸನೆ ಬಂದರೆ, 'ಅಪ್ಪಾ' ಅವರು ಹತ್ತಿರ ಸುಳಿದರೆ, ಇಲ್ಲಿಯ ಸಮಾಧಿ ಮುರಿಯಬಲ್ಲದು. ಸಮಾಧಿ ಶಿಥಿಲವಾಗುವುದು ಇಲ್ಲಿ ಸುಲಭ" ಎನ್ನುತ್ತಾರೆ ವಿ.ಸೀ. ಅವರು ಬಯಸುವುದಿಷ್ಟೆ: "ಲೀನಾರ್ಥದಲ್ಲಿ 'ಆನಂದ'ವನ್ನು ಬೆಳಸಬಹುದು. ಅತಿರೇಕಗಳಿಗೆ ಹೋಗಿ ಹೋಲಿಕೆಯ ಕೈವಲ್ಯಗಳನ್ನು ಮುಟ್ಟಬಾರದು."

ಸಾಹಿತ್ಯ ವಿಮರ್ಶೆಯಲ್ಲಿ ಇರಬೇಕಾದ ಗುಣಲಕ್ಷಣಗಳೇನು? ಎಂಬುದನ್ನು ಲಕ್ನೋ ನಗರದಲ್ಲಿ ನಡೆದ ಪಿ.ಈ ಎನ್. ಸಾಹಿತ್ಯ ಸಮ್ಮೇಳನದ ಅಧ್ಯಕ್ಷ ಭಾಷಣದಲ್ಲಿ ವಿ. ಸೀ. ಹೀಗೆ ಸಂಕ್ಷಿಪ್ತಿಸಿದ್ದಾರೆ. ಅದು ವಿಮರ್ಶೆ ಮಾಡಬೇಕಾಗಿರುವ ಕಾರ್ಯವನ್ನೂ ಪರಿಚಯಿಸುತ್ತದೆ:

"ವಿಮರ್ಶೆ ಎಲ್ಲ ಸಂದರ್ಭಗಳಲ್ಲಿಯೂ ಸಹನಶೀಲವಾಗಿರಬೇಕು. ವಿವೇಕಯುತವಾದ ಸಾಕಲ್ಯವನ್ನು ಪಡೆಯಬೇಕು. ಅದು ಸಾಹಿತ್ಯ ಸೃಷ್ಟಿಗೆ ಪ್ರೇರೇಪಣೆ ಕೊಡಬೇಕು; ನಡೆಸಬೇಕು: ಹಳ್ಳ–ಕೊಳ್ಳ ಎಲ್ಲಿದೆ ಮಾರ್ಗದಲ್ಲಿ ಎಂಬುದನ್ನು ತೋರಿಸಬೇಕು. ಎಲ್ಲಿ ಯಾವುದಾದರೂ ಒಂದು ಭಾಗ ಕೆಟ್ಟಿತು, ನೀರಸವಾಯಿತು, ಬೇಸರ ತಂದೀತು–ಎಂದು ತಿಳಿಸಬೇಕು.... **ವಿಮರ್ಶೆ ಒಂದು ಪಂಜು; ರಾಜದಂಡ**ವಲ್ಲ. ಅದು ಎಲ್ಲ ಬಗೆಯ ಬೆಲೆಗಾಣ್ಕೆಯ ಪ್ರಕಾಶಕ್ಕೂ ಅವಕಾಶ ಮಾಡಿಕೊಡಬೇಕು. ಶಾಸನ, ವಿಧಿ ಮಾಡಬಾರದು: ಅಡ್ಡ ಬರಬಾರದು; ತೆಗಳಿ ನುಡಿಯಬಾರದು. ಅದು ನೆರವು, ಒಡನಾಡಿ. ಸಾಹಿತ್ಯ ಸಾಹಸದಲ್ಲಿ ಜೊತೆ ನಡೆಯುವ ಸಂಗಡಿಗ ಆತ್ಮಶಕ್ತಿ. ಕಾಲಚಕ್ರದಲ್ಲಿ ಹುಟ್ಟಿಕೊಳ್ಳುವ ಅಭಿರುಚಿಗಳನ್ನೂ ಮೌಲ್ಯಗಳನ್ನೂ ಎದುರಿಸಿ ಉಳಿಯಬೇಕಾದ, ಉಳಿಸಬೇಕಾದ ಒಂದು ಸತ್ವ."

ಇದರಿಂದ ವಿಮರ್ಶೆಯ ಸ್ಥಾನಮಾನಗಳು ಎಷ್ಟು ಉನ್ನತವಾದುದೆಂದು ಸ್ಪಷ್ಟವಾಗುತ್ತದೆ. ಇನ್ನೂ ಒಂದು ಹೆಜ್ಜೆ ಮುಂದೆ ಹೋಗಿ, ವಿ. ಸೀ. ತಾವು ವೈಯಕ್ತಿಕವಾಗಿ ಮೆಚ್ಚುವ ವಿಮರ್ಶೆಯ ಸ್ವರೂಪವೆಂಥದೆಂಬುದನ್ನು ಕಾರಂತರನ್ನು ಕುರಿತು ಅವರು ಬರೆದಿರುವ ಒಂದು ಪರಿಚಯಾತ್ಮಕ ಕಿರುಹೊತ್ತಿಗೆಯಲ್ಲಿ ತಿಳಿಸಿದ್ದಾರೆ; ಅದು ಅತ್ಯಂತ ಗಮನಾರ್ಹವಾದುದು.

"ನಮಗೆ ಅಭಿಮಾನವೂ ಪ್ರೇಮವೂ ಇರುವ ವ್ಯಕ್ತಿಗಳ ಕೃತಿಗಳಿಗೆ ಬೆಲೆ ಕಟ್ಟುವಲ್ಲಿ ನಮ್ಮ ಮೌಲ್ಯಾಂಕನದ ರೀತಿ, ಬಣ್ಣ ಬೇರಾಗಬಹುದು; ತೂಕ ತಪ್ಪಬಹುದು. ಕೃತಿಯ ನಿಷ್ಪಕ್ಷಪಾತ ವಿಮರ್ಶೆಗೆ ಆತ್ಮೀಯತೆಯೇ ದೊಡ್ಡ ತೊಡಕಾಗಿ ನಿಲ್ಲಬಾರದೆಂಬುದನ್ನು ನಾನು ಬಲ್ಲೆ....ಆದರೂ ವ್ಯಕ್ತಿ ನಿರಪೇಕ್ಷವಾದ, ಅತ್ಯಂತ ವೈಜ್ಞಾನಿಕವೆನಿಸುವ, ಹಿಮಗಡ್ಡೆಯಂತೆ ತಣ್ಣಗಿರುವ, ನಿರುದ್ವಿಗ್ನ ವಿಮರ್ಶೆ ನನಗೆ ಮೆಚ್ಚಲ್ಲ. **ಸಾಹಿತ್ಯದ್ದು ಅಂತಃಕರಣಪೂರಿತವಾದ ಮಾನವ್ಯ ಪ್ರಭಾವ ಎಂದು ನನ್ನ ಭಾವನೆ. ಅದರದು ಸೌಹಾರ್ದದ ಪ್ರಪಂಚ.** ಅಲ್ಲಿ ಪಕ್ಷಪಾತಗಳಿದ್ದೇ ಇರುತ್ತವೆ. ನಮ್ಮ ಬದುಕಿನ ಏನೆಲ್ಲ ನಮಗೆ ಪ್ರೀತಿ–ಅಪ್ರೀತಿಗಳನ್ನು ತರುವುವೊ ಅವೆಲ್ಲ ಆಳದಲ್ಲಿ ನಮ್ಮ ಮನಸ್ಸನ್ನು ರೂಪಿಸುತ್ತಲೇ ಇರುವುವು. ಆದುದರಿಂದ ಬರೆಯು

ವವನಲ್ಲಿ, ಓದುವವನಲ್ಲಿ ಅಭಿರುಚಿ ಇಷ್ಟಗಳಲ್ಲಿ ಭಿನ್ನತ್ವವುಂಟಾದರೆ, ವಿಮರ್ಶೆಯಲ್ಲಿ ಕಿಂಚಿತ್ ತೋಲ ತಪ್ಪಿದರೆ ಹಾನಿ ಇಲ್ಲವೆಂದು ತಿಳಿಯುವವನು ನಾನು. ಎಂದರೆ ಒಳ್ಳೆಯದರ ಪ್ರೀತಿಯಲ್ಲಿ ಸ್ವಲ್ಪ ಧಾರಾಳ ವಹಿಸಿದರೆ ಯಾರೂ ಅಸಹನೆ ಪಡಬಾರದು. ಕೀಳಾದ್ದನ್ನು ನಿರಾಕರಿಸುವಾಗ ಧಾರಾಳದ ಈ ಪ್ರಶ್ನೆ ಏಳಬೇಕಾದ್ದಿಲ್ಲ. ಎಲ್ಲಿಯೂ ಮರ್ಯಾದೆಯ ಮಿತಿಗಳಿವೆ."

ಸಾಹಿತ್ಯ ವಿಮರ್ಶೆಯಲ್ಲಿ ಮಾನವೀಯತೆಯ ಅಂಶವನ್ನು, ಅದಕ್ಕೆ ನೀಡಬೇಕಾದ ಮಾನ್ಯತೆಯನ್ನು ಒತ್ತಿ ಹೇಳುತ್ತ– "ನನ್ನ ಹೇಳಿಕೆ ಕೊನೆಯ ತೀರ್ಮಾನವಲ್ಲ" ಎಂದು ತಿಳಿಸಿ, ತಮ್ಮ ಪ್ರಾಮಾಣಿಕವಾದ ಅಭಿಪ್ರಾಯವನ್ನು ವಿ. ಸೀ. ಮುಂದುವರಿಸುತ್ತಾರೆ: "ವಿಮರ್ಶೆಯಲ್ಲಿ ಕೊನೆಯ ತೀರ್ಮಾನವೆಂಬುದುಂಟೆ? ಎಂದಾದರೂ ಇತ್ತೆ?– ಎಂಬುದೂ ನನಗೆ ಆಗಾಗ ತೋರುವ ಪ್ರಶ್ನೆಗಳು. ಅಲ್ಲದೆ ಯಾವುದನ್ನೂ ಸರ್ವರೂ ಒಪ್ಪಿಕೊಳ್ಳಬೇಕೆಂಬ ಹಟವೂ ನನಗಿಲ್ಲ. ವಿಚಾರಸರಣಿಯಲ್ಲಿ ಏಕಮುಖತೆ ಆಗತ್ಯವಾದರೂ ಬಹುಮುಖವಾದ ಸತ್ಯವನ್ನು ಪರೀಕ್ಷಿಸುವಾಗ ಕೇವಲ ಏಕಮುಖತೆ ಲೋಪವಾಗಲೂಬಹುದು. ಒಂದು ಸಾಕಲ್ಯ ಸಮೀಕ್ಷೆ ಸಾಧ್ಯವಾಗಬೇಕು. ಆ ಪ್ರಯತ್ನದಲ್ಲಿಯೂ ತೊಡಕುಂಟು. ಎಂದಿಗೂ ದಾರಿ, ವಿವಕ್ಷೆ, ಸಿದ್ಧಿಭೇದ ಉಂಟೇನೊ...."

ಸಾಕಲ್ಯ ಸಮೀಕ್ಷೆ ನೆಲೆಗೊಳ್ಳುವಂತೆ ಮಾಡಲು ಯಾವ ಬಗೆಯ ನಿರ್ದಿಷ್ಟ ಮಟ್ಟಗಳಾಗಲಿ, ನಿಯಮಗಳಾಗಲಿ, ಮೌಲ್ಯಮಾಪನ ಅಥವಾ ಅಳತೆಗೋಲಾಗಲಿ ಇಲ್ಲವಾಗಿದೆ; ಸಾಹಿತ್ಯ ವಿಮರ್ಶೆಯಲ್ಲಿ ಯಾವುದೇ ಒಂದು ಸಿದ್ಧಾಂತ ಸ್ಥಾಪನೆಗೊಂಡಿಲ್ಲ. ಮುನ್ನಡೆಸುವ ಕೆಲವು ದಾರಿದೀಪಗಳಿದ್ದರೂ ಅವು ಸಾರ್ವತ್ರಿಕವಾಗುವ, ಸಾರ್ವದೇಶಿಕವಾಗುವ ಸಾರ್ವಕಾಲಿಕವಾಗುವ ಯೋಗ್ಯತೆಯುಳ್ಳದವು. ಯಾವ ವಿಮರ್ಶೆಯೂ ಕೊನೆಯ ಹಂತದಲ್ಲಿ ವೈಯಕ್ತಿಕ ಅಭಿಪ್ರಾಯ ಮಾತ್ರ. ಅಲ್ಲಿ ಕೊನೆಯ ಮಾತೆಂಬುದು ಎಂದಿಗೂ ಶಕ್ಯವಿಲ್ಲ; ಯಾರದೂ ಅಧಿಕಾರ ವಾಕ್ಯವಲ್ಲ. ವಿಮರ್ಶೆಯಲ್ಲಿ ಕೊನೆಯ ಮಾತೆಂಬುದು ಬಂದಾಗೆಲ್ಲ ವಿ.ಸೀ.

"ಅವರವರಿಗೆ ತೋರಿದಂತೆ ಜನ ಮಿಡಿಯಲಿ; ಚಿಂತಿಸಲಿ, ನುಡಿಯಲಿ. ಅವರಲ್ಲಿ ಕಾವು, ಗುಣ, ಶಕ್ತಿ, ವಿವೇಚನೆ, ಸದಭಿರುಚಿ, ಮೃದು ಸಂಸ್ಕಾರಗಳಿದ್ದರೆ ಅದಕ್ಕೆ ಮಾನ ಬರುತ್ತದೆ; ಅಂಥವರ ಕವಿತೆ, ವಿಮರ್ಶೆ ಬೆಲೆಯುಳ್ಳದ್ದಾಗುತ್ತದೆ. ಇಲ್ಲವಾದರೆ ಕವಿ ವಿಮರ್ಶಕ ಇಬ್ಬರನ್ನೂ ಕಾಲ ಗುಡಿಸಿ ಹಾಕುತ್ತದೆ. ಅವರು ನಡೆದ ದಾರಿಯ ಮೇಲೆ ಗಾಳಿ ಬೀಸಿ ಅದರ ಜಾಡು ಸುಳಿವೇ ಕಾಣದಂತೆ ಅದನ್ನು ಹಾರಿಸಿ ಬಿಡುತ್ತದೆ...." ಎನ್ನುತ್ತಾರೆ. ಇದಕ್ಕಿಂತ ಹೆಚ್ಚಿನದೇನನ್ನು ಹೇಳಬಹುದಾಗಿದೆ?

ವಿ.

# ಹಣಪ್ರಪಂಚ-೧

ಕೆಲವು ವರ್ಷಗಳ ಕೆಳಗೆ ವಿ. ಸೀ. ಯವರು ಉಡುಪಿಗೆ ಬಂದಿದ್ದಾಗ ನಮ್ಮಲ್ಲಿ ಉಳಿ ಕೊಂಡಿದ್ದರು. ಬಸ್ಸಿನಿಂದ ಇಳಿದು ಒಳಕ್ಕೆ ಬಂದು ಹಾಸುಗೆಯ ಸುರುಳಿ ಬಿಚ್ಚಿದರು. ತಕ್ಷಣ ಧೋತ್ರಗಳ ಇರುಕಿನಿಂದ ಸದ್ದುಗದ್ದಲವಿಲ್ಲದೆ ಒಂದು ಪತ್ರಿಕೆ ಹೊರಬಿತ್ತು. ಅದು ಲಂಡನ್ನಿನ ಪ್ರಸಿದ್ಧ 'ಇಕಾನಮಿಸ್ಟ್'-ತೆಳುವಾದ ಏರ್‌ಮೇಯಿಲ್ ಆವೃತ್ತಿ. ವಿ.ಸೀ. ಹೋದಲ್ಲೆಲ್ಲ ಇಕಾನಮಿಸ್ಟ್ ಸಂಚರಿಸುತ್ತದೆ, ಯಾತ್ರೆಗೆ ಏಳಸುತ್ತದೆ ಎಂದು ನಾನು ತಿಳಿದುದು ಆಗಲೇ. 'ಇಕಾನಮಿಸ್ಟ್'ಗೆ ವರ್ಷಕ್ಕೆ ನೂರಾರು ರೂಪಾಯಿ ನಷ್ಟು ಖರ್ಚಾಗುತ್ತದೆ. ಖಾಸಗಿ ಹಣ ಪ್ರಪಂಚವು ಅಷ್ಟೇನೂ ವಿಸ್ತೃತವಾಗಿರದ ಒಬ್ಬ ವ್ಯಕ್ತಿ ಇಷ್ಟು ವರ್ಷ ಕಾಲ ಇಕಾನಮಿಸ್ಟ್ ಚಂದಾದಾರನಾಗಿ ಇರಬೇಕಾದರೆ, ಯಾವುದನ್ನು ರುಚಿ ಇಲ್ಲದವರು ವಿಲಾಸಿ ಸಾಮಗ್ರಿ (Luxury) ಎಂದು ತಿಳಿಯ ಬಹುದೋ ಅಂಥದನ್ನು ಇವರು ಅನಿವಾರ್ಯ ಆಹಾರ (Necessity) ವೆಂದು ಭಾವಿಸುವರೆಂಬುದು ಸಿದ್ಧವಾಯಿತು.

'ಇಕಾನಮಿಸ್ಟ್'ನಲ್ಲಿ ಬರುವ ಅರ್ಥಶಾಸ್ತ್ರದ ಮತ್ತು ರಾಜನೀತಿಯ ತಜ್ಞ ವಿಚಾರಗಳನ್ನು ಗ್ರಹಣ ಮಾಡುವುದು ಅರ್ಥಶಾಸ್ತ್ರವನ್ನು ವಿಶೇಷವಾಗಿ ಅಧ್ಯಯನ ಮಾಡುವ ಎಲ್ಲ ಆನರ್ಸ್ ಪದವೀಧರರಿಗಾದರೂ ಸುಲಭವೆಂದು ಯಾರೂ ತಿಳಿಯ ಬಾರದು. ಅಂಥಲ್ಲಿ ವಿ. ಸೀ. ಕ್ಷಣಮಾತ್ರದಲ್ಲಿ ವಿಷಯಗ್ರಹಣ ಮಾಡುವರು; ಮರು ಕ್ಷಣ ಇಕಾನಮಿಸ್ಟ್ ಸಂಪಾದಕೀಯದ ಮೇಲೆ ಬೇರೊಂದು ಸಂಪಾದಕೀಯವನ್ನು ಬರೆಯುವಂತೆ ಭಾರತೀಯ ದೃಷ್ಟಿಕೋನದಿಂದ, ವಿ. ಸೀ. ದೃಷ್ಟಿಕೋನದಿಂದ, ನಿಶಿತ ವಾದ ಆಂಗ್ಲಶೈಲಿಯಲ್ಲಿ ವಿಮರ್ಶಿಸಲು ಆರಂಭಿಸುವರು. ಅರ್ಥಶಾಸ್ತ್ರದ ಅಧ್ಯಾಪನ ಕಾರ್ಯದಲ್ಲಿ ನಿರತರಾಗಿಲ್ಲದೆಯೂ ಅದರ ಬಗ್ಗೆ ಅತ್ಯುತ್ಸಾಹದಿಂದ ಮಾತಾಡುವ ಜನ ವಿ. ಸೀ.ಯನ್ನು ಬಿಟ್ಟರೆ ಬೇರೆ ಯಾರಿದ್ದಾರೊ ನಾ ತಿಳಿಯೆ. ಅರ್ಥಶಾಸ್ತ್ರವನ್ನು ಬರಡು ವಿಜ್ಞಾನವೆಂದು ಕಾರ್ಲೈಲ್ ಎಂದೋ ಕರೆದಿದ್ದಾನೆ. ವಿ. ಸೀ. ಯವರ ಕೈಯಲ್ಲಿ ಆರ್ಥಿಕ ವಿಚಾರಗಳು ಚಿಗುರೆಲೆ ಹೂ ಬಿಟ್ಟು ಕಾವ್ಯವಾಗುವುದನ್ನು ಕಂಡ ವರು, ಕೇಳಿದವರು ಈ ಮಾತನ್ನು ನಂಬಲಾರರು.

## ಅತಿ ತೊಡಕಿನ ವಿಭಾಗ

ನಮ್ಮ ನಾಡಿನಲ್ಲಿ ಅರ್ಥಶಾಸ್ತ್ರದ ಅಧ್ಯಯನವು ಈಗರ್ಧ ಶತಮಾನದಿಂದ ವಿಶ್ವ ವಿದ್ಯಾನಿಲಯಗಳಲ್ಲಿ ಪ್ರಚಾರವಾಗಿರುವುದಾದರೂ, ದೇಶದ ತುಂಬಾ ನೂರಾರು ಅರ್ಥಶಾಸ್ತ್ರದ ಗ್ರಂಥಗಳನ್ನು ಓದಿದವರು ಇರಬಹುದಾದರೂ ನಿಜವಾಗಿ ಅರ್ಥಶಾಸ್ತ್ರದ ಪ್ರಗತಿಗೆ ಭಾರತದಿಂದ ಸಂದ ಕೊಡುಗೆ ತೀರ ಅಲ್ಪ. ಭಾರತದ ಅರ್ಥಶಾಸ್ತ್ರಿಗಳು ಯಾರು? ಎಂಬ ಪ್ರಶ್ನೆಗೆ ಉತ್ತರವನ್ನು ಬೆರಳಿನಲ್ಲಿ ತಿಳಿಸಿ ಹೇಳಲು ಸಾಧ್ಯವಾಗುತ್ತದೆ. ಅಂಥ ಬೆರಳೆಣಿಕೆಯವರಲ್ಲಿ ವಿ. ಸೀ. ಅವರ ಗುರುಗಳಾದ ಶ್ರೀ ಎನ್. ಎಸ್. ಸುಬ್ಬರಾಯರು ಒಬ್ಬರು. ವಿ. ಸೀ.ಯವರ ಕುರಿತು ಸುಬ್ಬರಾಯರಿಗೆ ಬಹಳ ಅಭಿಮಾನವಂತೆ. "ಅರ್ಥಶಾಸ್ತ್ರ, ಕನ್ನಡ ಎರಡರಲ್ಲಿಯೂ ವಿದಿತವಾದ ಯೋಗ್ಯತೆಯುಳ್ಳ ನನ್ನ ಶಿಷ್ಯರೊಬ್ಬರು ಅತ್ಯಂತ ಫಲಕಾರಿಯಾದ ಈ ಸೇವಾಕ್ಷೇತ್ರದ ಕಡೆಗೆ ತಿರುಗಿದುದು ಅರ್ಥಶಾಸ್ತ್ರದ ವಿದ್ಯಾರ್ಥಿಯಾದ ನನಗೆ ವಿಶೇಷ ತೃಪ್ತಿಯನ್ನು ಉಂಟುಮಾಡುವ ಸಂಗತಿ" ಎಂದು ಅವರು 'ಹಣ ಪ್ರಪಂಚ'ದ ಮುನ್ನುಡಿಯಲ್ಲಿ ಹೇಳಿದ್ದಾರೆ. ಅರ್ಥಶಾಸ್ತ್ರದ ಅಧ್ಯಾಯಗಳಲ್ಲಿ ಫಿನಾನ್ಸ್ ಅತಿ ತೊಡಕಿನ ವಿಭಾಗ; ಹೆಚ್ಚಾಗಿ ವಿದ್ಯಾರ್ಥಿಗಳು ಗಿಳಿಪಾಠಮಾಡಿ ಒಪ್ಪಿಸಿ ಕೈತೊಳೆದುಕೊಳ್ಳುವ ಭಾಗ. ಇದನ್ನೇ ವಿ. ಸೀ. ಆರಿಸಿದುದು ಅವರ ಎದೆಗಾರಿಕೆಯನ್ನು ಸೂಚಿಸುತ್ತದೆ; ಇದರ ವಿವರಣ, ವಿಶ್ಲೇಷಣೆಯಲ್ಲಿ 'ಅವರು ಪಾಂಡಿತ್ಯವನ್ನೂ ತುಂಬಿದ ತಿಳುವಳಿಕೆಯನ್ನೂ ಪ್ರಯೋಗಿಸಿದ್ದಾರೆ'ಂದು ಶ್ರೀ ಸುಬ್ಬರಾಯರು ನುಡಿದಿದ್ದಾರೆ.

'ಹಣಪ್ರಪಂಚ'ದಲ್ಲಿ ವಿಷಯವನ್ನು ಚಿತ್ರಿಸಿದ ರೀತಿ ಕೇಂಬ್ರಿಜ್ ಪಂಥಕ್ಕೆ ಸೇರಿದುದು. ಲಾರ್ಡ್ ಕೇನ್ಸರ ದಾರಿಯಲ್ಲಿ ನಡೆದುದು. ಪಿಗೊ, ಹಾಟ್ರೀ, ರಾಬರ್ಟ್ಸನ್, ಸ್ಟಾಂಪ್, ಕ್ಯಾಪೆಲ್, ಡಾಲ್ಟನ್ ಮುಂತಾದವರ ಬರವಣಿಗೆಗಳಿಂದ ಪ್ರಯೋಜನವನ್ನು ಪಡೆದುದು. ಅನುಬಂಧಗಳ ಅಂಕಿಸಂಖ್ಯೆಗಳು ಅಧಿಕೃತ ಪತ್ರಿಕೆ ಮತ್ತು ವರ್ಗಗಳಿಂದ ಸ್ವೀಕರಿಸಿದುವು. ೩೬೬ ಪುಟಗಳ ಈ ಗ್ರಂಥದಲ್ಲಿ ಅರ್ವಾಚೀನ ಯುಗದಲ್ಲಿ ಹಣವು ಮಾಡುವ ಸಕಲ ಕಾರ್ಯಗಳನ್ನೂ ಸವಿವರವಾಗಿ ನಿರೂಪಿಸಲಾಗಿದೆ. ಇದರಲ್ಲಿ ಅಡಕವಾಗಿರುವ ವಿಷಯವೇನೆಂಬುದನ್ನು ವಿ. ಸೀ. ಯವರು ಗ್ರಂಥದ ಆದಿಯಲ್ಲಿ ತಿಳಿಸಿದ್ದಾರೆ.

"ಈಗಿನ ಸಾಮಾಜಿಕ ಮತ್ತು ಆರ್ಥಿಕ ವ್ಯವಸ್ಥೆಯಂತೆ ದಿನಚರಿಯ ಬದುಕಿನಲ್ಲಿ ಅನೇಕ ಮೇಲು ಬೀಳುಗಳೂ, ಕಷ್ಟ ಸುಖಗಳೂ, ನ್ಯಾಯ ಅನ್ಯಾಯಗಳೂ ಹಣದಿಂದ ಉಂಟಾಗುತ್ತವೆ. ಸಂಪತ್ತಿನ ಉತ್ಪತ್ತಿ, ಮಾರುವೆ, ಹಂಚಿಕೆ ಭೋಗಸಾಧನಗಳಲ್ಲೆಲ್ಲ ಹಣದ ಸ್ಥಾನ ದೊಡ್ಡದು. ಹಣವೆಂದರೆ ಚಾಲ್ತಿ ಹಣ ಜನರ ಸ್ವಂತದ್ದಾಗಲಿ, ಸಾಲದ್ದಾಗಲಿ, ದೇಶದಲ್ಲಿ ಸಂಚರಿಸುವ ನಾಣ್ಯ, ನೋಟು, ಚೆಕ್ಕು. ಸರಕಾರಗಳವರೂ, ಬ್ಯಾಂಕುಗಳವರೂ ಅದರ ಪ್ರಚಾರಕರು. ಇತರೆ ಪದಾರ್ಥಗಳಿಗೆ ಹೇಗೋ

ಹಾಗೆಯೇ ಹಣಕ್ಕೂ ಬೆಲೆಯುಂಟು. ಈ ಬೆಲೆ ಏರಿ ಇಳಿಯುವುದುಂಟು. ಅಂಥ ಏರಿಳಿತಗಳಿಂದ ಜನ ವರ್ಗಕ್ಕೆ ಬಗೆ ಬಗೆಯ ತೊಂದರೆ, ತೊಡಕು, ಲಾಭ, ನಷ್ಟ ಆಗುತ್ತವೆ. ಆದ್ದರಿಂದ ಹಣದ ಪ್ರಚಾರಕರು ಅದನ್ನು ಒಂದು ಹದದಲ್ಲಿ ಹದ್ದಿನಲ್ಲಿ ನಡೆಸಬೇಕಾದುದು ಅಗತ್ಯವಾಗುವುದು. ಒಳವ್ಯಾಪಾರದಲ್ಲಿ ಧಾರಣೆವಾಸಿಗಳೂ, ಹೊರವ್ಯಾಪಾರದಲ್ಲಿ ಮಾರುವೆಯ ದರವೂ ಹಣದ ಬೆಲೆಯನ್ನು ಅಳೆಯುವುವು. ಇವೆರಡಕ್ಕೂ ಸಂಬಂಧವಿದೆ. ಧಾರಣೆವಾಸಿಯನ್ನು ಒಂದು ಧಾತುವಿನಲ್ಲಿ ನಡೆಸಿದರೆ ದೇಶದ ಒಳ ಸೌಖ್ಯವನ್ನು ಸಾಧಿಸಬಹುದಲ್ಲದೆ ಮಾರುವೆಯ ದರವನ್ನು ತಿದ್ದಿ ಸರಿಮಾಡಿಕೊಳ್ಳಬಹುದೆಂದು ಕೆಲವರ ಮತ. ಇದನ್ನು ಸಾಧಿಸಲು ಸಂಸ್ಥೆ ಸಾಧನಗಳೂ ಕಾರ್ಯವಿಧಾನಗಳೂ ಪೇಟೆಯ ವ್ಯವಸ್ಥೆಯೂ ಹೇಗಿರಬೇಕು? ಯಾವ ನಿಯಮ ಶಾಸನಗಳು ಕಾರ್ಯಗತಿಯನ್ನು ನಿರ್ಧರಿಸಬೇಕು? ಎಂಬ ಸಂಗತಿಗಳು ಇಲ್ಲಿ ಮುಖ್ಯವಾಗುವುವು.

## ಸೆಂಟ್ರಲ್ ಬ್ಯಾಂಕ್

ಚಾಲ್ತಿ ಹಣ (೧) ಕಿರುವಾಯಿದೆಯ, ಅಂದರೆ ಮೂರು ತಿಂಗಳ ಅವಧಿಗೆ ಮೀರದ ಸಾಲದ ಹಣ ವ್ಯಾಪಾರದ ಪೇಟೆಗೆ ಬೇಕು. (೨) ನಿಡುವಾಯಿದೆಯದು ಬಂಡವಾಳದ ಪೇಟೆಗೆ ಬೇಕು. ಕಿರುವಾಯಿದೆಯ ಪೇಟೆಯಲ್ಲಿ ವ್ಯಾಪಾರದ ಬ್ಯಾಂಕುಗಳೂ, ಪಟ್ಟದ ದಲ್ಲಾಳರೂ ಪ್ರಬಲರು. ಇಲ್ಲಿನ ಹಣದ ಸಂಚಾರವನ್ನೂ, ಮೊತ್ತವನ್ನೂ, ಪಟ್ಟ ಮತ್ತು ಬಡ್ಡಿಯ ದರಗಳನ್ನೂ ದೇಶದ ಸೆಂಟ್ರಲ್ ಬ್ಯಾಂಕು ತನ್ನ ಬ್ಯಾಂಕ್ ರೇಟಿನ ಮೂಲಕ ಆಳುವುದು. ವ್ಯವಸಾಯ, ಕೈಗಾರಿಕೆ, ಆಸ್ತಿ ನಿರ್ಮಾಣ ಮುಂತಾದ ಕ್ಷೇತ್ರಗಳಿಗೆ ನಿಡುವಾಯಿದೆ ಹಣದ ನೆರವು ಬೇಕು. ಇಶ್ಯೂ ಅಂಗಡಿಗಳು, ಕೈಗಾರಿಕೆ ಬ್ಯಾಂಕುಗಳು. ಬಾಂಡು. ಷೇರು, ಸ್ಟಾಕುಗಳ ಅಚ್ಚುಕಟ್ಟು, ಸ್ಟಾಕ್ ಎಕ್ಸ್‌ಚೇಂಜುಗಳ ವ್ಯವಹಾರ ಇತರ ಬಂಡವಾಳಸ್ಥರು–ಈ ಪ್ರಪಂಚದ ವಿಶೇಷ ಸಾಧನಗಳು. ಆ ಪೇಟೆಯಲ್ಲಿ ಚೆಕ್ಕು ಹುಂಡಿಗಳ ಮತ್ತು ಪಟ್ಟದ ದರಗಳ ಚಲನೆ ಹೇಗೋ ಇಲ್ಲಿ ಷೇರು, ಬಂಡವಾಳಗಳ ಮತ್ತು ಬಡ್ಡಿಯ ದರಗಳ ಚಲನೆ ಹಾಗೆ ಮುಖ್ಯ ಲಕ್ಷಣ. ಈ ಎರಡು ಪೇಟೆಗಳಿಗೂ ಹಣದ ಸೌಕರ್ಯಗಳನ್ನು ಒದಗಿಸಿ, ಧಾರಣೆವಾಸಿ, ಮಾರುವೆಯ ದರ, ಬಡ್ಡಿಯ ದರ, ಉದ್ಯೋಗ ಇವುಗಳನ್ನು ಒಂದು ತಾನದಲ್ಲಿ ನಡೆಸುತ್ತಾ ಸಂಪನ್ಮಂಡಲವನ್ನು ಕಾಯುವ ಮತ್ತು ಅಭಿವೃದ್ಧಿಗೆ ತಿದ್ದುವ ಸಂಸ್ಥೆ ಸೆಂಟ್ರಲ್ ಬ್ಯಾಂಕು.

ಎರಡು ಪೇಟೆಗಳಲ್ಲಿಯೂ ಸರಕಾರದವರ ಕೈವಾಡ ಬಹು ಪರಿಣಾಮಕಾರಿಯಾಗ ಬಲ್ಲದು. ಆದ್ದರಿಂದ ಅವರ ಹಣ ಕಾರ್ಯವನ್ನೆಲ್ಲ ಈಗ ಸೆಂಟ್ರಲ್ ಬ್ಯಾಂಕುಗಳೇ ಮಾಡುವುದು ವಾಡಿಕೆ. ಅವರ ಆಯವ್ಯಯದ ಮತ್ತು ಸಾಲ ತೆಗೆಯುವ, ತೀರಿಸುವ, ವೆಚ್ಚಮಾಡುವ ರೀತಿನೀತಿಗಳಿಂದ ದೇಶದ ಆರ್ಥಿಕಮಂಡಲದ ಮೇಲೆ ತೀವ್ರವಾದ

ಪರಿಣಾಮಗಳುಂಟಾಗುವುವು. ಅವರ ಹಣಕಾರ್ಯಗಳಿಂದಲೂ, ವ್ಯಾಪಾರ ನೀತಿ, ತೆರಿಗೆಯ ನೀತಿಗಳಿಂದಲೂ ಹಣದ ಹವವೂ ಹದವೂ ಮಾರ್ಪಡಬಲ್ಲವು. ಅವುಗಳಿಂದ ಕೇಡು ತಟ್ಟದಂತೆ ಧನಮಂಡಲವನ್ನು ಕಾಯುವ ಜವಾಬ್ದಾರಿ ಸೆಂಟ್ರಲ್ ಬ್ಯಾಂಕುಗಳಿಗೆ ಸೇರಿದುದು. ಹಣದ ಅಲ್ಪಸಂಚಾರ ಅಥವಾ ಅತಿ ಸಂಚಾರದಿಂದ ಹಣದ ಪೇಟೆಯನ್ನು ಪಾರುಮಾಡಿ, ಪೋಷಿಸಿ ಅದನ್ನು ಒಟ್ಟು ಸಮಾಜದ ಮಂಗಳಕ್ಕೆ ತಿರುಗಿಸುವ ಕಾರ್ಯ ಅವರದು.

ಈ ಎಲ್ಲ ಸಂಬಂಧಗಳಲ್ಲಿಯೂ ವರ್ತಿಸುವ ಸಂಸ್ಥೆಗಳು, ಕ್ರಮಗಳು, ನಿಯಮಶಾಸನಗಳು, ಕಾರ್ಯದ ಫಲಾಫಲ, ಕಷ್ಟನಿಷ್ಠುರ, ಸುಖಸೌಕರ್ಯಗಳು ಏನು ಎಂಬುದನ್ನು ಸ್ಥೂಲವಾಗಿ ತಿಳಿಸಿ, ಇಷ್ಟನ್ನು ಇಂಡಿಯಾದೇಶವಲ್ಲಿ ಹೇಗೆ ಎಷ್ಟುಮಟ್ಟಿಗೆ ಅನುಸರಿಸುತ್ತಿದ್ದಾರೆ ಎಂಬುದನ್ನು 'ಹಣಪ್ರಪಂಚ'ದೊಳಗೆ ಸಂಚರಿಸಿದರೆ ತಿಳಿಯಬಹುದಾಗುತ್ತದೆ.

### ಕ್ರೌದರ್ ಮತ್ತು ವಿ. ಸೀ.

ವಿ. ಸೀ.ಯವರ ಈ ಗ್ರಂಥ ಪ್ರಕಟವಾದುದು ೧೯೩೦ರಲ್ಲಿ. ಅದೇ ಸುಮಾರಿಗೆ ಇಂಗ್ಲೆಂಡಿನಲ್ಲಿ 'ಇಕಾನಮಿಸ್ಟ್' ಸಂಪಾದಕರಾದ ಜಿ. ಕ್ರೌದರ್ ಕೂಡ ಇಂಥದೇ ಒಂದು ಗ್ರಂಥವನ್ನು ಬರೆಯಲು ಹಿಡಿದಿದ್ದರಂತೆ. ಕ್ರೌದರ್ ಅವರ "ಹಣದ ರೂಪರೇಖೆ" (An Outline of Money) 'ಹಣ ಪ್ರಪಂಚ'ಕ್ಕಿಂತ ಮೂರು ವರ್ಷಗಳ ಮೇಲೆ ಪ್ರಕಟವಾದರೂ ಇವೆರಡೂ ಸಮಕಾಲೀನ ರಚನೆಗಳು. ಎರಡೂ ಸಮಕಾಲೀನ ಕೇನ್ಸ್ ಪ್ರಭಾವದಿಂದ ಪರಿಣತವಾದುವು. ವಿ. ಸೀ. ಹೇಗೋ ಹಾಗೆ ಕ್ರೌದರ್ ಕೂಡ ಕೇನ್ಸ್ ಅವರನ್ನು ತಮ್ಮ ಮುನ್ನುಡಿಯಲ್ಲಿ ಸ್ಮರಿಸಿದ್ದಾರೆ. ಕೇನ್ಸ್ ಅವರ ವಜ್ರಕಠೋರವಾದ ಶೈಲಿ ಈ ಇಬ್ಬರಿಗೂ ಕರಗತವಾದಂತಿಲ್ಲ. ಇವರ ಉದ್ದೇಶಸಾಧನೆಗೆ ಅಂಥ ಶಾಸ್ತ್ರಭೂಯಿಷ್ಠಿತವಾದ ಘನ ಶೈಲಿ ಅಗತ್ಯವೂ ಇಲ್ಲ. ವಿ. ಸೀ. ಅವರ ಕನ್ನಡ, ಕ್ರೌದರ್ ಅವರ ಇಂಗ್ಲಿಷು ಎರಡೂ ಸುಮಕೋಮಲ. ಇಲ್ಲಿ ಕಾಠಿನ್ಯವೆಂಬುದು ಹತ್ತಿರ ಸುಳಿಯಲಾರದು. ಆದರೆ ವಿ. ಸೀ. ಯವರ ಗ್ರಂಥ ಕ್ರೌದರ್ ಅವರ "ಹಣದ ರೂಪರೇಖೆ"ಗಿಂತ ಹೆಚ್ಚು ವೈಶಾಲ್ಯವನ್ನು ಪಡೆದಿದೆ. ರಾಜಸ್ವ (Public finance)ದ ವಿವೇಚನೆಗೆ ಕ್ರೌದರರು ಕೈಹಾಕುವುದಿಲ್ಲ. ವಿ. ಸೀ. ಯವರಲ್ಲಿ ವಿಷಯಸಂಗ್ರಹ ವಿಪುಲವಾಗಿದೆ. ಆದರೆ ಆರಿಸಿದ ವಿಷಯಗಳ ಸಮರ್ಥನೆಯಲ್ಲಿ ಕ್ರೌದರ್ ಅನುಸರಿಸಿರುವ ಮಾರ್ಗ ಅಸಾಮಾನ್ಯವಾದದ್ದು; ಅವರ ವಿಚಾರದ ಅವಿರತಪ್ರವಾಹ, ತೊಡಕಿರದ ಶೈಲಿ ಅರ್ಥಶಾಸ್ತ್ರದ ಸುಲಭ ಗ್ರಂಥಗಳ ನಿರ್ಮಾಣಕ್ಕೆ ಆದರ್ಶಪ್ರಾಯವಾದುದು. ಈ ಮಟ್ಟಿನಲ್ಲಿಯೂ ವಿ. ಸೀ. ಕ್ರೌದರರಿಗಿಂತ ತುಸುವೇ ಹಿಂದೆ ನಡೆಯಬಲ್ಲರು ಎಂಬುದಕ್ಕೆ ಸಾಕಷ್ಟು ನಿದರ್ಶನಗಳನ್ನು ಹಣ ಪ್ರಪಂಚದಿಂದ ಒದಗಿಸಬಹುದು.

**ಹಣಪ್ರಪಂಚದ ವಿವರ**

'ಹಣಪ್ರಪಂಚ'ದ ವಿಸ್ತೃತಿಯನ್ನು ಅದರ ಪ್ರತಿಯೊಂದು ಅಧ್ಯಾಯದಲ್ಲಿಯೂ ಗುರುತಿಸಬಹುದು. ಪೀಠಿಕಾಭಾಗದಲ್ಲಿ ಆಧುನಿಕ ಅರ್ಥಮಂಡಲದ ಸಂಕ್ಷೇಪವಾದ, ಸುಚಿಯಾದ ವ್ಯಾಖ್ಯೆಯಿದೆ. ಎರಡನೆಯ ಪ್ರಕರಣದಲ್ಲಿ ಹಣದ ಉತ್ಪತ್ತಿಯ ಚರ್ಚೆ ಇದೆ. ನಾಣ್ಯ ಪದ್ಧತಿ ಪ್ರಮಿತಿಗಳು, ಸ್ವರ್ಣಪ್ರಮಿತಿ, ಮುಖ್ಯ ನಾಣ್ಯಗಳು, ನೋಟುಗಳು, ಚೆಕ್ಕುಗಳು, ಉದ್ದರಿ, ಚಾಲ್ತಿ ಹಣ ಮುಂತಾದ ಉಪಾದಾನಗಳ ಪರಿಚಯವು ಇದರಲ್ಲಿ ನಮಗೆ ದೊರೆಯುತ್ತದೆ. ಮೂರನೆಯ ಪ್ರಕರಣದಲ್ಲಿ ಹಣದ ಬೆಲೆಯ ಏರಿಳಿತದ ಪರಿಣಾಮಗಳನ್ನು ಚಿತ್ರಿಸಲಾಗಿದೆ. ಬೆಲೆಯ ಏರಿಳಿತದಿಂದ ವಿವಿಧ ಜನವರ್ಗಗಳ ಮೇಲೆ ಆಗುವ ಲಾಭನಷ್ಟಗಳ ವಿವೇಚನೆಯೂ, ಹಣದ ಮಾರುವೆಯ ದರದ ಸ್ಥೂಲ ವಿಚಾರವೂ ಇಲ್ಲಿ ಬಂದಿದೆ. ನಾಲ್ಕನೆಯ ಪ್ರಕರಣದಲ್ಲಿ ದೇಶದ ಒಳವ್ಯಾಪಾರದ ಕ್ಷೇತ್ರದಲ್ಲಿ ಬ್ಯಾಂಕುಗಳು ನಡೆಸುವ ಕೈವಾಡವನ್ನೂ ಐದನೆಯದರಲ್ಲಿ ವಿದೇಶಿ ವ್ಯಾಪಾರದ ರೀತಿನೀತಿಗಳನ್ನೂ ವಿಶ್ಲೇಷಿಸಲಾಗಿದೆ. ವಿದೇಶೀ ವ್ಯಾಪಾರದ, ಮಾರುವ ದರದ ವಿಚಾರವು ಅರ್ಥಶಾಸ್ತ್ರದಲ್ಲಿ ಬಹಳ ಜಿಡುಕಿನದಾದರೂ ವಿ. ಸೀ. ಯವರ ಸರಳವಾದ ಶೈಲಿಯಲ್ಲಿ ಅರ್ಥವತ್ತಾಗಿಯೂ ಸುಲಭಗ್ರಾಹ್ಯವಾಗಿಯೂ ಬಂದಿರುತ್ತದೆ. ಆರು, ಏಳು ಮತ್ತು ಎಂಟನೆಯ ಪ್ರಕರಣಗಳಲ್ಲಿ ಹಲವಾರು ಹಣಸಂಸ್ಥೆಗಳ ಕಾರ್ಯಭಾರವನ್ನು ವಿಸ್ತಾರವಾಗಿ ಬಣ್ಣಿಸಲಾಗಿದೆ. ಸೆಂಟ್ರಲ್ ಬ್ಯಾಂಕುಗಳ ಸ್ಥಾನಮಾನದ ಸ್ಥೂಲ ಪರಿಚಯವನ್ನು ೧೦ನೆಯ ಪ್ರಕರಣದಲ್ಲಿ ಮಾಡಿಕೊಳ್ಳಬಹುದು. ಸರಕಾರಕ್ಕೂ ಹಣ ಪ್ರಪಂಚಕ್ಕೂ ಇರುವ ಸಂಪರ್ಕವೇನೆಂಬುದನ್ನು ಮುಂದಿನ ಎರಡು ಅಧ್ಯಾಯಗಳಲ್ಲಿ ಮನನ ಮಾಡಬಹುದು. ಕೊನೆಯ ಅಧ್ಯಾಯದಲ್ಲಿ ಇಂಡಿಯಾ ದೇಶದ ಹಣದ ಪೇಟೆಯ ಬಲಾಬಲಗಳನ್ನೂ, ಹೊಂದಿಕೆ ವೈಷಮ್ಯಗಳನ್ನೂ ಸುಲಲಿತವಾಗಿ ಬಿತ್ತರಿಸಲಾಗಿದೆ.

**ಸಾಮಾನ್ಯ ಓದುಗನಿಗೆ**

ಎಲ್ಲ ಪ್ರಕರಣಗಳಲ್ಲಿಯೂ ವಿ. ಸೀ. ಯವರ ಶೈಲಿಯ ದ್ರಾಕ್ಷಾಪಾಕ ಸೊಗಸಿಸುವುದನ್ನು ನಾವು ಪದೇ ಪದೇ ಕಾಣುತ್ತೇವೆ. ಪ್ರಾಯಶಃ ಇಂಗ್ಲಿಷಿನಲ್ಲಿಯೇ ಆದರೂ ಶಾಸ್ತ್ರೀಯ ವಿಚಾರಗಳ ಮೇಲೆ ಬರೆಯುವವರು ಶೈಲಿಯ ಮೇಲಿನ ಪ್ರಭುತ್ವವನ್ನು ಈ ಪರಿಯಾಗಿ ಅಳವಡಿಸಿಕೊಂಡಿರುವುದು ಅಪೂರ್ವ. ಸಾವಿರಗಟ್ಟಲೆ ಗ್ರಂಥಗಳ ನಡುವೆ ವಿಷಯದ ಹಿಡಿತ ಮತ್ತು ಭಾಷೆಯ ಪ್ರಭುತ್ವ ಎರಡರಿಂದಲೂ ಮಾಹಿತಿಯನ್ನು ಪಡೆಯಬಲ್ಲ ಗ್ರಂಥಗಳು ವಿರಳವಾಗಿಯೇ ದೊರೆಯುವುವು. ಆದರೆ ಇಂಥ ಗ್ರಂಥಗಳನ್ನು ಓದುವವರಲ್ಲಿ ಲೇಖಕನು ಒಂದು ಮನೋಧರ್ಮವನ್ನು ನಿರೀಕ್ಷಿಸುತ್ತಾನೆ ಎನ್ನದೆ ಉಪಾಯವಿಲ್ಲ. ವಿಷಯ ತುಂಬಾ ಇದೆ, ಶೈಲಿ ವಿಶಿಷ್ಟ ಗುಣಸಂಪನ್ನವಾಗಿದೆ ಎಂದ ಮಾತ್ರಕ್ಕೆ ಕಾದಂಬರಿಗಳನ್ನೋದುವಂತೆ ನಾಲಗೆ ಚಪ್ಪ

ರಿಸಿಕೊಂಡು ಇವನ್ನು ಓದಬಹುದೆಂಬ ತೀರ್ಮಾನಕ್ಕೆ ಯಾರೂ ಬರುವಂತಿಲ್ಲ. ಹಾಗೆ ಬಂದರೆ ನಿರಾಶೆಯೇ ಗತಿ. ಕನ್ನಡದ ಸಾಮಾನ್ಯ ಓದುಗರ ಸಲುವಾಗಿ ಬರೆಯಲಾದ ಇಂಥ ಗ್ರಂಥಗಳಲ್ಲಿ 'ಸಾಮಾನ್ಯ ಓದುಗ'ನೆಂದರೆ ಯಾರು ? ಮನೋರಂಜನೆಗಾಗಿ ಮಾತ್ರವೆ ಪುಸ್ತಕಗಳ ಬಳಿ ಸುಳಿಯುವವನು ಖಂಡಿತವಾಗಿಯೂ ಅಲ್ಲವೆನ್ನಬೇಕು. ಸಾಧಾರಣ ಎಸ್. ಎಸ್. ಎಲ್. ಸಿ. ಯ ವರೆಗೆ ಓದಿರುವ ವಿದ್ಯಾರ್ಥಿ ಅಥವಾ ಪ್ರಪಂಚದ ಜ್ಞಾನವನ್ನು ಪತ್ರಿಕೆ, ಅನುಭವ ಮುಂತಾದುವುಗಳ ಮೂಲಕ ಮಾಡಿ ಕೊಂಡಿರುವ ವಯಸ್ಕ–ಇವರು ಮಾತ್ರವೇ 'ಸಾಮಾನ್ಯ ಓದುಗರು' ಎನಿಸಿಕೊಳ್ಳಲು ಅರ್ಹರು. ಜೀವನದಿಂದ ಬೇಸತ್ತು ವಿರಾಮಕಾಲದ ಓದಿಕೆಗಾಗಿ ಕಥೆಗಳನ್ನೆತ್ತಿಕೊಳ್ಳು ವವರಲ್ಲ. ಜೀವನವನ್ನು ತಿಳಿವಳಿಕೆಯಿಂದ ನಡೆಸಬೇಕು. ಆಧುನಿಕ ಜಗತ್ತಿನ ಆಗುಹೋಗುಗಳನ್ನು ವಿಚಾರಪೂರ್ಣವಾಗಿ ಮನನಮಾಡಿ ವ್ಯಕ್ತಿಯ ಬದುಕನ್ನು, ಜನಪದದ ಬದುಕನ್ನು ಎತ್ತರಿಸಬೇಕು ಎಂಬ ನಿರ್ಧಾರ ಮಾಡಿರುವವರು, ಈ ವರ್ಗಕ್ಕೆ ಸೇರುವರು. ದೇಶದಲ್ಲಿ ವಿದ್ಯೆಯ ಪ್ರಸಾರವಾದಂತೆ ಈ ವರ್ಗದ ಜನಸಂಖ್ಯೆ ವಿಪುಲವಾಗುವುದೆಂಬ ಶುಭ ನಿರೀಕ್ಷೆಯಿಂದ 'ಹಣಪ್ರಪಂಚ'ದಂಥ ಶಾಸ್ತ್ರೀಯ ಗ್ರಂಥಗಳು ಸೃಷ್ಟಿಯಾಗಿ ಕಾದಿರುವುವು. ಶಿವರಾಮ ಕಾರಂತರು ಇಂಥದೇ ಒಂದು ಶಾಸ್ತ್ರೀಯ ಗ್ರಂಥದ ಮುನ್ನುಡಿಯಲ್ಲಿ ಬರೆದ ಮಾತನ್ನಿಲ್ಲಿ ಪ್ರಸ್ತಾಪಿಸಬಹುದು: "ನಮ್ಮ ನಾಡು ಅರ್ವಾಚೀನ ಯುಗದಲ್ಲಿ ತಲೆ ಎತ್ತಿ ನಿಂತು ಬಾಳಬೇಕಾದರೆ–ಈ ಯುಗದ ಮನೋವೃತ್ತಿ, ಪ್ರವಾಹಗಳ, ಸುಳಿವು ಸೆಳವುಗಳ ಅರಿವನ್ನು ತಂದು ಕೊಳ್ಳುವುದವಶ್ಯ. ಅದರಲ್ಲೂ ವಿಜ್ಞಾನದ ದಿನದಿನದ ಪ್ರಗತಿಯನ್ನು ಪರಿಶೀಲಿಸಿ, ತನಗೆ ಹಿತವಾದುದನ್ನು ಆರಿಸಿ–ಜನಜೀವನದ ಆರ್ಥಿಕ ಮಟ್ಟವನ್ನು ಹೆಚ್ಚಿಸದೆಯೇ ಯಾವ ಕೆಲಸವೂ ಆಗಲಾರದು. ಹೊಟ್ಟೆ ತುಂಬುವ ಮೊದಲು–ನಯ ನೀತಿ, ದಯಾ ಧರ್ಮ, ಸಂಸ್ಕೃತಿ, ವಿಲಾಸಗಳು ಮನುಷ್ಯನ ಪಾಲಿಗೆ ಸಲ್ಲದ ಬದುಕು ಗಳೆನಿಸುತ್ತವೆ. ಆರ್ಥಿಕ ಪರಿಪುಷ್ಟಿಯೇ ಜೀವನದ ಸರ್ವಸ್ವವಲ್ಲವಾದರೂ, ಅದರ ನೆಲಗಟ್ಟಿನ ಮೇಲೆಯೇ ಬದುಕು ನಿಲ್ಲುವುದು ಅನಿವಾರ್ಯದ ಪ್ರಶ್ನೆಯಾಗಿದೆ........ ಇಂಥ ನೂರಾರು ಬರಹ, ಚಿತ್ರಗಳಿಂದ ಜನತೆಯಲ್ಲಿ ನವೀನ ಆಕಾಂಕ್ಷೆ, ಅಭಿಲಾಷೆ ಗಳು ಬೆಳೆದು ತಮ್ಮ ಜೀವನವನ್ನು ಬೆಳೆಯಿಸಿಕೊಳ್ಳುವ ಪ್ರಯತ್ನದಲ್ಲಿ ಅವರು ಮುಂದುವರಿಯಬೇಕು."

**ಪರಿಪಕ್ವ ಶೈಲಿ**

ವಿ. ಸೀ.ಯವರ ಪರಿಪಕ್ವ ಶೈಲಿಯ ಒಂದು ಉದಾಹರಣೆಯಿಂದ ಈ ಲೇಖನವನ್ನು ಮುಗಿಸುತ್ತೇನೆ.

"ಎಲ್ಲೋ ಕೆಲವರಿಗೆ ಅತಿ ಧನಿಕತೆ, ಲಾಭ, ಸುಖ, ಉತ್ಕರ್ಷ, ಭೋಗ ಮತ್ತು ಮೇಲ್ಮೆಯ ಅವಕಾಶ; ಹಲವರಿಗೆ–ಬಹುಶಃ ಉಳಿದವರಿಗೆಲ್ಲ–ನಿರ್ಬಲತೆ,

ದಾಸ್ಯ, ಬಡತನ, ನಿರುದ್ಯೋಗ, ನಿರಾಶೆ, ಅನ್ಯಾಯ. ಸ್ವಂತ ಲಾಭಕ್ಕಾಗಿ ಇತರರ ಹಿತಕ್ಕೆ, ಕಡೆಗೆ ಸ್ವದೇಶದ ಕೇಡಿಗೆ ಕೂಡ–ಹಿಂತೆಗೆಯುವ ದುಸ್ಸಾಹಸ; ಲಾಭವೊಂದರ ದೃಷ್ಟಿಯಿಂದ ಉತ್ಪತ್ತಿ ಕಡಿಮೆ ಮಾಡುವುದು, ಬೆಲೆ ಏರಿಸುವುದು: ಉತ್ಪತ್ತಿ ಮಾರಾಟಗಳ ಸರ್ವಸ್ವಾಮ್ಯ ಪಡೆದು ಮದಿಸುವುದು, ಜನಜನಾಂಗಗಳ ಸುಭಿಕ್ಷವನ್ನೇ ತಮ್ಮ ಜೂಜಿನ ಪಣವಾಗಿಸುವುದು; ಸ್ವೇಚ್ಛೆಯಾಗಿ ಲೋಕದಲ್ಲಿ ಸಾಹುಕಾರಿಕೆ, ಸಾಲಗಾರಿಕೆ ಹರಡುವುದು: ಉದ್ಯೋಗ ಹೆಚ್ಚಿಸುವುದು, ಕುಗ್ಗಿಸುವುದು; ಅನುಪಯುಕ್ತವಾದ ಭೋಗವಸ್ತುಗಳಿಗೆ ಗಮನ ಹೆಚ್ಚಿಸಿ ದಿನದಿನದ ಬದುಕಿಗೆ ಬರುವ ವಸ್ತುಗಳ ತಯಾರಿಕೆಯಲ್ಲಿಯೂ ಮಾರಾಟದಲ್ಲಿಯೂ ಅಸಡ್ಡೆ ತೋರುವುದು; ಉದ್ಯೋಗ ಕೈಗಾರಿಕೆಗಳಲ್ಲಿ ವಿಷಮತೆ ಉಂಟುಮಾಡಿ ಅವನ್ನು ಅತಂತ್ರಕ್ಕೆ ಎಳೆಯುವುದು–ಹೀಗೆ ನೂರಾರು ರೀತಿಗಳಲ್ಲಿ ಅಸಾಮಾಜಿಕ ವೃತ್ತಿ ಬೆಳೆದುದೇ ಆ ಪದ್ಧತಿಗೆ (ಬಂಡವಾಳಶಾಹಿ ಪದ್ಧತಿಗೆ) ಮಾರಕವಾಯಿತು. ಅದೂ ಎಂತಹ ದುಸ್ಥಿತಿ ? ಕೇವಲ ಸಿರಿವಂತರ ಮಕ್ಕಳಾಗಿ ಹುಟ್ಟಿದ ಕಾರಣದಿಂದಲೇ ಒಂದು ವರ್ಗದವರಿಗೆ ಎಲ್ಲ ಅವಕಾಶ, ಅನುಕೂಲ, ಸಮಾಜದಲ್ಲಿ ಪ್ರತಿಷ್ಠೆ, ಲೋಲುಪ್ತಿ. ಬಡವರಲ್ಲಿ ಹುಟ್ಟಿದ ಮಾತ್ರದಿಂದಲೇ ಎಲ್ಲ ಕೊರತೆ. ಅರಸರಾದವರಿಗೆ, ದುರ್ವ್ಯಯ ಮಾಡಿ ಇತರರನ್ನು ಬೇಕಾದ ಹಾಗೆ ಮೆಟ್ಟುವ, ಆಳುವ ವೈಭವ; ದುಡಿಯುವವರಿಗೆ ಕೀಳ್ತನ, ಅನಾರೋಗ್ಯ, ಹಿಂಸೆ, ಹಸಿವು. ದೇಶವಿದೇಶ ವ್ಯಾಪಾರಗಳ ಮತ್ತು ಬಂಡವಾಳದ ಚಲನವಲನಗಳಲ್ಲಿ ಗೊತ್ತಿಗೆ ಸಿಕ್ಕದ ಅನಿಶ್ಚಯ, ಅಸ್ತಿಮಿತ; ಕಳವಳ, ದುಂದು, ಪೋಲು. ಎಲ್ಲೆಲ್ಲಿಯೂ ಅಸಮತೆ. ಹೀಗಾದುದರಿಂದ ಎಲ್ಲ ಸರಕಾರಗಳವರೂ ತಮಗೆ ಧೈರ್ಯವಿರುವ ಮಟ್ಟಿಗೆ, ತಮ್ಮ ಸಮಾಜದಲ್ಲಿ ಸಾಧ್ಯವಾಗುವ ಮಟ್ಟಿಗೆ ಆರ್ಥಿಕ ಸಾಮರಸ್ಯ ತರಬೇಕೆಂದೂ, ಒಂದು ಕ್ರಮದಲ್ಲಿ ಜನರ ಬದುಕನ್ನು ತಿದ್ದಿ ನಡೆಸಬೇಕೆಂದೂ ಬಯಸುತ್ತಿದ್ದಾರೆ........ಆಯಾ ದೇಶದ ಚರಿತ್ರೆ, ಜನಗುಣ, ಸಂಪ್ರದಾಯ, ರಾಜಕೀಯ ಶಿಕ್ಷಣ, ಗುರಿ, ಜನಕ್ಕಿರುವ ಸ್ವಾತಂತ್ರ್ಯ, ಶಕ್ತಿ, ಧರ್ಮಬುದ್ಧಿ ಇವುಗಳನ್ನನುಸರಿಸಿ ಬೇಕೆನ್ನಲಿ ಬೇಡವೆನ್ನಲಿ ಖಾಸಗಿ ಬಂಡವಾಳ ಪದ್ಧತಿಯಲ್ಲಿ ಮತ್ತು ವ್ಯಕ್ತಿಸ್ವಾತಂತ್ರ್ಯ ಪದ್ಧತಿಯಲ್ಲಿ ಮಾರ್ಪಾಡುಗಳಾಗುತ್ತಿವೆ. ಶಾಂತರೀತಿಯಲ್ಲಿ ಸಾಧ್ಯವಾಗದಿದ್ದರೆ ಬಲಾತ್ಕಾರದಿಂದ–ರಕ್ತಪಾತವಾಗಬೇಕಾದರೂ ಸರಿಯೆ–ರಾಜಕೀಯ ಯಂತ್ರವನ್ನು ಕೈವಶ ಮಾಡಿಕೊಳ್ಳತಕ್ಕದ್ದೆಂಬ ಮನಸ್ಸು ಬೆಳೆಯುತ್ತಿದೆ.......... ರಷ್ಯಾ ದೇಶದಲ್ಲಿ ಕಮ್ಯೂನಿಸಂ ಎಂಬ ತತ್ತ್ವದ ಮೊನೆಯಲ್ಲಿ ಸಂಪೂರ್ಣ ವಿಪ್ಲವವುಂಟಾಗಿ ಹಿಂದಿನ ರೀತಿಯ ಬದುಕೆಲ್ಲ ವ್ಯತ್ಯಾಸವಾಗಿದೆ. ಖಾಸಗಿ ಬಂಡವಾಳದ ಪ್ರಭಾವ ಅಳಿಸಿ ಹೋಗಿ; ಎಲ್ಲ ಉತ್ಪತ್ತಿ ಕಾರಣಗಳೂ ಒಟ್ಟು ಸಮಾಜಕ್ಕೆ ಸೇರಿದವು ಎಂಬ ಶಾಸನವಾಗಿ, ಹಣ, ಲಾಭ, ಬಡ್ಡಿಯ ಗಳಿಕೆ, ವ್ಯಕ್ತಿಯ ಏಳಿಗೆ, ಇವಕ್ಕಿಂತ ಸಮಾಜಸೇವೆ, ಸಕಲ ಜನ ಕಲ್ಯಾಣ, ಸಂಸ್ಕೃತಿ ಇವುಗಳ ಸಾಧನೆಗಾಗಿ ಎಲ್ಲರೂ ಕಾಯಕ ಮಾಡಬೇಕು, ಉದ್ಯೋಗಿಗಳಾಗಬೇಕು ಎಂಬ ನಿರ್ಧಾರ ಏರ್ಪಟ್ಟು;

ಎಲ್ಲರ ಎಲ್ಲ ಬಗೆಯ ಏಳಿಗೆಗೂ; ಎಲ್ಲರೂ ಹೊರತಿಲ್ಲದೆ ದುಡಿಯುದಿದ್ದರೆ ಸಮಾಜ ವಲ್ಲಿ ಯಾರಿಗೇ ಆಗಲಿ ಸ್ಥಾನಮಾನ ಆಹಾರಗಳಿಲ್ಲ ಎಂಬ ವಿಧಿಯಾಗಿ; ದೇಶದ ಬಡ ತನ, ಕೊಳಕು, ಅಜ್ಞಾನ, ಅಸಮತೆಗಳನ್ನು ನಾಶಮಾಡಿ ಎಲ್ಲರ ವಿದ್ಯೆ, ಆರೋಗ್ಯ, ಅನ್ನ ಬಟ್ಟೆ, ವಸತಿಸೌಕರ್ಯ, ಆತ್ಮೋನ್ನತಿಗಳಿಗೂ ಸರಕಾರವೇ ಹೊಣೆ ಎಂಬ ಭಾರ ಹೊತ್ತು; ಈ ಮುಂದಿನ ಐದು ವರ್ಷದಲ್ಲಿ, ಆ ಮುಂದಿನ ಹತ್ತು ವರ್ಷದಲ್ಲಿ ಉತ್ಪತ್ತಿ ಹೀಗೆಯೇ ನಡೆಯಬೇಕು; ಜನಾರೋಗ್ಯ ಹಿತಕಾರ್ಯಗಳು ಹೀಗೆಯೇ ಬಲಿಯಬೇಕು; ಕಲೆ, ಶಾಸ್ತ್ರ, ಉದ್ಯೋಗ, ನ್ಯಾಯ ವ್ಯವಹಾರ ಹೀಗೆಯೇ ಪ್ರೋತ್ಸಾಹಿತ ವಾಗಬೇಕು ಎಂದು ಕಾರ್ಯಕ್ರಮ ಏರ್ಪಟ್ಟು ಒಂದು ಹೊಸ ನಾಗರಿಕತೆಯನ್ನೇ, ಬದುಕಿನ ಒಂದು ಹೊಸ ರೀತಿಯನ್ನೇ ನಿರ್ಮಾಣ ಮಾಡಬೇಕೆಂದು ಪ್ರಯತ್ನ ನಡೆ ಯುತ್ತಿದೆ.... ಇವುಗಳೆಲ್ಲದರಲ್ಲೂ ಹಣದ ಸಂಚಾರವಿದೆ. ಚಲೆಗಳನ್ನು ಆಳುವುದಕ್ಕೆ ಅದೇ ಇನ್ನೂ ಸಾಧನ. ಆದರೆ ಸಾಧನಮಾತ್ರವೇ ಹೊರತು ಪುರುಷಾರ್ಥವಾಗ ಕೂಡದು-ಎಂಬುದು ಜನಮನವನ್ನು ಹೊಸರೀತಿಗೆ ತಿದ್ದುತ್ತಿದೆ."

ಕು. ಶಿ. ಹರಿದಾಸ ಭಟ್ಟ

# ಹಣಪ್ರಪಂಚ-೨

ನಮ್ಮಲ್ಲಿ ಸಾಮಾನ್ಯವಾಗಿ ಸಾಹಿತಿಗೂ ಹಣಪ್ರಪಂಚಕ್ಕೂ ಯಾವಾಗಲೂ ವಿರಸ. ಹಣದ ವಿವಿಧ ವ್ಯಾಪಾರಗಳು ಆತನಿಗೆ ಸುಲಭವಾಗಿ ಅರ್ಥವಾಗಲಾರವು. ಈ ವಿಚಾರದಲ್ಲಿ ಆತನ ಆಲೋಚನೆಯ ತಕ್ಕಡಿ ಯಾವಾಗಲೂ ಏರುಪೇರೇ. ಆದರೂ ಆತ ಇದನ್ನು ಬಿಟ್ಟು ಇರಲಾರ. 'ಕವಿತೆಯೊಳಾಸೆಗೆಯ್ವ ಫಲಮಾವುದೊ?' ಎಂಬ ಪ್ರಶ್ನೆಗೆ ಕನ್ನಡ ಕವಿ ಪಂಪ, 'ಪೂಜೆ, ಕೀರ್ತಿ, ಲಾಭ' ಎಂದು ಉತ್ತರಿಸಿದ್ದಾನೆ. ಆದರೆ ಈ 'ಪೂಜೆ, ಕೀರ್ತಿ, ಲಾಭಗಳು ಎಂಥವು?' 'ಇಂದ್ರಪೂಜೆ, ಭುವನಸ್ತುತಮಪ್ಪ ನೆಗಟ್ಟಿ, ಮುಕ್ತಿ ಸಂಭವಿಸುವ ಲಾಭ.' ಹೀಗೆಂದು ಆತ ಕಾವ್ಯದಲ್ಲಿ ಬರೆದರೂ ರಾಜಾಶ್ರಯವನ್ನು ಬಿಡಲಾರದಾದ. ಕವಿಗಳದು 'ಭವತಿ ಭಿಕ್ಷಾಂ ದೇಹಿ' ಎಂಬ ಸಪ್ತಾಕ್ಷರೀ ಮಂತ್ರ-ಎಂದು ಹೇಳಿದ 'ರಾಮಾಶ್ವಮೇಧ'ದ ಕವಿ ಮುದ್ದಣ ಬಹುಶಃ ದಾರಿದ್ರ್ಯದಿಂದಲೇ ಸಾಯಬೇಕಾಯಿತು. ವ್ಯಕ್ತಿ ವ್ಯಕ್ತಿಗಳ ನೇರಸಂಬಂಧ ಹಣದ ಮಧ್ಯಸ್ಥಿಕೆಯಿಂದ ಪರೋಕ್ಷವಾಗಿ ಪರಿಣಮಿಸಿ, ಇಂದು ಜಗತ್ತಿನಲ್ಲಿ ಎಲ್ಲವೂ ಲೆಕ್ಕಾಚಾರಕ್ಕೆ ಒಳಪಟ್ಟು ಶೋಷಣೆಯ ಹೊಸ ವ್ಯವಸ್ಥೆಯೊಂದು ಏರ್ಪಟ್ಟಿದೆ-ಎಂಬ ಮಾರ್ಕ್ಸ್‌ರ ಸಿದ್ಧಾಂತವನ್ನು ಎಲ್ಲರೂ ಒಪ್ಪಲಿ, ಬಿಡಲಿ. ಅಂತೂ ಇಂದು ಎಲ್ಲರೂ ಹಣದ ಉರುಳುಗಲ್ಲನ್ನು ಕೊರಳಿಗೆ ಕಟ್ಟಿಕೊಂಡವರೇ; ಸಾಹಿತಿಗೂ ಇದು ತಪ್ಪಿದ್ದಲ್ಲ-ಎಂಬ ಮಾತೇನೊ ನಿಜ.

ವಿ. ಸೀ. ಅವರ 'ಹಣಪ್ರಪಂಚ' ಹಣದ ವಿಚಿತ್ರ ವ್ಯಾಪಾರಗಳನ್ನು ವೈಜ್ಞಾನಿಕ ದೃಷ್ಟಿಯಿಂದ, ಶಾಸ್ತ್ರೀಯವಾಗಿ ವಿವರಿಸುವ ಉತ್ತಮ ಗ್ರಂಥ. ಬಹುಶಃ ಈ ಜಾತಿಯ ಪುಸ್ತಕ ಇಷ್ಟು ಸಮರ್ಪಕವಾಗಿ ಕನ್ನಡದಲ್ಲಿ ಬಂದುದು ಇದೇ ಮೊದಲು. ೧೯೩೭-ದ್ವಿತೀಯ ಯುದ್ಧಪೂರ್ವ-ಪ್ರಕಟವಾದ ಈ ಪುಸ್ತಕ ಇಂದಿಗೂ ಉಪಯುಕ್ತವಾಗಿದೆ. ಶಾಸ್ತ್ರೀಯ ವಿಷಯಗಳನ್ನು ಕನ್ನಡದಲ್ಲಿ ಪಾಠ ಹೇಳುವುದು ಕಷ್ಟ, ಅವುಗಳನ್ನು ಕುರಿತು ಪುಸ್ತಕ ತಯಾರಿಸುವುದಂತೂ ಇನ್ನೂ ಕಷ್ಟ-ಎನ್ನುವವರು ಈ ಪುಸ್ತಕವನ್ನು ನೋಡಿದರೆ ತಮ್ಮ ವಾದ ಎಷ್ಟು ಪೊಳ್ಳು ಎನ್ನುವುದರ ಅರಿವಾಗುತ್ತದೆ.

ವಿ. ಸೀ. ಅವರನ್ನು ಸಾಹಿತ್ಯಲೋಕ ಮೆಚ್ಚಿಕೊಂಡಿದೆ. ಆದರೆ ಅವರ ಮೇಲೆ ಅರ್ಥಶಾಸ್ತ್ರಕ್ಕೂ ಅಷ್ಟೇ ಹಕ್ಕಿದೆ. ವಿ. ಸೀ.ಅವರು ಮೊದಲು ಪರಿಣತಿ ಪಡೆದದ್ದು ಅರ್ಥಶಾಸ್ತ್ರದಲ್ಲಿ; ಅನಂತರ ಪ್ರವೇಶಿಸಿದ್ದು ಸಾಹಿತ್ಯ ಲೋಕವನ್ನು. ಅದಕ್ಕೇ ಇರಬೇಕು; ಸಾಹಿತ್ಯದಲ್ಲಿ ಅವರು ಸೃಷ್ಟಿಸಿದುದೆಲ್ಲ ತಕ್ಕಡಿಯಲ್ಲಿ ತೂಗಿ ಇಟ್ಟಹಾಗಿದೆ;

ಅಷ್ಟು ಲೆಕ್ಕಾಚಾರ. ಅವರು ಪ್ರಕಟಿಸಿರುವ ಪುಸ್ತಕಗಳ ಅಚ್ಚುಕಟ್ಟೂ ಹಾಗೆಯೇ. ಇಲ್ಲಿ ಕಲೆಗಾರನ ದೃಷ್ಟಿಯೊಡನೆ ಶಾಸ್ತ್ರಜ್ಞನ ಕುಸುರಿಗೆಲಸವೂ ಇದೆ. ತಾವು ಬರೆದುದು ಸಾಹಿತ್ಯದ ಪೇಟೆಯಲ್ಲಿ ಪ್ರಥಮ ಸ್ಥಾನಗಳಿಸಬೇಕು–ಎಂಬ ದೃಢನಿಶ್ಚಯ ಅವರಿಗೆ ಇದ್ದಿರಬೇಕು. ಅಂತೆಯೇ ಅವರ ಕೃತಿಗಳ ಒಪ್ಪ ಹಲವು ಕವಿಗಳಿಗೆ ಸಾಧಿಸಿಲ್ಲ.

ವಿ. ಸೀ. ಅವರ 'ಹಣ ಪ್ರಪಂಚ'ವನ್ನು ಕುರಿತು ಪ್ರಶಂಸಾ ವಾಕ್ಯಗಳನ್ನು ಹತ್ತಾರು ಪುಟಗಳಷ್ಟು ಬರೆಯಬಹುದೇ ವಿನಾ ಈ ಉದ್ಗ್ರಂಥದ ಪರಿಚಯವನ್ನು ಅಷ್ಟೇ ಪುಟಗಳಲ್ಲಿ ಮಾಡಿಕೊಡುವುದು ಬಹು ಕಷ್ಟ. ಈ ಪುಸ್ತಕವನ್ನು ಬರೆದಾಗ ಬದುಕಿದ್ದ ಶ್ರೀಮಾನ್ ಎಸ್. ಎಸ್. ಸುಬ್ಬರಾಯರೇ ಹೀಗೆ ಹೇಳಿದ್ದಾರೆ: "ಇಂಗ್ಲಿಷಿನಲ್ಲಿ 'ಫಿನಾನ್ಸ್' ಎಂಬ ಒಟ್ಟು ಹೆಸರಿನಲ್ಲಿ ಅಡಕವಾಗುವ ಅತಿ ತೊಡಕಿನ ವಿಷಯಗಳನ್ನು ವಿವರಿಸುವುದರಲ್ಲಿ ಅವರು ಪಾಂಡಿತ್ಯವನ್ನೂ ತುಂಬಿದ ತಿಳಿವಳಿಕೆಯನ್ನೂ ಪ್ರಯೋಗಿಸಿದ್ದಾರೆಂದು ನಾನು ಗೊತ್ತಾಗಿ ಹೇಳಬಲ್ಲೆನು." ಲೇಖಕರಿಗೆ ಇದಕ್ಕಿಂತ ಹೆಚ್ಚಿನ ಪ್ರಶಂಸೆ ಏನು ಬೇಕು?

'ಈಗಿನ ಸಾಮಾಜಿಕ ಮತ್ತು ಆರ್ಥಿಕ ವ್ಯವಸ್ಥೆಯಂತೆ ದಿನಚರಿಯ ಬದುಕಿನಲ್ಲಿ ಅನೇಕ ಮೇಲು ಬೀಳುಗಳೂ ಕಷ್ಟಸುಖಗಳೂ ನ್ಯಾಯ ಅನ್ಯಾಯಗಳೂ ಹಣದಿಂದ ಉಂಟಾಗುತ್ತವೆ. ಸಂಪತ್ತಿನ ಉತ್ಪತ್ತಿ, ಮಾರುವೆ, ಹಂಚಿಕೆ, ಭೋಗಸಾಧನೆಗಳಲ್ಲೆಲ್ಲ ಹಣದ ಸ್ಥಾನ ದೊಡ್ಡದು.' ಹೀಗೆ ಪ್ರಾರಂಭವಾಗುವ ಈ ಪುಸ್ತಕದ ಸುಮಾರು ಮುನ್ನೂರೈವತ್ತು ಪುಟಗಳಲ್ಲಿ ವಿ. ಸೀ. ಅವರು ಹಣದ ವಿಚಿತ್ರ ವ್ಯಾಪಾರಗಳನ್ನು, ಕೇವಲ ಪದಾರ್ಥಗಳ ಮಾರುವೆಗಾಗಿ, ಮಧ್ಯಸ್ಥಿಕೆಗಾಗಿ ಮನುಷ್ಯ ಸೃಷ್ಟಿಸಿದ ಈ ಪದಾರ್ಥ ಇಂದು ಹೇಗೆ ಒಂದು ತೊಡಕಿನ ವ್ಯವಸ್ಥೆಯಾಗಿ ಪರಿಣಮಿಸಿದೆಯೆಂಬುದನ್ನು ವಿವರಿಸಿದ್ದಾರೆ.

ಮೊದಲು ಹಣದ ಅವತಾರಗಳನ್ನೇ ನೋಡೋಣ: ಹಣವಾಗುವ ಪದಾರ್ಥ ಉಪಯುಕ್ತವಾಗಿರಬೇಕು ಎಂಬ ಭಾವನೆ ಮಾರ್ಪಟ್ಟು, ಅಮೂಲ್ಯವಾಗಿದ್ದರೆ ಸಾಕು ಎಂಬ ಭಾವನೆ ಬಲಿತು, ಚಿನ್ನ ಬೆಳ್ಳಿ ಮುಂತಾದ ಲೋಹಗಳು ಹಣವಾಗಿ ಅವತಾರವೆತ್ತಿದ ಕತೆ ನಿಜವಾಗಿಯೂ ರೋಮಾಂಚನಗೊಳಿಸುವಂಥದು. ಕ್ರಮೇಣ ಚಿನ್ನ ಬೆಳ್ಳಿಗಳಂತೆ ಅಮೂಲ್ಯವಾಗಿರುವುದೂ ಬೇಡ; ಅಪೂರ್ವ(Scarce)ವಾಗಿರುವಂತೆ ಏರ್ಪಡಿಸಿದರೆ ಸಾಕು ಎಂಬ ಭಾವನೆ ಮೂಡಿ, ಕೇವಲ ಕಾಗದದ ತುಂಡುಗಳು ಹಣವಾಗಿ ಚಲಾವಣೆಗೆ ಬಂದದ್ದಂತೂ ಪತ್ತೇದಾರಿ ಕಾದಂಬರಿಯಂತೆಯೇ ಬಹು ಆಶ್ಚರ್ಯಕರ. ಇದೆಲ್ಲ ಆದುದು ಹೇಗೆ ಎಂಬುದನ್ನು ಅರಿಯಬೇಡವೆ?

ಇದರ ಜತೆಗೆ ಹಣದ ಪ್ರಾಧಾನ್ಯ ಇನ್ನೊಂದು ರೀತಿಯಲ್ಲಿ ಬೆಳೆಯಿತು. ಈ ಸಮಾಜದಲ್ಲಿ ಉತ್ಪತ್ತಿಕಾರ್ಯದಲ್ಲಿ ಪ್ರತಿಯೊಬ್ಬರೂ ಒಂದೊಂದು ಪಾತ್ರಧಾರಿಗಳು. ಒಬ್ಬರೇ ತಮಗೆ ಬೇಕಾದ ಎಲ್ಲ ಪದಾರ್ಥಗಳನ್ನೂ ತಯಾರಿಸುವುದು ಸಾಧ್ಯವಿಲ್ಲ.

ಆದ್ದರಿಂದಲೇ ಪದಾರ್ಥಗಳ ವಿನಿಮಯ ಆರಂಭವಾಯಿತು. ಹಣದ ಮಧ್ಯಸ್ಥಿಕೆಯಿಂದ ಈ ವಿನಿಮಯ ಸುಲಭವಾಯಿತು. ಎಲ್ಲ ಪದಾರ್ಥಗಳ ವಿನಿಮಯದ ಬೆಲೆಯನ್ನೂ ಹಣದ ಗಜಗೋಲಿನಿಂದ ಅಳೆಯುವುದು ಸುಲಭವಾಯಿತು. ಆದರೆ ಹಣ ಕೇವಲ ಗಜಗೋಲಾಗಿಯೇ ಉಳಿಯಲಿಲ್ಲ. ಸಂಪಾದಿಸಿದ ಸಂಪತ್ತನ್ನು ಹಣಕ್ಕೆ ಪರಿವರ್ತಿಸಿ ಆ ರೂಪದಲ್ಲಿ ಶೇಖರಿಸಿ ಇಡುವುದೂ ಸಾಧ್ಯವಾಯಿತು. ಈ ಶೇಖರಿಸಿಟ್ಟ ಸಂಪತ್ತಿನ ಸಹಾಯದಿಂದ ಇಂದಿನ ವರಮಾನದ ಪ್ರತಿಫಲವನ್ನು ಮುಂದೆ ಭೋಗಿಸುವುದೂ ಸಾಧ್ಯವಾಯಿತು. ಇದನ್ನು ಇತರರಿಗೆ ಸಾಲ ಕೊಡುವುದೂ ಸಾಧ್ಯವಾಯಿತು. ಹೀಗೆ ಕೇವಲ ಪದಾರ್ಥಗಳ ಮಧ್ಯವರ್ತಿಯಾಗಿ ಮೊದಲಾದ ಹಣ ಗಜಗೋಲಾಗಿ, ಕೊಡುಕೊಳ್ಳುವ ಸಾಧನವಾಗಿ, ಶೇಖರಣೆಯ ಉಪಾಯವಾಗಿ, ಸಮಾಜದ ಎಲ್ಲ ಕಡೆಯೂ ವ್ಯಾಪಿಸಿತು.

ಹೀಗೆ ಹಣಕ್ಕೆ ಎರಡು ಮುಖ್ಯ ಗುಣಗಳು ಲಭಿಸಿದುವು: ಪದಾರ್ಥ ವಿನಿಮಯಕ್ಕೆ–ವ್ಯಾಪಾರಕ್ಕೆ–ಒದಗಿದಾಗ ಅದು ಗಾಲಿಯಂತೆ ಉರುಳುವುದು; ಒಬ್ಬ ತನಗೆ ಬೇಕಾದುದಕ್ಕಿಂತ ಹೆಚ್ಚಾಗಿ ಸಂಪಾದಿಸಿದಾಗ ಅದು ಹಲಗೆಯಂತೆ ಮಲಗುವುದು, ಶೇಖರಣೆಯ ಸಾಧನವಾಗುವುದು. ಆದರೆ ಅದು ಗಜಗೋಲೂ ಹೌದಲ್ಲವೆ? ಎಲ್ಲ ಪದಾರ್ಥಗಳ ಮೌಲ್ಯವನ್ನೂ ಅಳೆಯುವ ಹಣವೆಂಬ ಗಜಗೋಲಿನ ಉದ್ದವೇ ಹೆಚ್ಚು ಕಡಮೆಯಾದರೆ ಏನು ಗತಿ? ಎಲ್ಲ ಪದಾರ್ಥಗಳಂತೆಯೇ ಹಣವೂ ಒಂದು ಪದಾರ್ಥವಾದರೆ ಅದರ ಮೌಲ್ಯವೂ ಇತರ ಪದಾರ್ಥಗಳ ಬೆಲೆಯಂತೆಯೇ ಏರುಪೇರಾಗಬೇಕಲ್ಲವೆ? ಹಣದ ಪ್ರಮಾಣ ಹೆಚ್ಚಾದಾಗ ಅಥವಾ ಅದು ಉರುಳದೆ, ನಿಂತ ನೀರಿನಂತೆ ಕೊಳೆಯಲಾರಂಭವಾದಾಗ ಅನರ್ಥವೇ ಆಗಬಹುದಲ್ಲವೆ? ಸಂಪತ್ತಿನ ಸಂಕೇತ ಮಾತ್ರವಾದ ಹಣ ತಾನೇ ಸಂಪತ್ತಿನ ಸ್ಥಾನ ಪಡೆದರೆ ಆಗ ಆಗುವುದು ಅನರ್ಥವಲ್ಲವೆ? ಹಣದ ಬೆಲೆಯ ಏರಿಳಿತವೆಂದರೆ ಪದಾರ್ಥಗಳ ಬೆಲೆಗಳಲ್ಲಿ ವ್ಯತ್ಯಾಸ. ಎಲ್ಲರಿಗೂ ಪದಾರ್ಥಗಳ ಬೆಲೆಗಳ ಏರಿಳಿತಗಳ ಬಿಸಿ ತಟ್ಟುವುದಲ್ಲವೆ?

ವಿ. ಸೀ. ಅವರು ತಮ್ಮ ಪುಸ್ತಕದಲ್ಲಿ ಹಣದ ಈ ವ್ಯಾಪಾರಗಳನ್ನೆಲ್ಲ ಮನೋಜ್ಞವಾಗಿ ಬಣ್ಣಿಸಿದ್ದಾರೆ. ಹಣವನ್ನು ಸೃಷ್ಟಿಸುವ ನಾನಾ ಸಂಸ್ಥೆಗಳನ್ನೂ, ಹಣದ ಬೆಲೆಯ ಏರಿಳಿತಗಳಿಂದ ನಾನಾ ಹಿತಗಳ ಜನರಿಗೆ ಆಗುವ ಅನುಕೂಲ ಪ್ರತಿಕೂಲಗಳನ್ನೂ ವಿವರಿಸಿದ್ದಾರೆ.

ಇಷ್ಟೇ ಅಲ್ಲ, ಅವರು ಹಣಪ್ರಪಂಚವನ್ನು ಇನ್ನೂ ಕೂಲಂಕಷವಾಗಿ ಪರೀಕ್ಷಿಸಿದ್ದಾರೆ. ಹಣದ ವಹಿವಾಟನ್ನೇ ನಡಸುವ ಬ್ಯಾಂಕುಗಳ ಪ್ರಪಂಚ; ಒಳ–ಹೊರ ವ್ಯಾಪಾರಗಳಲ್ಲಿ ಹಣದ ಪಾತ್ರ, ವಿವಿಧ ಭಂಗಿ; ಕೈಗಾರಿಕೆಗೆ ಹಣ ಒದಗುವ ಬಗೆ; ಸ್ಟಾಕ್ ಎಕ್ಸ್‌ಛೇಂಜ್, ಇತರ ಹಣ ಸಂಸ್ಥೆಗಳು–ಇವನ್ನೆಲ್ಲ ವಿವರಿಸಿದ್ದಾರೆ.

ಅನೇಕ ಬಗೆಯ ಲೇವಾದೇವಿ ನಡೆಯುತ್ತಿರುವ ಈ ಕಾಲದಲ್ಲಿ ಅದ್ಭುತ ಪ್ರಮಾಣದಲ್ಲಿ ಹಲವು ಸಂಸ್ಥೆಗಳು ಲಾಭಕ್ಕಾಗಿ ಪೈಪೋಟಿ ನಡೆಸುತ್ತಿವೆ. ಬ್ಯಾಂಕು

ಗಳಂತೂ ಬರಿಗೈಯಲ್ಲಿ ಮೊಳ ಹಾಕುವಂತೆ ಅದ್ಭುತ ಪ್ರಮಾಣದಲ್ಲಿ ಡಿಪಾಸಿಟ್ ಹಣ ಸೃಷ್ಟಿಸುವ ಶಕ್ತಿ ಪಡೆದಿವೆ. ಕೇವಲ ಹತ್ತು ರೂಪಾಯಿ ಇದ್ದರೆ ಸಾಕು; ನೂರು ರೂಪಾಯಿಗಳವರೆಗೆ ಸಾಲ ಕೊಡುವ ಉಪಾಯ ಹೊಂದಿವೆ. ಹೀಗೆ ನಾನಾ ಸಂಸ್ಥೆಗಳ ಚಟುವಟಿಕೆಗಳು ದೇಶದ ಜನದ ಕ್ಷೇಮ ಸುಭಿಕ್ಷಗಳ ಸಾಧನವಾಗದೆ ಅಸುಖಕ್ಕೆ ಕಾರಣವಾಗುವ ಅಪಾಯವಿದೆ. ಆದ್ದರಿಂದ ಪರಸ್ಪರ ವಿರೋಧವಾಗಿಯೇ ನಡೆಯಬಹುದಾಗಿರುವ ಉತ್ಪತ್ತಿಯಂತ್ರ, ವ್ಯಾಪಾರಮಂಡಲ, ಧನಮಂಡಲಗಳನ್ನು ಒಂದು ತಾನದಲ್ಲಿ ನಡಸುವ ಜವಾಬ್ದಾರಿ ಹೊಂದಿದ ಸಂಸ್ಥೆಯೊಂದು ಇರಬೇಕಲ್ಲವೆ? ಸರಕಾರವಂತೂ ಈ ಕೆಲಸ ಮಾಡಲಾರದು. ಏತಕ್ಕೆಂದರೆ ಅದು ಜನಜೀವನದ ನಾಡಿಯ ಗತಿಯನ್ನು ಸುಲಭವಾಗಿ ಅರಿಯಲಾರದು. ಇದಕ್ಕೆ ಜನರ ಆರ್ಥಿಕ ಚಟುವಟಿಕೆಗಳನ್ನೇ ಪ್ರತಿನಿಧಿಸುವ ಸಂಸ್ಥೆಯೇ ಇರಬೇಕು. ಅದು ಕೇಂದ್ರ ಬ್ಯಾಂಕು. ಪ್ರತಿಯೊಂದು ದೇಶಕ್ಕೂ ಇಂಥ ಕೇಂದ್ರ ಬ್ಯಾಂಕು ಒಂದು ಇರುತ್ತದೆ. ಈ ಸೆಂಟ್ರಲ್ ಬ್ಯಾಂಕು ಇಂದು ಬೃಹತ್ ಪ್ರಮಾಣದಲ್ಲಿ ಕೆಲಸ ನಡಸುತ್ತಿದೆ. ಸರಕಾರದ ವಿಶೇಷ ಅಧಿಕಾರ ಆಶ್ರಯ ಬೆಂಬಲಗಳನ್ನು ಪಡೆದ ಈ ಬ್ಯಾಂಕು ಧನಮಂಡಲದ ರಕ್ಷಣೆಯ ಜವಾಬ್ದಾರಿ ಹೊತ್ತಿರುತ್ತದೆ. ಬ್ಯಾಂಕುಗಳಿಗೆ ಬ್ಯಾಂಕೂ, ಸರಕಾರದ ಬ್ಯಾಂಕೂ ಆದ ಸೆಂಟ್ರಲ್ ಬ್ಯಾಂಕು ದೇಶದಲ್ಲಿ ಹಣದ ಚಲಾವಣೆಯ ಜವಾಬ್ದಾರಿಯನ್ನೂ ಆರ್ಥಿಕ ಚಟುವಟಿಕೆಗಳ ಮೇಲೆ ಹತೋಟಿಯನ್ನೂ ಪಡೆದಿರುತ್ತದೆ. ಇದರ ನೀತಿ ಹೇಗೆ ದೇಶದಲ್ಲಿ ಉದ್ಯೋಗ ಮೊದಲುಗೊಂಡು ಎಲ್ಲ ಕ್ಷೇತ್ರಗಳ ಮೇಲೂ ಪರಿಣಾಮ ಕಾರಿಯಾಗಿರುತ್ತದೆ ಎಂಬುದನ್ನು ಇಂದು ಪ್ರತಿಯೊಬ್ಬರೂ ಅರಿಯಬೇಕು. ಸರ್ವ ಸೌಖ್ಯದ ರಾಜ್ಯವನ್ನು ಸೃಷ್ಟಿಸಬಯಸುವ ಸರಕಾರ, ಕೇಂದ್ರ ಬ್ಯಾಂಕಿನ ಮೂಲಕವೇ ಇದನ್ನು ಸಾಧಿಸಬೇಕಾಗಿದೆ. ವಿ. ಸೀ. ಅವರು ಈ ಸೆಂಟ್ರಲ್ ಬ್ಯಾಂಕಿನ ದರ್ಪವನ್ನೂ ಪ್ರಭಾವವನ್ನೂ ಅದು ಕಾರ್ಯ ನಡಸುವ ವಿಧಾನವನ್ನೂ ಬಣ್ಣಿಸಿದ್ದಾರೆ.

ಧನಮಂಡಲದಲ್ಲಿ ಸರಕಾರದ ಪಾತ್ರವೂ ಬಹು ದೊಡ್ಡದೇ. ಪಾಶ್ಚಿಮಾತ್ಯ ಅರ್ಥಶಾಸ್ತ್ರದ ಜನಕ ಆಡಂ ಸ್ಮಿತ್ ಎಂಬಾತನ ಅಭಿಪ್ರಾಯದ ಪ್ರಕಾರ, ಪ್ರಭುತ್ವವೆಂಬುದು ಕೇವಲ ಪೋಲೀಸ್ ಕೆಲಸ ಮಾಡುವ ಸಂಸ್ಥೆ. ಹೊರಗಿನ ಶತ್ರುಗಳನ್ನು ತಡೆಗಟ್ಟುವುದು; ಒಳನಾಡಿನಲ್ಲಿ ಶಾಂತಿ ಸ್ಥಾಪಿಸುವುದು; ಆಸ್ತಿಗೆ ರಕ್ಷಣೆ ನೀಡುವುದು; ಪ್ರಭುತ್ವ ಇಷ್ಟು ಕೆಲಸ ಮಾಡಿದರೆ ಸಾಕು. ಉಳಿದದ್ದೆಲ್ಲ ಜನರಿಗೆ ಇರಲಿ. ಅವರಿಗೆ ಸಂಪೂರ್ಣ ಸ್ವಾತಂತ್ರ್ಯವಿರಲಿ. ಈ ಕೆಲಸ ಮಾಡಲು ಪ್ರಭುತ್ವಕ್ಕೆ ಎಷ್ಟು ಹಣ ಬೇಕೋ ಅಷ್ಟು ತೆರಿಗೆ ಹಾಕಿದರೆ ಸಾಕು. ಇದು ಆಡಂ ಸ್ಮಿತ್‌ನ ವಾದ.

ಆದರೆ ಆಡಂ ಸ್ಮಿತ್‌ನ ಅನಂತರ ಹಲವಾರು ಘಟನೆಗಳು ಸಂಭವಿಸಿವೆ. ಜಗತ್ತು ಬಹುದೂರ ಸಾಗಿದೆ. ಇಂದು ಈ ಅಭಿಪ್ರಾಯಕ್ಕೆ ಮಾನ್ಯತೆಯಿಲ್ಲ. ಇಂದು ಸರಕಾರದ ಜವಾಬ್ದಾರಿ ಬಹು ದೊಡ್ಡದು. ಉತ್ಪತ್ತಿ, ಹಂಚಿಕೆ, ಉದ್ಯೋಗ, ವರಮಾನ–ಎಲ್ಲವೂ ಸಮರಸದಿಂದ ಇರುವಂತೆ ಎಸಗುವುದು ಪ್ರಭುತ್ವದ ಜವಾಬ್ದಾರಿ.

ಅಂತೆಯೇ ಪ್ರಭುತ್ವ ಇಂದು ಪ್ರವೇಶಿಸದ ಕ್ಷೇತ್ರವಿಲ್ಲ. ಪ್ರಭುತ್ವ ಇಂದು ಸರ್ವ ಜನ ಕ್ಷೇಮದ ಗುರಿಯನ್ನು ಯಾವ ರೀತಿ ಮುಟ್ಟಲು ಯತ್ನಿಸುತ್ತದೆ? ಅದರ ಹಣ ಕಾರ್ಯಗಳ, ಅದರ ಕೈವಾಡದ ರೀತಿ ಏನು?–ಇವನ್ನೂ ಕೂಡ ವಿ. ಸೀ. ಅವರು ಸರಳವಾಗಿ ವಿವೇಚಿಸಿದ್ದಾರೆ.

ಕೊನೆಯ ಅಧ್ಯಾಯ, ಇಂಡಿಯಾ ದೇಶದಲ್ಲಿ ಹಣ ಮತ್ತು ಹಣದ ಪೇಟೆಯ ವಿವರಣೆಗಾಗಿ ಮೀಸಲು. ಭಾರತದ ಪುರಾತನ ಹಾಗೂ ಅರ್ವಾಚೀನ ಧನಸಂಸ್ಥೆಗಳ ವಿವರಣೆ ಇರುವುದಲ್ಲದೆ ಭಾರತದ ಕೇಂದ್ರ ಹಾಗೂ ಪ್ರಾಂತ ಸರಕಾರಗಳ ಧನಕಾರ್ಯ ಗಳ ಪರಿಚಯವೂ ಇಲ್ಲಿದೆ.

ವಿ. ಸೀ. ಅವರ ಈ ಪುಸ್ತಕ ಪ್ರಕಟವಾದುದು ೧೯೩೦ರಲ್ಲಿ. ಹಣಪ್ರಪಂಚದಲ್ಲಿ ಈಚೆಗೆ ಹಲವು ಬದಲಾವಣೆಗಳಾಗಿವೆ. ಆದರೆ ಅರ್ಥಶಾಸ್ತ್ರದ ಪರಿಚಯಮಾಡಿ ಕೊಳ್ಳ ಬಯಸುವವರಿಗೆ, ಇಂದಿಗೂ ಈ ಪುಸ್ತಕ ಉಪಯುಕ್ತವಾದುದು. ಅವರು ಈ ಪುಸ್ತಕ ಬರೆಯಲು ಆಧಾರವಾಗಿ ಇಟ್ಟುಕೊಂಡಿರುವ ಕೇನ್ಸ್, ಪಿಗೊ, ಹಾಟ್ರೆ ಮುಂತಾದ ಇಂಗ್ಲಿಷ್ ಅರ್ಥಶಾಸ್ತ್ರಜ್ಞರ ಬರವಣಿಗೆಗಳು ಇಂದಿಗೂ ಮಾನ್ಯ ವಾಗಿವೆ.

ಈ ಪುಸ್ತಕ ಸುಲಭವಾಗಿ ಅರ್ಥವಾಗುವುದಿಲ್ಲ ಎಂದು ಕೆಲವರು ಹೇಳು ವುದನ್ನು ಕೇಳಿದ್ದೇನೆ. ಆದರೆ ಅದಕ್ಕೆ ಕಾರಣ ಪುಸ್ತಕವಲ್ಲ; ಹಾಗೆ ಹೇಳುವವರು. ಇಂಗ್ಲಿಷ್ ಬಲ್ಲವರಿಗೆ ಹಲವು ಇಂಗ್ಲಿಷ್ ಪದಗಳಿಗೆ ಸಮಾನವಾದ ಕನ್ನಡ ಪದಗಳ ಪರಿಚಯ ಇನ್ನೂ ಇಲ್ಲ. ಇಂಗ್ಲಿಷ್ ಬಾರದವರಿಗೆ ಈ ಪುಸ್ತಕವನ್ನು ಓದಿ ಅರಿ ಯುವಷ್ಟು ಜ್ಞಾನದ ಮಟ್ಟವಿಲ್ಲವೆಂಬ ಭಾವನೆ. ಇಬ್ಬರೂ ಸ್ವಲ್ಪ ತಾಳ್ಮೆಯಿಂದ ಈ ಪುಸ್ತಕವನ್ನು ಓದಿದರೆ ವಿ. ಸೀ. ಅವರ ಜ್ಞಾನಭಂಡಾರದ ಪರಿಚಯವಾಗದೆ ಇರುವುದಿಲ್ಲ.

ವಿ. ಸೀ. ಅವರ 'ಹಣ ಪ್ರಪಂಚ' ಎಲ್ಲ ಕನ್ನಡ ವಿಚಾರಪ್ರಿಯರ ಕೈದೀವಿಗೆ; ಶಾಸ್ತ್ರಗ್ರಂಥಗಳನ್ನು ಕನ್ನಡದಲ್ಲಿ ಶ್ಲಾಘ್ಯ ರೀತಿಯಲ್ಲಿ ಬರೆಯಬಹುದೆಂಬುವನ್ನು ತೋರಿಸುವ ಒಂದು ಯಶಸ್ವೀ ಪ್ರಯೋಗ; ನಮಗೆ ಅನಿವಾರ್ಯವಾಗಿದ್ದೂ ಅರ್ಥ ವಾಗದಿರುವ ಹಣದ ವ್ಯವಸ್ಥೆಯ ಸುಲಭ ಪರಿಚಯ; ಸಾಹಿತಿ ವಿ. ಸೀ. ಅವರು ಕನ್ನಡಕ್ಕೆ ನೀಡಿರುವ ಅಮೂಲ್ಯ ಕಾಣಿಕೆ.

ಎಚ್ಚೆಸ್ಕೆ

# ವಿ. ಸೀ. ಅವರ ಪ್ರಬಂಧಗಳು, ವಿಮರ್ಶೆಗಳು

ಪಂಪಾಯಾತ್ರೆಯ ವಿ. ಸೀ.ಯವರು ಮುಖ್ಯವಾಗಿ ಕವಿಗಳೆಂದೇ ಬಹುಜನ ಕನ್ನಡಿಗರಿಗೆ ಗೊತ್ತಿರುವ ವಿಷಯ. ಅವರು ಕಥೆ ಕಾದಂಬರಿಗಳನ್ನಂತು ಬರೆದೇ ಇಲ್ಲ. ನಾಟಕ ರಚನೆಗೆ ಕೈಹಾಕದೆ ಇಲ್ಲ. ಆದರೆ ಅವರ ಭಾವಪ್ರಬಂಧಗಳನ್ನು ಒಮ್ಮೆ ಓದಿದವರು ಮತ್ತೆ ಮರೆಯುವಂತಿಲ್ಲ. ಸಂಖ್ಯಾಬಲದಿಂದಲ್ಲದಿದ್ದರೂ ಗುಣಾಧಿಕ್ಯದಿಂದ ಅವರ ಭಾವ ಪ್ರಬಂಧಗಳು ಅವರ ಭಾವಗೀತೆಗಳ ಮಟ್ಟಕ್ಕೇರುವಂಥವು.

ಸಾಹಿತ್ಯದಲ್ಲಿ ಸಣ್ಣ ಕಥೆ ಮತ್ತು ಭಾವಗೀತಾದಿ ಪ್ರಕಾರಗಳಿಗೆ ಯಾವ ಸ್ಥಾನವಿದೆಯೊ ಭಾವಪ್ರಬಂಧಕ್ಕೂ ಅದೇ ಸ್ಥಾನವಿದೆ. ಸಣ್ಣ ಕಥೆಯಂತೆ ಅದು ಆಕಾರದಲ್ಲಿ ಸಣ್ಣದು; ಯಾವುದಾದರೊಂದು ವಸ್ತುವಿನ, ವ್ಯಕ್ತಿಯ ಅಥವಾ ಶಕ್ತಿಯ ಒಂದು ಮುಖವನ್ನೊ, ಘಟನೆಯನ್ನೊ, ಒಂದು ಪ್ರಕಾರವನ್ನೊ ನಿರೂಪಿಸುತ್ತದೆ. ಅವೆರಡಕ್ಕೂ ಇರುವ ಮುಖ್ಯವಾದ ವ್ಯತ್ಯಾಸವೆಂದರೆ ನಿರೂಪಣಾವಿಧಾನ. ಒಂದು ಮುಖ್ಯವಾಗಿ ವಸ್ತುನಿಷ್ಠವಾದುದು; ಮತ್ತೊಂದು ಭಾವನಿಷ್ಠವಾದುದು.

ಭಾವಪ್ರಬಂಧದಲ್ಲಿ ಭಾವಾಂಶ ಅಧಿಕ ಪ್ರಮಾಣದಲ್ಲಿದ್ದರೂ ಅದೇ ಸರ್ವಸ್ವವಲ್ಲ. ರೇಶಿಮೆ ಸೀರೆಯಲ್ಲಿ ನಡುನಡುವೆ ಬರುವ ಚಿನ್ನದೆಳೆಗಳಂತೆ ಚಿಂತನಾಂಶವೂ ಕೂಡಿಕೊಂಡಿರುತ್ತದೆ. ಆದುದರಿಂದಲೇ ಭಾವಪ್ರಬಂಧ ಗದ್ಯದ ಧಾಟಿಯನ್ನು ಹಿಡಿಯುತ್ತದೆ. ಭಾವಗೀತೆ ಪ್ರಧಾನವಾಗಿ ಭಾವನಿಷ್ಠವಾದುದು; ಅಲ್ಲಿ ಚಿಂತನಾಂಶ ಭಾವಾಂಶಕ್ಕೆ ಸಮರ್ಪಿತ. ಹಾಲಿನಲ್ಲಿ ಸಕ್ಕರೆ ಮರೆಯಾಗುವಂತೆ ಭಾವಾಂಶದಲ್ಲಿ ಚಿಂತನಾಂಶ ಮರೆಯಾಗುತ್ತದೆ. ಆದುದರಿಂದ ಭಾವಗೀತೆ ಪದ್ಯದ ಧಾಟಿಯನ್ನು ಹಿಡಿಯದೆ ಬೇರೆ ಮಾರ್ಗವೇ ಇಲ್ಲ.

ಒಂದು ವಸ್ತುವನ್ನೊ, ತತ್ತ್ವವನ್ನೊ, ವ್ಯಕ್ತಿಯನ್ನೊ, ಶಕ್ತಿಯನ್ನೊ ಕುರಿತ ಮಾನವನ ಚಿಂತನೆಯೆ, ಆ ಚಿಂತನೆಯ ಪರಿಣಾಮವಾಗಿ ಅವನ ಹೃದಯದಲ್ಲಿ ಮೂಡುವ ಭಾವಪುಂಜವೆ ಭಾವಪ್ರಬಂಧ. ಸಾಹಿತಿ ಯಾವುದೋ ಒಂದು ವಸ್ತುವನ್ನು ಕುರಿತು ಚಿಂತಿಸುತ್ತ, ಧ್ಯಾನಿಸುತ್ತ, ಭಾವಿಸುತ್ತ ಅದರಲ್ಲಿಯೇ ಮಗ್ನನಾಗುತ್ತಾನೆ. ಅದರ ವಿಚಾರವಾಗಿ ಮಿಡಿದ ಭಾವಗಳನ್ನು ಮಾತಿನ ಮೂಲಕ ಹೊರಗೆಡ

ಹುತ್ತಾನೆ. ಹಾಗೆ ಮಿಡಿದ ಭಾವಗಳನ್ನೆಲ್ಲ, ಮಿಡಿದಂತೆಯೆ, ಮುದ್ದೆಮುದ್ದೆಯಾಗಿ ಕುಪ್ಪೆಕುಪ್ಪೆಯಾಗಿ ಪೇರಿಸುವುದಿಲ್ಲ. ಸಮಸ್ತ ಕಲೆಗಳ ಜೀವಲಕ್ಷಣಗಳಾದ ಆಯ್ಕೆ ಮತ್ತು ಜೋಡಣೆಯ ತತ್ತ್ವಗಳಿಗೆ ಇಲ್ಲಿಯೂ ಸಂಪೂರ್ಣವಾಗಿ ಗೌರವ ಸಲ್ಲಿಸ ಬೇಕಾಗುತ್ತದೆ. ಸಂಕ್ಷಿಪ್ತತೆ ಮತ್ತು ಸ್ಪಷ್ಟತೆ ಭಾವಪ್ರಬಂಧಗಳ ವೈಲಕ್ಷಣ್ಯ. ಮಿತಿ ಮೀರಿದ ವಿವರಣೆ ಲಂಬಾಣಿ ಹೆಂಗಸರ ಅಲಂಕಾರಗಳಂತೆ ಹೊರೆಯಾಗುತ್ತದೆ, ವಿಪರೀತವಾಗುತ್ತದೆ. ವಿವರಣೆ ಆಯ್ದುಕೊಂಡ ವಸ್ತುವಿಗೆ ತಕ್ಕಂತೆ, ಪರಿಮಿತ ವಾಗಿರಬೇಕು. ಅದರಿಂದ ದೂರ ಸರಿಯಬಾರದು. ಅದರ ಬಗ್ಗೆ ಹೇಳಬಹುದಾದು ದನ್ನು ಸಂಪೂರ್ಣವಾಗಿ ಸ್ವಾರಸ್ಯವಾಗಿ ಹೇಳಬೇಕು. ಮೊದಲಿನಿಂದ ಕೊನೆಯ ತನಕ ಭಾವನಿರೂಪಣೆಯಲ್ಲೊಂದು ಕ್ರಮಯುಕ್ತವಾದ ತರ್ಕಬದ್ಧತೆಯಿರಬೇಕು; ಅದಿಲ್ಲದಿದ್ದರೆ ಪ್ರಬಂಧ ಹರಟೆಯಾಗುವ ಸಂಭವವುಂಟು. ಒಟ್ಟಿನಲ್ಲಿ ಔಚಿತ್ಯ ಮತ್ತು ಸಂಯಮಗಳೆ ಪ್ರಬಂಧ ಕಲೆಯ ಹಿರಿಯ ರಹಸ್ಯ.

ವಿ. ಸೀ.ಯವರ ಪ್ರಬಂಧ ಕಲೆಯಲ್ಲಿ ಬಹುಮಟ್ಟಿಗೆ ಈ ಲಕ್ಷಣಗಳನ್ನು ಕಾಣ ಬಹುದು. 'ಮೈಸೂರು ರುಮಾಲು', 'ಕಾಯಿಲೆಗಳು' ಮತ್ತು 'ಮಳೆ' ಈ ಮೂರೂ ಉತ್ತಮ ಪ್ರಬಂಧಗಳಿಗೆ ಒಳ್ಳೆಯ ನಿದರ್ಶನಗಳು. ಮೈಸೂರು ರುಮಾಲು ಪ್ರಬಂಧವನ್ನು ಆರಂಭಿಸುವ ರೀತಿಯೆ ತುಂಬ ಕುತೂಹಲಕಾರಿಯಾಗಿದೆ. "ಹೆಂಗ ಸಿನ ಮನಸ್ಸನ್ನಳಿಯಬಹುದು....ಅದೃಷ್ಟದಲ್ಲಿ ಏನು ಬರೆದಿದೆಯೆಂದು ಗುಣಿಸ ಬಹುದು;....ಆದರೆ ರುಮಾಲನ್ನು ಕೆಡಿಸದೆ ಯಾವಾಗಲೂ ಸರಿಯಾಗಿಯೇ ಕಟ್ಟು ತ್ತೇನೆನ್ನುವುದು ಒಂದು ಮಾತ್ರ ಅಸಾಧ್ಯ." ಈ ಮಾತುಗಳನ್ನು ಓದಿದೊಡನೆ ಪ್ರಬಂಧಕಾರರು ರುಮಾಲಿನ ವಿಷಯದಲ್ಲಿ ಇಟ್ಟಿರುವ ಅಭಿಮಾನ, ಗೌರವ, ಪ್ರೇಮ, ಪಕ್ಷಪಾತ, ಜೊತೆಗೆ ಅವರ ರಸಿಕತೆ ನಮ್ಮಲ್ಲಿಯೂ ಸ್ಫುರಿಸುತ್ತವೆ; ಅನ್ಯ ವಿಷಯ ಗಳನ್ನು ಮರೆತು ನಮ್ಮ ಮನಸ್ಸು ಆ ವಸ್ತುವಿನಲ್ಲಿಯೇ 'ತಲ್ಲೀನ'ವಾಗುತ್ತದೆ. ಕತೆ ಗಾರನಾಗಲಿ ಪ್ರಬಂಧಕಾರನಾಗಲಿ ಆರಂಭದಲ್ಲಿಯೇ ವಾಚಕರ ಮನಸ್ಸನ್ನು ಸಿದ್ಧ ಗೊಳಿಸುವ ಜಾಣ್ಮೆಯನ್ನು ಪಡೆದಿರಬೇಕು. ಅಲ್ಲದೆ ಆರಂಭದ ಭಾವ ಪುಂಜಗಳ ಆಧಾರದ ಮೇಲೆ, ಅವುಗಳನ್ನೊಳಗೊಂಡು, ಮುಂದೆ ಪ್ರಬಂಧ ಬೆಳೆಯಬೇಕು.

ನಾಂದೀ ವಾಕ್ಯಗಳಲ್ಲಿ ಮೈಸೂರು ರುಮಾಲಿನ ಹಿರಿಮೆಯನ್ನು ಮನಮುಟ್ಟು ವಂತೆ ಹೇಳಿ ಮುಂದೆ ಇತರ ಪ್ರಾಂತಗಳ ರುಮಾಲುಗಳೊಡನೆ ಅದನ್ನು ಹೋಲಿ ಸುತ್ತಾರೆ. ಅನಂತರ ಅದರ ಬೆಲೆ, ಅದನ್ನು ಇಟ್ಟುಕೊಳ್ಳುವ ವಿಧಾನ, ಅದನ್ನು ಬಳಸುವ ರೀತಿ, ಅದರ ನಯನಾಜೋಕುಗಳನ್ನು ವಿವರಿಸುತ್ತಾರೆ. ಮೈಸೂರಿನವರ ರಸಿಕತೆಯ ವಿಚಾರವನ್ನು ತಿಳಿಸುತ್ತ "ರಸಿಕತೆಯನ್ನು ಉಳಿಸಿಕೊಳ್ಳುವುದಕ್ಕಾಗಿ ಏನನ್ನು ಬೇಕಾದರೂ ಮಾಡಲು ಸಿದ್ಧರಾಗಿರುವೆವು–ಆದರಲ್ಲಿನ ಆಸಕ್ತಿಯಿಂದ ಬಡತನ ಬಂದೀತೆಂದು ಅಂಜೆವು" ಎಂದು ಹೇಳುತ್ತಾರೆ. ಈ ಒಂದೊಂದು ಭಾವವೂ ಮೂಲಭಾವಗಳನ್ನು ಹೇಗೆ ಪೋಷಿಸುತ್ತಿವೆಯೆಂಬುದನ್ನು ಗಮನಿಸಬಹುದು. ಆ

ಒಂದು ಏಕಮುಖತೆ ಮತ್ತು ಕಾರ್ಯಕಾರಣ ಸಂಬಂಧ ಪ್ರಬಂಧದ ಬೆಳವಣಿಗೆಯಲ್ಲಿ ಮುಖ್ಯವಾಗಿ ಗಮನಿಸಬೇಕಾದ ಅಂಶಗಳು.

ಕೊನೆಗೆ ರುಮಾಲಿನ ಹಿರಿಮೆ, ಅದನ್ನು ಧರಿಸುವವರ ರಸಿಕತೆಗಳು ವ್ಯಕ್ತವಾಗುವಂತೆ ಅದರ ಪ್ರಯೋಜನಗಳನ್ನು ವಿವರಿಸುತ್ತಾರೆ. ಈ ವಿವರಣೆಯಲ್ಲಿ ನಡುನಡುವೆ ಇತರರನ್ನು ನೋಯಿಸದ ಅಣಕವೂ ನುಸುಳುತ್ತದೆ. "ಚೆನ್ನಾಗಿ ರುಮಾಲು ಕಟ್ಟಿ ಠಾಕೋಠೀಕಾಗಿರುವವರನ್ನು ಕಂಡರೆ ಎಲ್ಲರೂ ಹತ್ತಿರಬನ್ನಿರೆನ್ನುತ್ತಾರೆ. ಯಾವ ಅಂಗಡಿಯಲ್ಲೇ ಆಗಲಿ, ಬ್ಯಾಂಕಿನಲ್ಲಾಗಲಿ ನಂಬಿಕೆ ಉಳಿಸುತ್ತದೆ. ಬೀದಿಯಲ್ಲಿ ಪೋಲೀಸಿನವನು ನಿಮಿರಿ ನಿಂತು ಸಲಾಮು ಮಾಡುತ್ತಾನೆ.... ತಾಲ್ಲೂಕು ಅಮಲ್ದಾರರು ಪಕ್ಕದಲ್ಲಿ ಕುರ್ಚಿಯ ಮೇಲೆ ಕೂಡಿಸಿಕೊಂಡು ಮಾತನಾಡುತ್ತಾರೆ. ಕೊನೆಗೆ ಟಿಕೆಟ್ ಕಲೆಕ್ಟರ್ ಕೂಡ ನಿಮ್ಮ ಗೊಡವೆಗೆ ಬಾರದೆ ನೀವು ಮೂರನೆಯ ಕ್ಲಾಸ್ ಟಿಕೆಟ್ ತೆಗೆದುಕೊಂಡು ಮೊದಲನೆಯ ಕ್ಲಾಸ್ ಗಾಡಿಯಲ್ಲಿ ಮಲಗಿ ನಿದ್ರೆ ಮಾಡುತ್ತ ಪ್ರಯಾಣ ಮಾಡಿದರೂ ನಿಮಗೆ ತೊಂದರೆ ಕೊಡದೆ ಹೊರಟುಹೋಗುತ್ತಾನೆ...." ಈ ಮಾತುಗಳಲ್ಲಿ ವಾಸ್ತವ ಸತ್ಯ ಹುದುಗಿದೆ. ಆದರೆ ಕಟುಸತ್ಯ!

ಭಾವಪ್ರಬಂಧಗಳಲ್ಲಿ ಸಾಹಿತಿಯೇ ಕೇಂದ್ರಶಕ್ತಿ ಎನ್ನುವುದನ್ನು ಮರೆಯಬಾರದು. ಅವನು ಮುಖ್ಯವಾಗಿ ಪ್ರಪಂಚವನ್ನು ತನ್ನ ದೃಷ್ಟಿಕೋನದಿಂದ ನೋಡುತ್ತಾನೆ. ತನ್ನ ಹೃದಯ ಕ್ರಿಯೆ-ಪ್ರತಿಕ್ರಿಯೆಗಳ ಘರ್ಷಣೆಯ ಪ್ರತಿಧ್ವನಿಯನ್ನಲ್ಲಿ ಕಾಣುತ್ತಾನೆ. ಅವನ ಪ್ರಬಂಧಗಳು ಅವನ ಹೃದಯಕ್ಕೆ ಹಿಡಿದ ಕನ್ನಡಿ. 'ಕಾಯಿಲೆಗಳು' ಎಂಬ ಪ್ರಬಂಧ ಇಂಥದೊಂದು. ಯಾವಾಗಲೂ ಸೊಗಸಿನಲ್ಲಿ ಹೊಲಸನ್ನೂ, ಪ್ರಕೃತಿಯಲ್ಲಿ ವಿಕೃತಿಯನ್ನೂ, ಋಜುತ್ವದಲ್ಲಿ ವಕ್ರತೆಯನ್ನೂ ಕಾಣುವ ಜನ ಹೊಲಸಿನಲ್ಲಿ ಸೊಗಸನ್ನು, ವಿಕೃತಿಯಲ್ಲಿ ಪ್ರಕೃತಿಯನ್ನು, ವಕ್ರತೆಯಲ್ಲಿ ಋಜುತ್ವವನ್ನು ಹೇಗೆ ಕಂಡಾರು? ನಮ್ಮ ಕಣ್ಣಿಗೆ ಹೊಲಸೆಂದು ಕಾಣುವುದು ಸಂಪೂರ್ಣವಾಗಿ ಹೊಲಸಲ್ಲ. ಹೊಲಸಿನ ನಡುವೆ ಸೊಗಸನ್ನು ಕಾಣುವುದು ಸುಲಭವಲ್ಲ. ಅದಕ್ಕೆ ಬೇರೆ ಕಣ್ಣು ಬೇಕು. ಕಾಯಿಲೆಗಳನ್ನು ಸಹಾನುಭೂತಿಯಿಂದ ಕಾಣುವ ವಿ.ಸೀ.ಯವರ ಕಣ್ಣು ಅಂಥದು.

ಇಲ್ಲಿಯೂ ಆರಂಭದ ವಾಕ್ಯಗಳು ಎಷ್ಟು ಮುದ್ದಾಗಿ, ಸರಳವಾಗಿ, ಅರ್ಥಗರ್ಭಿತವಾಗಿವೆ? "ಕಾಯಿಲೆ ಎಂದರೆ ಸಾಮಾನ್ಯವಾಗಿ ಜನರಿಗೆ ಹೆದರಿಕೆ, ಯೋಚನೆ. ನನ್ನಂಥವರಿಗೆ ಹಾಗಲ್ಲ, ಕಾಯಿಲೆ ಎಂದರೆ ನಮಗೆ ಸಂತೋಷ." ಮುಂದಿನ ಒಂದೊಂದು ವಾಕ್ಯವೂ ಓದುಗರ ಕುತೂಹಲವನ್ನು ಕೆರಳಿಸಿ ಹೃದಯವನ್ನು ಪರಿವರ್ತನಗೊಳಿಸುತ್ತದೆ. ಮೊದಮೊದಲು ಪ್ರಬಂಧಕಾರರದು ವಕ್ರದೃಷ್ಟಿ ಎನ್ನಬಹುದಾದ ಓದುಗ ಕೊನೆಕೊನೆಗೆ 'ಅದೇ ಋಜುದೃಷ್ಟಿ' ಎಂದು ಒಪ್ಪಿಕೊಳ್ಳುತ್ತಾನೆ. ಕಾಯಿಲೆಯಿಂದ ಲೋಕಾನುಭವ, ಸಹನೆ, ತಾಳ್ಮೆ ಒದಗುತ್ತವೆಂದು ಹೇಳುತ್ತಾರೆ. ಕಾಯಿಲೆಯಿಂದ ಮಲಗಿದಾಗ ಸುತ್ತಮುತ್ತಣವರ ಪ್ರೀತಿಯ ಪರೀಕ್ಷೆ

ಯಾಗುತ್ತದಂತೆ. ಅವರ ಉಪಚಾರ ಅಷ್ಟಿಷ್ಟಲ್ಲ. ಅಂಥ ಉಪಚಾರದ ಪುಣ್ಯಲಾಭ ಕ್ಕಾಗಿಯಾದರೂ ಕಾಯಿಲೆ ಮಲಗುವ ಬಯಕೆಯುಂಟು! ಅಂತು ಈ ಭಾಗವನ್ನು ಓದಿ ಸವಿಯಬೇಕು. "ಕಾಯಿಲೆಗಳಿಗೆ ದೇವರಿಗಿರುವಂತೆ ಸರ್ವ ಸಮದೃಷ್ಟಿಯಿದೆ" ಯಂತೆ! ಏಕೆಂದರೆ ಅವು ಬಡವ ಬಲ್ಲಿದರನ್ನು ಒಂದೇ ಸಮನಾಗಿ ಕಾಣುತ್ತವೆ. ಅಷ್ಟೇ ಅಲ್ಲ; ಅವು ಸಂಸಾರ-ತಾಪತ್ರಯಗಳಿಂದ ಮಾನವರನ್ನು ತಾತ್ಕಾಲಿಕವಾಗಿಯಾ ದರೂ ತಪ್ಪಿಸುತ್ತವೆ. ಆ ಕಡೆ ಈ ಕಡೆ ಅರುಗಾಗದೆ ಒಂದು ಮೂಲ ಭಾವನೆ ಯನ್ನೆ ಕೊನೆಯ ತನಕ ಸಕ್ರಮವಾಗಿ ಈ ಪ್ರಬಂಧದಲ್ಲಿ ಬೆಳೆಸಿದ್ದಾರೆ.

'ಮಳೆ' ಒಂದು ವರ್ಣನಾತ್ಮಕ ಪ್ರಬಂಧ. ಇದು ಸಾಮಾನ್ಯ ರೀತಿಯಲ್ಲಿ ಆರಂಭವಾಗುತ್ತದೆ. ಹಿಂದಿನವುಗಳ ಹಾಗೆ ಮೊದಲೇ ನಮ್ಮ ಕುತೂಹಲವನ್ನು ಕೆರಳಿಸುವುದಿಲ್ಲ. ಆದರೂ ಮುಂದೆ ಸಾಗುತ್ತ ಸಾಗುತ್ತ ಚೈತನ್ಯಶಾಲಿಯಾಗುತ್ತದೆ. ಕೇವಲ ವರ್ಣನೆಗಾಗಿಯಾದರೂ ಇದನ್ನು ಓದಬಹುದಾಗಿದೆ.

ವಿ. ಸೀ.ಯವರು ಉತ್ತಮ ಪ್ರಬಂಧಕಾರರೆಂಬುದು ಅವರು ಸದ್ಯಕ್ಕೆ ಬರೆ ದಿರುವ ಮೂರ್ನಾಲ್ಕು ಪ್ರಬಂಧಗಳಿಂದ ವ್ಯಕ್ತವಾಗುತ್ತದೆ. ನಡುನಡುವೆ ತಿಳಿಹಾಸ್ಯ ಅಣಕ, ವಿಡಂಬನೆಗಳನ್ನು ಸೇರಿಸಿ ಗಹನ ವಿಷಯಗಳನ್ನು ಸರಳವಾಗಿ ಹೇಳುವ ಶಕ್ತಿ ಅವರ ಉಕ್ತಿವಶವಾಗಿದೆ. ಪ್ರಸಾದ ಅವರ ಶೈಲಿಯ ಜೀವಾಳ. ಓದುಗರ ಕುತೂ ಹಲ ಆರುವುದಕ್ಕೆ ಮುಂಚೆ ಪ್ರಬಂಧವನ್ನು ನಿಲ್ಲಿಸಬೇಕೆಂಬುದನ್ನು ಅವರು ಬಲ್ಲರು. 'ಸಾಕುಮಾಡಪ್ಪ' ಎನ್ನುವ ತನಕ ಅದನ್ನು ಲಂಬಿಸುವುದಿಲ್ಲ. ಅಂತು ಇಂಥ ಉತ್ತಮ ಪ್ರಬಂಧಗಳನ್ನು ರಚಿಸಬಲ್ಲ ವಿ.ಸೀ.ಯವರಿಂದ ಕನ್ನಡಿಗರು ಇನ್ನಷ್ಟು ಪ್ರಬಂಧ ಗಳನ್ನು ನಿರೀಕ್ಷಿಸಬಹುದಾದುದು ಸಹಜವೆ!

ಕನ್ನಡದಲ್ಲಿ ಭಾವಪ್ರಬಂಧಗಳು ಹೇಗೆ ಸಾಕಾದಷ್ಟು ಪ್ರಮಾಣದಲ್ಲಿ ಬೆಳೆ ದಿಲ್ಲವೊ ಹಾಗೆಯೆ ಸಾಹಿತ್ಯಾಭಿವೃದ್ಧಿಗೆ ಮತ್ತು ಸಾಹಿತ್ಯಾಭಿರುಚಿಯ ಪೋಷಣೆಗೆ ಅತ್ಯವಶ್ಯವಾದ ವಿಮರ್ಶೆಯ ಭಾಗವಾಗಲಿ, ಕಾವ್ಯ ಮೀಮಾಂಸೆಯ ಭಾಗವಾಗಲಿ ಸಾಕಾದಷ್ಟು ಬೆಳೆದಿಲ್ಲ, ಬೆಳೆಯುತ್ತಿಲ್ಲ. ಈ ಎರಡು ಶಾಖೆಗಳೂ ಜೊತೆಜೊತೆಗೆ ಬೆಳೆಯದಿದ್ದರೆ ಸಾಹಿತ್ಯಕ್ಷೇತ್ರದಲ್ಲಿ ಜೊಂಡು ವಿಪರೀತವಾಗಿ ಹೆಚ್ಚಲು ಅವಕಾಶ ವಾಗುತ್ತದೆ. ಅಲ್ಲೊಂದು ಇಲ್ಲೊಂದು ಉತ್ತಮವಾದ ಮೀಮಾಂಸೆಯ ಗ್ರಂಥ ಗಳು ಬೆಳಕಿಗೆ ಬರುತ್ತಿವೆ; ಆಗೊಂದು ಈಗೊಂದು ವಿಮರ್ಶೆಯ ಕೃತಿಗಳೂ ಪ್ರಕಟ ವಾಗುತ್ತಿವೆ. ಹಿಂದಿನಿಂದ ಇಂದಿನವರೆಗೆ ಬೆಳೆದಿರುವ ಸಾಹಿತ್ಯ ಕೃತಿಗಳೊಡನೆ ತೂಕ ಮಾಡಿ ನೋಡಿದರೆ ಅವು ಏನೇನೂ ಸಾಲದು. ನಮ್ಮ ಹಿಂದಿನ ಹಿರಿಯ ಕೃತಿಗಳನ್ನು ಕುರಿತ ದರ್ಶನಾತ್ಮಕವೂ, ವರ್ಣನಾತ್ಮಕವೂ, ತುಲನಾತ್ಮಕವೂ ಆದ ಶಾಸ್ತ್ರೀಯ ವಿಮರ್ಶೆಯಿಂದ ಸಾಹಿತ್ಯಾಭ್ಯಾಸಕ್ಕೆ ತುಂಬ ಅನುಕೂಲವಾಗುತ್ತದೆ.

ಆದರೆ ವಿಮರ್ಶೆ ಸುಲಭದ ಕೆಲಸವಲ್ಲ. ಆದುದರಿಂದಲೆ ಉತ್ತಮ ವಿಮರ್ಶ ಕರು ಬಹಳ ಮಂದಿ ಸಿಗಲಾರರು. ಕವಿಯ ಸಂಸ್ಕಾರದ ಜೊತೆಗೆ ಪಂಡಿತನ ಸಂಸ್ಕಾ

ರವೂ ವಿಮರ್ಶಕನಿಗಿರಬೇಕು. ಅವೆರಡೂ ಸಮತೂಕದಲ್ಲಿರಬೇಕು. ಅವನಿಗೆ ಪರ ಕಾಯ ಪ್ರವೇಶಮಾಡುವ ಪ್ರತಿಭಾಶಕ್ತಿಯಂತು ಇರಲೇಬೇಕು. ಕವಿ ಚೇತನಾ ಚೇತನ ಶಕ್ತಿಗಳ ಹೃದಯವನ್ನು ಹೊಗುವ ಸಾಮರ್ಥ್ಯವನ್ನು ಹೊಂದಿದ್ದರೆ, ವಿಮರ್ಶಕ ಕವಿಹೃದಯವನ್ನು ಹೊಗುವ ಸಾಮರ್ಥ್ಯವನ್ನು ಪಡೆದಿರಬೇಕು. ಆದುದರಿಂದಲೆ ವಿಮರ್ಶಕ ಮೊದಲು ಸಹೃದಯನಾಗಿದ್ದು ಅನಂತರ ವ್ಯಾಖ್ಯಾನ ಕಾರ, ಟೀಕಾಕಾರ ಮತ್ತು ತೀರ್ಪುಗಾರನಾಗುತ್ತಾನೆ. ಕವಿಗೆ ಎರಡು ವಿಷಯ ತಿಳಿದಿದ್ದರೆ ವಿಮರ್ಶಕನಿಗೆ ಹತ್ತು ವಿಷಯ ತಿಳಿದಿರಬೇಕಾಗುತ್ತದೆ. ಕಾವ್ಯನಿರ್ಮಿತಿಯ ಕಾಲದಲ್ಲಿ ಕವಿ ಯಾವುದೋ ಒಂದು ಅಲೌಕಿಕ ಶಕ್ತಿಯ ವಶನಾಗಿ, ತಾನು ಇಲ್ಲವಾಗಿರುತ್ತಾನೆ. ಸಾಮಾನ್ಯಕಾಲದಲ್ಲಿ ಬುದ್ಧಿಗೆ ಗೋಚರವಾಗದ, ತಿಣುಕಿದರೂ ತಲೆಯಿಣುಕದ ಎಷ್ಟೆಷ್ಟೋ ವಿಷಯಗಳು ಆ ಕಾಲದಲ್ಲಿ ಗೋಚರವಾಗುತ್ತವೆ. ಅನಂತರ ಅವನೆ ತನ್ನ ಕೃತಿಯನ್ನು ಓದಿಕೊಂಡರೆ ಹೊಸ ಹೊಸ ಅನುಭವ ಸ್ಫುರಿಸಿದಂತಾಗುತ್ತದೆ. ಆ ಅನುಭವ ತಾನು ಹಿಂದೆಂದೂ ಅನುಭವಿಸದುದು ಎಂಬ ಭಾವನೆಯೂ ಉಂಟಾಗುತ್ತದೆ. ಅಂದರೆ ವಿಮರ್ಶಕ ಕವಿಯ ಶಬ್ದ ಪ್ರತಿಮೆಯ ಮೂಲಕ ಅವನ ಕಾವ್ಯ ನಿರ್ಮಿತಿಯ ಕಾಲದ ಅತೀಂದ್ರಿಯಾನುಭವವನ್ನು ದರ್ಶಿಸಲು ಪ್ರಯತ್ನಿಸುತ್ತಾನೆ. ಕವಿಗೇ ಆ ಅನುಭವ ಹೊಸದಾಗಿ ಕಾಣಿಸುವಾಗ ವಿಮರ್ಶಕನಿಗೆ? ಆದುದರಿಂದಲೇ ವ್ಯಾಸ, ವಾಲ್ಮೀಕಿ, ಭಾಸ, ಕಾಳಿದಾಸ, ಷೇಕ್ಸ್‌ಪಿಯರ್, ಮಿಲ್ಟನ್, ಹೋಮರ್, ಡಾಂಟೆ ಮೊದಲಾದ ಪುರಾತನ ಕವಿಗಳನ್ನು ಕುರಿತು ಇನ್ನೂ ಲೇಖನಗಳು ಗ್ರಂಥಗಳು ಬರುತ್ತಿವೆ. ಒಬ್ಬೊಬ್ಬ ವಿಮರ್ಶಕನೂ ತನ್ನ ದೃಷ್ಟಿಯಿಂದ ಆ ಕೃತಿಗಳನ್ನು ನೋಡಲು, ಆ ಕವಿಗಳ ಹೃದಯವನ್ನು ಅರ್ಥ ಮಾಡಿಕೊಳ್ಳಲು ಪ್ರಯತ್ನಿಸುತ್ತಾನೆ. ವಿಮರ್ಶಕರು ಹೇಳುವುದನ್ನೆಲ್ಲ ಆ ಕವಿಗಳು ಮೊದಲೇ ಯೋಚಿಸಿದ್ದರೋ ಇಲ್ಲವೋ ಗೊತ್ತಿಲ್ಲ. ಆದರೆ ವಿಮರ್ಶಕರು ಹೇಳುವುದು ಸುಳ್ಳಲ್ಲ. ಅದು ಸುಳ್ಳಾಗುವ ಪಕ್ಷಕ್ಕೆ 'ಕವಿಯ ಹೃದಯವೊಂದು ವೀಣೆ, ಲೋಕವದನು ಮಿಡಿವುದು' ಎಂಬ ಕವಿವಾಣಿ ಸುಳ್ಳಾಗುತ್ತದೆ; ಕವಿ ವರ್ತಮಾನದಲ್ಲಿ ನಿಂತು ಭೂತ ಭವಿಷ್ಯತ್ತುಗಳನ್ನು ಬಾಚಿ ತಬ್ಬುತ್ತಾನೆ ಎಂಬ ನುಡಿ ಪೊಳ್ಳಾಗುತ್ತದೆ.

ಸಾಹಿತ್ಯ ಕ್ಷೇತ್ರದಲ್ಲಿ ವಿಮರ್ಶಕನ ಜವಾಬ್ದಾರಿ ಗುರುತರವಾದುದು. ಕವಿಗೂ ಜನತೆಗೂ ನಡುವೆ ಸಂಪರ್ಕಾಧಿಕಾರಿಯಿದ್ದಂತೆ ಅವನು. ಜನಮನಸ್ಸಿನ ಪ್ರತಿನಿಧಿಯಾದ ಕವಿ ಮನಸ್ಸಿನಲ್ಲಿ ಕಾವ್ಯ ಹೇಗೆ ಅಂಕುರಿಸಿತು, ಎಂಥ ಸನ್ನಿವೇಶದಲ್ಲಿ ಅದು ಬೆಳೆಯಿತು ಎಂಬುದನ್ನು ಅವನು ವಿವರಿಸುತ್ತಾನೆ. ಕವಿಯ ದಾರ್ಶನಿಕ ದೃಷ್ಟಿಯನ್ನು ಸಾಮಾನ್ಯರಿಗೆ ಗ್ರಾಹ್ಯವಾಗುವಂತೆ ವಿಶದೀಕರಿಸುತ್ತಾನೆ. ಕವಿ ಜನಸಾಮಾನ್ಯದ ನಡುವೆ ಬೆಳೆದರೂ ತನ್ನ ಸಾಧನಾ ತಪಸ್ಸುಗಳ ಮಹಿಮೆಯಿಂದ ಅವನು ಆ ಜನತೆಯಿಂದ ಒಂದೆರಡು ಶತಮಾನಗಳು ಮುಂದೆ ಹೋಗಿರುತ್ತಾನೆ. ಅವನನ್ನು ಮುಂದೆ ಹೋಗಬೇಡವೆಂದು ತಡೆಯುವುದು ಬೆಪ್ಪುತನ. ಆ ತಡೆಗಳಿಗೆ ತೊಡರಿ

ಕೊಳ್ಳುವಂಥ ಆಸಾಮಿಯೂ ಅಲ್ಲ ಅವನು. ಎಂಥ ಪ್ರಬಲ ಶಕ್ತಿಗಳೂ ಅವನನ್ನು ಹಿಂದಕ್ಕೆ ಎಳೆಯಲಾರವು. ಆದುದರಿಂದ ಅವನ ಕಾಣ್ಕೆಯ ಸೌಭಾಗ್ಯವನ್ನು ಇತರರಿಗೂ ಹಂಚಲು ವಿಮರ್ಶಕ ಅತ್ಯಾವಶ್ಯಕ. ಆದರೆ ಅವನ ತೀರ್ಪನ್ನು ಒಪ್ಪುವುದು ಅಥವಾ ಬಿಡುವುದು ಜನತೆಯ ಮತಿಗೆ ಸಂಬಂಧಿಸಿದ್ದು. ಕಾವ್ಯದಲ್ಲಿ ಆಸಕ್ತಿ ಹುಟ್ಟಿಸುವುದು ಅವನ ಮುಖ್ಯ ಕರ್ತವ್ಯ.

ಕಾವ್ಯಗಂಗೆಯ ಮಾನಸ ಸರೋವರ ಜನಮನಸ್ಸು; ಅದರ ಗಮ್ಯಸ್ಥಾನ ಜನಮನೋಸಾಗರ. ಜನಮನಸ್ಸನ್ನು ಸೇರಿದಾಗಲೇ ಕಾವ್ಯಕ್ಕೆ ಸಾರ್ಥಕತೆ. ಅದನ್ನು ಸಹೃದಯ ಪುನಃ ಅನುಭವಿಸಿದಾಗಲೆ ಅದರ ಮಹಿಮೆ ವ್ಯಕ್ತವಾಗುತ್ತದೆ. ವಿಮರ್ಶಕನ ಪುನರನುಭವವೆ, ಅಂದರೆ ಕಾವ್ಯವನ್ನು ಗ್ರಹಿಸಿಕೊಳ್ಳಲು ಎಸಗುವ ಪ್ರಯತ್ನವೆ, ವಿಮರ್ಶೆ. ಈ ದೃಷ್ಟಿಯಿಂದ ವಿಮರ್ಶೆ ಪುನಸ್ಸೃಷ್ಟಿಯಾಗುತ್ತದೆ.

ಕರ್ನಾಟಕ ಕಾದಂಬರಿ, ಅಭಿಜ್ಞಾನ ಶಾಕುಂತಲ ನಾಟಕ ಮತ್ತು ಅಶ್ವತ್ಥಾಮನ್ –ಈ ಮೂರು ವಿ. ಸೀ. ಅವರ ವಿಮರ್ಶಾಕೃತಿಗಳು. ಮೊದಲ ಎರಡು ಮುಖ್ಯವಾಗಿ ವರ್ಣನಾತ್ಮಕವಾದವು; ವರ್ಣನಾತ್ಮಕ, ದರ್ಶನಾತ್ಮಕ ಮತ್ತು ತುಲನಾತ್ಮಕ ದೃಷ್ಟಿಗಳು ಮೂರು ಸೇರಿ ಮೂರನೆಯ ವಿಮರ್ಶೆ ಬೆಳೆದಿದೆ. ಕರ್ನಾಟಕ ಕಾದಂಬರಿಗೆ ಕನ್ನಡ ಸಾಹಿತ್ಯದಲ್ಲೊಂದು ಗೌರವವಾದ ಸ್ಥಾನವಿದೆ. ಆ ಗೌರವಕ್ಕೆ ಆ ಕೃತಿಯ ಭಾಷಾ ಪ್ರೌಢಿಮೆಗಿಂತ ಹೆಚ್ಚಾಗಿ ಅದರಲ್ಲಿ ಮೊದಲಿಂದ ಕೊನೆಯ ತನಕ ಕ್ರತುಶಕ್ತಿಯಾಗಿ ಪ್ರವಹಿಸುತ್ತಿರುವ ಪ್ರೇಮ ಕಾರಣ. ಈ ಚಂಪೂ ಕೃತಿ ಬಾಣನ ಗದ್ಯಕಾದಂಬರಿಯ ಅನುಕೃತಿಯಾದರೂ ಸಹೃದಯರಿಗೆ ಅದೊಂದು ಸ್ವತಂತ್ರ ಕೃತಿಯೆಂದು ಅನ್ನಿಸದಿರದು. ಹೆಜ್ಜೆ ಹೆಜ್ಜೆಗೂ ಕಾಣುವ ಅದ್ಭುತ ರಮ್ಯ ಚಿತ್ರಗಳ, ರಸಘಟ್ಟಗಳ ಮತ್ತು ಅಲ್ಲಲ್ಲೇ ಕಾಣ್ಕೆಗೆ ಲಭ್ಯವಾಗುವ ದರ್ಶನಧ್ವನಿಯ ಸೌಂದರ್ಯಕ್ಕೆ ಮನಸೋಲದವರಿಲ್ಲ. ಕಥಾ ಸಂವಿಧಾನ, ಪಾತ್ರ ರಚನೆ, ಸನ್ನಿವೇಶ ಕಲ್ಪನೆ, ಚಿತ್ರಕಲೆ, ವರ್ಣನೆ, ಪ್ರೇಮ ದರ್ಶನ, ಜೀವನ ದರ್ಶನ, ಸಂಸ್ಕೃತಿ, ಪ್ರಕೃತಿ–ಮಾನವ ಸಂಬಂಧ, ನರಾಮರ ಸಂಬಂಧ–ಇವೇ ಮೊದಲಾದ ವಿಷಯಗಳ ಮೇಲೆ ಅನೇಕ ವಿಮರ್ಶಾಕೃತಿಗಳನ್ನು ರಚಿಸಬಹುದು. ಅಲ್ಲಿ ಇಲ್ಲಿ ಬಂದಿರುವ ಒಂದೆರಡು ದರ್ಶನಾತ್ಮಕ ವಿಮರ್ಶನ ಪ್ರಬಂಧಗಳಿಂದ ನಾವು ತೃಪ್ತರಾಗಬೇಕಾಗಿದೆ. ಮೈಸೂರು ವಿಶ್ವವಿದ್ಯಾನಿಲಯದ ಪ್ರಚಾರ ಪುಸ್ತಕ ಮಾಲೆಯಲ್ಲಿ ಪ್ರಕಟವಾಗಿರುವ ವಿ. ಸೀ.ಯವರ 'ಕರ್ನಾಟಕ ಕಾದಂಬರಿ' ಮೂಲವನ್ನು ಓದಬಯಸುವವರಿಗೆ ಪ್ರವೇಶದಂತಿದೆ. ಇದರಲ್ಲಿ ಮೂರು ವಿಭಾಗಗಳಿದ್ದು ಮೊದಲನೆಯದರದಲ್ಲಿ ಕತೆಯನ್ನು ಸರಳವಾಗಿ ಸ್ವಾರಸ್ಯವಾಗಿ ಸಂಗ್ರಹಿಸಿ, ಕವಿಯ ಮತ್ತು ಕೃತಿಯ ಪರಿಚಯವನ್ನು ಸಂಕ್ಷೇಪವಾಗಿ ಮಾಡಿಕೊಟ್ಟಿದೆ. ಎರಡನೆಯದರಲ್ಲಿ ಚಿತ್ರ, ಸನ್ನಿವೇಶ ಮತ್ತು ವ್ಯಕ್ತಿಗಳ ಪರಿಚಯ ನಡೆದಿದೆ. ಕಾದಂಬರಿಯಲ್ಲಿ ಕತೆಗಿಂತ ವರ್ಣನೆಗೇ ಪ್ರಧಾನಸ್ಥಾನ; ಕೇವಲ ವರ್ಣನೆಗಾಗಿಯೆ ಈ ಕೃತಿಯನ್ನು ಓದಿ ಸವಿಯಬಹುದಾಗಿದೆ. 'ಈ ಕವಿಗೆ ಕಾಣದ

ಬಣ್ಣವಿಲ್ಲ, ವಸ್ತುವಿಲ್ಲ, ಕೇಳಿಸದ ಶಬ್ದವಿಲ್ಲ....ಮುದಿಗಿಳಿಯ ಸವೆದ ಕೊಕ್ಕು, ಮರಿಗಳ ತುಪ್ಪಳು, ತೊವಲ ಪಂಜರ, ಬಿಸಿಲ ಜಳ, ಬೇಡರೊಡೆಯನ ಎದೆಮಾಟ, ಹಳದಿಕಲ್ಲ ಹಾಸು, ಸಂಗೀತಕ್ಕೆ ಕುಮರೆ ಒಲಿವ ರೀತಿ,....' ಇಂತಹ ಚಿತ್ರಗಳು ಗ್ರಂಥದಲ್ಲಿ ತಾವೇ ತಾವು. 'ತಾವೇ ತಾವು' ಎಂಬ ಪದಗುಚ್ಛದ ಅರ್ಥವನ್ನಿಲ್ಲಿ ಸಂಪೂರ್ಣವಾಗಿ ಗ್ರಹಿಸಬೇಕು. ಬೇಡ ಗಿಳಿಮರಿಗಳ ಗಂಟಲನ್ನು ಮುರಿದು ನೆಲಕ್ಕೆ ಬಿಸಾಡುವ ಹೃದಯವಿದ್ರಾವಕವಾದ ವರ್ಣನೆಯ ಪದ್ಯ ಯಾವ ಭಾಷೆಯ ಅತ್ಯುತ್ತಮ ಕವನದ ಮಟ್ಟಕ್ಕಾದರೂ ನಿಲುವಂಥದು. ಮೂರನೆಯ ಭಾಗದಲ್ಲಿ ಕಾದಂಬರಿಯಿಂದ ವ್ಯಕ್ತವಾಗುವ ಲೌಕಿಕ ನಯದ ಸ್ವರೂಪವನ್ನು ಕವಿದರ್ಶನದ ಸೌಂದರ್ಯವನ್ನು ಒಂದೆರಡು ಮಾತುಗಳಲ್ಲಿ ಪರಿಚಯ ಮಾಡಿಕೊಡಲು ಯತ್ನಿಸಿದ್ದಾರೆ. ಕಾದಂಬರಿಯಂಥ ಕೃತಿಯ ಸಂಪೂರ್ಣ ಸಮಗ್ರ ಪರಿಚಯವನ್ನು ಇಂಥದೊಂದು ಕಿರುಹೊತ್ತಗೆಯಲ್ಲಿ ಹೇಗೆ ತಾನೆ ಮಾಡಿಕೊಡಲಾದೀತು?

'ಅಭಿಜ್ಞಾನ ಶಾಕುಂತಲ ನಾಟಕ' ವಿ.ಸೀ. ಅವರ ಎರಡನೆಯ ವಿಮರ್ಶಾಕೃತಿ. ಕಾಳಿದಾಸನ ಈ ಅಮರ ಕೃತಿ ಸುಮಾರು ೧೫೦೦ ವರ್ಷಗಳಿಗೆ ಹಿಂದೆ ಅವತರಿಸಿದಾಗಿನಿಂದ ಇಂದಿನ ತನಕ ಪೌರ್ವಾತ್ಯ ಪಾಶ್ಚಾತ್ಯ ಪಂಡಿತರೆಲ್ಲ ವ್ಯಾಖ್ಯಾನ ವಿಮರ್ಶೆ ಟಿಪ್ಪಣಿಗಳನ್ನು ಬರೆಯುತ್ತಲೇ ಇದ್ದಾರೆ. ಅದನ್ನು ಎಷ್ಟು ಸಾರಿ ಓದಿದರೂ, ಎಷ್ಟು ಸಾರಿ ಇತರರಿಗೆ ಓದಿ ಹೇಳಿದರೂ ಜನರ ಮನಸ್ಸು ತಣಿಯದು. ಮತ್ತೆ ಮತ್ತೆ ಓದಿದಂತೆಲ್ಲ ಹೊಸ ಹೊಸ ಅನುಭವಗಳು ಹೊಸ ಹೊಸ ಭಾವಗಳು ಮೂಡುತ್ತಿರುತ್ತವೆ. ಈಗಲೂ ರಸಾಭಿಜ್ಞರು ಕವಿ ಹೃದಯವನ್ನು ಒಳಹೊಕ್ಕು ನೋಡುತ್ತಿದ್ದಾರೆ. ಇಷ್ಟಾದರೂ ಆ ಹೃದಯದ ಗುಟ್ಟೆಲ್ಲ ರಟ್ಟಾಗಿದೆ ಎನ್ನುವಂತಿಲ್ಲ. ಇದೇ ಹಿರಿಯ ಕವಿಯ ವಿಶ್ವಕೃತಿಯ ಗುಟ್ಟು. ಆದುದರಿಂದ ಎಲ್ಲ ಭಾಷೆಗಳಲ್ಲಿಯೂ ಆ ಕೃತಿಯ ಬಗ್ಗೆ ಲೇಖನಗಳು ಗ್ರಂಥಗಳು ಬರಬೇಕಾಗಿದೆ.

ನಾಟಕದ ಮೂಲಕಥೆ, ನಾಟಕದಲ್ಲಿ ಮಾಡಿಕೊಂಡಿರುವ ಮಾರ್ಪಾಟುಗಳು, ಕಥಾಸಂವಿಧಾನ, ಅಂಕಗಳ ರಚನೆ, ಅವುಗಳ ಪರಸ್ಪರ ಸಂಬಂಧ–ಇವು ಈ ವಿಮರ್ಶೆಯಲ್ಲಿ ಪ್ರತಿಪಾದಿತವಾಗಿರುವ ವಿಷಯಗಳು. ಕಥೆಯ ಬೆಳವಣಿಗೆಯ ನಿರೂಪಣೆಯಲ್ಲಿಯೆ ಒಂದು ಘಟನೆಗೂ ಮತ್ತೊಂದು ಘಟನೆಗೂ ಇರುವ ಪರಸ್ಪರ ಸಂಬಂಧ, ಅವುಗಳ ಚೋದಕ ಶಕ್ತಿಯಾಗಿ ಕಥೆಯ ತುಂಬ ಹಸರಿ ಹಬ್ಬಿರುವ ತತ್ತ್ವದರ್ಶನಗಳ ವಿವರಣೆಯನ್ನು ಕಾಣಿಸಿದೆ. ಅಲ್ಲಲ್ಲೆ ತಮ್ಮ ಅಭಿಪ್ರಾಯಗಳನ್ನು ವ್ಯಕ್ತಪಡಿಸಿದ್ದಾರೆ. ಆ ಹಿರಿಯ ಕೃತಿಯ ಸರ್ವತೋಮುಖವಾದ ಸರ್ವಾಂಗೀಣವಾದ ಪರಿಚಯವನ್ನು ಈ ಸಣ್ಣ ಹೊತ್ತಗೆಯಲ್ಲಿ ನಿರೀಕ್ಷಿಸಲಾಗದು. "ನಾಟಕದಲ್ಲಿನ ಎಲ್ಲ ವ್ಯಕ್ತಿಚಿತ್ರಗಳನ್ನಾಗಲೀ, ಎಲ್ಲ ರಮಣೀಯತೆಯನ್ನಾಗಲೀ, ಕವಿತೆಯ ಮಾಧುರ್ಯ, ಭಾವಾರ್ಥ ಪುಷ್ಟಿ, ಔಚಿತ್ಯ, ಕಾರ್ಯಸಾಧನಾಶಕ್ತಿ, ರಸದರ್ಶನಗಳನ್ನಾಗಲೀ ಇಲ್ಲಿ ವಿವರಿಸಲು ಅವಕಾಶವಿಲ್ಲ"ವೆಂದು ತಿಳಿಸಿದ್ದಾರೆ.

'ಅಶ್ವತ್ಥಾಮನ್' ಆಧುನಿಕ ನಾಟಕಕಾರರೊಬ್ಬರ ಕೃತಿಯನ್ನು ಕುರಿತ ವಿಮರ್ಶೆ. ಆಚಾರ್ಯ 'ಶ್ರೀ'ಯವರ ಈ ನಾಟಕ ಕನ್ನಡ ನಾಟಕ ಚರಿತ್ರೆಯಲ್ಲೊಂದು ಮೈಲಿಗಲ್ಲಿನಂತಿದೆ. ಅದು ಪ್ರಕಟವಾದಾಗ ವಿದ್ವಜ್ಜನರಲ್ಲಿ, ರಸಿಕರಲ್ಲಿ ಹೊಸ ಹೊಸ ಭಾವಗಳನ್ನು ಕೆರಳಿಸಿದಂತೆ, ನೂತನ ಪ್ರಭಾವವನ್ನು ಬೀರಿದಂತೆ, ಮುಂದೆಯೂ ಅದು ಜನಮನಸ್ಸಿನಲ್ಲಿ ಹೊಸ ಹೊಸ ಭಾವಗಳನ್ನು ಚಿಗುರಿಸಲಿದೆ, ಹೊಸ ಪ್ರಭಾವವನ್ನು ಬೀರಲಿದೆ. ಮಹಾಭಾರತದ ಅಶ್ವತ್ಥಾಮನ ಕಥೆಯನ್ನು ಏಜಾಕ್ಸ್ ಎಂಬ ಗ್ರೀಕ್ ನಾಟಕದ ಅಚ್ಚಿನಲ್ಲಿ ಎರಕಹೊಯ್ದು ಆದ ನಾಟಕವಿದು. ಮಹಾಭಾರತದ ಅಶ್ವತ್ಥಾಮನ ಜೀವನದರ್ಶನಕ್ಕೂ ಈ ನಾಟಕದ ಅಶ್ವತ್ಥಾಮನ ಜೀವನದರ್ಶನಕ್ಕೂ ವ್ಯತ್ಯಾಸವಿರುವುದರಿಂದ ಕಥೆಯೂ ಅಲ್ಲಲ್ಲಿ ಮಾರ್ಪುಗೊಳ್ಳಬೇಕಾಯಿತು. ಮೂಲದಲ್ಲಿಲ್ಲದ ಹೊಸ ವ್ಯಕ್ತಿಗಳ, ಹೊಸ ಸನ್ನಿವೇಶಗಳ ಕಲ್ಪನೆ ಅಗತ್ಯವಾಯಿತು. ಒಟ್ಟಿನಲ್ಲಿ ಈ ನಾಟಕ ಗ್ರೀಕ್ ನಾಟಕದ ಜಾಡನ್ನು ಹಿಡಿಯಿತು. ಇಲ್ಲಿ ಮಾಡಿಕೊಂಡಿರುವ ಕೆಲವು ಮಾರ್ಪಾಡುಗಳ ಬಗ್ಗೆ ವಿದ್ವಜ್ಜನರಲ್ಲಿ ಮತಭೇದವಿದ್ದರೂ ನಾಟಕದ ರೂಪಾಂಶ, ಚಿಂತನಾಂಶ, ಭಾವಾಂಶಗಳ ವಿಷಯದಲ್ಲಿ ಭಿನ್ನಾಭಿಪ್ರಾಯವೇ ಇಲ್ಲ. ಭಾಷಾ ಪ್ರೌಢಿಮೆ, ಧ್ವನಿಮನೋಹರತೆ, ಅರ್ಥಸಂಪನ್ನತೆ, ಭಾವ ಸಂಪನ್ನತೆ, ಛಂದಸ್ಸಿನ ಲಯ ವಿನ್ಯಾಸ ಮೊದಲಾದುವುಗಳಂತು ಓದುಗರನ್ನು ಮುಗ್ಧಗೊಳಿಸುವಂಥವು; ಕೃತಿಯನ್ನು ಅಮರಗೊಳಿಸುವಂಥವು.

ವಿ. ಸೀ. ಅವರು ಈ ಕೃತಿಯನ್ನು ತುಂಬ ದಕ್ಷತೆಯಿಂದಲೆ ಪರಿಚಯ ಮಾಡಿಕೊಟ್ಟಿದ್ದಾರೆ. ನಾಟಕಕಾರರ ಆಶಯ ಆದರ್ಶ ದರ್ಶನಗಳನ್ನು ಚೆನ್ನಾಗಿ ಗ್ರಹಿಸಿಕೊಂಡು, ನಾಟಕದ ಹಿರಿಮೆಗೆ ಕುಂದು ಬಾರದಂತೆ, ಗೌರವದಿಂದ, ಉತ್ಸಾಹದಿಂದ, ಶ್ರದ್ಧೆಯಿಂದ, ಅದನ್ನು ವಿಮರ್ಶಿಸಿದ್ದಾರೆ. ಯಾವ ಕೃತಿಯನ್ನೆ ಆಗಲಿ ವಿಮರ್ಶಿಸುವುದಕ್ಕೆ ಮುಂಚೆ ವಿಮರ್ಶಕ ಆ ಕೃತಿಕಾರನ ಆಸೆ ಆಕಾಂಕ್ಷೆಗಳನ್ನು, ಸ್ವರೂಪ ಸ್ವಭಾವಗಳನ್ನು, ನೀತಿ ರೀತಿಗಳನ್ನು ಧ್ಯೇಯ ದರ್ಶನಗಳನ್ನು ಚೆನ್ನಾಗಿ ಅರಿತುಕೊಂಡಿರಬೇಕು. ಯಾವುದಾದರೂ ಒಂದು ಗೀತೆಯನ್ನೊ ಕಾವ್ಯಭಾಗವನ್ನೊ ಬರೆಯಲು ಪ್ರಚೋದಿಸಿದ ಶಕ್ತಿಗಳಾವುವು, ಬರೆದ ಸನ್ನಿವೇಶ ಯಾವುದು, ಬರೆಯಲು ಕಾರಣವೇನು ಎಂಬಿವೇ ಮೊದಲಾದ ವಿಷಯಗಳಿಗೆ ಉತ್ತರಗಳನ್ನು ಸಮರ್ಪಕವಾಗಿ ದೊರಕಿಸಿಕೊಂಡರೆ ಆ ಕವಿಯ ಕಾವ್ಯವನ್ನು ಮೆಚ್ಚಲು ಅಥವಾ ತೂಗಿ ನೋಡಲು ಅನುಕೂಲವಾಗುತ್ತದೆ. ವಿ. ಸೀ. ಅವರು ಶ್ರೀ ಅವರನ್ನು ಚೆನ್ನಾಗಿ ಬಲ್ಲವರು ; ನಾಟಕದ ಚಾಲಕ ಶಕ್ತಿಯಾದ ಕವಿ ಮನೋಧರ್ಮವನ್ನು ಚೆನ್ನಾಗಿ ಅರಿತವರು. ಈ ಕೃತಿಯ ಬಗ್ಗೆ ಅಧಿಕಾರದಿಂದ ಮಾತಾಡಲರ್ಹರಾದವರು. ಆದುದರಿಂದ ಇವರ ಈ ವಿಮರ್ಶಾಕೃತಿಗೆ ತುಂಬ ಬೆಲೆಯಿದೆ. ಆದರೆ ಇಲ್ಲಿ ನಿರೂಪಿತವಾಗಿರುವ ಅಭಿಪ್ರಾಯಗಳನ್ನೆಲ್ಲ ತೆಕ್ಕೆತೆಕ್ಕೆಯಾಗಿ ಯಾರೂ ಒಪ್ಪಬೇಕಾಗಿಲ್ಲ. ತನ್ನ ಅಭಿಪ್ರಾಯವನ್ನು ನೀಡಲು ವಿಮರ್ಶಕ ಎಂತು ಸ್ವತಂತ್ರನೋ, ಆ ಅಭಿ

ಪ್ರಾಯವನ್ನು ಒಪ್ಪುವುದರಲ್ಲಿ ಅಥವಾ ಬಿಡುವುದರಲ್ಲಿ ವಾಚಕನೂ ಅಷ್ಟೇ ಸ್ವತಂತ್ರನು.

ಏಜಾಕ್ಸ್ ನಾಟಕದ ಕಥೆ, ಮಹಾಭಾರತದ ಮೂಲಕಥೆ, ಮತ್ತು ಪ್ರಕೃತ ನಾಟಕದ ಕಥೆ, ಅವುಗಳ ಪರಸ್ಪರ ಸಾಮ್ಯ-ವೈಷಮ್ಯಗಳು ವ್ಯಕ್ತಗೊಳ್ಳುವಂತೆ, ಆಯಾ ಕವಿಗಳ ದೃಷ್ಟಿಧ್ಯೇಯಗಳು ಗ್ರಾಹ್ಯವಾಗುವಂತೆ ಸ್ವಾರಸ್ಯವಾಗಿ ಸಂಗ್ರಹಿಸಿದ್ದಾರೆ. ನಾಟಕದ ತಂತ್ರವನ್ನು ಸಾಕಷ್ಟು ವಿವರಿಸಿದ್ದಾರೆ. ಗ್ರೀಕ್ ಮತ್ತು ಕನ್ನಡ ನಾಟಕಗಳ ಪಾತ್ರಗಳನ್ನು ಅವರವರ ವ್ಯಕ್ತಿತ್ವ ವ್ಯಕ್ತಗೊಳ್ಳುವಂತೆ ಚಿತ್ರಿಸಿದ್ದಾರೆ. ನಾಟಕದ ಕ್ರಿಯಾರಚನೆಯ ನಿರೂಪಣೆಯಲ್ಲಿ ಆ ಕ್ರಿಯಾರಚನೆಗೆ ಪ್ರಚೋದಕ ಶಕ್ತಿಗಳಾದ ತತ್ವಗಳನ್ನೂ ಭಾವಗಳನ್ನೂ ವಿಮರ್ಶಪೂರ್ಣವಾಗಿ ವಿವರಿಸಿದ್ದಾರೆ. ಉದ್ದಕ್ಕೂ ನಾಟಕಕಾರರು ಮಾಡಿಕೊಂಡಿರುವ ಮಾರ್ಪಾಡುಗಳನ್ನು ಅನುಮೋದಿಸುತ್ತಾರೆ. ಅವಸರದಿಂದಾದ ಕೆಲವು ಲೋಪದೋಷಗಳೂ ಅತಿರೇಕಗಳೂ ಪುನರುಕ್ತಿಗಳೂ ಗ್ರಂಥದಲ್ಲಿ ಉಳಿದುಕೊಂಡಿವೆಯೆಂದು ಅವರೇ ಹೇಳಿಕೊಂಡಿದ್ದಾರೆ. ಆದರಿಂದ ಅಲ್ಲಲ್ಲಿ ಶಿಥಲತೆ ಕಾಣಬಹುದು. ಆದರೆ ಅವರ ಉತ್ಸಾಹದ ಶೈಲಿಯಲ್ಲಿ ಆ ನ್ಯೂನತೆಗಳೆಲ್ಲ ಮರೆಸಿಹೋಗುತ್ತವೆ. ಒಟ್ಟಿನಲ್ಲಿ ಕನ್ನಡ ಸಾಹಿತ್ಯಕ್ಕೆ ಇದೊಂದು ಅಗತ್ಯವಾದ ಕೃತಿ, ಅಮೂಲ್ಯವಾದ ಕೃತಿ.

ಮೇಲಣ ಕೃತಿಗಳಲ್ಲದೆ ಕೆಲವು ಅತ್ಯುತ್ತಮವಾದ ವಿಮರ್ಶಾತ್ಮಕ ಲೇಖನಗಳು ಆಂಗ್ಲ ಮತ್ತು ಕನ್ನಡ ಪತ್ರಿಕೆಗಳಲ್ಲಿ ಬಂದಿವೆ. 1931ರಲ್ಲಿ ಕಾರವಾರದಲ್ಲಿ ನಡೆದ ಕನ್ನಡ ಕವಿ ಸಮ್ಮೇಳನದ ಅಧ್ಯಕ್ಷಪೀಠದಿಂದ ಮಾಡಿದ ಭಾಷಣ "ಈಗಿನ ಕವಿಕಾವ್ಯದೃಷ್ಟಿ"ಯಲ್ಲಿ ಕವಿಕಾವ್ಯಗಳ ಪರಸ್ಪರ ಸ್ವರೂಪವನ್ನೂ ಸಂಬಂಧವನ್ನೂ ವಿವೇಚಿಸಿದೆ. ಹಿಂದಿನ ಮತ್ತು ಇಂದಿನ ಕಾವ್ಯಗಳ ಈ ರೂಪರೇಷೆಗಳನ್ನೂ, ಅವುಗಳ ವ್ಯತ್ಯಾಸಗಳನ್ನೂ, ಆ ವ್ಯತ್ಯಾಸಗಳಿಗೆ ಕಾರಣಗಳನ್ನೂ ಕುರಿತು ಇಲ್ಲಿ ಆಲೋಚಿಸಲಾಗಿದೆ.

**ದೇ. ಜವರೇಗೌಡ**

# ವಿ. ಸೀ. ಯವರ ಲಲಿತ ಪ್ರಬಂಧಗಳು

'ಲಲಿತ ಪ್ರಬಂಧ' ವೆಂಬ ಸಾಹಿತ್ಯ ಪ್ರಕಾರ ನಮಗೆ ದಶಕಗಳಷ್ಟು ಮಾತ್ರ ಹಳೆಯದು. ಅಷ್ಟೇನೂ ನಿರ್ದುಷ್ಟವಾಗಿ ಹೇಳಲಾಗದಿದ್ದರೂ, ಮೊದಲ ಲಲಿತ ಪ್ರಬಂಧದ ಗೌರವವನ್ನು ಪಂಜೆಯವರಿಗಿಂತ ಹಿಂದಕ್ಕೆ ಒಯ್ಯಲು ಸಾಧ್ಯವಿಲ್ಲ ವೇನೋ. ಅದೇನೆ ಇರಲಿ. ಈ ಪ್ರಕಾರದ ಬಗ್ಗೆ ಆಳವಾದ, ಪ್ರಕಾರನಿಷ್ಠವಾದ ವಿಮರ್ಶೆ ಕೂಡ ಬಂದಿಲ್ಲ. ಬಹಳಷ್ಟು ಜನ ಲಲಿತ ಪ್ರಬಂಧಗಳ ರಚನೆಗೆ ಮನಸ್ಸು ಮಾಡದೇ ಇರುವುದು ಇದಕ್ಕೆ ಕಾರಣವಾಗಿರಬಹುದು. ಮಿತ ಸಂಖ್ಯೆಯಲ್ಲಿರುವ ರಚನೆಗಳನ್ನೆ ಗಮನಿಸಿದರೂ ಸಾಕಷ್ಟು ಮಹತ್ತ್ವದ ಕೃಷಿಯೇ ನಡೆದಿದೆ ಎಂಬು ದರಲ್ಲಿ ಸಂದೇಹವಿಲ್ಲ. ನವೋದಯ ಕಾಲದ ಲೇಖಕರು ಈ ಪ್ರಕಾರವನ್ನು ಬಳಸಿ ಕೊಂಡಂತೆ ಕಂಡುಬಂದರೂ ಈಚೆಗೆ ಮತ್ತೆ ಲಲಿತ ಪ್ರಬಂಧಗಳ ಸಂಖ್ಯೆ ಇಲ್ಲವೆನ್ನು ವಷ್ಟು ಕಡಿಮೆಯಾಗಿದೆ. ಇದಕ್ಕೆ ಈ ಪ್ರಕಾರದ ಮಿತಿಗಳು ಮತ್ತು ವಿಶಿಷ್ಟತೆಗಳು ಕಾರಣವಾಗಿದೆ.

ನಮ್ಮ ಅಗ್ರಗಣ್ಯ ಲಲಿತ ಪ್ರಬಂಧಕಾರರ ಹೆಸರುಗಳಲ್ಲಿ ವಿ. ಸೀ.ಯವರದೂ ಒಂದು. [ವಿವರಗಳನ್ನು ಗಮನಿಸುವುದಾದರೆ: ಎರಡು ಲಲಿತ ಪ್ರಬಂಧ ಸಂಗ್ರಹ ಗಳು ಪ್ರಕಟವಾಗಿವೆ. **ಬೆಳುದಿಂಗಳು** (೧೯೫೪, ೧೯೭೮ ಮೂರನೆ ಮುದ್ರಣ) **ಸೀಕರಣೆ** (೧೯೭೦), ಒಟ್ಟು ೨೩ ಪ್ರಬಂಧಗಳು ಪ್ರಕಟವಾಗಿವೆ; ೩೩೭ ಪುಟಗಳ ಸಾಹಿತ್ಯ.] ಪ್ರಾಸಂಗಿಕವಾಗಿ ಮಾತು ಬಂದಾಗ ನಮ್ಮ ವಿಮರ್ಶಕರು ವಿ. ಸೀ. ಯವರ 'ಮೈಸೂರು ರುಮಾಲು' ಎನ್ನುವ ಪ್ರಬಂಧವನ್ನು ಅದರ ರುಚಿಕಟ್ಟಾದ ಬಗೆಗೆ ಮೆಚ್ಚಿದ್ದುಂಟು. ಬಿಟ್ಟರೆ ಅವರ ಪ್ರಬಂಧಗಳ ಒಟ್ಟಾರೆ ಮೌಲ್ಯ ನಿರ್ಧಾರ ವಿನ್ನೂ ಆಗಬೇಕಾಗಿದೆ.

ಕನ್ನಡದಲ್ಲಿ ಲಲಿತ ಪ್ರಬಂಧಗಳ ಪ್ರಕಾರವನ್ನು ತಮ್ಮ ಏಕೈಕ ಅಥವಾ ಪ್ರಮುಖ, ಸೃಜನಾತ್ಮಕ ಅಭಿವ್ಯಕ್ತಿ ಮಾಧ್ಯಮವನ್ನಾಗಿ–ಬಹುಶಃ ಎ. ಎನ್. ಮೂರ್ತಿರಾವ್ ಅವರನ್ನು ಬಿಟ್ಟರೆ ಯಾರೂ ಸ್ವೀಕರಿಸಿಲ್ಲ. ಹೀಗೆ ಒಂದು ಸಾಹಿತ್ಯ ಪ್ರಕಾರ ಒಬ್ಬನ ಪ್ರಮುಖ ಅಭಿವ್ಯಕ್ತಿ ಮಾಧ್ಯಮವಾಗದೇ ಇದ್ದಾಗ, ಆ ಪ್ರಕಾರ

ದಲ್ಲಿನ ಆತನ ಸಾಧನೆಗಳನ್ನು ಇತರ ಪ್ರಕಾರಗಳಲ್ಲಿನ ಸಾಧನೆಗಳಿಗೆ ಪೂರಕವೆಂದೇ ಭಾವಿಸುವುದು ಸೂಕ್ತ. ಆದ್ದರಿಂದ, ಲಲಿತ ಪ್ರಬಂಧಕಾರರಾಗಿ ವಿ. ಸೀ. ಒಟ್ಟಾರೆ ಸಾಹಿತಿ ವಿ. ಸೀ.ಗೆ ಎಷ್ಟು ಪೂರಕವಾಗಿದ್ದಾರೆ ಎಂಬುದನ್ನು ಗಮನಿಸಬೇಕು.

ಇಲ್ಲಿರುವ ಬಹುಪಾಲು ರಚನೆಗಳು 'ಸಡಿಲ ಬಂಧ'ಗಳು, ಲಲಿತ ರಚನೆಗಳು. ಹೀಗೆನ್ನುವುದು ಒಂದು ಇತ್ಯಾತ್ಮಕ ನಿಲುವು ಮಾತ್ರ; ಅವಗುಣ ಗಣನೆಯಲ್ಲ. ಏಕೆಂದರೆ ಈ ರಚನೆಗಳ ಉದ್ದೇಶ ಓದುಗನಿಗೊಂದು ಹೊಸ ಬೆಳಕನ್ನು ತೋರಿಸು ವುದಲ್ಲ; ಬೇಕನ್ನನ ಬದ್ಧಪ್ರಬಂಧಗಳ ಹಾಗೆ. ಇವುಗಳ ಲಕ್ಷಣವನ್ನೂ ವಿ. ಸೀ ಯವರೇ ಹೀಗೆ ಹೇಳುತ್ತಾರೆ—"ಎದುರಿನ ಪ್ರಪಂಚದಿಂದ ಕಲ್ಪನೆಗೆ, ಇಂದಿನದ ರಿಂದ ಎಂದಿನದೋ ಘಟನೆಗೆ, ಸಾಮಾನ್ಯದಿಂದ ವಿಶೇಷಕ್ಕೆ, ಚಪಲತೆಯಿಂದ ಗಂಭೀ ರತೆಗೆ ದಾಟಿಹೋಗುವುದೂ, ಅಲ್ಲಿ ಇಲ್ಲಿ ಲೋಕಜೀವನಕ್ಕೂ ನಮ್ಮ ಅನುಭವಕ್ಕೂ ಸಂಬಂಧಿಸಿದ ಸಂಗತಿಗಳನ್ನು ಇವುಗಳೊಡನೆ ಬೆರಸುವುದೂ, ಭ್ರಮಿಸುವುದೂ ಇಲ್ಲಿ ಕಾಣುವ, ಬಲಿವ ನೋಟ" [ಬೆಳುದಿಂಗಳು; ಮುನ್ನುಡಿ] ಈ ದೃಷ್ಟಿಯಿಂದ ಪ್ರತಿ ಯೊಂದು ಲಲಿತ ಪ್ರಬಂಧವೂ ಪ್ರಚೋದಕ (Stimulus) ಒಂದನ್ನು ಬಯಸು ತ್ತದೆ. ಇದನ್ನು ಉದ್ದೀಪನ ವಿಭಾವವೆಂದು ಬೇಕಾದರೂ ಕರೆಯೋಣ. ಈ ಪ್ರಚೋ ದಕಗಳು ವಿ.ಸೀ.ಯವರಲ್ಲಿ ಎರಡು ಬಗೆಗಳಲ್ಲಿ ಕಾಣಿಸುತ್ತವೆ ಎಂಬುದು ಗಮನಾರ್ಹ. ಒಂದು ಬಗೆಯವು ತಾವು ನಿರೀಕ್ಷಿಸುವ ಪ್ರತಿಕ್ರಿಯೆಯನ್ನೂ ಒಂದು ಚೌಕಟ್ಟಿನಲ್ಲಿ ಬಯಸುತ್ತವೆ; ಅಥವಾ ಪ್ರತಿಕ್ರಿಯೆಗಳು ಸಂವೃತವಾದವು.'ಮೈಸೂರು ರುಮಾಲು', 'ಮಾವು', 'ಬದನೇಕಾಯಿ', 'ನಮ್ಮ ಅಜ್ಜಿಯ ಅಡಿಗೆ'—ಈ ಶೀರ್ಷಿಕೆಯಲ್ಲಿರುವ ಪ್ರಬಂಧಗಳು ಈ ಬಗೆಯವು. ಇನ್ನೊಂದು ಬಗೆಯವು ಬಯಸುವ ಪ್ರತಿಕ್ರಿಯೆ ಗಳು ಹೆಚ್ಚು ತೆರೆದುಕೊಂಡಿರುತ್ತವೆ–ವಿವೃತವಾಗಿರುತ್ತವೆ. 'ಸಾವು', 'ಬೆಳುದಿಂಗಳು', 'ನೆನಪು' ಇತ್ಯಾದಿಗಳು ಈ ವರ್ಗದವು. ಹೀಗೆ ವರ್ಗೀಕರಿಸಿದ್ದರ ಉದ್ದೇಶ: ಆಯಾ ಬಗೆಯ ಲಲಿತ ಪ್ರಬಂಧಗಳ ವಿಶ್ಲೇಷಣೆ ಸುಲಭವಾಗಲೆಂದು. ಮೊದಲ ಬಗೆಯ ಪ್ರಚೋದಕಗಳನ್ನುಳ್ಳ–ಅವುಗಳಿಂದ ಪ್ರಾರಂಭವಾಗುವ ಲಲಿತ ಪ್ರಬಂಧಗಳಲ್ಲಿ ಹೆಚ್ಚು ಆಳ ಕಂಡುಬರುವುದಿಲ್ಲ. ಏಕೆಂದರೆ ಲೇಖಕರ ಕಲ್ಪನೆ ಒಂದು ಮಿತಿಯೊಳಗೆ ಸುತ್ತಾಡಬೇಕು; ಈಜುಗೊಳದಲ್ಲಿದ್ದಂತೆ. ಇಲ್ಲಿನ ವಿಲಾಸಗಳು ಕೆಲವು ವೇಳೆ ಬುದ್ಧಿಯ ಕಸರತ್ತುಗಳೂ ಆಗಬಹುದು. 'ಕೋಳಿ' ಪ್ರಬಂಧ ಅಂತಹ ಅಪಾಯದ ಅಂಚನ್ನು ಮುಟ್ಟುತ್ತದೆ. ಈ ವಸ್ತುಗಳು ಕೆರಳಿಸಬಹುದಾದ ಅನುಭವದ ಬೇರೆ ಬೇರೆ ಸ್ತರಗಳು ಕೇಂದ್ರ ವಸ್ತುವಿನಿಂದ–ಪ್ರಚೋದಕದಿಂದ–ದೂರ ಹೋದಷ್ಟು ಸಂಬಂಧ ತೆಳುವಾಗುವ ಭಯದಿಂದ ಅಲ್ಲಲ್ಲೇ ಸುತ್ತುತ್ತವೆ. ಈ ಸಂಬಂಧ ಕೂಡ ಒಂದು ಬಗೆಯ ಗೌಣಪ್ರತಿಭೆಯದು. ಅಥವಾ ಕಾಲ್‌ರಿಜ್ ಮಾತಿನಲ್ಲಿ ಹೇಳು ವುದಾರೆ Fancyಯ ಲೋಕದ್ದು. ಇಂತಹ ಮಿತಿಯಲ್ಲಿ ವಿ. ಸೀ.ಯವರನ್ನು ನಾವು ಗುರುತಿಸಬೇಕಾದ್ದು ಅವರ ಶೈಲಿಯ 'ಸಂವಹನ ಶೀಲತೆ'ಯಲ್ಲಿ. ಈ ಗುಣ ಯಾವುದೇ

ಲಲಿತ ಪ್ರಬಂಧದಲ್ಲಾದರೂ ಇರಬೇಕಾದುದೆಂದು ಹೇಳಬಹುದು; ಆದರೆ ಈ ಮಿತಾವಕಾಶದ ವಸ್ತುಗಳ ಪ್ರಬಂಧಗಳಲ್ಲಿ ಅದೇ ಪ್ರಮುಖವಾಗಿ ಕಾಣುತ್ತದೆ. ನಮಗೆ ಏನನ್ನೋ ಹೇಳುವ ಹಾಗೆ, ಒಪ್ಪಿಸುವ ಹಾಗೆ, ಪೂರ್ವ ಪಕ್ಷವನ್ನು ಕಲ್ಪಿಸಿ ಕೊಂಡು ವಾದ–ವಿವಾದವನ್ನು ಹುಡುಕುವ ಹಾಗೆ–ಹೀಗೆ ವಿವಿಧ ಭಂಗಿಗಳಲ್ಲಿ ವಾಕ್ಯಗಳು ರಚಿತವಾಗಿವೆ. 'ಮೈಸೂರು ರುಮಾಲ'ನ್ನು ಮೆಚ್ಚುವ ಈ ಗುಣ ಅದ ರಲ್ಲಿ ಧಾಳಾಗಿ ಕಾಣುವುದೇ ಕಾರಣವಾಗಿರಬೇಕು. 'ಭಾವಗೀತೆ, ಸಣ್ಣಕತೆ ಮತ್ತು ಲಲಿತ ಪ್ರಬಂಧಗಳದು ಜ್ಞಾತಿಲೋಕ' ಎನ್ನುವ ವಿ.ಸೀ.ಯವರ ಮಾತನ್ನೇ ಗಮ ನಿಸಿ ಹೇಳುವುದಾದರೆ ಈ ಸಂವೃತ ಪ್ರತಿಕ್ರಿಯೆಯ ವಸ್ತುಗಳ ಲಲಿತ ಪ್ರಬಂಧಗಳು ವ್ಯಕ್ತಿ, ಸಂದರ್ಭಗಳನ್ನು ಕುರಿತ ಭಾವಗೀತೆಗಳಿದ್ದಂತೆ.

ಎರಡನೇ ವರ್ಗದ ಪ್ರಚೋದಕಗಳ ವಿಚಾರದಲ್ಲಿ ಪ್ರತಿಭೆ ಮತ್ತು ಆಲೋ ಚನೆ–ಇದನ್ನು ಧಾಟಿ, ಧೋರಣೆ, ತಾತ್ತ್ವಿಕ ನಿಲವು ಹೀಗೆ ಏನು ಬೇಕಾದರೂ ಹೆಸ ರಿಟ್ಟು ಕರೆಯಿರಿ–ಎರಡೂ ಬೆಳಕಿಗೆ ಬರುತ್ತವೆ. ಹೆಚ್ಚು ತೆರೆದುಕೊಳ್ಳುವ ಈ ವಸ್ತು ಗಳು ನಿಜವಾಗಿ ಯಾವುದೇ ಸ್ವರವನ್ನು ನಿಖರವಾಗಿ ಚುಚ್ಚುವುದಿಲ್ಲ ಅಥವಾ ಪ್ರತಿ ಕ್ರಿಯೆಗೆ ವೈವಿಧ್ಯವಿರುತ್ತದೆ. 'ಸಾವು' ಎನ್ನುವ ವಿಚಾರವನ್ನೆ ಗಮನಿಸಿ. 'ಸಾವು' ಒಂದು ಘಟನೆಯೇ ಆದರೆ ಅದಕ್ಕೆ ಕೊಂಡಿಹಾಕಿಕೊಳ್ಳುವ ಅನುಭವದ ಸ್ವರಗಳು ಅನಂತವಾಗಬಹುದು. ಆಗ ಪ್ರಬಂಧಕಾರನ ಪ್ರತಿಭೆ ಈ ಕೊಂಡಿಗಳು, ಕೇಂದ್ರ ವಸ್ತುವಿನ ಈ ಹರಿಯುವಿಕೆ 'ಸಾಧು' ಎಂದು ತೋರಿಸುವಲ್ಲಿ ನಿರತವಾಗಿರಬೇಕು. ಇದರ ಜತೆಗೆ ಇಡೀ ಪ್ರಬಂಧದ ಧಾಟಿಯೊಂದನ್ನು ರೂಪಿಸುತ್ತಾ ಹೋಗಬೇಕು. 'ನೆನಪು' ಎನ್ನುವ ಪ್ರಬಂಧವನ್ನೇ, ಉದಾಹರಣೆಗಾಗಿ, ಗಮನಿಸೋಣ (ಸೀಕರಣೆ ಪು. ೩೧-೪೩). ಮೊದಲು 'ನೆನಪ'ನ್ನು ಸರಳವಾಗಿ ಕೆದಕುತ್ತಾರೆ. ಅದು ಕೆಡುಕಾ ಗುವ, ಒಳಿತಾಗುವ ಸಂದರ್ಭಗಳಿಗೆ, ಅಲ್ಲಿಂದ ಮುಂದೆ ಬದುಕಿನಲ್ಲಿ, ಸಮಾಜದಲ್ಲಿ, ಸಂಸ್ಕೃತಿಯಲ್ಲಿ ನೆನಪು, ಮರೆವುಗಳ ಜಂಜಾಟವನ್ನು ಕಾಣುವ ಕಡೆಗೆ ನಿಧಾನವಾಗಿ ಜಾರುತ್ತಾರೆ. ಪ್ರಬಂಧ ಗಹನವಾಗುತ್ತದೆ. ಇದು ಧಾಟಿಯಾದರೆ, ವಸ್ತು ತೆರೆದು ಕೊಳ್ಳುವ ರೀತಿಯಲ್ಲೂ ಒಂದು ಬಗೆಯ ಪ್ರತಿಭೆ ಎದ್ದು ಕಾಣುತ್ತದೆ. ಸಮಾಜದ ನೆನಪಿಗೆ, ತಾಜ್‌ಮಹಲ್ ಮತ್ತು ನೈಟಿಂಗೆಲ್‌ಗಳನ್ನು ಕುರಿತ ಚಿಟ್ಟೆಕತೆಗಳಿಗೆ, ಬದು ಕಿನ ಸ್ಥಾಯಿಗೆ ಸಂಬಂಧ ಕಲ್ಪಿಸುವ ವಿಧಾನ ವಿ. ಸೀ ಅವರದೇ ಆದ 'ಬಗೆ'ಯನ್ನು ತೋರುತ್ತದೆ. ಇಂತಹ ಪ್ರಬಂಧಗಳ ಮಾತು ಲೆಕ್ಕಾಚಾರದ್ದಾಗಿ ಕಾಣುವುದಿಲ್ಲ. ಇಲ್ಲಿ ಪ್ರಬಂಧಕಾರರು ವಾದ ಹೂಡುವ, ಭಂಗಿಗಳನ್ನು ತೋರುವ ವಿಧಾನ ಇಲ್ಲ. ಮುಕ್ತರಾಗಿ ಕಾಣುತ್ತಾರೆ. ಭಾವಗೀತೆಗೆ ನಿಜವಾದ ಅರ್ಥದಲ್ಲಿ ಲಲಿತ ಪ್ರಬಂಧ ಜ್ಞಾತಿಯಾಗುವುದು ಇಂತಹ ಸಂದರ್ಭಗಳಲ್ಲಿ. ಈಗ ಹೇಳಿದ 'ನೆನಪು' ಪ್ರಬಂಧ ವಲ್ಲದೆ 'ಕಡಲಕರೆ', 'ಸಾವು' ಇತ್ಯಾದಿ ಪ್ರಬಂಧಗಳನ್ನು ನಾವು ಈ ವರ್ಗದಲ್ಲಿ ಗಮನಿಸಬಹುದು.

ಈ ಎರಡೂ ವರ್ಗಗಳ ಪ್ರಬಂಧಗಳ ಇನ್ನೊಂದು ಪ್ರಧಾನ ಲಕ್ಷಣ-ಇದನ್ನು ಗುಣವೆಂದು ಕರೆಯಬೇಕು-ವನ್ನು ಗಮನಿಸಬೇಕು. ವ್ಯಷ್ಟಿಯಿಂದ ಸಮಷ್ಟಿಗೆ ಅಥವಾ ಪ್ರಚೋದಕ ಏಕತೆಯಿಂದ ಪ್ರತಿಕ್ರಿಯೆಯು ಅದೇ ಕಡೆಗೆ ಹೋಗುವಾಗ ಈ ಪ್ರಬಂಧಗಳು ಸಾಧಾರಣೀಕರಿಸಿದ ನಿಲವುಗಳನ್ನು ವಾಕ್ಯರೂಪದಲ್ಲಿ ಕೊಡುವುದೇ ಇಲ್ಲ; ಸೂತ್ರಪ್ರಾಯವಾದ ಮಾತುಗಳು ಬರುವುದಿಲ್ಲ. ಅಂತಹ ಮಾತುಗಳು ಯಾವುದೇ ವಿಸ್ತೃತ ರಚನೆಯ ಬಂಧಕ್ಕೆ ಅಪಾಯಕಾರಿ ಎಂದು ಭಾಷಾ ವಿಜ್ಞಾನಿಗಳು ನಿರ್ಣಯಿಸುತ್ತಾರೆ. ಇದಕ್ಕೆ ಕಾರಣಗಳು ಎರಡು. (೧) ಸೂತ್ರಪ್ರಾಯವಾದ ಮಾತುಗಳು ಪ್ರಬಂಧದೊಳಗೆ ತರ್ಕಬಲವಿಲ್ಲದೆ ಸುಳ್ಳಾಗುತ್ತವೆ; ಸೋಲುತ್ತವೆ. (೨) ಒಟ್ಟಾರೆ ಪ್ರಬಂಧದ ವಿವರಗಳನ್ನು ಮರೆಮಾಡಿ ಇವೇ ಮೆರೆಯುತ್ತವೆ. ವಿ. ಸೀ.ಯವರ ಪ್ರಬಂಧಗಳು ಈ ಅಪಾಯಕ್ಕೆ ಒಳಗಾಗಿಲ್ಲದೇ ಇರುವುದು ಒಂದು ಗಮನಾರ್ಹ ಸಾಧನೆ.

ತೀರಾ ಸರಳವಾದ ಅಥವಾ ಲಘುವಾದ ಎರಡು ಮೂರು ರಚನೆಗಳನ್ನು ಬಿಟ್ಟರೆ–'ಪತ್ರದೂತ' ಅಂತಹುದೊಂದು–ಉಳಿದ ಎಲ್ಲ ಪ್ರಬಂಧಗಳ ಹಿಂದೆಯೂ ಇರುವ ಧಾಟಿಯಲ್ಲಿ ಏಕತೆಯಿದೆ. ಪರಸ್ಪರ ವೈದೃಶ್ಯಗಳು ಇವೆ. ಆದರೆ ಈ ವೈದೃಶ್ಯಗಳು ಧಾಟಿಗೆ ಸಂಬಂಧಿಸಿದವಾಗಿರದೆ ಪ್ರಬಂಧಗಳ ರಚನೆಯ ಕಾಲಗಳಲ್ಲಿ ಇರುವ ಅಂತರ ಸುತ್ತಲಿನ ಬದುಕಿನಲ್ಲಿ, ಪ್ರಬಂಧಕಾರರ ಬದುಕಿನಲ್ಲಿ ತಂದಿರುವ ಬದಲಾವಣೆಯಿಂದ ಉಂಟಾದಂತೆ ತೋರುತ್ತದೆ. ಮುಖ್ಯಧಾಟಿ ಎಲ್ಲ ರಚನೆಗಳ ಏಕಸೂತ್ರತೆ: "ಯಾವುದೂ ಕೊನೆಯ ಮಾತಲ್ಲ–absolute ಎನ್ನುವುದು ಏನೂ ಇಲ್ಲ" ಎಂಬುದು. ಎಂದೂ ಒಂದು ಸಂಗತಿಗೆ ಇತಿ ಮತ್ತು ನೇತಿಗಳು ಇದ್ದೇ ತೀರುತ್ತವೆ. ಅವುಗಳೊಡನೆ ವ್ಯವಹರಿಸುವ ಮನುಷ್ಯನ ವೈಲಕ್ಷಣ್ಯಗಳೂ ಕೂಡಿಕೊಂಡ ಮೇಲೆ 'ಇದು ಹೀಗೆಯೇ' ಎಂದು ಖಡಾಖಂಡಿತವಾಗಿ ಹೇಳುವುದಾದರೂ ಹೇಗೆ? ಇದು ವಸ್ತುಸ್ಥಿತಿ. ಈ ದೃಷ್ಟಿಕೋನವನ್ನು Amorphous ಎಂದೂ, ವಿ. ಸೀ.ಯವರಿಗೆ Commitment ಇಲ್ಲದೇ ಇರುವುದರಿಂದ ಹೀಗಾಗುತ್ತದೆಂದೂ ವಿಮರ್ಶಕರು ವಾದಿಸಬಹುದು. ಆದರೆ ದ್ವಂದ್ವವನ್ನು–ದ್ವೈವಿಧ್ಯವನ್ನು ಇಲ್ಲವೆಂದು ಅದು ಇರುವುದು ನಿಜವೆಂದ ಮೇಲೆ–ಹೇಳುವುದು ಆಸ್ಟ್ರಿಚ್ ಪಕ್ಷಿಯ ಬಗೆಯಾಗಬಹುದು ಅಷ್ಟೆ. ನಾನು ಗುರುತಿಸಿರುವ ಧಾಟಿ ವಿ.ಸೀ.ಯವರ ಲಲಿತ ಪ್ರಬಂಧಗಳ ಗುಣವಾಗಿರುವಂತೆ ಅವರ ಸಾಹಿತ್ಯ ವ್ಯಕ್ತಿತ್ತ್ವದ ಗುಣವೂ ಹೌದೂ. ಅವರು ಲಲಿತ ಪ್ರಬಂಧ ಸಂಗ್ರಹದಲ್ಲಿ ಸೇರಿಸಬಾರದಾಗಿತ್ತೆಂದು ಸೂಚಿಸಿದ 'ನನ್ನ ಜೀವನ ದರ್ಶನ' (ಬೆಳುದಿಂಗಳು-ಪು. ೧೦೨-೧೧೧) ಪ್ರಬಂಧ ನನ್ನ ಮಾತನ್ನು ಸಮರ್ಥಿಸುತ್ತದೆ. (ಅವರ ಕವನಗಳಲ್ಲೂ ನಾವು ಕಾಣುವುದು ಇದನ್ನೆ. 'ಶಬರಿ', 'ಕಸ್ಮೈ ದೇವಾಯ' ಮುಂತಾದವುಗಳ ನಿರ್ಣಯ ತಲುಪದ, ಅವ್ಯಕ್ತ ನೋವಿನ ಧಾಟಿ

ಯನ್ನು ಗಮನಿಸಿ.) ಆದ್ದರಿಂದ ಮೊದಲೇ ಹೇಳಿದ ಹಾಗೆ ಇಲ್ಲಿಯ ಸಾಧನೆ ಪೂರಕ ವಾಗಿ ನಿಲ್ಲುತ್ತದೆ.

ಇನ್ನೊಂದು ಮಾತು: ಅಲ್ಲಲ್ಲಿ ವಿ.ಸೀ. 'ಸಂದ ಜೀವನ'ಕ್ಕಾಗಿ ಕೊರಗುವವ ರೇನೋ ಎನ್ನುವ ಅಭಿಪ್ರಾಯಕ್ಕೆ ಅವರ ಲಲಿತ ಪ್ರಬಂಧಗಳು ಅವಕಾಶಕೊಡು ತ್ತವೆ. ದೋಸೆ, ನಮ್ಮ ಅಜ್ಜಿಯ ಅಡುಗೆ, ಮಾವು-ಅಪ್ಪೇಕೆ ಅವರ ಯಶಸ್ವಿ ಪ್ರಬಂಧ 'ಮೈಸೂರು ರುಮಾಲ'ನ್ನೆ ನೋಡಿ. ಇಂದು ಇಲ್ಲದ, ಆದರೆ ತಾನು ಕಂಡ ದಿನಗಳ ಬಗ್ಗೆ ಮೆಚ್ಚುಗೆ ಇರುವಂತೆ ಕಾಣುತ್ತದೆ. ಈ 'ಮೆಚ್ಚುವಿಕೆ'ಯ ಧಾಟಿ ಕೆಲವು ವೇಳೆ ವಿ.ಸೀ. ವರ್ತಮಾನದಲ್ಲಿ ಇರಲಾರದೇ ಹೋದುದಕ್ಕೆ ಬಂದುದೇನೋ ಎಂಬ ಅನುಮಾನಕ್ಕೆ ಕಾರಣವಾಗುತ್ತದೆ. ಆದರೆ ವಿ.ಸೀ.ಯವರ ಮುಕ್ತ ದೃಷ್ಟಿ ಯಲ್ಲಿ ಅದು ಹಾಗಾಗಲಾರದು. ಅಂದಿನ ನೆನಪು ಅನುಭವವಾದದ್ದರಿಂದ ಕೆರಳು ತ್ತದೆ. ಎಂದ ಮಾತ್ರಕ್ಕೆ ಅದು ಮೌಲ್ಯಾತ್ಮಕ ಇಲ್ಲವೆ ಶ್ರೇಷ್ಠವೆಂದೇನೂ ಅಲ್ಲ. ವಿ.ಸೀ.ಯವರ ತಲೆಮಾರಿನ ಇತರ ಕೆಲವು ಲೇಖಕರಲ್ಲಿ ಹಳೆಯದಕ್ಕಾಗಿ ಹಂಬಲಿ ಸುವ ಪ್ರವೃತ್ತಿಯಾಗಬಹುದಾದ ಈ ಬಗೆ ಇಲ್ಲಿ ಹೀಗಾಗುವುದಿಲ್ಲ. ಅಭಿರುಚಿಯ ಮೆಚ್ಚುಗೆ-ವಿ.ಸೀ.ಯವರ ಬಗೆಗಂತೂ ನನ್ನ ತಲೆಮಾರು ಅವರ ಅಭಿರುಚಿಯ ಬಗೆಗೆ ಚಿಟ್ಟೆ ಕಥೆಗಳನ್ನು ಕೇಳಿದೆ-ಮಾತ್ರ ಈ ಹಿಂದಕ್ಕೆ ನೋಡುವ ರೀತಿಗೆ ಕಾರಣ ಅಷ್ಟೆ.

ಇನ್ನೂ ಈ ಪ್ರಬಂಧಗಳ ಬಗ್ಗೆ ಅವುಗಳ ಹಿಂದಿರುವ ವ್ಯುತ್ಪತ್ತಿಯ ದೃಷ್ಟಿ ಯಿಂದ, ವಿ.ಸೀ.ಯವರ ತಲೆಮಾರಿನ ಸಾಹಿತ್ಯದ ದಾಖಲೆಯೆನ್ನುವ ದೃಷ್ಟಿಯಿಂದ -ಕಾಲ ಮಾಸುವ ಹಾಗೆ ಮಾಡಿದ ತಮ್ಮ ಚಿತ್ರಗಳ ಬಗ್ಗೆ ವಿ.ಸೀ.ಯವರೇ ಹೇಳಿ ಕೊಂಡಿದ್ದಾರೆ-(ಬೆಳುದಿಂಗಳು ಪು. iii-iv). ಕುತೂಹಲದ ಅಧ್ಯಯನ ನಡೆಸ ಬಹುದಾಗಿದೆ. "ಪೂರ್ತಿ ಅಸಂಬದ್ಧವಾಗುವಂತಿರುವಾಗ ಹರಟೆಯ ಎಳೆಯನ್ನು ಹಿಡಿವ, ಕಾಣುವ, ನಡೆಸುವ ಇಲ್ಲಿನ ರೀತಿ ಕೆಲವರಿಗೆ ರುಚಿಸಬಹುದು. ಎಲ್ಲರಿಗೂ ಎಲ್ಲ ರುಚಿಸೀತೆಂದು ಹೇಳಬಲ್ಲೆ ಹೇಗೆ" (ಬೆಳುದಿಂಗಳು: ಮುನ್ನುಡಿ) ಎನ್ನುತ್ತಾರೆ ವಿ.ಸೀ. ಈ ಪ್ರಬಂಧಗಳ ಆಸ್ವಾದನೆ ಬುದ್ಧಿಗೆ, ಹೃದಯಕ್ಕೆ ಸಂಬಂಧ ಪಟ್ಟ ಸಂಗತಿ. ಆದ್ದರಿಂದ ಅದರ ಬಗೆಗೆ ನಾನು ಬರೆಯಹೋಗಿಲ್ಲ. ಬದಲಾಗಿ ಈ ಪ್ರಬಂಧಗಳ ಮೂಲಕ ಲಲಿತ ಪ್ರಬಂಧಗಳ ಸ್ವರೂಪ (Form)ವನ್ನೂ ಕುರಿತು ತಿಳಿಯುವ ದೃಷ್ಟಿಯಿಂದ ಹೊರಟವನು ನಾನು. ಇಷ್ಟಕ್ಕೆ ನನ್ನ ಈ ಪ್ರಬಂಧಗಳ ಅಭ್ಯಾಸ ಸೀಮಿತ.

ಕೆ. ವಿ. ನಾರಾಯಣ

# ಪತ್ರ ಗುಚ್ಛ

## ಮೊದಲ ಮಾತು

ಹಿರಿಯರು–ಗೆಳೆಯರು ವಿವಿಧ ಸಂದರ್ಭಗಳಲ್ಲಿ ವಿ. ಸೀ. ಅವರಿಗೆ ಬರೆದಿರುವ ಅಸಂಖ್ಯ ಪತ್ರಗಳಲ್ಲಿ ಕೆಲವನ್ನು ಆರಿಸಿ ಇಲ್ಲಿ ಕೊಡುತ್ತಿರುವುದರ ಉದ್ದೇಶ: ಆ ಹಿರಿಯರು ಮತ್ತು ಗೆಳೆಯರು ವಿ. ಸೀ.ಯವರನ್ನು, ಅವರ ಕೃತಿಗಳನ್ನು ಕಂಡ ಮತ್ತು ಕಾಣುತ್ತ ಬಂದ ಬಗೆಯನ್ನು ಪರಿಚಯ ಮಾಡಿಕೊಡಬೇಕೆಂದು. ಅಂಥ ಒಂದು ಪರಿಚಯದ ಜೊತೆಗೆ, ಬರೆದವರ ಮನೋಧರ್ಮವನ್ನೂ ಇಲ್ಲಿನ ಹಲವು ಪತ್ರಗಳು ಪ್ರತಿಬಿಂಬಿಸುತ್ತವಾಗಿ ಅವಕ್ಕೆ ಹೆಚ್ಚಿನ ಮಹತ್ವ ದೊರೆಯುತ್ತದೆ. ಬಹುಶಃ ಈ ಕಾರಣದಿಂದಲೇ ಕೆಲವು ಪತ್ರಗಳು ವಿ. ಸೀ. ಅವರಿಗೂ ಪ್ರಿಯವಾಗಿವೆ. ಉದಾ: ತಾವು ಸಾಹಿತ್ಯ ಸಮ್ಮೇಳನದ ಅಧ್ಯಕ್ಷ ಸ್ಥಾನಕ್ಕೆ ಆಶಿಸದಿದ್ದವರು; ಅಲ್ಲಮ ಸಿದ್ಧರಾಮರು ಸೊನ್ನಲಾಪುರದಲ್ಲಿ ತಮ್ಮನ್ನು ಮೆರೆಸಬಯಸಿದ್ದಾರೆ ಎಂದುಕೊಂಡಿರುವ ಮನೋಭಾವ ಎಂ. ಆರ್. ಶ್ರೀ ಯವರ ಪತ್ರದಿಂದ ಸ್ಪಷ್ಟವಾಗುವಂತೆಯೇ, ಆ ಗೌರವದಿಂದ 'ಶ್ರೀಮತಿ ಮೂರ್ತಿಯವರಿಗೆ ಸಂತೋಷವಲ್ಲವೆ, ಕೇಳಿ'–ಎಂದಿರುವುದು ಅವರ ರಸಿಕತೆಯನ್ನು, ರಸಿಕತೆಗಿಂತ ಹೆಚ್ಚಾಗಿ ಬಾಳ ಸಂಗಾತಿಗೆ ಎಂ. ಆರ್. ಶ್ರೀ. ನೀಡಿದ್ದ ಸ್ಥಾನ–ಮಾನಗಳನ್ನು ಎತ್ತಿಕಾಣಿಸುತ್ತವೆ. ಶ್ರೀ ಕುವೆಂಪು ಅವರಿಗೆ ಆಗ ಆ ಗೌರವ ದೊರಕಿದ್ದರಾಗುತ್ತಿತ್ತು ಎನ್ನುವ ಮಾತೂ ಮೂರ್ತಿಯವರ ಉದಾತ್ತ ಮನೋಭಾವನೆಗೆ ಸಾಕ್ಷಿಯಾಗಿದೆ. ಅದೇ ಎತ್ತರದ ಇನ್ನೊಂದು ಮುಖ, ಶ್ರೀ ಕುವೆಂಪು ತಮಗೆ ಜ್ಞಾನಪೀಠ ಪ್ರಶಸ್ತಿ ದೊರೆತಾಗ ಬರೆದಿರುವ ಒಂದು ಪತ್ರದಲ್ಲಿಯೂ ಕಾಣುತ್ತದೆ. ಮೊದಲ ಕವನ ಸಂಗ್ರಹ ಪ್ರಕಟವಾದಂದಿನಿಂದ ತಮ್ಮ ಸಾಹಿತ್ಯಕ ಯಶಸ್ಸಿನಲ್ಲಿ ವಿ. ಸೀ. ಹರ್ಷಿತರೂ ಆಸಕ್ತರೂ ಆಗಿದ್ದಾರೆಂಬುವರ ಜೊತೆಗೆ, ಇಬ್ಬರಿಗೆ ಹಂಚಿದ ಪ್ರಶಸ್ತಿಯನ್ನು 'ಪ್ರೇಮಗಣಿತ'ದ ಲೆಕ್ಕಹಾಕಿ, ಆ ದೃಷ್ಟಿಯಿಂದ ತಾವು ಸ್ವೀಕರಿಸಿರುವುದನ್ನು ವ್ಯಕ್ತಪಡಿಸಿರುವುದು ಶ್ರೀಕುವೆಂಪುರ ಚೇತನ ನಿಜಕ್ಕೂ ಉನ್ನತವಾದುದು ಎಂಬುದನ್ನು ಸ್ಪಷ್ಟಪಡಿಸುತ್ತದೆ. 'ಕನ್ನಡಕ್ಕೆ ಬಂದ ಕೀರ್ತಿ ಕನ್ನಡಕ್ಕಾಗಿ ದುಡಿದ ನಿಮ್ಮೆಲ್ಲರಿಗೂ ಸೇರತಕ್ಕದ್ದು' ಎಂದಿರುವುದೂ ಅಷ್ಟೇ ದೊಡ್ಡ ಮಾತು.

ಸಮಕಾಲೀನ ಕನ್ನಡ ಕವಿಗಳಲ್ಲಿ ಅತ್ಯಂತ ಗಮನಾರ್ಹರಾದ ಶ್ರೀ ಕೆ.ಎಸ್.ನ.ರ ಪತ್ರ ಅವರು ವಿ. ಸೀ. ಅವರಲ್ಲಿಟ್ಟಿರುವ ಗೌರವಾದರಗಳಿಗೆ ಸಾಕ್ಷಿಯಾಗಿರುವಂತೆಯೇ ಕೆ. ಎಸ್. ನ.ರ ಮೇಲೆ ವಿ. ಸೀ. ಅವರ ಪ್ರಭಾವ ಎಷ್ಟರ ಮಟ್ಟಿನದು ಎಂಬು ದನ್ನು ತೋರಿಸುತ್ತದೆ. ಅಲ್ಲದೆ, ಬದುಕನ್ನು ದುಸ್ತರಗೊಳಿಸುತ್ತಿದ್ದ ಆಗಿನ ಸ್ಥಿತಿ ಗತಿಗಳು ಕೆ. ಎಸ್. ನ.ರ 'ಮೈಸೂರು ಮಲ್ಲಿಗೆ'ಯ ಮೃದು ಕೋಮಲ ಅಂತಃ ಕರಣದ ಕವಿಮನೋಧರ್ಮದ ಮೇಲೆ ಬಿದ್ದು, 'ಶಿಲಾಲತೆ'ಯಲ್ಲಿನಂತಹ ವಾಸ್ತವ ಮನೋಧರ್ಮದ ಕವನಗಳ ಸೃಷ್ಟಿಗೆ ಪ್ರೇರಣೆ ಕೊಡುವುದಕ್ಕೆ ಸೂಚನೆಯಾಗು ವಂತಿದೆಯೇನೋ ಎನಿಸುತ್ತದೆ.

ಚಿಕ್ಕವಾದರೂ ಚೊಕ್ಕವಾಗಿರುವ ಪತ್ರಗಳಲ್ಲಿ–ಶಿಷ್ಯನಿಗೆ ಗುರುವಿನ ಒಂದು ಸಕಾಲಿಕ ಮಾರ್ಗದರ್ಶನವನ್ನು ಡಾ॥ ರಾಧಾಕೃಷ್ಣನ್‌ರ ಪತ್ರದಲ್ಲಿ, 'ಅವನಿಚ್ಛೆ ಏನಿದೆಯೊ ಅದರಂತೆ ನಡೆಯಲಿ!' ಎನ್ನುವ ಒಂದು ಜನಮನೋಧರ್ಮವನ್ನು ವೆಂಕಣ್ಣಯ್ಯನವರ ಪತ್ರದಲ್ಲಿ, ಕಲೆ ಒಂದು ತಪಸ್ಸು, ಅಗ್ಗದ ವಸ್ತುವಲ್ಲ ಎಂಬ ಸಾಧನೆಯ ಭಾವವನ್ನು ಕೆ. ವೆಂಕಟಪ್ಪನವರ ಪತ್ರದಲ್ಲಿ ಕಾಣುತ್ತೇವೆ. ಜೊತೆಗೆ, ಹಿರಿಯರು–ಗೆಳೆಯರು ಅವರ ಕೃತಿಗಳ ಬಗೆಗೆ ನುಡಿದಿರುವ ಸ್ನೇಹದ ಮಾತುಗಳು ವಿಶ್ವಾಸದ ಉತ್ತೇಜನದ ಜೊತೆಗೆ ಕೃತಿಯ ಮೌಲ್ಯಾಂಕನವನ್ನೂ ಸ್ಥಾಪಿಸುತ್ತವೆ. 'ಪಂಪಾಯಾತ್ರೆ'ಯಲ್ಲಿನ ಕನಸಿನ ಪ್ರಸಂಗವನ್ನು ಅದು ಹೊರಬಂದ ತರುಣದ ಲ್ಲಿಯೇ–೪೨ರಷ್ಟು ಹಿಂದೆ–'an obvious Literary trick' ಎಂದ ಆಪ್ತ ಗೆಳೆಯ ಡಾ॥ ಎಚ್. ವಿ. ಆರ್. ಅಯ್ಯಂಗಾರ್– ರಿಸರ್ವ್ ಬ್ಯಾಂಕಿನ ಗವರ್ನರ್ ಆಗಿ ವಿಶ್ರಾಂತರಾದ, ಅಂತರ್ರಾಷ್ಟ್ರೀಯ ಖ್ಯಾತಿಗಳಿಸಿರುವ–ಅವರ ಅಭಿಪ್ರಾಯ ವನ್ನು ವಿ. ಸೀ. ಬಹುವಾಗಿ ಮೆಚ್ಚಿಕೊಂಡಿರುವುದುಂಟು, ಮಾತ್ರವಲ್ಲ ಅದನ್ನು ಉಲ್ಲೇಖಿಸಿರುವುದೂ ಉಂಟು. ಅರ್ಥಶಾಸ್ತ್ರ ಪಾರಂಗತರಾದ ವಿ. ಸೀ. ಬಹು ವರ್ಷಗಳಿಂದ ಪ್ರತಿಪಾದಿಸುತ್ತ ಬಂದಿದ್ದ Gold-revaluation ತತ್ವ ಕಾರ್ಯ ರೂಪಕ್ಕೆ ಬಾರದಾದಾಗ ಅರ್ಥಶಾಸ್ತ್ರದಲ್ಲಿ ಪರಮಾಧಿಕಾರ ಪಡೆದಿದ್ದ ಲಾರ್ಡ್ ಕೇನ್ಸ್ ಅವರೊಡನೆ ಮತ್ತು ಆಗ ಭಾರತ ಸರ್ಕಾರದ ಅರ್ಥಮಂತ್ರಿಗಳಾಗಿದ್ದ ದೇಶ್‌ಮುಖ್‌ರೊಡನೆ ವ್ಯವಹರಿಸಿ ತಮ್ಮ ನಿಲವನ್ನು ಸಮರ್ಥಿಸಿಕೊಂಡಿರುವು ದಕ್ಕೆ ಲಾರ್ಡ್ ಕೇನ್ಸ್ ಮತ್ತು ದೇಶ್‌ಮುಖ್‌ರು ಬರೆದಿರುವ ಪತ್ರಗಳು ಸಾಕ್ಷಿ ಯಾಗಿವೆ. ಶ್ರೀ ಕೃಪಲಾನಿಯವರು ಪತ್ರದಲ್ಲಿ ಬಯಸಿದಂತೆ ಕಳಿಸಿದ ಸಮೀಕ್ಷಾ ಲೇಖನದಲ್ಲಿ ವಿ. ಸೀ. ವ್ಯಕ್ತಪಡಿಸಿದ ಅಭಿಪ್ರಾಯಗಳು ಭಾರತದ ಎಲ್ಲ ಭಾಷಾ ಸಾಹಿತ್ಯಗಳಿಗೂ ಹೊಂದಿಕೊಳ್ಳುವಂತಿದ್ದು, ಟೈಮ್ಸ್ ಲಿಟೆರರಿ ಸಪ್ಲಿಮೆಂಟ್ (ಲಂಡನ್)ನಂತಹ ಪ್ರಮುಖ ಪತ್ರಿಕೆಯ ಸಂಪಾದಕೀಯ ಲೇಖನದಲ್ಲಿ ಉಧೃತ ಗೊಳ್ಳುವಂತಾದುದು ವಿ.ಸೀ. ಅವರ ವಿಮರ್ಶನ ದೃಷ್ಟಿಗೆ, ಶಕ್ತಿಗೆ ದೊರೆತ ಮನ್ನಣೆ ಯಾಗಿದೆ. ಮೊದಲ ವರ್ಷದ ಜ್ಞಾನಪೀಠ ಪ್ರಶಸ್ತಿಯನ್ನು ಡಾ. ಡಿ. ವಿ. ಜಿ. ಅವರ

'ಮಂಕು ತಿಮ್ಮನ ಕಗ್ಗ' ಕೃತಿಗೆ ದೊರಕಿಸಲು ವಿ. ಸೀ. ಪಟ್ಟ ಪ್ರಯಾಸ ಕನ್ನಡಿಗರಿಗೆ ತಿಳಿದ ಸಂಗತಿಯೇ ಆದರೂ, ಆ ವರ್ಷ ಪ್ರಶಸ್ತಿ ವಿಜೇತರಾದ ಶ್ರೀ ಶಂಕರ ಕುರು ಪರಿಗೂ ವಿ. ಸೀ. ಅವರ ಶ್ರಮ ಸಂತೋಷ ತಂದಿರುವುದು ಕನ್ನಡಿಗರೆಲ್ಲ ವಿ. ಸೀ. ಅವರಿಗೆ ಕೃತಜ್ಞರಾಗಿರಬೇಕಾದ ಅಗತ್ಯವನ್ನು ಸಮರ್ಥಿಸುತ್ತದೆ. ಕನ್ನಡ ನಾಡಿನಲ್ಲಿ ಮಾತ್ರವಲ್ಲದೆ, ಹೊರನಾಡುಗಳಲ್ಲಿಯೂ ವಿ.ಸೀ. ಸಂಚರಿಸಿ, ಅಭಿಮಾನಿವರ್ಗವನ್ನು ಬೆಳಸಿ, ಸ್ನೇಹ ವರ್ಗವನ್ನು ಕಟ್ಟಿ, ಕನ್ನಡ ನಾಡು–ನುಡಿ–ಸಂಸ್ಕೃತಿ–ಸಾಹಿತ್ಯಗಳಿಗೆ ಒಂದು ಸ್ಥಾನ ಮಾನ ದೊರಕಿಸಿಕೊಟ್ಟು, ಸಾಂಸ್ಕೃತಿಕ ರಾಯಭಾರಿಗಳಾಗಿದ್ದರೆಂಬು ದಕ್ಕೆ ಹೊರನಾಡಿನ ಸಾಹಿತಿಗಳು ಅವರಿಗೆ ಬರೆದಿರುವ ಪತ್ರಗಳು ಪುರಾವೆಯುಸ್ಟೊದ ಗಿಸುತ್ತವೆ.

ಬಹುಪಾಲು ಪತ್ರಗಳೆಲ್ಲ ಇಂಗ್ಲಿಷಲ್ಲಿರುವುದು ಒಂದು ವಿಶೇಷವಾಗಿರು ವಷ್ಟೇ ಕೊರತೆಯು ಸಂಗತಿಯೂ ಆಗಿದೆಯೆನ್ನಬಹುದು. ಆದರೇನು? ಭಾವ ಮುಖ್ಯವೇ ಹೊರತು ಭಾಷೆಯಲ್ಲ. ಇಲ್ಲಿನ ಪತ್ರಗಳು ವಿ. ಸೀ. ಅವರ ವ್ಯಕ್ತಿತ್ವ ಮತ್ತು ಕೃತಿಗಳ ಒಂದು ಮುಖವನ್ನು ಸ್ಥೂಲವಾಗಿಯಾದರೂ ಕಾಣಿಸಿ, ಆ ಮೂಲಕ ಗ್ರಂಥದ ಮೌಲ್ಯವನ್ನು ಹೆಚ್ಚಿಸಬಹುದು ಎಂದು ನಿರೀಕ್ಷಿಸಿದೆ.

ಸಂಪಾದಕ

1408, I Cross, Malleswaram
27–12–1944

ಶ್ರೀಮಾನ್ ವಿ. ಸೀತಾರಾಮಯ್ಯನವರಿಗೆ,

ನಿಮ್ಮ ಕಾಗದ. ಮನೆಯಲ್ಲಿ ನಾನು ಹೆಂಡತಿ ಮಕ್ಕಳಲ್ಲದೆ ಯಾರೂ ಇಲ್ಲ, ಆಳು ಕೂಡ. ಮನೆಯಾಕೆಯೂ ಸ್ವಲ್ಪ ಸೂಕ್ಷ್ಮಸ್ಥಿತಿಯಲ್ಲಿದ್ದಾರೆ. ಆದ್ದರಿಂದ ನಾನು ಬರಲು ಸಾಧ್ಯವಾಗಲಿಲ್ಲ. ಇಂತಹ ಗೃಹೀ ಅನಿವಾರ್ಯಗಳು ನಿಮಗೂ ಅಪರಿಚಿತವಲ್ಲ. ಆದ್ದರಿಂದ ಕ್ಷಮಿಸುತ್ತೀರಿ ಎಂದು ಭಾವಿಸುತ್ತೇನೆ. ಎಲ್ಲರೂ ತಕ್ಕಮಟ್ಟಿಗೆ ಆರೋಗ್ಯದಿಂದಿದ್ದೇವೆ.

ಪ್ರ. ಕ. ಕ್ಕೆ ಏನು ಕಳುಹಿಸಲಿ? ನಿಮಗೆ ಕವನ ಬೇಕಾಗಿರುವುದು ಸಂಕ್ರಾಂತಿ ಸಂಚಿಕೆಗೋ ಬೆಳ್ಳಿಯ ಸಂಚಿಕೆಗೊ? ನಾನು ನಿಮಗೆ ಎಷ್ಟು ಸೇವೆ ಸಲ್ಲಿಸಬೇಕೊ ಅಷ್ಟನ್ನೂ ಸಲ್ಲಿಸಲು ಸಾಧ್ಯವಾಗಿಲ್ಲ. ಬೆಳ್ಳಿಯ ಸಂಚಿಕೆಗೆ 'ಕಾವ್ಯವಿಮರ್ಶೆಯಲ್ಲಿ ಪೂರ್ಣದೃಷ್ಟಿ' ಎಂಬ ಲೇಖನವನ್ನು ಬರೆಯಬೇಕೆಂದು ಟಿಪ್ಪಣಿ ಹಾಕಿಟ್ಟಿದ್ದೇನೆ. ಆದರೆ ನನ್ನ ಸಮಸ್ತ ಶಕ್ತಿಯೂ ರಾಮಾಯಣಕ್ಕಾಗಿ ಬಿಟ್ಟಿದೆ. ಅದು ಅದೃಷ್ಟದಿಂದ ತುದಿ ಕಾಣುವಷ್ಟರ ಮಟ್ಟಿಗೆ ಮುಂದುವರಿದಿದೆ. ಪ್ರಾಯಶಃ ಈ ವರ್ಷದಲ್ಲಿ ಯಾದರೂ ಮುಗಿಯುತ್ತದೆ ಎಂಬ ಆಶಂಸೆ. ಮುಗಿದರೆ ಒಂಭತ್ತು ವರ್ಷಗಳಾಗುತ್ತದೆ ಪ್ರಾರಂಭ ಮಾಡಿ. ಸದ್ಯಕ್ಕೆ ಮಹಾಕಾವ್ಯ ಮುಗಿದ ಹೊರತೂ ಬೇರೆ ಯಾವುದಕ್ಕೂ ಮನಸ್ಸು ಹೋಗುವಂತಿಲ್ಲ. ಅದು ಸುಮಾರು ೨೫.೦೦೦ ಪಂಕ್ತಿಗಳನ್ನು ಮೀರುತ್ತದೆಂದು ತಿಳಿಯುತ್ತದೆ. ಆ ಕೃತಿ ನನಗೇ ಮಹಾಛಂದಸ್ಸಿನ ವಿವಿಧ ವಿನ್ಯಾಸಗಳನ್ನು ಕಲಿಸಿ ಗುರುವಾಗಿದೆ. ನಾನು ಅದನ್ನು ರಚಿಸಿದೆ ಎನ್ನುವುದಕ್ಕಿಂತಲೂ ಅದು ನನ್ನನ್ನು ರಚಿಸಿದೆ ಎನ್ನುವುದು ಹೆಚ್ಚಿನ ಸತ್ಯವಾಗಿ ತೋರುತ್ತಿದೆ ನನಗೆ. ನಾನು ಬಹುಮಟ್ಟಿಗೆ ಬೇರೆಯ ವ್ಯಕ್ತಿ! ಶೂನ್ಯ ವ್ಯಕ್ತಿ!

ಈ ಸಲದ ಪ್ರ. ಕ. ಕೈಸೇರಿತು. ಬಹಳ ಚೆನ್ನಾಗಿದೆ. ವಸ್ತುಕೋಶ ಎಷ್ಟು ತುಂಬಿದೆ! ಎಲ್ಲ ಚೆನ್ನು, ಚೊಕ್ಕಟ! ನನಗಂತೂ ಅಂತಹ ಸಂಚಿಕೆ ತರಲು ಸಾಧ್ಯವೇ ಆಗುತ್ತಿರಲಿಲ್ಲ! ನಿಮ್ಮ ಕೈಯಲ್ಲಿ ಬೆಳ್ಳಿಯ ಸಂಚಿಕೆ ಅದ್ಭುತವಾಗುವುದರಲ್ಲಿ ಸಂದೇಹವಿಲ್ಲ.

ಸಂಪಾದಕನು ಪಂಕ್ತಿಗಳ ನಡುವಣ ಜಾಗದಂತೆ ಶೂನ್ಯನಾದರೇ ಲೇಖಕರ ಲೇಖನಿಗಳಿಗೆ ಮಸಿ ಇಳಿಯುತ್ತದೆಂದು ತೋರುತ್ತದೆ! ದಯವಿಟ್ಟು ಅಪಾರ್ಥ ಮಾಡಬೇಡಿ, ಹೇ ಸಂಪಾದಕ ಪಾರ್ಥ!

ನೀವೆಲ್ಲರೂ ಕ್ಷೇಮವೆಂದು ಹಾರೈಸುತ್ತೇನೆ. ನನ್ನ ಕಾಗದ ಓದಿದ ಮೇಲೆ ಏನಾದರೂ ಇತಿ ಸೂಚನೆಗಳನ್ನು ಕೊಡುವುದಿದ್ದರೆ ಕಾಗದ ಬರೆಯಿರಿ.

ಇತಿ ನಮಸ್ಕಾರಗಳು

**ಕುವೆಂಪು**

ಜಯನಗರ, ಮೈಸೂರು
10–12–48.

ಅಣ್ಣ ವಿ. ಸೀ. ಅವರಿಗೆ.

ನಾನು ನಿಮಗೆ ಕಾಗದ ಬರೆಯುತ್ತಿರುವುದನ್ನು ನನ್ನ ಹೆಂಡತಿ ಪಕ್ಕದಲ್ಲಿ ಎರಗಿ ನೋಡುತ್ತಿದಾಳೆ. ನಾನು ಯಾರಿಗೂ ಕಾಗದ ಬರೆಯುವವನಲ್ಲ. ನಾನು ನಿಮಗೆ ಬರೆಯುತ್ತಿರುವುದೇ ನನ್ನ ಬರವಣಿಗೆಗೆಲ್ಲ ಪ್ರಥಮ ಸಾಕ್ಷಿಯಾದ ನನ್ನ ಹೆಂಡತಿಯ ಪುಣ್ಯ. (ಈ ಸಾಲನ್ನು ಓದಿದಾಗ ಅವಳಿಗೆ ರೇಗಿಹೋಯಿತೆಂದರೆ ನೀವು ದಯ ಮಾಡಿ ಅಚ್ಚರಿಗೊಳ್ಳಬೇಡಿ (ರಿ) !)

ನನ್ನ ಬರವಣಿಗೆ–ಅದೂ ಅಲ್ಪಸ್ವಲ್ಪ–ಹಿಂದಕ್ಕಿಂತ ಕಡಿಮೆಯಾಗಿ–'ನಿಂತು ಹೋಗುವ' ಶುಭ ಸೂಚನೆಗೆ ಎಡೆಗೊಟ್ಟಿದೆ. ಈ ಲೇಖನಿ ಸಂಬಳಕ್ಕೆ ದುಡಿಯುವ ಕುದುರೆಯಾಗಿದೆ; ಭಿಕ್ಷಾ ಪಾತ್ರೆಯಾಗಿದೆ; ಅದನ್ನು ಸಾಹಿತ್ಯಕ್ಕಾಗಿ ಬಳಸುವ ಪ್ರಮೇಯ ಮಿತವಾಗುತ್ತಿದೆ. ಆದರೆ ಕಣ್ಣು ಹರಿತವಾಗುತ್ತಿದೆ, ಎದೆ ಗಟ್ಟಿಯಾಗುತ್ತಿದೆ, ಮಾತು ಬಿಗಿಯುತ್ತಿದೆ. ಇನ್ನು ಮುಂದೆ ಬರೆದರೆ ಅದೆಲ್ಲ ಈ ಮಾರ್ಗದಲ್ಲೇ; ನನಗೆ ಹೀಗಾಗಬಹುದಲ್ಲ ಎನ್ನುವ ವ್ಯಥೆಯೇ ಇಲ್ಲ. ನನ್ನನ್ನು ಕವಿ ಎಂದು ವಿಳಾಸ ಮಾಡಿದ್ದೀರಿ. ನೀವು ಬರೆದಿರುವುದರಿಂದ ನಾನು ಚರ್ಚೆ ಮಾಡುವುದಿಲ್ಲ. ನಾನು 'ಬೀಚ್ ಪಾಂ ಪಾಂ' ಎಂಬ ಪದ್ಯ ಬರೆಯುತ್ತಿದ್ದೇನೆ. ಹೀಗಿದೆ ಅದು:

'ಬೀಚ್ ಪಾಂ ಪಾಂ
ಬೀಚ್ ಪಾಂ ಪಾಂ
ಯಾರಿಗೂ ಸುತರಾಂ
ಪತಿತ ಪಾವನ ಸೀತಾರಾಂ!'

ಇನ್ನು ವಿಮರ್ಶೆ; 'ಮಾಸ್ತಿಯವರ ಕವಿತೆ'. ಪಂಡಿತರೆಲ್ಲ ಹನುಮಂತರಾಯರಾಗುತ್ತಿದ್ದಾರೆ. ಮಾಸ್ತಿಯವರು–'ವಿ. ಸೀ.'– ನಾನು–ನಾವು ನಮ್ಮ ಮಾತನ್ನೂ ಹೇಳಿ ಇರೋಣ. ಇತರ ಜನ ಏನಾದರೂ ಆಡಿಕೊಳ್ಳಲಿ. ನನ್ನ ಉತ್ಸಾಹ ಅದೂ ಇರಲಿ ನಿಮ್ಮ ಸ್ಥಿತಿಗೂ ನನ್ನ ಗತಿಗೂ ೧೦೦ ಮೈಲಿ. ಆದರೆ ನಾನು ಅವರ ವಿಷಯದಲ್ಲಿ ಬರೆದಿರುವುದೆಲ್ಲ ಸರಿ ಎಂದು ನನ್ನ ನಂಬಿಕೆ. ನೀವೂ ಬಲ್ಲವರೇ. ಕತ್ತೆಗಳಿವೆ ಎಂದು ಬೀದಿಗೇ ಬಾರದೆ ಇರುವುದು ತಾನೆ ಹೇಗೆ? ಬಂದ ಮೇಲೆ ಧೈರ್ಯವೂ ಇರುತ್ತದೆ. ಇಂದಲ್ಲ ನಾಳೆ ಹತ್ತು ಜನ ಓಡಾಡಿದ ಬೀದಿಯಲ್ಲಿ ಕತ್ತೆಗಳು ಸುಳಿಯವೆ, ಚೆಲುವು ಮೂಡಬಹುದು. ಆಗ ಕತ್ತೆಗಳಿದ್ದರೂ ಬೀದಿಯನ್ನು ಶುಚಿಯಾಗಿಡುವ ಕತ್ತೆಗಳವು.

ನೀವು ದೂರ ಆಗಿದ್ದೀರಿ: ಯಾರನ್ನು ದಿನಾ ನೋಡುತ್ತಿದ್ದೆನೋ, ಯಾರಿಂದ ದೂರ ಇರುವುದು ಸಾಧ್ಯವೇ ಅಲ್ಲ ಎನಿಸಿತ್ತೋ–ಅವರಿಂದ ದೂರ ಆಗಿದ್ದೇನೆ. ಆ ಕಡೆ ಬರುವ ಮನಸ್ಸು ಹತ್ತಾರು ಸಲ ಬಾಧಿಸಿದೆ. ಕವಿತೆಗೂ ಮೀರಿದ ಅಥವಾ

ಕವಿತೆಯು ಜೀವವೇ ಆದ ಮಾನವ ಹೃದಯದ ಹೊಂದಿಕೆ ಆಳದಲ್ಲಿ ಮೊರೆಯುವ ಹೊಳೆಯಂತೆ ಹರಿಯುತ್ತಿದೆ.

ನೀವು ಸದ್ಯದಲ್ಲೇ ಈ ಕಡೆ ಬರಬಹುದೇನೋ? ಇಲ್ಲವಾದರೆ ನಾನು ಆ ಕಡೆ ಬರುವ ಪ್ರಯತ್ನ ಮಾಡುತ್ತೇನೆ. ನೀವು ಎಂದಿಗೂ (ದಯೆಯಿಟ್ಟು) ನಿರುತ್ಸಾಹಕ್ಕೆ ಎಡೆಗೊಡಬೇಡಿರಿ; ಯಾರ ಬದುಕೂ ಇಂದು ಸುಂದರವಾಗಿಲ್ಲ; ಯಾರಿಗೂ ಇಂದು ಕೈಲಾಸವಾಸದ ಅನುಭವವೇ. ನಮ್ಮ ಹೊಟ್ಟೆಗೆ ಬಟ್ಟೆಗೆ ಸರಕಾರದ ಚೀಟಿಗಳು ಬಂದಿವೆ. ಕಳ್ಳರೂ ಬದುಕಲು ಕಷ್ಟವಾಗಿರುವ ಕಾಲದಲ್ಲಿ, ನಮ್ಮಂಥವರಿಗೆ ಕಠಿಣ ಉಪವಾಸ ಅರ್ಧವಾಸ ಇತ್ಯಾದಿ ಮಾಧ್ವ ಸಂಪ್ರದಾಯವೇ ಸರಿಹೊಂದುತ್ತಿದೆ. ಇಲ್ಲಿನ ಹೋಟಲುಗಳು ಬಾ ಗಿ ಲು ತೆರೆದ ದಿನವೂ ಕಾಗದದ ದೋಸೆಗಳನ್ನು ಪ್ರಿಂಟ್ ಮಾಡುತ್ತಿವೆ. ನಾನು 'ಮೈಸೂರು ಮಲ್ಲಿಗೆ' ಬರೆದ ಕಾಲದ ಇಂದ್ರಚಂದ್ರ ಭವನಗಳು ರೇಷನ್ ರಾಕ್ಷಸನ ಕಾಟಕ್ಕೆಸಿಕ್ಕಿ ಇನ್ನು ಆ ಕಡೆ ಸುಳಿಯದಿದ್ದರೆ ಕ್ಷೇಮ ಎನ್ನಿಸಿವೆ. ಇತ್ತ ನಲ್ಲಿಯಲ್ಲಿ ನೀರೂ ಧಾರಾಳವಾಗಿ ಬರುತ್ತಿಲ್ಲ. ಹಾಲು–ಈ ಪದಾರ್ಥದಲ್ಲಿ ನನಗೆ ನಂಬಿಕೆಯೇ ಹೋಗಿದೆ – ಏನು ಮಾಡಿದರೂ (ತಪಸ್ಸು ಮಾಡಿದರೂ) ಕಾಫಿ ಆಗುವುದಿಲ್ಲ. ಹೆಂಡತಿ–ಮಕ್ಕಳು (ಏನಾಗಲಿ) ಸುಮ್ಮನಿದ್ದರೆ, ತಂಪಾಗಿದ್ದರೆ ಮಾತ್ರ ಈ ಕಾಲದಲ್ಲಿ ಮನೆಯಲ್ಲಿ ನಿಲ್ಲುವುದು ಸಾಧ್ಯವಾದೀತು; ಇಲ್ಲಿದೆ ಜೀವಾಳ. ನಾನಿರುವುದು ಹೀಗೆ. ಈ ಸ್ಥಿತಿಗತಿಗಳನ್ನೇ ದೊಡ್ಡದು ಮಾಡುವವನೇ ಕವಿಯಾಗದಿರಬಹುದು: ಆದರೆ ಇವನ್ನೆಲ್ಲ ಮರೆತು, ಇವಕ್ಕೆ ಸಂಬಂಧವೇ ಇಲ್ಲದಂತೆ ಬರೆಯುವುದು ಆಸ್ಥಾನ ಕವಿಗಳು ಮಾಡುತ್ತಿರುವ ತ್ರಿಕಾಲಾಬಾಧಿತವಾದ ಅನ್ಯಾಯ. ಅವರಿಗೆ ಸದ್–ಗತಿ ಇಲ್ಲಿಲ್ಲ!

ನಾನು ಗೋಕಾಕರ ವಿಷಯದಲ್ಲಿ ಕೆಲವು ಮಾತು ಬರೆಯುತ್ತಿದ್ದೇನೆ: (ಮುಂದೆ ಅದನ್ನು ನಿಮ್ಮಲ್ಲಿಗೆ ಕಳುಹಿಸುತ್ತೇನೆ).

ಶ್ರೀ—ಅವರಿಗೆ ನನ್ನ 'ತುಂಗಭದ್ರೆ'ಯಿಂದ ನನ್ನಲ್ಲಿ ಅಭಿಮಾನ ಬೆಳೆದಿದೆಯಂತೆ. ದಾರಿಯಲ್ಲಿ ಕಂಡಾಗ ನಿಂತು ಮಾತಾಡಿಸಿ ಮುಂದೆ ಹೋಗುತ್ತಿದ್ದಾರೆ. ಅವರ ಆಸ್ಪತ್ರೆಚೀಟಿಯಂತೆ ಅವರ ಕೃತಿಗಳನ್ನು ನಾನು ನೋಡುವುದಿಲ್ಲವಾದರೂ, ನಾನು ಅವರ ವಿಷಯದಲ್ಲಿ ನಿಜವಾದ ಒಳ–ಅಭಿಮಾನವುಳ್ಳವನೇ: ನೀವು ಬಲ್ಲ ವಿಷಯ ಇದು.

ಈ ಕಾಗದ ಗ್ರಂಥವಾಗುವ ಹೊತ್ತಿಗೆ ಸೌಭಾಗ್ಯವತಿಯೂ ನಿದ್ರಾಧೀನಳಾಗಿದ್ದಾಳೆ. ತುಂಗಭದ್ರೆಗೂ ತುಂಬು ನಿದ್ದೆ. ನಿಮಗೂ ನಿಮ್ಮ ಮನೆಯವರಿಗೂ ನಮ್ಮೆಲ್ಲರ ಹೃತ್ಪೂರ್ವಕ ವಂದನೆಗಳು. ತಪ್ಪಿದ್ದರೆ, ಕ್ಷಮಿಸಿ.

ಇಂತು ನಿಮ್ಮವ
ನರಸಿಂಹಸ್ವಾಮಿ

'ಉದಯರವಿ'

ವಾಣೀವಿಲಾಸಪುರಂ, ಮೈಸೂರು–೨

೫–೬–೬೮.

ಶ್ರೀಮಾನ್ ವಿ. ಸೀತಾರಾಮಯ್ಯನವರಿಗೆ, ನಮಸ್ಕಾರ!

ತಮ್ಮ ೧೭-೫-೬೮ರ ಅಭಿನಂದನೆಯ ಪತ್ರ ತಲುಪಿ ಮಹದಾನಂದವಾಯಿತು. ತಾವು ಮೊದಲಿನಿಂದಲೂ–ನನ್ನ ಪ್ರಥಮ ಕವನ ಸಂಗ್ರಹ 'ಕೊಳಲು' ಪ್ರಕಟವಾದಂದಿನಿಂದಲೂ–ನನ್ನ ಸಾಹಿತ್ಯಕ ಯಶಸ್ಸಿನಲ್ಲಿ ಹರ್ಷಿತರೂ ಆಸಕ್ತರೂ ಆಗುತ್ತಲೇ ಬಂದಿದ್ದೀರಿ!

ಆಗಾಗ ತಾವು ಇಂಗ್ಲಿಷಿನಲ್ಲಿ ಬರೆದ ಒಂದೆರಡು ಮೆಚ್ಚುಗೆಯ ಕಾಗದಗಳೂ ನನ್ನ ಸಂಗ್ರಹದಲ್ಲಿವೆ. ತಮ್ಮ ಅಭಿನಂದನೆಗಾಗಿ ನಾನು ಅತ್ಯಂತ ಕೃತಜ್ಞನಾಗಿದ್ದೇನೆ.

ನನಗೂ ಜೋಶಿಯವರಿಗೂ ಸಂಯುಕ್ತವಾಗಿ ಪುರಸ್ಕಾರ ಒದಗಿದುದು ನಿಜವಾಗಿಯೂ ದೈವೇಚ್ಛೆ ಎಂಬಂತಿದೆ. ನನ್ನ ರಾಮಾಯಣ ದರ್ಶನ ಕಾವ್ಯಮುಗಿದ ದಿನದಂದು, ನಾನು ಬೆಂಗಳೂರಿನಲ್ಲಿದ್ದಾಗ, ನಮ್ಮ ಮನೆಗೆ ಶ್ರೀ ಉಮಾಶಂಕರ ಜೋಶಿಯವರು ಆಗಮಿಸಿ, ರಾತ್ರಿ ೮ ಗಂಟೆಯಿಂದ ಅಪರಾತ್ರಿ ೧ ಗಂಟೆಯವರೆಗೂ ಶ್ರೀ ರಾಮಾಯಣ ದರ್ಶನದ ಅನೇಕ ಭಾಗಗಳನ್ನು ನನ್ನಿಂದ ಓದಿಸಿ ಕೇಳಿದ್ದರು! ೧೯೪೫ರಲ್ಲಿ ನಡೆದ ಆ ಘಟನೆ ೧೯೬೮ರಲ್ಲಿ ಎಷ್ಟು ಶಕುನಪೂರ್ವಕವಾಗಿ ತೋರುತ್ತದೆ?

ಇನ್ನು ಹಣದ ಮೊತ್ತ?! ನನ್ನ 'ಪ್ರೇಮಗಣಿತ' ಎಂಬ ಕವನ ತಾವು ನೋಡಿರಬಹುದು. 'ನಾ ಆರು ಕಾಸು; ನೀ ಮೂರು ಕಾಸು; ಕೂಡಿದರೆ ನಮ್ಮ–ರೂಪಾಯಿ ಕೋಟಿ!' ಎಂದು ಪ್ರಾರಂಭವಾಗುತ್ತದೆ. 'ಪ್ರೇಮಗಣಿತ'ದ ಪ್ರಕಾರ ನನ್ನ ಮಿತ್ರರಿಗೆ ಜ್ಞಾನಪೀಠದ ಪುರಸ್ಕಾರ ಬಂದುದರಿಂದ ಒಂದು ಲಕ್ಷ, ನನಗೂ ಬಂದುದರಿಂದ ಒಂದು ಲಕ್ಷ! ಹಾಗೆಯೇ ಜೋಶಿಯವರಿಗೂ. ಅಂದರೆ ೨+೨=೪ ಲಕ್ಷ ಬಂದಿದೆ! ಶ್ರೀಮತಿ ರಮಾ ಜೈನ್ ಅವರಿಗೆ ಅವರ ಒಂದು ಲಕ್ಷಕ್ಕೆ ಮೂರು ಲಕ್ಷ ಬಡ್ಡಿ ಸಂದಂತಾಗಿದೆ! ಹಂಚಿದಷ್ಟೂ ದ್ವಿಗುಣ!

ಏನಾದರಾಗಲಿ, ಕನ್ನಡಕ್ಕೆ ಬಂದ ಕೀರ್ತಿ ಕನ್ನಡಕ್ಕಾಗಿ ದುಡಿದ ನಿಮ್ಮೆಲ್ಲರಿಗೂ ಸೇರತಕ್ಕದ್ದು.

ತಮ್ಮೊಡನೆ ಪತ್ರವ್ಯವಹಾರ ಇಲ್ಲವಾದರೂ ನಾನು ತಮ್ಮ ಬದುಕಿನ ಚಲನವಲನಗಳನ್ನು ಮಿತ್ರರಿಂದಲೂ ಪತ್ರಿಕೆಗಳಿಂದಲೂ ತಿಳಿಯುತ್ತ ಇರುತ್ತೇನೆ.

ಮತ್ತೊಮ್ಮೆ ತಮಗೆ ಅನೇಕ ವಂದನೆಗಳು.

ತಾವೂ ತಮ್ಮವರೂ ಕ್ಷೇಮವೆಂದು ಹಾರೈಸುತ್ತೇನೆ. ನಾವೆಲ್ಲ ಶ್ರೀಗುರು ಕೃಪೆಯಿಂದ ಕ್ಷೇಮದಿಂದಿದ್ದೇವೆ.

ನಮಸ್ಕಾರ.

ತಮ್ಮ

ಕುವೆಂಪು

ಸಾಧನಕೆರೆ, ಧಾರವಾಢ,
೧೬–೧೨–೬೯.

ಪ್ರಿಯ ಮಿತ್ರರೇ,

ಹೃತ್ಪೂರ್ವಕ ವಂದನೆ.

ನಿಮ್ಮ ದಿನಚರಿಯೊಳಗಿನ ಕಾಲೇಜಿನ ದಿನಗಳ ವರ್ಣನೆ, ನೀವು ಇದ್ದ ಸುವರ್ಣ ಯುಗದ ಅದ್ಭುತ ರಮ್ಯತೆ ಹೃದ್ಯವಾಗಿದೆ. ಆ ದಿನಗಳ ಸ್ಮೃತಿ ಜೀವಂತಗೊಳಿಸಿದ್ದಕ್ಕಾಗಿ ಧನ್ಯವಾದಗಳು.

ನಿಮ್ಮ ಆಳವಾದ ಅಧ್ಯಯನ, ಮನನ, ರಸಿಕತೆ, ಪ್ರಚೇತಸ ಪ್ರಜ್ಞಾವಂತಿಕೆ ಇವನ್ನು ಕೆಲಮಟ್ಟಿಗಾದರೂ ಕಂಡು ಈ ದೈವೀಸಂಪತ್ತಿಗೆ ತಲೆಬಾಗುವ ಭಾಗ್ಯ ನನಗೆ ದೊರಕಿದೆ. ಇನ್ನೂ ಹೆಚ್ಚಿನ ಸಾಮ್ರಾಜ್ಯದ ಯೋಗ ನನ್ನಪಾಲಿಗೆ ಇಲ್ಲದ್ದಕ್ಕೆ ಆಗಾಗ ಮಿಡುಕು ನನಗೆ. ನಿಮ್ಮ ಬಗೆಗಿನ ವಿಶೇಷ ಸಂಚಿಕೆ ಓದಿ ಆ ಭಾವನೆ ಮರುಕಳಿಸಿ ಈ ಕಾಗದ ಬರೆಯುತ್ತಿದ್ದೇನೆ.

‘ಕಸ್ಮೈದೇವಾಯ’ – ಇದಕ್ಕೆ ‘ದೇವರ ಸಾವು’ ಎಂದು ನೀವು ಇಟ್ಟಿದ್ದ ಹೆಸರಿನ ಔಚಿತ್ಯ ವಿಶೇಷವಿತ್ತು. ನಿಮ್ಮೊಳಗಿನ ಮಾರ್ದವವು, ನಿಮ್ಮ ಬೌದ್ಧಿಕ ಪ್ರಜ್ಞೆಯ ತೇಜಸ್ಸನ್ನು : ಸಾರತತ್ವವನ್ನು ಚಾಂದ್ರಭೂಮಿಕೆಯ ಪ್ರಕಾಶವಾಗಿಸಿದ್ದು ಕಾಣುತ್ತಿದ್ದೇನೆ–ನಿಮ್ಮ ನೆನಹುಗಳನ್ನು ಓದುವಾಗಲೂ. ‘ನವ್ಯ’ ಧೀ–ರ ಪಂಥದ ಆದಿ ಕವನ ‘ದೇವರ ಸಾವು’ ಎಂದು ನನಗೆ ತೋರಿದೆ. ನೀವು ನನ್ನ ಹೃದಯ ಗೆದ್ದದ್ದು ಆ ಕವನದಿಂದ ಮೊದಲು, ನಿಮ್ಮ ಪರಿಚಯವಾಗುವ ಮೊದಲೇ! ‘ಮುಚ್ಚಿದ ಕಿಟಕಿ’ ಇದೀಗ ಓದಿ ಮೂಕನಾದೆ. ನಮ್ಮ ಸಂಸ್ಕೃತಿಯಲ್ಲಿ ‘ನಾಗ’ ದೈವತದ ಕೈವಾಡ ಎಷ್ಟಿದೆ ಎಂಬುದನ್ನು ಸಮೀಕ್ಷಿಸ ಹೊರಟು, ೬೦೦ ಪುಟದ ಕಗ್ಗ ಗದ್ಯ ಗೀಚಿದ್ದಾಯ್ತು. ಅದರ ಸಾರವನ್ನು ನೀವು ಒಂದು ಕವನರೂಪದಲ್ಲಿ ಸುಂದರವಾಗಿ ವ್ಯಕ್ತಪಡಿಸಿದ್ದಕ್ಕೆ ಅಸೂಯೆಪಟ್ಟುಕೊಳ್ಳುತ್ತಿದೆ, ನನ್ನ ಒಂದು ಮನಸ್ಸು. ‘ನ – ಚಿಕೇತ’ ಸಿದ್ಧಿ ಎಂದು ಹೆಸರಿಟ್ಟಿದ್ದರೆ ಇದರ ಔಚಿತ್ಯ ವಿಶೇಷವಿತ್ತು. ನಾವು ‘ಅಗ್ನಿ’ (?) ಪೂಜಕರು – ಆದರೆ ಇದು ಸಲಿಲ: ಜಲಸ್ಥ ಅಗ್ನಿ! (ಇದ್ದಿಲು ?) ಈ ಅಗ್ನಿಗೇ ‘ನಚಿಕೇತ’ ಎಂದಿದ್ದಾನೆ ಋಗ್ವೇದದ ಕವಿ! (X. ೫೧) ಎಲ್ಲವೂ ಸರಿ (ನಿಜ): ಎಲ್ಲರೂ ನಿಜ= ಈ Circular ವಿಚಾರ ಪದ್ಧತಿಯು ಭಾರತೀಯ ಪ್ರತಿಭೆಗೆ, ಬುದ್ಧಿವಂತಿಕೆಗೆ ವೇದಕಾಲದಿಂದ ಅಂಟಿರುವ ರೋಗ. ನಿಜವೆ ?

ನಮಸ್ಕಾರ.

ನಿಮ್ಮ–‘ಶಂ’

* * *

KING'S COLLEGE,
CAMBRIDGE.
January, 19, 1939

Dear Sir,

Thank you for your letter and your revised version. I return the latter, since you will appreciate that this is not very suitable for the Economic Journal. Possibly you will work out something on similar lines for use in India. I sympathise with you in favouring more capital development in India, but how far a revaluation would help that I am not so sure. Revaluation is a purely paper proceeding, and the advantage to be derived psychological. It is something to keep in hand for the moment when popular sentiment requires a distinct stimulus.

In regard to your second paragraph, I may point out that the British Treasury do not value the Exchange Equalisation Fund at market rates. Their returns are in terms of ounces of gold. The market rate valuation is merely supplied by the press.

Yours faithfully,
J. M. KEYNES.

FINANCE MINISTER,
INDIA.
New Delhi, July 22, 1955.
No. 2227-PSF/55,

Dear Shri Sitaramiah,

Thank you for your letter of the 18th July 1955 suggesting a revaluation of the gold now held in the Reserve Bank of India.

2. It is quite correct that the price at which the gold is valued under the Reserve Bank of India Act is artificially low. Its value in the accounts can, of course, be increased by revaluing it at the official international price of gold which is $ 35 per oz.

3. Mere accounting adjustments of this kind cannot, however, create wealth. As you rightly point out, the revaluation would enable the Government of India to retire the *ad hoc* treasury bills now in the possession of the Reserve Bank to an equivalent amount. But it would not make any difference either to the country or to the Government if the notes it was issuing to finance the deficits in its budgets were issued against the credit obtained by revaluing gold rather than by creating *ad hoc* treasury bills.

4. It is true that if our foreign exchange reserves were so low that they and the gold taken together could not support the notes in circulation under the present currency reserves requirements, a revaluation of the gold would help to enable Government to increase the note issue. But that situation, as you will appreciate, is far from having been reached.

Yours sincerely,
C. D. DESHMUKH.

* * *

K. K. NAIR

Press Information Bureau,
122, Mount Road, Madras-6.
February 2, 1956.

My dear Prof. Sitaramiah,

Thanks very much for the article. I am patting myself on the back for my good sense in having approached you. This is a really good contribution.

2. I was glad to see passing references to Maritain and Mallarme, my old favourites. However, I do not know what to think about your approximation of the concept of the Sahrdaya with empathy, which I thought dealt with the physiology of certain kinds of perception, involving incipient visceral mimicry, rather than the funded treasure of one's culture, which brings in wealth to appreciation. But this is a case of my opinion being against that of a far higher authority and I am leaving it alone.

3. I am doing my best to make my material intelligible to the average person who is interested in art, both in India and the West. (We have got a small readership in Europe and America). Therefore, I feel that certain of the technical terms you use will need a slight elaboration for our readers. Could you please give me a three or four line definition of each of the following terms? I will incorporate them into the text :

i. Dhvani, as conceived by Ananda Vardhana,
ii. Rasapratiti, iii. Dhvani Sakti, iv. Rasa Dhvani,
v. Tatparya Sakti, vi. Anumiti, vii. Vakrokti,
viii. Aucitya, ix. Sausabdya.

4. On page 14 you use the term 'Arthagabhirata'. Is it 'gabhirata' or 'gambhirata'? I would not know in any case. That is why I am checking up.

5. On page 14 you have a Sanskrit quotation from Bhamaha. What would be the English transliteration?

6. Writing for ordinary mortals, I have developed a horror for diacritical marks and spelling. So, I hope you will not have a fit when you see words like 'carvana' spelt as 'charvana'. You must excuse this weakness. I nearly lost my reason when I came across Nilakanta Sastry's History of the Colas. For a moment I thought he was talking about Coco-Cola, the symbol of American culture.

7. I note that in your letter you have thrown out a delicate feeler tempting me to say : "Enough unto the day....". But I am afraid I am going to ignore the bait. Please work on the second article on Natya Sastra. You will have about 4 to 5 months.

8. I am afraid the series can't stop with the second article even. You must do a third article, the cue for which will be your own last paragraph, filling in the outlines of the intuitions and dim perceptions of the old writers and linking up and expanding their latent insights in the light of European aesthetics. That will be mostly your contribution rather than

a narrative of old theories. I look forward to reading it. But we have plenty of time.

9. Apart from poetics, do you think you would be able to work on similar material on the other arts? There are texts on architecture (like Manasara, Silparatna etc.), painting and sculpture (like Vishnu Dharmottara). If you have not been dabbling in these, could you please recommend somebody whom I can approach?

With best wishes,

Yours sincerely,
K. K. Nair.

SAHITYA AKADEMI
Rabindra Bhavan, Ferozeshah Road, New Delhi.
SA.80B/806 20 May 1963

Dear Friend,

I have been invited to contribute a paper on "Criteria of Contemporary Literary Criticism in India" at a Symposium to be held at the New York University under the auspices of the International Federation of Modern Languages and Literature. So far as Kannada language and literature are concerned, I should like to be guided by your advice and should be grateful if you could kindly let me have a short note (of about two or three hundred words only) on the contemporary criteria of literary criticism in your language, with reference to poetry, drama, fiction and other literary prose. Although these criteria (which have considerably changed and are changing under the impact of western values) are more or less common to all our modern Indian literaturers, I should nevertheless like to have the benefit of your wide reading and critical acumen as to the specific qualities of such criteria in the field of contemporary literary criticism in your language.

I hope you will kindly do me this favour. As the paper has to be submitted in the first week of June, I should greatly appreciate if you could let me have your Note as early as possible.

With kind regards,

Yours sincerely,
K. R. KRIPALANI
Secretary.

* * *

CALCUTTA
16-7-1922

My dear Sitaramiah,

I got your two letters. I trust you are continuing in the Currency Office as you wrote to me in your last letter. I hope you find it satisfactory.

Mr. Subba Rao's testimonial will be of great value since it is an Economics vacancy. I have written to Prof. Seshadri though I cannot say what chances you have or what influence he has in the matter of this appointment.

Anyway, do not be in a hurry to chuck off the Bombay job. It is so hard to get decent Govt. posts nowadays and when one has it, one has to be particularly careful in giving it up. If I hear from Seshadri, I will write to you.

Yours,
S. Radhakrishnan.

MYSORE
20-7-32

Dear Mr. Sitaramaiya,

I write to thank you for the copy of 'Agraha' which you so kindly sent some days ago. I have read it with very great interest. You have dramatised a momentous situation in the Mahabharata, and the piece is to be valued particularly for the spiritual lesson it conveys.

Yours sincerely,
M. Hiriyanna.

BANGALORE
16-12-1925

My dear Sitaramiah,

I read the recent issue of the Karnataka. What a splendid review you have written! My warmest congratulations to you.

How strange and sad that "razors are used to cut wood" in this poor country of ours. One talented person is entrusted with the great work of packing books and keeping accounts; another is to correct note books or coach up students for examinations; so on and so forth.

I have blind, dumb faith in Good and in Goodness. The Creator knows best what use to make of his Creations. But, but, what of men in power in this country? I tell you, Sitaramiah, they have Defective Vision, if they have Vision at all, and they are to mould the future of this country!

But who am I to complain? Myself a weakling and a slave, what right or reason have I to complain of others, big or small? He knows what is to happen. He is, after all, the ಪ್ರೇರಕ. May His will be done!

Yours–
T. S. Venkannaiya.

THE KARNATAKA & INDIAN REVIEW OF REVIEWS.

D. V. Gundappa Nov. 12, 1297.

My dear Sitaramaiya,

I have just finished reading your Pampa Yatre. The feeling uppermost is one of wonder–that you should have noted all so minutely and remembered so vividly. I didn't think at the time that the sights had made such a profound stir in you. You looked so little disturbed. I am a loud beast and you can see and hear the ferment working in me. Not so you–nor T. S. V. You are strong silent men!

And what a regard–nay, reverence, and affection have you brought into your delineations of friends. I am nearly ashamed of receiving the tribute you pay me; it is so much more than I can consider my due and digest. Don't protest, please.

Your descriptions are most admirable. I had no idea at first that you had put such superb prose into what you described to me as playful stuff meant for light reading. No. It is really exquisite writing fit only for careful reading, – if all its beauty should be felt, of course. You have no doubt begun to talk in a light vein, but your throat develops and swells as you proceed. Good ! Really Good !!

I have distributed copies among friends here. I want you to send a copy to N. N. Iengar Esq., B. A. etc. Electrical Engineer (from Mysore), Panjab D. P. W. Hydro Ele. Branch., 32, Jail Road, Lahore (Panjab).

Love to A. R. K. and also welcome to Bangalore.

Affectionately yours,
D. V. Gundappa,

MYSORE
27-3-'34.

Dear Mr. Sitaramiah,

Your P. C. of the 26th inst. But I am afraid whether I can promise to play, within such a short interval of two days, on the new Veena which I am not seriously in touch with all these days, though I am glad to hear that the few people you desire to bring with you are decent and well behaved fellows. Will it not do if I play on it sometime after I return from the Hill Station where I propose to take the Veena to put on a *serious practice* till the middle of June next, when, I hope, it would be worth while to play on and hear it. Don't you think so ? I hope you are quite well.

Yours sincerely,
K. Venkatappa.

BANGALORE.
11th Nov. '27.

Dear Mr. Sitaramaiya,

I have received the copy of Pampa Yatre which you have so kindly sent me. It is an excellent little book–just such an one as your friends would expect from you. A friend was complaining a few days ago of the beginning of the page as too light for such a heart breaking ruin's description. But that is lightness that brings in more vivid contrast later the sense of pain and loss–the sorrow and humiliation of a defeat beyond words. The descriptions at the end are beautiful. You have added to our literature.

With kindest regards,

Yours sincerely,
M. Venkatesa Iyengar.

A. R. KRISHNA SASTRI, M. A. — Maharaja's College
Professor of Kannada. — Mysore, 3-8-40

My dear Sitaramiah,

Thank you for your book Karnataka Kadambari. It is a poet that is writing on a poet, and therefore the work is sweet though short, beautiful though brief; my congratulations on the same.

Could you kindly hurry up your review of the Kannada book for P. K.?

Thanking you,

Yours Sincerely,
A. R. Krishna Sastri.

M. R. SRINIVASA MURTY 19, IV Main Road,
Chamarajpet, Bangalore City.
3-12-49.

My dear Sitaramaiya,

Your kind card dated the 5th to hand. Thanks very much. It is needless to say that you are very happy over my election as the President of the Sholapur Sammelanam. You might as well ask Mrs. Murty if she is not happy. That my intimates like yourself, Sastry and D. V. G. will feel very happy is a known thing.

Your criticism about the delay etc. – I do not agree. In fact I was not an aspirant for that honour. I am a quiet worker. Now it all seems to be the work of Allama and Siddha Rama. Both of them have conspired together, have arranged for this Sammelanam at Sholapur(ಸೊನ್ನಲಾಪುರ)and ಮೂರ್ತಿಯನ್ನು ಮೆರೆಸಬೇಕೆಂದು ಸಂಕಲ್ಪಿಸಿದ್ದಾರೆ! How does it appear to you?

To take you into my confidence: My countrymen would have been very glad if Sri K. V. Puttappa had become the President of the Sammelanam.

All well. Trusting you are quite well. Sri D. V. G. was kind enough to go over to my house this morning.

Yours affectionately,
M. R. Srinivasamurty.

Manjeshwar
January 19. (?)

My dear Mr. Sitaramiah,

The copy of your 'ದೀಪಗಳು' so kindly sent by you reached here on the 15th inst. Many thanks.

The poems are all beautiful, all excellent, and I congratulate you. I am particularly fascinated by ವಿಶ್ವಾಸ, ಪ್ರಾರ್ಥನೆ, ಮೃಗಶಾಲೆಯ ಸಿಂಹಗಳು (which, I feel, is an allegory or a metaphor), ಅಭೀಃ (the finest in the collection, and one of the finest in modern Kannada poetry) and ಮಹಾತ್ಮ (which reminds me of

Wordsworth's 'Happy Warrior'); and the next come after these in my estimation. I appreciate the self confidence which is conspicuous in every poem. In ಅಭೀಃ however, I seem to perceive a peculiar vertical flight as of a dove, which knows that it has the strength and determination of an eagle in its wings. It looks as if you would seek for what is beyond the clouds and to fly parallel to the ground beneath. Soar, or I say, and never seek to please others by dipping beneath to lower levels. You have your poetical conscience that impels and strengthens you. Obey it–may God bless you !

Herewith enclosed please find a copy of my English translation of Theodor Korner's 'Gebet Wahreud der Schlacht' which was published in the 'Modern World' of Madras (June 1912). I could not send it on to you earlier, as the only copy of that number, which I have, had been somewhere mislaid. I found it out only a few days ago.

I am also sending you a copy of my Kanarese poem ತುತ್ತೂರಿ which I wrote some years ago, and which, however, saw the light of the day only in the last month, when it was published in the last month's issue of the ಸ್ವದೇಶಿ ಪ್ರಚಾರಕ of Mangalore. It was the Marathi poem 'Tuturi' of the Marathi poet ಕೇಶವಸುತ which inspired me to compose this poem. He was one of the best of the modern Marathi poets : he died some 30 years ago. If you can understand Marathi and want to read that poem, I shall, of course, send you my copy of his poem, on hearing from you.

My brother's best regards to you; and mine own to yourself, Mysore Krishna Sastri, Venkoba Rao and D. V. Gundappa.

Yours very sincerely,
M. Govinda Pai.

POONA : 13-5-38.

My dear 'Vee See'

Many thanks for your experienced advice re: wife-child-and-co. However, by the time your letter arrived, it was my turn to take to bed with fever. By long experience in that line, I could shake it off in a couple of days. So ends the jolly (!) vacation; for, from the 16th, on which date I am leaving for Dharwar, another string of events called (a le Bertrand Russell) routine work commences. In my bag are four books recommended by my economist friend—V. Sitaramayya. The one consolation is that there could be no proverbial dust on them.

I was sorry to hear that Gadag also cancelled its programme. Perhaps the Gadag set was not so eager to start with. That's how I read it. It is true that literary and cultural activities do not receive the same public enthusiasm and attention as do political and other 'mob' movements. Yes, sir, the word between the marks I have inserted deliberately. We need not be so touchy since nowhere in the world do literary and cultural activities claim public enthusiasm : It's not at all peculiar to Karnatak. There is one thing I would like to mention. We, of the Parishat, know not the art of advertising. We have no set of wandering Vaccums called agitators. We have not invented our own martyrs and self-sacrificers. Whether all this could be done in keeping with decency is more than I can say at *this* moment. But something of that sort of stuff has to be done–is what you and I have to recognise. It was with such an intention that I mentioned in my personal talk with Prof. B. M. S. that the Parishat has to be *constitutionally* democratised. Haven't we done enough by way of licking the boots of princes and the pampered ? How many lakhs (of words of sympathy at least) have we collected in return ? How many years have we wasted in concentrating on the handful 'above' to the neglect of the needy but enthusiastic millions ? Am I raving ?

In writing the above, I have in my mind the new literature and the young writers that Karnatak has to show. Compare them with those in any modern Indian Vernacular—and you

shall see that ours stand out any time superior and worth any amount of pride. And yet——? Where are we in the making of modern India? Why are we not made known to our own people, so that they can first be proud of us and then, through us, of our literary and cultural activities? If any Association were to work to bring about such a state of affairs it is, in my opinion, the Parishat and the Parishat alone. I don't know how or why it is not being done. I leave it to persons of greater experience till it is found that neither age nor experience is by itself a virtue in public work. If my policy is wrong, I will have to stick to it till the right one is pointed out to me as achieving that very end. I am hoping that a time will soon be there when policies and not persons will sway our public life.

Sufficient unto the day for the devil in me. I wish I could have stayed longer at Bangalore so that we had talked and discussed rather than waste good money on postage. I still have a chance of going to Bangalore since our meeting has yet to take place. It may come off early next month by which time I hope you will have finished reading this letter.

My namaskaras to Prof. B. M. S. Sjts. Masti, A. N. Krishna Rao and other friends.

With the best of wishes.

Yours sincerely,
R. V. Jagirdar.

P. S: By the way, I have asked Mr. Burli to send you a copy of ತರುಣ ತುರ್ಕಸ್ತಾನ or ಕಮಾಲ ಪಾಶಾ by one ವಿಲಾಸಿ. That ವಿಲಾಸಿ happens to be myself (not for publication). May I have a review from you in one of the English Journals? And your private opinion for my private guidance?

UNIVERSITY OF MYSORE

K. V. PUTTAPPA, M. A.,
Professor of Kannada.

Maharaja's College,
Mysore, 15-10-1949.

Dear Sri Sitharamiah,

The ಮೃಚ್ಛಕಟಿಕ affair seems to end happily. The palace is willing to consent to the Karnataka Sangha publishing it. I hope within three or four days you may get the copies. I have requested Sri Raghavachar to write to all the Heads of Depts. of Kannada of the various Inter Colleges as soon as the book is ready. Thank God, the clouds have cleared !!

Your sweet 'ದ್ರಾಕ್ಷಿ-ದಾಳಿಂಬೆ' reached my hands yesterday noon. How nice is the get up of the Book !! Many thanks for the 'love-laden' gift. I am sure it is not 'a miserable dry leaf' as you have described it in your 'Critic's capacity' perhaps! It may be so only to *miserable dry soul!* Even my casual turning of the leaves of the book has revealed hidden fruits— 'ದ್ರಾಕ್ಷಿ-ದಾಳಿಂಬೆ' !! A poem like ದಾನಪಾತ್ರ sends me into my inner most home ! One wishes to whisper it to himself and let the thundering world go unheeded !!—and poorer for doing so !!! The very name ಕ್ರೋಧಕೇತನ startles the reader !! What a great sigh heaves in the breast of the poem ತಂದೆ ಹರಕೆ ?! I shall certainly go thro' all the poems as a loving ಸಹೃದಯ. Hope everything is well with you.

Yours sincerely,
K. V. Puttappa.

Willingdon College, (P. O.)
Dist. SATARA
14-4-41

My dear 'We See',

So you have released your letter yourself and set Hoysal on me with his—we go. He is a splendid discovery. And I am proud of him. You have your own quiet way of bringing friends together and joining them in holy wed-lock !

I liked your epistolary attacks on ನೀಳ್ಗವನ very much. I think you have hit the nail on the head by referring to my 'Open Calls of doom' and my 'Flood of sadness.' You have labelled me but, in fairness, I must be on the label. I must get over the mannerisms you note.

Pandhari is getting to be more mischievous than ever. Mugali is better,—with Mrs. Mugali steadily recovering her health. We play Tennis every morning.

As for the Publication of your poem, you must have stormed Bendre duly who, this moment, is in Bangalore. He was responsible for it.

So, you are the Editor ! Good. I shall prepare some heavy stuff for your digestion,—no, purveyance !

You can send the Ardhamagadhi book. I will get it reviewed.

Yours ever and with love
V. K. GOKAK

Karnataka University,
Dharwar: 22-2-1952.

Dear Sri Sitaramiah,

It was very kind of you to have sent me a copy of your review-article 'Samskrt and Prakrt Poetry'. I saw it a few weeks ago in the latest number of the JOR, Madras, but could not go through it. I was even thinking of writing to you for a copy of it !...... In the meanwhile, I paid a personal visit to Bangalore last week, but was unable to see you. On my return, I was pleasantly surprised to see that a reprint of the article was awaiting me here !

You have done a good service by exposing the hollowness and superficiality of the 'trika' system, and stressing the fundamental importance of Yati for understanding the structure of Classical Samskrt metres. I do wish, as you have observed, that our teacher Prof. B. M. S. had worked out

his penetrating ideas on Samskrt Prosody in a fuller form. I cannot also help wishing that he had written in English too on the subject.

I believe that the music of the Samskrt Aksara Vrttas too will, in the ultimate analysis, be found to depend to a large extent on 'Matraganas', though the rhythm here is subtler and more complicated. In fact the 'fossils' (or rather, the 'Yati-units', if we may call them so) and the matra-ganas (ranging from 2 to 8 in harmonious combinations), taking also into account Plutas and pauses, should enable us to explain satisfactorily almost all the significant aksaravrttas. It is a pity that Prof. Patwardhan in his Chandoracane contented himself with measuring all the Samskrt Vrttas with the Matragana foot-rule only, without giving the Yati-idea its proper value. By the bye, I don't find any reference to his work in the Jayadaman or in your article.

Lastly, I don't think that Velankar has caught the secret of our Amsa Ganas...Let me close here.

I shall see you when I go to Bangalore for the summer vacation.

Yours sincerely,
T. N. Srikantaiya.

* * *

H.V.V. IENGAR,
Asst. Collector,

Ganesh Mahal,
Camp: Via Godhra,
(B.B. & C.I. Rlys)
3-1-28

Dear Sitaramiah,

It was churlish of me not to have acknowledged receipt of your kindly gift all these weeks. I think, speaking entirely as a man of the street, that it is a fine book, the humour is excellent; and the description of the dream (the dream, by the way, is an obvious literary trick) first rate. Mysore, or rather the Kanarese country, is not known to take too much care of its artists, and the material benefits of having written this

book are probably, as the most charitable guess, Nil. But I hope you will keep up your fine work inspite of the blizzard around you.

The idea struck me that if only you were an Englishman and had done similar work in English, you would probably have had a flat in London and a country house—and a fat bank balance. But God in Heaven, this is courageous work, the work you are doing.

Yours sincerely,
Varada Raj.

* * *

Setu,
12, Sardar Patel Nagar,
Ahmedabad-6.
23-2-1961

My dear Sri Sitaramiahji,

What a piece of good fortune to have you here! I write to you to come and stay with us during your stay in Ahmedabad. Please do not be in a hurry to go back. We will arrange a meeting of the Lekhaka-Milan, at which you will see some writers. I will invite some at my place also. Kindly do us the favour of being our guest.

With love and respect.

Yours sincerely,
Umashankar Joshi.

GULABDAS BROKER

26, Ghodbunder Road,
Vile Parle (West),
Bombay-24
2nd July 1953.

My dear Prof. Sitaramiah,

Immediately on my return here I have written a letter to you. I hope you have received it.

I had talked about your interest in Prosody to Dr. Harivallabh Bhayani and Prof. Ramnarayan V. Pathak. Bhayaniji

was telling me that he was very favourably impressed with your review of Jayadaman and that he had written to you directly. He told me also that he had sent a copy of his Sandesha Rasak to you. I hope you have received it.

Prof. Pathak also was similarly impressed and he has expressed a desire to meet you personally and discuss with you metres in vogue in the South, when you are next in Bombay. He has also sent me an outprint of his article on Dohas which appeared in the Baroda University magazine. I am sending that on to you. I hope you will feel interested.

I have been looking out for a copy of Prakrt Pingala for you. If it is available I shall buy one for you. I remember you have asked me to buy it at any price.

I remember with deep love and warm affection the happy time I have spent in your company at Bangalore.

Please convey my deep regards to Shri Subramanya Sastriji, Shri Rajaratnam and Prof. Murthy Rao. I hope all the other friends there are happy.

When are you coming over to this side?

Yours sincerely,
Gulabdas Broker

G. SANKARA KURUP

Bhadralayam, Monastry Road,
Ernakulam : 26-1-66.

My dear Shri Seetaramiah,

Regret I fail to respond to your loving letter earlier. I was laid up with Bronchitis. Shri N. V. Krishna Warrier, our common friend, gave me a detailed description of all that happened at Delhi. I am happy you have presented Kannada's claim well. It is natural. But I knew that you received the news with great joy. I do not know, my esteemed friend, how to express my heartfelt thanks for your warm felicitations.

Will you kindly contribute an article on our great poet and philosopher Shri Gundappa for my little magazine 'Thilakam'. I shall make arrangements to get it translated into Malayalam.

With warm regards,

Yours sincerely,
G. Sankara Kurup.

BHARATIYA JNANAPITH

III/L.A.C./Kar/1483 9, Alipore Park Place,
Calcutta-27

Dear Shri Sitaramiah,

I returned from Delhi only now after the Selection Board meeting, but I am sure the happy tidings of RAMAYANA DARSHANAM and its poet Dr. K. V. Puttappa receiving their due honour reached you duly. The news was broadcast by the All India Radio within an hour of the Board's decision and was reported in papers next morning.

The decision of the Board was unanimous, and I hope all have felt happy at it even as we have. How has it been received there generally, and by those whose opinion matters? A word from you appraising us of reactions there would oblige.

I must, however, hasten to offer hearty congratulations to you for recommending the work for this national honour. Our sincere thanks are also due to you for the cooperation you have always extended to us as a member of the Kannada Language Advisory Committee.

With best regards,

Yours sincerely,
L. C. JAIN.

# ಅಭಿನಂದನ

ಈ ಸಂಭಾವನಾ ಸಂಹಿತೆಯನ್ನು ಶ್ರೀ ವಿ. ಸೀತಾರಾಮಯ್ಯನವರಿಗೆ ಸಮರ್ಪಿಸುವ ಸಂಪಾದಕ ಮಹಾಶಯರ ಗುಣಗ್ರಹಣ ನಿಪುಣತೆಯೂ ಉದಾರ ಹೃದಯವೂ ಬಹಳ ಹೃದಯಂಗಮವಾದವು. ಅವರಿಗೆ ನನ್ನ ಹಾರ್ದವಾದ ಅಭಿನಂದನಗಳು. ಸಂಭಾವಕರಿಗೆ ಶ್ರೀ ವಿ. ಸೀ. ಯವರಂಥಾ ಸತ್ಪಾತ್ರ ಲಭಿಸುವುದೂ ಸಾಮಾನ್ಯ ವಿಷಯವಲ್ಲ.

ಅವರ ವ್ಯಾಸಂಗ ವಿಶ್ರಾಂತಿಯಿಲ್ಲದ್ದು. ಪಾಂಡಿತ್ಯ ಬಹುಮುಖವಾಗಿ ವಿಶಾಲಗಂಭೀರವಾದದ್ದು. ವಿಷಯನಿಷ್ಠೆಯಿಂದ ವಿವಿಧವಾಗಿ ಸ್ವಾರ್ಥಗಂಧರಹಿತವಾದದ್ದು. ಕಥೆ, ಕಾವ್ಯ, ನಾಟಕ, ಕಲೆ, ಅಲಂಕಾರ, ಛಂದಸ್ಸು, ತತ್ತ್ವಶಾಸ್ತ್ರ, ಅರ್ಥಶಾಸ್ತ್ರ, ಸಂಖ್ಯಾಶಾಸ್ತ್ರ, ದಂಡನೀತಿ, ಚರಿತ್ರೆ ಮುಂತಾದ ಹಲವು ಮಾರ್ಗಗಳಲ್ಲಿ ಅವರ ಪ್ರತಿಭೆ, ಪ್ರಾಚೀನ ಪ್ರತೀಚೀನ ಎಂಬ ಭೇದವಿಲ್ಲದೆ, ಬೇಜಾರು ಪಡದೆ ನಡೆದಿದೆ; ನಡೆಯುತ್ತಿದೆ. ವಿಮರ್ಶೆಯ ಶಕ್ತಿಯಿಂದ ಹರಿತವಾದ ರಚನೆಗಳಾಗಿ ಪರಿಣಮಿಸಿದೆ. ಸ್ವದೇಶ-ಪರದೇಶಗಳ, ಸ್ವಭಾಷೆ-ಪರಭಾಷೆಗಳ ಉದಾತ್ತ ರಚನೆಗಳ ಪ್ರಭಾವ ಪರಿಮಳ ತುಂಬಿ ತುಳುಕುವ ವಿಶಿಷ್ಟ ವ್ಯಕ್ತಿ ವಿ. ಸೀ. ಸಣ್ಣ ದೊಡ್ಡ ಎಂಬ ವಿವಕ್ಷೆಯಿಲ್ಲದ ಇವರ ಸ್ನೇಹ ಸ್ವಂತ ಯೋಗಕ್ಷೇಮಗಳಿಗೇ ಧಕ್ಕೆ ತರುವಷ್ಟು ತೀವ್ರವಾದದ್ದು. ಅದೊಂದು ಲೋಪವೆಂದರೂ ತಡೆಯುತ್ತೆ.

ನಮ್ಮಿಬ್ಬರ ಸ್ನೇಹ ಬಹಳ ಹಳೆಯದು. ಸುಮಾರು ಅರ್ಧ ಶತಮಾನಕ್ಕೆ ಮಿಗಿಲಾದದ್ದು. ನನ್ನಲ್ಲಿ ಅವರಿಗಿರುವ ಆರ್ದ್ರ ಹೃದಯ ನನ್ನ ಜೀವನದಲ್ಲಿ ಎಷ್ಟೋ ಮಧುರವಾದ ವಿಷಯ.

ಶ್ರೀ ಸೀತಾರಾಮಯ್ಯನವರಿಗೆ ಶ್ರೀ ಶ್ರೀನಿವಾಸರು ಎಲ್ಲಾ ವಿಧವಾದ ಯೋಗಕ್ಷೇಮಗಳನ್ನು ಕರುಣಿಸಲಿ; ಸಕುಟುಂಬವಾಗಿ ರಕ್ಷಿಸಲಿ!

ರಾ. ಅನಂತಕೃಷ್ಣಶರ್ಮ

## ಸೀತಣ್ಣ

ಮೌನ ಮಾತಿಗೂ ಮಿಗಿಲು ; ಕಲ್ಲಿನಲಿ ಆತ್ಮವಿದೆ :
ಇದ ನೀವು ಬಲ್ಲಿರಾ ? ಇಲ್ಲ ? ಬನ್ನಿರಿ ಇಲ್ಲಿ ;
ಸೀತಣ್ಣನನು ನೋಡಿ : ಈ ಹದನ ಗ್ರಹಿಸುವಿರಿ.
ಕವಿ, ಬರೆದ ಬರಹ ತಕ್ಕಪ್ಪಿಹುದು ; ಕೆಲವು ಕೃತಿ
ಜನಮೆಚ್ಚಿ ನಾಡಿನಲಿ ನಾಣ್ಯವಾಗಿವೆ ಕೆಲವು.
ಅಂತೆ ಚೆಲುವಾದ ಬಲತರುವ ಕೃತಿ ಬೇರೆಯುವು
ಹಲವಿಹವು : ಮುಂದಿ ಇವುಗಳ ಹೆಸರ ಕಾಣರು.
ಸೀತಣ್ಣ ಎಂದೆ ಆಗಲಿ ತಮ್ಮ ಕಾವ್ಯವನು
ಸಭೆಗಳೆದುರಲಿ ಓದುವವರಲ್ಲ. ಎಂತಿರಲಿ
ತಾವಾಗಿ ತಾನು ಇಂತಹ ಪದ್ಯ ಬರೆದಿಹೆನು
ಎಂದು ಹೇಳುವರಲ್ಲ. ಇಂತಾಗಿ ಇವರ ಕೃತಿ
ಜನಕೆ ಎಸಗಲು ಬಲ್ಲ ಒಳ್ಳಿತನು ಎಸಗಿಲ್ಲ.
ಲೋಕ ಸಾಹಿತ್ಯದ ಸುಗಾಢ ಪರಿಚಯದಿಂದ
ಇವರ ರುಚಿ ತುಂಬ ಹಸನಾಗಿ ಹದವಾಗಿಹುದು.
ಬಾಳು ಇವರನು ತೀರ ಕಷ್ಟದಲಿ ನಾದಿಹುದು.
ಜನರಾದರೂ ಇವರಿಗನ್ಯಾಯ ಮಾಡಿಹರು.
ಏನೆ ಆದರು ಬಾಯ ತೆರೆಯದಿಹ ಇವರ ಪರಿ
ಹಿರಿಯ ತಾಣಗಳ ಜನರಿಗೆ ಹೆಮ್ಮೆಯೆಂಬಂದ
ಕಾಣುವುದು. ಸಮಯ ಬಂದಾಗ ಅಂತಪ್ಪ ಜನ
ಇವರಿಗೆ ವಿರೋಧವನು ಮಾಡುವರು. ಅವರೇನು ?
ಹತ್ತಿರದ ಜನ ಕೂಡ ಇಂಥ ಗಾಂಭೀರ್ಯವನು
ಗಾಂಭೀರ್ಯವೆಂದು ತಿಳಿಯರು. ನಮ್ಮ ಕಂಡರೆ
ಇವರಿಗಕ್ಕರೆಯಿಲ್ಲವೆಂದೆ ನೆಂಟರ ತಿಳಿವು.
ಇದಕ್ಕೆಲ್ಲ ಇವರ ಉತ್ತರ ಮೌನ. ಷೇಕ್ಸ್‌ಪಿಯರ್
ತನ್ನೊಂದು ನಾಟಕದ ನಾಯಕಿಯ ವಿಷಯ She
Sat like Patience on a monument smiling at
Grief ಎಂದು ಬಣ್ಣಿಸಿರುವನು. ನಮ್ಮ ಸೀತಣ್ಣ
ಆ ನಾಯಕಿಯ ತೆರನ ಒಬ್ಬ ನಾಯಕ. ಬಾಳು
ಕಷ್ಟವನು ತರುವುದೇ, ತರಲಿ, ಆಯಿತು ಏನು ?

ಸಹಿಸಿದರೆ ಮುಗಿಯಿತು. ಸಹಿಸುವುದು ಸಾಧ್ಯವೇ ?
ನೋಡುವ ; ನಮ್ಮಿಂದ ಆದಷ್ಟು ಸಹಿಸುವ.
ಇದು ಇವರ ರೀತಿ. ಎಂದಾದರೂ ಈ ಮಾತ
ನನಗೆ ತಿಳಿಸಿರುವರೆಂದಲ್ಲ ; ಈ ತಿಳಿಸುವುದು
ಇವರ ಪದ್ಧತಿಯಲ್ಲ; ನನಗಿಂತು ತೋರಿಹುದು.
ಇವರ ಈ ಜಿನಮನೋಧರ್ಮ ಹೆನ್ಲೀ ಕವಿಯು
ಅಪರಾಜಿತನ ಆತ್ಮಗೀತದಲ್ಲಿ ಬಹುಚೆನ್ನ
ವರ್ಣನೆಯು ಪಡೆದಿಹುದು. ಇಂಥ ವಜ್ರಕಠೋರ
ದಾರ್ಢ್ಯದಿಂದಿವರು ಜೀವನ ಪಥವ ನಡೆವರೂ
ಕಷ್ಟದಲಿ ಸಿಲುಕಿರುವ ಇತರ ಜೀವವ ಕಂಡು
ಹೂವಂತೆ ಬಾಡುವರು, ಬೆಣ್ಣೆಯೆನೆ ಕರಗುವರು.
ದೇವರನು ಕರೆದು ಯಾವುದೆ ನೋವ ಭಾರವನು
ಅವನ ಹೆಗಲಲಿ ಹೇರುವುದು ಇವರಿಗೊಪ್ಪದು.
ಈ ಮನೋಧರ್ಮ ಈ ಅನುಭವದ ಫಲವಾಗಿ
ಲೋಕ ಇವರಿಗೆ ಸುಖದ ನೆಲೆಯಲ್ಲ, ಚೇತನದ
ಶಿಕ್ಷಣ ಪರೀಕ್ಷಣದ ಗರಡಿಯೆಂಬಂತಿಹುದು.
ಅಂತೆ ಸೀತಣ್ಣ ಜಗದಿತಿಹಾಸದಲಿ ಬಹುಶಃ
ನೋವ ಸಂಗತಿಗಳನೆ ಆಯ್ದೆತ್ತಿ ಹಿಡಿದವರು.
ಅಲ್ಲೆಲ್ಲ ನೋವ ಮೂಡಿಸಿದ ಬೇರನು ಬಿಡಿಸಿ
ಅದರ ಪರಿಯೇನೆಂದು ತೋರುವರು. ಮೊತ್ತದಲಿ
ಬುದ್ಧಿ ಅನುಭವ ಯೋಚನೆಗಳ ವಿಸ್ತಾರದಲಿ
ಸೀತಣ್ಣ ನಮ್ಮ ನಾಡಿನ ಇಂದಿನತ್ಯಂತ
ಮೇಲ್ತರದ ಸಾಧಕರ ಪಂಕ್ತಿಯಲಿ ನಿಂತಿಹರು.

ಶ್ರೀನಿವಾಸ

## ಪಂಪಾಯಾತ್ರೆ ಮತ್ತು ವಿ. ಸೀ.

೧

ಜೀವಕ್ಕೆ ಕಳೆ ಕಡಮೆ ಇರುವದುಂಟು
ಭಾವಕ್ಕು ಹುಸಿಬಣ್ಣ ಬರುವದುಂಟು.
ಜೀವಭಾವಕ್ಕೊಂದು ಸಾಂಗತ್ಯವಿಲ್ಲದಿರೆ
ಅಪಸರದ ಮಾಲೆಯನು ತರುವದುಂಟು.
ಹೀಗಿಹುದ ನೋಡಿಹೆನು—ಎಂದ ಮೇಲೆ,
"ಹಾಳಿಗೂ ಬಾಳುಂಟೇ ?"
ಉಂಟು, ಉಂಟು !

೨

ನಾಲಗೆಗೆ ನಿಲುಕದಾ ನುಡಿಗಳುಂಟು
ನುಡಿಗಳಿಗು ನಿಲುಕದಾ ಭಾವವುಂಟು.
ಭಾವಗಳ ಬೀಸುಬಲೆಯಲ್ಲಿ ದೊರೆಯದೆ ನುಸುಳಿ
ದಾಟಿರುವ ನೈಜ ಬೇರೊಂದು ಉಂಟು
ಹೀಗೆಂದು ಕೇಳಿದೆನು—ಎಂದ ಮೇಲೆ
"ಮೌನಕ್ಕೆ ಮಾತುಂಟೆ ?"
ಉಂಟು, ಉಂಟು !

ಅಂಬಿಕಾತನಯದತ್ತ

* * *

## ರೂಪಾರಾಧಕ

೧

ಪೆನ್ನಿನಲ್ಲಿ ಮಸಿ ತುಂಬುವ
ಗಾಜುಗೊಳವೆಯಿಂದ ನೀನು
ಕಾಫಿಯಲ್ಲಿ ಹಾಲನು ಹನಿಬಿಡುವಿಯೆಂದರು.
ಹನಿಯು ಹೆಚ್ಚು ಹನಿಯು ಕಡಿಮೆ
ಯಿರಲು ಪೇಯ ಹೇಯವೆಂದು
ತುಟಿಗೆ ತಾರದದನು ಬಿಟ್ಟುಕೊಡುವಿಯೆಂದರು.

ನಿನ್ನ ಚೆಲುವ ಕವನಗಳನು
ಅಂದವಾಗಿ ಮುದ್ರಿಸಿಡಲು
ಹೊತ್ತು ಸಾಲಕೆಲ್ಲ ದುಡಿಮೆ ಸಾಲದೆಂದರು.
ಕಾವ್ಯರಂಗದಲ್ಲಿ ಕವಿಯು ;
ಅರೋಚಕಿಯು ಬಾಳಿನಲ್ಲಿ :
ಎಂದು ಕಂಡ ಹಾಗೆ ನಿನ್ನನಾಡಿಕೊಂಡರು.

ಕಾವ್ಯದಲ್ಲಿ ಬರಿಯ ರೂಪ
ನಿನ್ನ ಕಣ್ಣ ಸೆರೆಹಿಡಿಯಿತು ;
ತಿರುಳನಾಯ್ವ ರಸಿಕರನ್ನು ಜರಿವೆಯೆಂದರು.
ಡೊಂಕು ಗೆರೆಯು, ಸರಲ ರೇಖೆ,
ಕಣಿವೆದಾರಿಗಿರುವ ಮಣಿತ,—
ಶಬ್ದಸೃಷ್ಟಿಯಲ್ಲು ಇದರ ಪರಿವೆಯೆಂದರು.

ಕವನವೊಂದು ತಾಲ ರಾಗ ;
ಅಂಟಿತು ಸಂಗೀತರೋಗ :
ಸ್ವರದಿಂಚರ ಕಸುವ ಮಾರಿಕೊಂಡೆಯೆಂದರು.
ಮಾತುಗಾರನಾಗಿ ನಿಂತು
ಮಾತಿನೊಂದು ಸೂರು ಹಿಡಿದು
ನುಡಿಯು ಮೇಲೆ ನುಡಿಯು ತೂರಿಕೊಂಡೆಯೆಂದರು.

ಒಂದು ಮರದ ನೆಳಲಿನಲ್ಲಿ
ಬೆಳೆದು ನೀನು ಮರವಾಗದೆ
ಕಿರುತರುವಾಗಿರುವೆಯೆಂದು ಹಲವರೆಂದರು.
ತಾರತಮ್ಯ ವಿನಯವಾಗಿ
ಕೀಸರಿಡುವ ಸೀಮೆಯಲ್ಲಿ
ಉಸಿರು ಕಟ್ಟಿ ಗೆಲುವ ಕಳೆದುಕೊಂಡೆಯೆಂದರು.

೨

ಅಂದರಿದನು ಅಂದರದನು
ಏನಂದರದೇನು ನಿನಗೆ ?
ನೀನು ನೀನೆಯಾಗಿ ನಿಂತು ಬೆಳಕ ಬೀರುವೆ.
ಶ್ರುತಿಸುಂದರ ಕಾವ್ಯದಲ್ಲಿ
ವಾಗರ್ಥವ ತೇಲಿಸುತ್ತ
ಜೀವ ಕಂಡ ಸವಿಯ ಲೋಕಕೆಲ್ಲ ಸಾರುವೆ.

ನಿನ್ನ ಚೆಲುವಿನಾರಾಧನೆ–
ಯೊಂದು ಯೋಗವೊಂದು ಭೋಗ.
ಅದಕೆ ಪಟ್ಟ ಕಷ್ಟವೆಲ್ಲ ಸಫಲವೆನ್ನುವೆ.
ಸಣ್ಣ ಮಾತು ಸಣ್ಣ ರೀತಿ–
ಯಲ್ಲಿ ಮೂಡದಂಥ ಬಣ್ಣ
ಬಿಣ್ಪಸಲ್ಲಿ ಬರುವದೆಂತು ? ವಿಫಲವೆನ್ನುವೆ.

ಕಡಲ ತೀರದಲ್ಲಿ ಜೊತೆಯು
ರಸಿಕರಾಟವಾಡಿ ನೋಡು—
ತುರಿಬಿಸಿಲಲಿ ಮಳಲಿನಲ್ಲಿ ದಾಹಗೊಂಡಿರೆ,
ನೀರು ಕಾಳು ಸಿಗದೆ ಹೋಗಿ
ಹಸಿವೆ ಹೆಚ್ಚಿ ಹಿಂಗದಾಗಿ
ದಣಿವಾರಿಸೆ ನೆಳಲಿಲ್ಲದೆ ಮೋಹಗೊಂಡಿರೆ,

ಬಕ್ಕತಲೆಯಲಿಂತು ನೀನು
ಅರಳಿದೊಂದು ಕುಸುಮದೆದುರು
ನಿಂತು ಕ್ಷುಧೆ–ಪಿಪಾಸೆಗಳನು ಮರೆತು ನೋಡಿದೆ.
ನಿನ್ನ ಕಣ್ಣನದರ ಸಿರಿಗೆ
ನೆನೆಸುತದರ ಮಾದರಿಯನು,
ಹೂವಿನಲ್ಲಿ ಹೂವಾಗುತ ಬೆರೆತು ಕೂಡಿದೆ.

ಚೆಲುವಿನ ಮಾಲಕುಮಿಯಿವಳು
ವರ ಮಾನಸಪುತ್ರಿಯೆನಲು,—
ಎಲ್ಲಕಿಂತ ಬಗೆಯೆ ಮೇಲದೆಂದು ಸಾರಿದೆ.
ಬಗೆಯನು ನಡೆ–ನುಡಿಗಳಲ್ಲಿ
ದಿನಂದಿನದ ಬಾಳಿನಲ್ಲಿ
ಸಿಂಗರಿಸುವ ಜಾಣು ನಿನ್ನೊಳೊಂದೆ ಸೇರಿದೆ.

ಲೋಕದಾಚೆಗಿರುವದೇನೊ
ತಿಳಿಯೆ. ಲೋಕದಲ್ಲಿ ಸೊಬಗ
ಕಾಣ್ವ ಕಣ್ಣೆ ನಿನ್ನ ಜೀವವೆಂದು ನುಡಿದಿಹೆ.
ಲೋಕ ಸಟೆಯೊ ದಿಟವೊ ಕಾಣೆ.
ಜೀವಚಕ್ಷು ಸತ್ಯವೆಂಬ
ಶ್ರದ್ಧೆಯಿಂದ ಬಾಳಬಟ್ಟೆಯಲ್ಲಿ ನಡೆದಿಹೆ.

* * *

ರೂಪವೊಂದೆ ನಿನ್ನ ಕಣ್ಣು—
ಪ್ರೀತಿಯೆನಲು ನುಡಿವೆ ನೀನು,—
ರೂಪಣವೇ ಮುಖ್ಯ. ರೂಪವಿಲ್ಲದರ್ಥವು
ವ್ಯರ್ಥವಹುದು. ಕಲೆಯು ಸಾರ್ಥ–
ಕತೆಯು ರೂಪದೆಸಕದಲ್ಲಿ,
ರೂಪವೆ ಅಮರತೆಯು ದಾರಿ ; ಪರಮಾರ್ಥವು.

ಬೇಕು ಚಿತ್ರ–ಸಂಗೀತ–
ವೆನಲದೇಕೆ ವಿಪರೀತ?
ಚಿತ್ರಗಾನವಿರದ ಕೃತಿಯು ವಿಕೃತಿಯಲ್ಲವೆ ?
ಕಾವ್ಯಕಿರುವದೋಟ, ನೋಟ ;
ಗಾನದ ಜೊತೆಗರ್ಥದಾಟ :
ಗುಣತ್ರಯಗಳ ಮಿಲನವಿದರ ಪ್ರಕೃತಿಯಲ್ಲವೆ ?

ದೂರಿನಿಂದ ನುಣ್ದನಿಯದು
ಮೆಲುಗಾಳಿಯನೇರಿ ಬಂದು
ಮೆಲ್ಲನೆಮ್ಮ ಹೃದಯವನ್ನೆ ಸೆಳೆಯುವಂತೆಯೆ,
ಸಂಗೀತವನೇರಿ ಬಹುದು
ಕವಿಯು ಪಡೆವ ಸುಭಗ ಶ್ರುತಿಯು,—
ಅರುಣರಥವನೇರಿ ಸೂರ್ಯ ಹೊಳೆಯುವಂತೆಯೆ.

* * *

ಅರೋಚಕಿಯೆ ಬಾಳಿನಲ್ಲಿ ?
ರೋಚಕಿಯಿರಲಾವ ಪುಣ್ಯ ?
ಇದ್ದ ರುಚಿಯು ಶುಚಿಯನು ಕವಿ ಕಾಯಲೆಳಸಲು
ದೋಷವೆಲ್ಲಿ ? ಸಿದ್ಧನಿರಲು
ಸೌಂದರಾಭಿರುಚಿಯು ಕೇಳ್ದ
ಕ್ರಯವನಿತ್ತು, ಮನದಾಸೆಯ ಪೂರ್ತಿಗೊಳಿಸಲು ?

ತಿನ್ನಲು ಕೂಳಿರದ ದೇಶ ;
ಎಲ್ಲ ದುಃಖದಮರಕೋಶ–
ವೆಮ್ಮ ನಾಡದಿಲ್ಲೇತಕೆ ಚೆಲ್ವುಪಾಸನೆ ?
ನಾಡಿನ ಬರ ಹಿಂಗುವನಕ
ನಿರ್ಗತಿಕರು ತಂಗುವನಕ
ಸುಳಿಯದಿರಲಿ ನಮ್ಮ ಮನದೊಳಿಂಥ ವಾಸನೆ :

ಎಂದೊರೆಯುತ ಜನತೆಗಿತ್ತೆ
ನಾಡ ಸಂಪದಭ್ಯುದಯವ
ಕುರಿತು ನಿನ್ನ ಪಂಚಿಕೆಗಳ ಮಾಲೆಯೊಂದನು.
ಅರ್ಥಶಾಸ್ತ್ರವಿಶಾರದನು,—
ನಾಡನೊಡ್ಡಿ ಹಾಡನಡ್ಡ–
ಗಟ್ಟುವರಿಗೆ ತೆರೆಯುಬಲ್ಲೆ ಶಾಲೆಯೊಂದನು !

ಬಾಳ ಹುದುಲ ಬಲ್ಲೆ ನೀನು.
ಅಲ್ಲೆ ಬೆಳೆದ ಕೆಸರಿನಲ್ಲಿ
ಸೌಂದರ್ಯದ ಮಹಾಲಕ್ಷ್ಮಿ ನಿನ್ನ ಹೃದಯದಿ
ಪವಡಿಸಿರಲು ; ಹಾಡಿಗೊಂದು
ಕಂಣನಿತ್ತೆ ನಾಡಿಗೊಂದು ;
ಜನತೆಯಿದನು ತಿಳಿಯುಬಹುದು ನಾಡಿನುದಯದಿ.

ಒಂದು ಮರದ ನೆಳಲಿನಲ್ಲಿ
ಬೆಳೆದೆಯೆಂಬ ನುಡಿಗೆ ನಕ್ಕು
ಪರರನುಪಮೆಯಿಂದ ಕೊಲುವ ಬಗೆಯಿದೆನುತಿಹೆ.
ಮರವಲ್ಲವು ನರನು ; ತಾನೆ
ತನ್ನ ನೆಳಲು–ಬೆಳಕ ಕಾಂಬ.
ಹಿರಿಯರನಾದರಿಸಲೆಲ್ಲಿ ದೋಷವೆನುತಿಹೆ.

ತಾರತಮ್ಯದಾಗರವೆನ್ನೆ,—
ನೋಡು ನಾಡು ರಮ್ಯವಲ್ಲೆ ?
ಎಲ್ಲ ತರಗಳೆಲ್ಲ ನಯದ ಕಲೆಯದಿಲ್ಲಿದೆ :
ನುಡಿವೆ ನೀನು; ನೆಲದೈಸಿರಿ,
ಯಂತ್ರವಿದ್ಯೆ, ಕೈಗಾರಿಕೆ,—
ನಾಡ ನಿಧಿಯು ನೆಲೆಯೆ ನಮ್ಮ ಸೀಮೆಯಲ್ಲಿದೆ.

ಕಹಿನುಡಿಗಳನಿಂತು ನೀನು
ಪಡಿನುಡಿಯುತ ವಿನಯದಿಂದ
ದಾರಿತಪ್ಪಿ ಮೇರೆದಪ್ಪುತೊಂದು ಹೆಜ್ಜೆಯು
ತಪ್ಪಿತಸ್ಥನಂತೆ ತುಳಿದು
ಬಾಳಲಿಲ್ಲ ಬದುಕಲಿಲ್ಲ :
ಸಾರ್ಥಕತೆಯಿದಿಂತು ನೀನು ಪಡೆದ ಬಿಜ್ಜೆಯು.

೩

ಒಮ್ಮೆ ಮನೆಯ ತೋಟದಲ್ಲಿ
ತುಂಬು ಗುಲಾಬಿಗಳರಳುತ
ಗಮಗಮಿಸಲದೇಕೊ ನಿನ್ನ ಬಗೆಯು ಮುದುಡಿತು.
ಹೂವ ತುಂಬಿದಂಥ ತುಂಬು
ನಿನ್ನ ಬಾಳನೆಂದು ತುಂಬಿ
ಬರುವದೆಂಬ ಚಿಂತೆ ನಿನ್ನ ಬಗೆಯ ಕದಡಿತು.

ಊರಿಗೆದ್ದ ನನ್ನ ತಡೆದು
ತೋಟಕೊಯ್ದು ತಿಂಗಳಲ್ಲಿ
ಕಂಗಳರಳಲಂಗೈಗಳ ನಡುವೆ ತೀಡುತ
ಒಂದನು ಮತ್ತೊಂದನೆತ್ತಿ
ತೋರಿಸಿದ್ದೆ ಹೂವಿಗಿದ್ದ
ಪೂರಣ ನಿನಗಿಲ್ಲವೆಂಬ ಭಾವ ಮೂಡುತ.

ಗೆಳೆಯ ! ಕೇಳು ನಿನ್ನ ಕೊರತೆ
ದಿವ್ಯ ಕಾವ್ಯ ರಚನೆಯೊರತೆ
ಮಣ್ಣು ಮಾತ್ರ ಹೂವಿನಲ್ಲಿ ಕಣ್ಣುವಡೆಯಿತು.
ಮುಂದದೊಂದು ದಿನಕೆ ಪೂರ್ಣ-
ವಾಗಲಿರುವ ನಿನ್ನ ಜೀವ
ಕಂಡುತಿಹ ಕಾವ್ಯದಲ್ಲಿ ಬಣ್ಣವಡೆಯಿತು.

ನೀನು ಮೂಡಿಸಿದ್ದ ಮುಗುಳು
ನೀನು ಹಾಡಿಸಿದ್ದ ಬೆಳಗು
ನೆಲದ ಮೂಡು ಮುಳುಗಿನಂತೆ ಕೊನೆಗು ಬಾಳ್ವವು.
ನೀನು ಪಾದ ಪೂಜೆಗೆಯ್ದ
ನೇಹ, ನಲುಮೆ, ಭಕ್ತಿ, ಶ್ರದ್ಧೆ,
ನಿರ್ವಂಚಿತ ಬುದ್ಧಿ ನಾಡಿನೆದೆಯನಾಳ್ವವು.

ನಿನ್ನ ಧೀರ ಲಲಿತ ವಾಣಿ
ಬೀರ ಕಡಗವನ್ನು ನಾಡ
ಕೈಗೆ ತೊಡಿಸುತಭಯವೊರೆದು ನಿತ್ಯ ನಲಿವಳು ;
ದಿನಕದೊಂದು ಹೊಸ ಪ್ರಪಂಚ ;
ಇಂದಿನ ಸಿರಿ ನಾಳೆ ಸಂಚ-
ವೆಂದು ಚೆಲುವಿಗಿಹ ಚಿರಂತನತೆಯನುಲಿವಳು.

ಒಂದು ತರಂಗಿಣಿಯ ತಡಿಗೆ
ಮತ್ತದೊಂದು ಗುಡಿಯ ಬಳಿಗೆ
ನಿಂತ ಮಾಮರಗಳ ತೋಪಿನಲ್ಲಿ ಗಾಳಿಯು
ತಂಬೆಲರಿನ ಮೃದು ನಾದವ
ಪ್ರಲಯಾನಿಲದಾಮೋದವ
ಗೆಯ್ವ ತೆರದಿ ಗೀತಿಸುವುದು ಪವಗಳೋಳಿಯು.

ಬಾಳಿನ ಕಿಲ್ಬಿಷವೆಲ್ಲವ
ಕುರೂಪವನು ತೊಡೆದುಹಾಕು—
ತಂಗಾಂಗದ ಸೌಂದರವನು ಹೊರಸೂಸುವದೆಂದೋ
ಒಳಹೊರಗನು ಮೈಮನವನು
ಮನೆಮಠವನು ಚೇತನವನು
ಬೆಳಗಿಸಿ ಬೆಳಕಿನ ಹಾಸಿಗೆಯನು ಹಾಸುವದೆಂದೋ.

ಅಂದಿಗೆ ತುಂಬುತ ತುಳುಕುತ
ನಿನ್ನೀ ಜೀವದ ತುಂಬಿಯು
ಗೆಯ್ಯುವ ಗಾನವದಿಂದೇ ತುಂಬಿಹುದೀ ಕಿವಿಯು.
ಇಂದಿಗು ಕಣ್ಣೆವೆಯಿಕ್ಕದೆ
ಅನಿಮಿಷನಂತೆಯೆ ನಿಂತೆನು
ಆ ದಿನ ಕಾಣುವದೆನ್ನುತ ನಿನ್ನೊಳು ಬಹ ಕವಿಯು.

ಹೃತ್ತಲ್ಪದಿ ನಿದ್ರೆಯಲಿಹ
ಸೌಂದರಲಕ್ಷ್ಮಿಯು ನಿನ್ನೊಳ-
ಗಿಂದಿಳಿಯುತ ಕಣ್ಣೆದುರಿಗೆ ನಿಲ್ಲಲು ರಾಜಿಸಲು
ನೀ ನೋಡುವೆ ಮೊದ ಮೊದಲಿಗೆ
ಮದರಂಗಿಸಿದೆಳೆಯುಗುರನು,
ಕೆಂಬೆರಳನು, ಪದಪದ್ಮವ ; ದೇಹವ ಮಾಜಿಸಲು

ಚಿಕ್ಕೆಗಸೂತಿಯ ಸೀರೆಯು,
ಕಂಡೆತ್ತುವೆ ಮುಖಚಂದ್ರಮ-
ನನು ನೋಡುತ, ತಣಿದಿಹ ಜೀವವನರ್ಪಿಸಲೆಂದು ;
ಎತ್ತಲು ಮಾದೇವಿಯು ತ-
ನ್ನಭಯ ಕರಂಗಳನೆತ್ತಲು
ಮೈದಡವಲು, ಮೈಮನವನು ಸಂತರ್ಪಿಸಲೆಂದು.

ಅಂದಿನ ದಿನ ನೀನೊರೆವುದು
ಸಿಡಿಲು ಮಂತ್ರಿಸಿರುವ ವಾಣಿ ;
ಮಿಂಚಿನ ದೀಪದ, ಮೊಳಗಿನ ಗಂಟೆಯು ಮೇಳದಲಿ ;
ಅಂದಿನ ದಿನ ನೀ ಮಿಡಿವುದು
ಚೆಲುವೆ ಮೋಹಿಸಿರುವ ವೀಣೆ
ದೇವಕನ್ನೆಯರ ಮೃದಂಗ ಮಂಗಲ ತಾಳದಲಿ.

ವಿನಾಯಕ

* * *

## ನಿಡುಗಾಲದ ಗೆಳೆಯರು

ನನಗೂ ಗೆಳೆಯ ವಿ. ಸೀತಾರಾಮಯ್ಯನವರಿಗೂ ಪರಿಚಯವಾದದ್ದು ನಾಲ್ಕು ದಶಕಗಳ ಹಿಂದೆ. ಇಷ್ಟೊಂದು ದೀರ್ಘಕಾಲದಲ್ಲಿ ಆ ಸ್ನೇಹ ಬೆಳೆದು ಬಂದು ಒಬ್ಬರು ಇನ್ನೊಬ್ಬರನ್ನು ತಿಳಿದುಕೊಳ್ಳುವುದರಲ್ಲಿ ಹೆಚ್ಚಿನ ಸಹಾಯವನ್ನು ಮಾಡಿದೆ. ಇದರಲ್ಲೇನು ಆಶ್ಚರ್ಯ - ಎಂದು ಅನೇಕರಿಗೆ ಕಾಣಿಸಬಹುದು. ನಮ್ಮ ಬದುಕಿನ ಉದ್ದಕ್ಕೂ ನೂರಾರು ಗೆಳೆಯರು ಸಿಕ್ಕಿಯೇ ಸಿಕ್ಕುತ್ತಾರೆ. ಶಾಲೆಗೆ ಕಾಲಿಡುವ ಮೊದಲು ದೊರೆಯುವ ಕೌಪೀನ ಮಿತ್ರರೂ ಇದ್ದಾರೆ; ಕಾಲಿಟ್ಟ ಮೇಲೆ ಅಲ್ಲಿಂದ ಹೊರಬೀಳುವ ತನಕ ಸಹಪಾಠಿಗಳೂ ಸಿಕ್ಕುತ್ತಾರೆ. ಅನಂತರ ತಮ್ಮ ತಮ್ಮ ಊರಲ್ಲಿ ಸಂಧಿಸುವ ಬಗೆಬಗೆಯ ಮಿತ್ರರೂ ಸೇರುತ್ತಾರೆ. ಈ ಮಿತ್ರತ್ವದ ಅವಧಿ ಪುರಾತನದ್ದೂ, ಚುಟುಕಿನದ್ದೂ ಆದರೆ, ಮುಂದೆ ಅದೊಂದು ಬರಿಯ ನೆನಪಾಗಿ ಉಳಿಯುತ್ತದೆ. ಅಲ್ಪಕಾಲದ ಮಿತ್ರತ್ವದಲ್ಲೇ ಆಗಲಿ, ಗಾಢ ಸ್ನೇಹದ ಎಡೆಯಲ್ಲೇ ಆಗಲಿ, ಒಬ್ಬರು ಇನ್ನೊಬ್ಬರ ಸ್ವಾರ್ಥಕ್ಕೆ, ಹೆಮ್ಮೆಗೆ ಅಡ್ಡ ಬಂದಾಗ ಮನಸ್ಸು ಕಹಿಯಾಗುತ್ತದೆ; ಮಾತು ಕಡಿಮೆಯಾಗುತ್ತದೆ. ಸ್ನೇಹ ಉಳಿದರೂ ಉಳಿಯಬಹುದು. ಒಮ್ಮೆ ಅದು ಉಳಿಯದೆ ಹೋದರೂ, ಹೊರಗಣ ಜಗತ್ತಿನ ಮುಂದೆ ಔಪಚಾರಿಕ ಸಂಭಾವನೆಗಳಲ್ಲಿ ಅದು ಕೊನೆಗೊಳ್ಳಬಹುದು.

ನನ್ನ ಮತ್ತು ವಿ. ಸೀತಾರಾಮಯ್ಯನವರ ಮೊದಲ ಪರಿಚಯ ಎಲ್ಲಿ, ಏನು-ಎಂಬ ನೆನಪು ನನಗೆ ಈಗ ಬರುವುದಿಲ್ಲ. ಅದು ನಡೆದದ್ದು ಉಭಯತರ, ಯೌವನಾರಂಭದಲ್ಲಿ; ಅವರು ಆಗ ಬೆಂಗಳೂರಿನ ಸೆಂಟ್ರಲ್ ಕಾಲೇಜಿನ ಉಪನ್ಯಾಸಕರಾಗಿದ್ದರು. ಅವರು ಕಲಿತದ್ದು ಅರ್ಥಶಾಸ್ತ್ರವಾದರೂ, ಕನ್ನಡದಲ್ಲಿ ಪಾಂಡಿತ್ಯ ಗಳಿಸಿ ಲೇಖಕರಾಗಿ, ವಾಗ್ಮಿಗಳಾಗಿ ಹೆಸರು ಪಡೆದಿದ್ದರು. ನನಗೂ, ಅವರಿಗೂ ಕಾಣಿಸುವ ಸಮಾನ ವೃತ್ತಿ ಎಂದರೆ ಕನ್ನಡ ನಾಡನ್ನು ಯಾವುದೋ ನೆಪದಿಂದ ಸುತ್ತಿ,

ಏನೇನೋ ವಿಷಯಗಳ ಮೇಲೆ ಭಾಷಣ ಮಾಡುವುದು. ಅದಕ್ಕೆ ವಾರ್ಷಿಕ ಸಾಹಿತ್ಯ ಸಮ್ಮೇಳನಗಳು, ವಸಂತೋತ್ಸವಗಳು, ನಾಡಹಬ್ಬಗಳು ಅನುಕೂಲ ಮಾಡಿಕೊಡುತ್ತಿದ್ದವು. ಏನಿದ್ದರೂ ಹತ್ತು ಮಂದಿಯ ಮುಂದೆ ನಾವು ಸಾಹಿತಿಗಳೆಂದೋ, ವಿದ್ವಾಂಸರೆಂದೋ, ಇನ್ನೇನೆಂದೋ ತೋರಿಸಿಕೊಳ್ಳುವ ಅವಕಾಶ ಧಾರಾಳವಾಗಿತ್ತು. ನಾನು ಪುತ್ತೂರಲ್ಲಿ ನೆಲಸಿದ ಮೇಲೆ - ನಮ್ಮ ಊರಿನಲ್ಲಿಯೂ ನಾಡಹಬ್ಬದ ಆಚರಣೆ ತೊಡಗಿಸಿದ್ದರಿಂದ ಸೀತಾರಾಮಯ್ಯನಂತಹವರನ್ನು ಆಗಾಗ ಬರಮಾಡಿಕೊಳ್ಳುವ ಅವಕಾಶವೂ ದೊರಕಿತು. ಇದು 'ಉಭಯ ಕುಶಲೋಪರಿ ಸಾಂಪ್ರತ; ನಾನೂ ಕ್ಷೇಮ, ನೀನೂ ಕ್ಷೇಮ' ಎನ್ನುವ ಜಗತ್ತು. ಇಂತಹ ಪರ್ಯಟನೆಗಳಿಂದ ಸೀತಾರಾಮಯ್ಯನವರು ಕನ್ನಡನಾಡಿನ ಹಲವು ಊರುಗಳಲ್ಲಿ, ಸೊಂಪಾಗಿ ಊಟ ಹಾಕುವ ಮಿತ್ರರನ್ನು ಗಳಿಸಿದಂತೆ, ಹೆಚ್ಚಿನ ಅಭಿಮಾನ ತಾಳಿದ ಮಿತ್ರರನ್ನೂ ಪಡೆದಿದ್ದಾರೆ. ಅಂತಹ ಅಭಿಮಾನಿಗಳ ಬಳಗ ನನಗೂ ಇತ್ತೆನ್ನಿ. ಹೊಟ್ಟೆಗೆ ಇಲ್ಲದ ಸಾಹಿತಿ ಸಹನೆಯಿಂದ ಬದುಕನ್ನು ಸಾಗಿಸುವುದಕ್ಕೆ ಸುತ್ತಲೂ ಭಕ್ತಕೋಟಿಯಿದ್ದರೆ ಸುಲಭವಷ್ಟೆ.

ಪ್ರಥಮ ನೋಟಕ್ಕೆ, ಏಕೆ ಪ್ರಥಮ, ಈ ಹೊತ್ತಿಗೂ ಸಭೆ ಸಮಾರಂಭಗಳಲ್ಲಿ ಸೀತಾರಾಮಯ್ಯನವರ ರೂಪ ಕಾಣಿಸಿಕೊಂಡಾಗ ನನಗೆ ಮೆಚ್ಚಿಕೆ ಕಡಿಮೆ. ಅವರ ಅಚ್ಚುಕಟ್ಟಾದ ವೇಷಭೂಷಣ, ಹಳೆಗಾಲದ ಮೈಸೂರಿನ ಗಂಭೀರ ಸೊಗಸಿನ ತೊಡುಗೆ ಇವನ್ನು ಇಂದಿನ ತನಕವೂ ನಾನು ಮೆಚ್ಚಿಕೊಂಡವನಲ್ಲ. ಅವರು ಇನ್ನೂ ಹತ್ತು ಕಿಲೋಗ್ರಾಮ್ ಕೊಬ್ಬನ್ನು ಹೆಚ್ಚಿಗೆ ಬೆಳೆಸಿಕೊಂಡಿದ್ದರೆ ಆಗುತ್ತಿತ್ತೋ ಏನೋ? 'ಸಾಹುಕಾರರೇ' ಎಂದಾದರೂ ಕರೆದೇನು ಎನ್ನುವ ಮನಸ್ಸು ನನ್ನದು. ನನ್ನ ಉಡಿಗೆ ನೋಡಿ ಅವರಿಗೂ ಅಷ್ಟೇ ಅನ್ನಿಸಿರಬೇಕು. ಬರೇ ಪಂಚೆ, ಬನೀನು ತೊಟ್ಟು, ಕೆಲವೊಮ್ಮೆ ರಿಯಾಯಿತಿಯಿಂದ ಭುಜದ ಮೇಲೊಂದು ಬಾತ್‌ಟವೆಲ್ ತೂಗಿಕೊಂಡು ನಾವು ಜತೆಯಲ್ಲಿ ಲಾಲ್‌ಬಾಗಿಗೆ ಆಗಾಗ ಹೋಗಿದ್ದೇವೆ. ಅವರಿಗೆ ಆ ನನ್ನ ವೇಷ ಕಷ್ಟಕೊಟ್ಟಿರಬೇಕು. ಅಂತಹ ಸಮಯದಲ್ಲಿ ನಾನು ಅವರಿಗೆ ಅಂದದ್ದೂ ಉಂಟು: 'ಉಡುಪಿಯ ಅಡುಗೆಭಟ್ಟರು ಅನ್ನಿ ಯಾರಾದರೂ ಕೇಳಿದರೆ' ಎಂದು ಸಮಾಧಾನ ಕೊಟ್ಟದ್ದುಂಟು.

ಇನ್ನೂ ಒಂದು ವಿಚಾರ - ಸೀತಾರಾಮಯ್ಯನವರ ಸ್ನೇಹ ಬೆಳೆಸಿದವರನ್ನು ಅವರು ಜತೆಗೆ ಬನ್ನಿ ಎಂದು ಕರೆದರೆ 'ಬರುವುದಿಲ್ಲ' ಅನ್ನುವುದು ಕಡಿಮೆ. ಅವರ ಮಾತು ಕೇಳಬೇಕೆನ್ನುವವರು ಹೋಗಿಯೇ ಹೋಗುತ್ತಾರೆ. ಅದು ಕಷ್ಟವಾಗಿ ಕಾಣಿಸಿದರೂ, ಒಳ್ಳೆಯ ಹೊಟೇಲನ್ನು ಹುಡುಕಿ, ಮಸಾಲೆ ದೋಸೆಯನ್ನು ತರಿಸಿಕೊಡುತ್ತಾರೆ. ನಾನಂತು ಅವರ ಜತೆಯಲ್ಲಿ ಹೊಟೇಲಿಗೆ ಹೋದರೆ, ನನ್ನ ದುಡ್ಡಿನ ಚೀಲದ ಸದ್ದು ಹೊರಡಿಸಿದ್ದೂ ಸಹ ಇಲ್ಲ. ಅವರು ಆ ವಿಷಯದಲ್ಲಿ ರಸಿಕರು. ಬಳೆಪೇಟೆಯಲ್ಲಿಯೋ, ಅರಳೆಪೇಟೆಯಲ್ಲಿಯೋ 'ಬಲು ಹಿಂದೆ ಇಂತಹ ಆಸಾಮಿ

ಎಷ್ಟೊಂದು ಸೊಗಸಾಗಿ ದೋಸೆ ಮಾಡುತ್ತಿದ್ದ' ಎಂದು ಬಣ್ಣಿಸಿಯಾರು. ನನಗೋ! ಗಾಂಧಿಮಹಾತ್ಮನ ಉಪದೇಶದಿಂದ ಉಪ್ಪುಕಾರವಿಲ್ಲದೆ ತಿಂದು ರೂಢಿಯಾಗಿದ್ದು, ಮಸಾಲೆ ದೋಸೆ ತಿನ್ನುವಾಗಲೂ ಅದರ ರುಚಿ ಮರೆತು ಹೋಗುತ್ತದೆ. ಹೀಗಿದ್ದರೂ ನಮ್ಮ ಸ್ನೇಹ ಉಳಿದುಕೊಂಡಿದೆ.

ನಾನು ಒಬ್ಬ ಸಾಹಿತಿಯಾಗತೊಡಗಿ, ಸಭೆ ಸಮಾರಂಭಗಳಲ್ಲಿ ಉದ್ದುದ್ದ ಭಾಷಣ ಮಾಡತೊಡಗಿ, ಅಭಿಮಾನಿಗಳ ಬಳಗವನ್ನು ಕಟ್ಟಿಕೊಂಡೆ. ಸಾಹಿತ್ಯ ಸಮ್ಮೇಳನದಂತಹ ಸಮಾರಂಭಗಳಲ್ಲಿ ಒಂದು ಕವನ, ಎರಡು ಕತೆ, ಮುಕ್ಕಾಲು ಪ್ರಬಂಧ ಬರೆದವರನ್ನು ಕಂಡು—'ಮಹಾ ವಿಭೂತಿಗಳು ಇವರು' ಎಂದು ಜನರು ಅನ್ನತೊಡಗಿದ್ದ ಕಾಲದಲ್ಲಿ ನಮ್ಮದೇ ಜಾತಿಯೊಂದು ಬೇರೆಯಾಗಿತ್ತು. ನಾನೂ, ಸೀತಾರಾಮಯ್ಯನಂತಹವರು ಸಾಹಿತಿಗಳ ಜಾತಿಗೆ ಸೇರಲೇಬೇಕಾಗಿತ್ತು. ನಾವು ಸೇರದೇ ಹೋದರೂ ಜನ ಸೇರಿಸಿದ್ದಾರೆ. ಆದರೂ, ಈ ನಮ್ಮ ಸಾಹಿತಿಜಾತಿ ಆಗಿನ ಕಾಲಕ್ಕೂ ಒಂದೇ ಆಗಿರಲಿಲ್ಲ; ಈಗಲೂ ಇಲ್ಲ ಅನ್ನಿ. ಯೋಗ್ಯತೆ ಏನೇ ಇರಲಿ, ದರಿದ್ರ ವಯಸ್ಸು ಒಂದು ಇದೆಯಲ್ಲ! ತಾರುಣ್ಯ, ಯೌವನ, ಹೇಳಲಿಚ್ಛಿಸದ ಮುಪ್ಪು—ಎಂಬ ಮೂರು ವರ್ಗ ಇದೆ. ನಮ್ಮದು ಅದರಲ್ಲಿ ಮಧ್ಯಮ ವರ್ಗ; ನಮಗಿಂತ ಹೆಚ್ಚು ವಯಸ್ಸಾದವರನ್ನು ಕಂಡರೆ ನಾವು ತಲೆತಗ್ಗಿಸಿ ನಮಸ್ಕರಿಸಬೇಕು. ಅವರೂ ಮೆಹರ್ಬಾನಿಯಿಂದ ನಮ್ಮನ್ನು ಕಂಡು 'ಕ್ಷೇಮವೋ' ಎಂದು ಕೇಳುತ್ತಾರೆ. ನಮಗಿಂತ ಕಡಿಮೆ ವಯಸ್ಸಿನವರನ್ನು ಕಂಡರೆ ನಾವೂ ಹಾಗೆ ಮಾಡಬಹುದು. ಕಿರಿಯರನ್ನು ಪ್ರೋತ್ಸಾಹಿಸುವ ರೀತಿಯಲ್ಲಿ 'ಇದೇ ರೀತಿ ಕನ್ನಡ ತಾಯಿಯ ಸೇವೆ ನಡೆಸಿ' ಎಂದು ಪ್ರೋತ್ಸಾಹಿಸಬಹುದು.

ಈ ಮಧ್ಯಮ ಜಾತಿಗೆ ಸೇರಿದ ನನಗೆ, ಸೀತಾರಾಮಯ್ಯ ಒಬ್ಬರೇ ಸ್ನೇಹಿತರಲ್ಲ. ಇನ್ನೂ ಹತ್ತು ಹದಿನೈದು ಜನರನ್ನು ಆ ಪಟ್ಟಿಗೆ ಸೇರಿಸಬಲ್ಲೆ. ಈ ಹೊತ್ತಿಗೂ ಅಂತಹ ಜನರೊಡನೆ ನನ್ನ ನೇಹ, ಸ್ನೇಹ ಮೊದಲಿನಂತೆ ಉಳಿಯದೇ ಹೋದರೂ, ಅವರು "ನನಗೆ ಗೊತ್ತು ತುಂಬಾ" ಎನ್ನುವಷ್ಟು ಅವಕಾಶವಿದೆ. ಸಾಹಿತ್ಯ ವೃತ್ತಿಯಲ್ಲಿ ನಿಜವಾದ ಸ್ನೇಹಿತರಂತೆ—ಮನಬಿಚ್ಚಿ ಸ್ವಂತ ವಿಷಯಗಳನ್ನಾಗಲಿ, ಇನ್ನಾವುದೇ ವಿಷಯಗಳನ್ನಾಗಲಿ ಕುರಿತು ಮಾತನಾಡುವ ಇಷ್ಟವಿದ್ದವರು ಕಡಿಮೆ. ಅವರು ಕಣ್ಣಿನ ಮುಂದೆ ಇರಲಿ, ದೂರದಲ್ಲಿರಲಿ—'ಇಂತಹ ಒಬ್ಬರು ಸ್ನೇಹಿತರು ನನಗೆ ಇದ್ದಾರೆ; ಹೋಗಿ ನೋಡಿ ಅವರನ್ನು' ಎನ್ನುವ ಬಯಕೆ ಉಳಿದಿದ್ದರೆ, ಅಂತಹ ಸ್ನೇಹಿತರ ಸಂಖ್ಯೆ ಬೆರಳೆಣಿಕೆಗಳಿಗಿಂತಲೂ ಕಡಿಮೆ. ವಿ. ಸೀ. ಅವರಲ್ಲೊಬ್ಬರು.

ಮಸಾಲೆ ದೋಸೆಯಿಂದ ಭದ್ರವಾಗದೆ ಹೋದ ನಮ್ಮ ಸ್ನೇಹ ಉಭಯತರಿಗೂ ಇದ್ದ ಆಸಕ್ತಿ, ಕುತೂಹಲ, ಜಿಜ್ಞಾಸೆಗಳನ್ನು ಕೆರಳಿಸಿದ ಅನೇಕ ವಿಷಯಗಳ ದೆಸೆಯಿಂದ ಉಂಟಾಗಿರಬಹುದು ಎಂದು ಎನಿಸುತ್ತದೆ. ನಮ್ಮ ನಮ್ಮ ಬರಹ

ಗಳನ್ನು ಕುರಿತು ಚರ್ಚಿಸಿದ್ದಿಲ್ಲ; ಶಿಫಾರಸನ್ನೂ ಮಾಡಿದ್ದಿಲ್ಲ. ಹಾಗೆ ತೊಗಳ ಹೋದರೂ ತಣ್ಣೀರೆರಚಿದ್ದುಂಟು. ರಾಜಕೀಯವಿರಲಿ, ಕಲೆಯ ಯಾವ ಮುಖವೇ ಇರಲಿ, ಸಾಮಾಜಿಕ ಪ್ರಶ್ನೆಯೇ ಇರಲಿ, ಅವುಗಳನ್ನು ಕುರಿತು ಹೆಚ್ಚಿನ ಓದು ಮತ್ತು ಕುತೂಹಲ ಇದ್ದ ನಮಗೆ ಮಾತಿನ ಅವಕಾಶ ದೊರಕಿದಾಗ ಬಿಸಿಯಾದ ಚರ್ಚೆಗಳು ಬೇಕಷ್ಟು ನಡೆದಿವೆ. ನಾವಿಬ್ಬರೂ ಅಭಿಪ್ರಾಯ ಸಮನ್ವಯದ ಸರ್ವಧರ್ಮ ಸಮ್ಮೇಳನ ನಡೆಸಿದವರೇ ಅಲ್ಲ. ಅವರು ತಮ್ಮ ಬದುಕನ್ನು ಹೇಗೆ ನಡೆಸಿದ್ದಾರೆಂದು ದೂರದಲ್ಲಿರುವ ನನಗೆ ಗೊತ್ತು; ಕಾಲಿಗೆ ಚಕ್ರ ಕಟ್ಟಿಕೊಂಡ ನನ್ನ ಬದುಕು ಹೇಗಿತ್ತೆಂದು ಅವರಿಗೂ ಗೊತ್ತು. ನಾವು ಉಭಯತರೂ ಕಲೆತಾಗ ಸಂತೋಷಗೊಳ್ಳುವುದಾದರೆ, ಪರಸ್ಪರ ಟೀಕೆಯಿಂದ ಹೊರತು ಭಟ್ಟಂಗಿ ವೃತ್ತಿಯಿಂದಲ್ಲ. ಆದರೆ, ಯಾವುದೇ ಒಂದು ಚಿತ್ರವನ್ನೋ, ನಾಟಕವನ್ನೋ, ಚಲಚ್ಚಿತ್ರವನ್ನೋ ಇಬ್ಬರು ನೋಡಿದರೆ - ಅಂತಹ ವಿಷಯಗಳು ಬಂದಾಗ, ಇಬ್ಬರ ಮನಸ್ಸೂ ಹೇಗೆ ಹರಿಯುತ್ತಿದೆ ಎಂಬುದು ಗೊತ್ತಾಗುತ್ತಿತ್ತು. ಸ್ನೇಹದಿಂದ ಯಾವ ಸ್ವಲಾಭವನ್ನೂ, ಸ್ವಾರ್ಥವನ್ನೂ ಬಯಸದಿರುವ ಸೀತಾರಾಮಯ್ಯನವರ ದೊಡ್ಡ ಗುಣದಿಂದಾಗಿಯೇ, ಪ್ರಾಮಾಣಿಕತೆಯಿಂದಾಗಿಯೇ ನಮ್ಮ ಉಭಯತರ ಸ್ನೇಹ ಅಳಿಸಿ ಹೋಗದೆ ಆರಂಭದ ಸೊಗಸನ್ನು ಇಂದಿನ ತನಕವೂ ಉಳಿಸಿಕೊಂಡಿದೆ.

ಈ ದೀರ್ಘಕಾಲದ ಅವಧಿಯಲ್ಲಿ ಅವರು ತಮ್ಮ ಪ್ರಾಮಾಣಿಕತೆಯನ್ನು ಕಳೆದುಕೊಳ್ಳದೆ ಅನೇಕ ಬಗೆಯ ಸಾಹಿತ್ಯ ಸೃಷ್ಟಿ ಮಾಡಿದ್ದಾರೆ. ನನ್ನ ಉದ್ಯೋಗವೂ ಅದೇನೆ. ಓದುಗರ ಟೀಕೆಗೆ ನಾವು ಗುರಿಯಾಗಬೇಕಾದದ್ದೂ ಸಹಜ. ಟೀಕೆಗಳಿಂದ ಅವರೂ ತಲೆಕೆಡಿಸಿಕೊಂಡಿಲ್ಲ; ನನಗೂ ಬೇಸರ ಬಂದಿಲ್ಲ. ಅವರೊಬ್ಬರು ಒಳ್ಳೆಯ ಸ್ನೇಹಿತರು; ಸ್ನೇಹಿತರಾಗಿರದೆ ಹೋಗಿದ್ದರೂ ಅವರು ನನ್ನ ಪಾಲಿಗೆ ಒಳ್ಳೆಯ ಮನುಷ್ಯರು ಎನಿಸಿಕೊಂಡಿದ್ದಾರೆ. ಅವರ ಅನೇಕ ಮಿತ್ರರು ಅವರ ವಿಷಯದಲ್ಲಿ ಆಡುತ್ತಿದ್ದ ಅಭಿಮಾನದ, ಪ್ರೀತಿಯ ನುಡಿಗಳನ್ನು ಅಲ್ಲಲ್ಲಿ ಕೇಳಿದ್ದೇನೆ. ಕಾಲೇಜಿನಲ್ಲಿ ಅವರ ಶಿಷ್ಯರಾಗಿ ಹೊರಬಿದ್ದ "ಸೀತಾರಾಮಯ್ಯನವರ ಪಾಠ ಎಂದರೆ ಒಂದು ರಸದೂಟ" ಎನ್ನುತ್ತಿರುವ ಅವರ ಅನೇಕ ಶಿಷ್ಯರ ಪರಿಚಯವೂ ನನಗಾಗಿದೆ.

ನನ್ನ ಯೌವನಾರಂಭದಿಂದ ಅನೇಕ ಸಾಹಿತಿ ಮಿತ್ರರನ್ನೂ, ವಿದ್ವಾಂಸ ಮಿತ್ರರನ್ನೂ, ಕಲಾವಿದ ಮಿತ್ರರನ್ನೂ ನಾನು ಸಂಪಾದಿಸಿರುವೆನಾದರೂ - ಅವರೊಡನಿದ್ದ ಸ್ನೇಹ ಒಂದೇ ರೀತಿ ಉಳಿದು ಬಂದಿಲ್ಲ. ಅನೇಕರ ಮೇಲಿದ್ದ ಪ್ರೇಮ, ಆದರ ಕಾಲಕ್ರಮದಲ್ಲಿ ಕಡಿಮೆಯಾಗುತ್ತ ಹೋಯಿತು. ಅವಕಾಶ ಸಾಲದೆ ಹಾಗಾದದ್ದಲ್ಲ, ನನ್ನ ದೃಷ್ಟಿಯಲ್ಲಿ ಅವರನ್ನು ಕುರಿತು ತಿಳಿದ ವಿಷಯಗಳಿಂದಾಗಿ, ಅವರ ಮೇಲಿದ್ದ ಅಭಿಮಾನ ಮುಂದೆ ಉಳಿಯದೆ ಹೋಯಿತು. ಹಾಗೆ ಆಗದ ನಿಡುಗಾಲದ ಮಿತ್ರತ್ವವೆಂಬುದು ಸೀತಾರಾಮಯ್ಯನವರ ವಿಚಾರದ್ದು. ಇದಕ್ಕೆ ಅವರ ಒಳ್ಳೆಯತನವೇ ಕಾರಣವೆಂಬುದು ನನ್ನ ಅಭಿಪ್ರಾಯ. ಜೀವನದ ಸ್ಮೃತಿಪಥದಲ್ಲಿ ಎಲ್ಲದಕ್ಕಿಂತಲೂ

ಮನಸ್ಸಿನ ಮೇಲೆ ಅಚ್ಚೊತ್ತಿ ನಿಲ್ಲುವ ಒಂದು ಶಕ್ತಿಯಿದ್ದರೆ ಅದು ಮನುಷ್ಯನ ಒಳ್ಳೆಯತನ ಎಂದು ನಾನು ನಂಬಿದ್ದೇನೆ. ಅದನ್ನು ಅವರಲ್ಲಿ ಕಂಡಿದ್ದೇನೆ.

ಒಳ್ಳೆಯತನ ಎಂಬುದನ್ನು ಮನುಷ್ಯ ಗುರುತಿಸಿ, ಕಲಿತು ಸಾಧಿಸಬೇಕಾದ್ದೊಂದು ಅಂಶವೇ ಹೊರತು, ತನ್ನಂತೆಯೇ ಜೀವನದಲ್ಲಿ ತುಂಬಿಕೊಳ್ಳುವ ವಸ್ತುವಲ್ಲ. ನಮ್ಮ ಜೀವನದಲ್ಲಿ ಬರುವ ನೂರಾರು ತಾಪತ್ರಯ, ಆಘಾತ, ಅನ್ಯಾಯ, ಕಷ್ಟನಷ್ಟಗಳಿಂದಾಗಿ ಮನಸ್ಸು ನೊಂದುಕೊಳ್ಳುತ್ತದೆ. ಅವನ್ನು ಉಂಟುಮಾಡಿದವರ ವಿಚಾರದಲ್ಲಿ, ಅದಿರುವ ಸಮಾಜದ ವಿಚಾರದಲ್ಲಿ, ಮನಸ್ಸು ಕಹಿಗೊಳ್ಳುತ್ತದೆ; ಅವುಗಳ ಕಡೆಗೆ ದ್ವೇಷ ಉಂಟಾಗುತ್ತದೆ. ವಿ. ಸೀ.ಯವರ ಬದುಕಿನಲ್ಲಿ ಅವರ ಬದುಕನ್ನು ಗುದ್ದಿ ಹಣ್ಣು ಮಾಡುವ ಅನೇಕ ಪ್ರಸಂಗಗಳು ಎಳೆತನದಿಂದ ಮುಪ್ಪಿನ ತನಕವೂ ಹಾಯ್ದು ಬಂದಿವೆ. ಅವುಗಳ ಎಡೆಯಿಂದಲೇ ಅವರು ನುಗ್ಗಿ ಪಾರಾಗಿ ಬಂದಿದ್ದಾರೆ. ಆದರೂ, ಮನಸ್ಸನ್ನು ತಮ್ಮ ವಿರೋಧಿಗಳ ವಿಷಯದಲ್ಲೂ ಅವರು ಕಹಿಮಾಡಿಕೊಂಡವರಲ್ಲ. ಅವರನ್ನು ಕುರಿತು ಕೆಟ್ಟ ಮಾತನ್ನು ಆಡಿದವರಲ್ಲ. ಎಷ್ಟು ಜನ ಅಂತಹ ಒಳ್ಳೆಯತನವನ್ನು ತಮ್ಮ ಬದುಕಿನಲ್ಲಿ ಸಾಧಿಸಬಲ್ಲರು ?

**ಶಿವರಾಮ ಕಾರಂತ**

* * *

## ವಾಙ್ಮಯ ತಪಸ್ಸು

ನನ್ನ ಅವ್ಯವಸ್ಥಿತ ಜೀವನ ರೀತಿಯನ್ನು ಮೀರಿ ಹೇಗೊ ಇದುವರೆಗೆ ಉಳಿದುಕೊಂಡ ಕೆಲವು ಹಳೆಯ ಕಾಗದಗಳನ್ನು ನೋಡುವಾಗ ಒಮ್ಮೆಲೆ ನನ್ನ ಕುತೂಹಲವನ್ನು ಕೆರಳಿಸುವಂತಹ ಒಂದು ಕಾಗದ ಕಣ್ಣಿಗೆ ಬಿದ್ದಿತು. ಅದನ್ನು ಬರೆದ ತಾರೀಕು ೧೯೪೭ರ ನವೆಂಬರ ೨೪. ಕೈಬರೆಹವನ್ನೆ ನೋಡಿ ಬರೆದವರು ಇಂತಹವರು ಎಂದು ಭರವಸೆಯಾಗುವಾಗಲೇ ಬರೆದ ವಾಕ್ಯಗಳು ಆ ಭರವಸೆಗೆ ಅಡ್ಡಿಯನ್ನುಂಟು ಮಾಡಿದುವು, ಅವು ಪ್ರಾರಂಭದ ವಾಕ್ಯಗಳೇ ಆದುದರಿಂದ. ಅವನ್ನಿಲ್ಲಿ ಕಾಣಿಸುತ್ತೇನೆ (ಮೂಲ ಇಂಗ್ಲಿಷಿನಲ್ಲಿ);

"ನನ್ನ ಪ್ರಿಯ ಪ್ರೊ. 'ಜೆ.',

ನನ್ನ ಬಗ್ಗೆ ವಿಚಾರ ಕೂಡ ಮಾಡದಂತಹ ನಿರುತ್ಸಾಹದಲ್ಲಿ ಕುಗ್ಗಿರುವೆಯಾ? ನಿನ್ನಿಂದ ಎಷ್ಟು ಅವಮಾನಗಳನ್ನು ಸಹಿಸಿಕೊಂಡಿದ್ದೇನೆ! ಎಂತೆಂತಹ ಪರಿಯಲ್ಲಿ ನೀನು ನನ್ನನ್ನು ಕೆಣಕಿದಾಗಲೂ ಸುಮ್ಮನಿದ್ದುಕೊಂಡಿರುವೆ! ನಾನು ಜಗಳಗಂಟನಲ್ಲ ಎಂದೇ ಅವನ್ನೆಲ್ಲ ನುಂಗಿದ್ದೇನೆ, ಪ್ರತಿಭಟಿಸದೆ ಸಹಿಸಿಕೊಂಡಿದ್ದೇನೆ."

ಈ ಪರಿ ನಾನು ಯಾರನ್ನು ಅಪಮಾನಗೊಳಿಸಿದ್ದೆ? ಯಾರೊಡನೆ ಕಲಹ ಪ್ರಸಂಗಗಳನ್ನು ಕೆಣಕಿದ್ದೆ? ಇಂದು ಇದನ್ನು ಓದುವವರಂತೆ ಅಂದು ಅದನ್ನು ಓದುವ ನನಗೂ ಆಶ್ಚರ್ಯವೆನ್ನಿಸಿತು. ಇಷ್ಟೊಂದು ಕೆಣಕಲ್ಪಟ್ಟಾಗಲೂ ತಡೆದು ಕೊಳ್ಳಬಲ್ಲ ಮಹಾನುಭಾವನಿಗೆ ನಾನು ಯಾವ ಅವಿನಯವನ್ನು ತೋರಿಸಿದ್ದೆ ಎಂದು ನನ್ನನ್ನು ನಾನೇ ಕೇಳಿಕೊಂಡೆ. ನನ್ನ ಸ್ವಭಾವದಲ್ಲಿ ಅವಿನಯವಿದೆ ಎಂಬ ಸಂದೇಹ ವಿಲ್ಲದಿದ್ದರೂ ಸಹಿಷ್ಣುವನ್ನು ಅಪಮಾನಗೊಳಿಸುವ ಅಸಂಸ್ಕೃತಿ ನನ್ನಲ್ಲಿಲ್ಲ ಎಂದು ತಿಳಿದಿದ್ದೆ. ಆದುದರಿಂದ ಮುಂದಿನ ಕೆಲ ವಾಕ್ಯಗಳನ್ನು ಓದಿದೆ. ಅವು ಹೀಗೆ :

"ನಾನೆನ್ನುವುದು ಇದು. ಗಂಡು ಮಗನ ತಂದೆಯಾದೆನೆಂಬ ಅಹಂಕಾರದ ಮದದಿಂದ ಎಚ್ಚರಾಗು. ಈ ಮುಂಚಿತವೂ ಅನೇಕರಿಗೆ ಗಂಡು ಮಕ್ಕಳಾಗಿವೆ. ವಿನಯ ವಿರಲಿ. ಪ್ರಪಂಚಕ್ಕೆ ನಿನ್ನಿಂದ ಸಲ್ಲಬೇಕಾದುದನ್ನು ಸಲ್ಲಿಸುವಲ್ಲಿ ತೊಡಗು; ಇಲ್ಲಿ ಪ್ರಪಂಚ–ಎಂದರೆ ನಾನು ವಾಸಿಸುತ್ತಿರುವ ಜಗತ್ತಿನ ಭಾಗ. ನಮಗಾಗಿ ವಿನೋದ ರೊಂದನ್ನು ಬರೆದುಕೊಡು. ಅದು 'ಮಡಿವಂತಿಕೆ'ಯದಾಗಿರಲಿ."

ಈ ಕಾಗದವನ್ನು ಬರೆದವರು ಗೆಳೆಯ ಪ್ರೊ. ವಿ. ಸೀತಾರಾಮಯ್ಯನವರು. ನನ್ನ ಬರೆವಣಿಗೆಯಲ್ಲಿ 'ಮಡಿವಂತಿಕೆ ಇಲ್ಲ' ಎಂದು ಸಾಧಿಸುವಾಗಲೇ ನನ್ನಿಂದ ಬರೆ ಯಿಸಲೇ ಬೇಕು ಎನ್ನುವ ವಿಶಾಲ ಸ್ನೇಹ ಬುದ್ಧಿ ಅವರದು. 'ಜಗಳಗಂಟ ಸ್ವಭಾವ ತನ್ನದಲ್ಲ' ಎನ್ನುವಾಗ ನನ್ನ ಸ್ವಭಾವದಲ್ಲಿ ಆ 'ಗಂಟು' ಇದೆ ಎಂಬ ವ್ಯಂಗ್ಯಾರ್ಥ ವನ್ನು ಸೂಚಿಸಬಲ್ಲ ಲೇಖನಿ ಅವರದು. ಆದರೆ ನನ್ನ ಅನುಭವದಿಂದ ಹೇಳುವುದಾ ದರೆ ಆ ಮಾತನ್ನು ಹೇಳಲು ಅವರಿಗಿದ್ದಷ್ಟು ಅಧಿಕಾರ ಬೇರೆ ಯಾರಿಗೂ ಇಲ್ಲ. ವ್ಯಂಗ್ಯಾರ್ಥದಿಂದ ನನ್ನನ್ನು ಕೆಣಕುವುದರಲ್ಲಿ ಮಾತ್ರ ಅವರಿಗಿದ್ದ ಸಾತ್ತ್ವಿಕ ಆವೇಗ ವನ್ನು ನಾನು ಇನ್ನೊಬ್ಬರಲ್ಲಿ ಕಂಡಿಲ್ಲ. ಎಂತಲೆ ಕೆಣಕಲ್ಪಟ್ಟಾಗ ಯಾವಾಗಲೂ ಹಾವಿನಂತೆ ಬುಸ್ಸೆನ್ನುವ ನಾನು ನಕ್ಕು ಸೋಲನ್ನೊಪ್ಪಿಕೊಳ್ಳುತ್ತಿದ್ದೆ. ಇಡಿಯ ಜನ್ಮ ಪಂಪ–ರನ್ನರನ್ನು ಓದದ ನನ್ನಂತಹನಿಂದ ಕನ್ನಡ ಸಾಹಿತ್ಯದ ಬಗ್ಗೆ ಪ್ರಬುದ್ಧ ಕರ್ಣಾಟಕ ಮತ್ತು ತ್ರಿವೇಣಿ (ಇಂಗ್ಲಿಷ್) ನಿಯತ ಕಾಲಿಕೆಗಳಲ್ಲಿ ಬರೆಯಿಸಿದ ಶ್ರೇಯಸ್ಸು ಅವರದು. ಕನ್ನಡವನ್ನು ಮೊದಲಿನಿಂದ ಹೆಚ್ಚಾಗಿ ಕಲಿಯದ, ಇತ್ತೀ ಚಿನ ೨೫ ವರ್ಷ ಕ್ರಮೇಣ ಸಂಸ್ಕೃತವನ್ನೂ, ಪಾಠ ಹೇಳುವುದನ್ನೂ ಮರೆಯುತ್ತಿದ್ದ ನನ್ನಿಂದ ಲಕ್ಷ್ಮೀಶನ ಜೈಮಿನಿ ಭಾರತದ ವಿಮರ್ಶೆಯನ್ನು ಬರೆಯಿಸಿದ ಇವರ ಅಘ ಟಿತ ಘಟನಾ ಶಕ್ತಿಗೆ, ಇವರ ಶುದ್ಧ ಅಂತಃಕರಣವೆ ಕಾರಣವಾಗಿದೆ. ನನ್ನಲ್ಲಿದ್ದ ಅಜ್ಞಾನವನ್ನು ಮರೆತು ನಾನು ಆ ಸಾಹಸಕ್ಕೆ ತೊಡಗಿದುದಕ್ಕೂ ಆ ಅಂತಃಕರಣವೆ ಸ್ಫೂರ್ತಿಯಾಗಿದೆ.

ವಿ. ಸೀ.ಯವರೊಡನೆ ಬೆಳೆದ ಸ್ನೇಹವು ಅವರನ್ನು ಇಷ್ಟು ವರ್ಷಗಳಿಂದ ಬಲ್ಲೆ ಎನ್ನಿಸುವುದರ ಬದಲು ಅವರನ್ನು ಜನ್ಮದಾರಭ್ಯ ಬಲ್ಲೆ ಎನ್ನಿಸುತ್ತಿದೆ.

ವ್ಯತಿಷಜತಿ ಪದಾರ್ಥಾನಾಂತರಃ ಕೋಽಪಿ ಹೇತುಃ

ಎಂಬ ಭವಭೂತಿಯ ಮಾತಿನ ಸತ್ಯತೆ ಈ ಸ್ನೇಹದಿಂದ ಅರ್ಥವಾಯಿತು. ಮೊದಲು (೪೦ ವರ್ಷಗಳಾದುವು ಆ ಮಾತಿಗೆ) ಅವರನ್ನು ಮೈಸೂರಿನ ಮುಂಡಾಸಿನ ವೇಷ ದಲ್ಲಿ ನೋಡಿದಾಗ ಆಗಿನ ಕಾಲದಲ್ಲಿ ಹಗಲು ಹನ್ನೆರಡು ಗಂಟೆ 'ಸೂಟ'ನ್ನು ಧರಿಸಿ ಮೆರೆಯುತ್ತಿದ್ದ ನನಗೆ ಇವರೂ 'ಪಂಪ-ರನ್ನ'ರ ಹೊರತು ಜಗತ್ತಿನಲ್ಲಿ ಬೇರೆ ಸಾಹಿತ್ಯ ಇದೆ ಎಂದು ಅರಿಯದ ಪಂಡಿತರು ಎಂದೆನ್ನಿಸಿತ್ತು. ಅಂದಿನ ಕಾಲದಲ್ಲಿ ಕನ್ನಡಿಗರ ಜಾಗೃತಿಗಾಗಿ ಇಂತಹ ಮಾತುಗಳನ್ನು ಹೇಳುವುದು ಅಗತ್ಯವಾಗಿತ್ತಾ ದರೂ ಅನೇಕರು ಅದನ್ನು ಹೇಳುವ ರೀತಿ ನನಗೆ ಒಪ್ಪಿಗೆಯಾಗಿರಲಿಲ್ಲ. ಪಂಪ-ರನ್ನರ ಕಾವ್ಯಗಳನ್ನು ಪ್ರಶಂಸಿಸುವುದೆ ಪ್ರಶಂಸಿಸುವುದು! ಜೊತೆಗೆ 'ಕನ್ನಡ ತಾಯಿ', 'ಕನ್ನಡಮ್ಮ' ಮುಂತಾಗಿ ಗೊಡ್ಡು ಭಾವನೆಗಳನ್ನು ಝಳಪಿಸುವುದು! ಸ್ವಂತದ ಅಭಿಮಾನಕ್ಕಿಂತಲೂ ಅನ್ಯರದಕ್ಕಾಗಿ ಅನಾದರ ಬೆಳೆಯಿಸುವ ಶೈಲಿ ಇದು. ಜಗತ್ತಿನಲ್ಲಿ ಬೇರೆ ಶ್ರೇಷ್ಠ ಸಾಹಿತ್ಯಗಳಿವೆ, ಸಾಹಿತ್ಯದ ಬೆಳೆವಣಿಗೆಯಲ್ಲಿ ಆಧುನಿಕತೆ ಇರುವುದು ಅದರ ಆರೋಗ್ಯದ ಲಕ್ಷಣ, ತುಲನಾತ್ಮಕ ಅಭ್ಯಾಸ ಅಗತ್ಯ-ಎಂಬುದನ್ನು ಪೂರ್ತಿ ಬದಿಗಿಟ್ಟು ನಮ್ಮಲ್ಲಿ ಎಲ್ಲವೂ ಇದ್ದಿತು, ಹಿಂದಿನದೆಲ್ಲ (ನಮ್ಮದು ಮಾತ್ರ) ಶ್ರೇಷ್ಠ ಸಾಹಿತ್ಯ ಎಂಬ ಮಾತಿಗೆ ಕನ್ನಡಿಗರು ಚಪ್ಪಾಳೆ ತಟ್ಟುತ್ತಿದ್ದುದರಿಂದ ಈ ಶೈಲಿಯೆ ಪಾಂಡಿತ್ಯವೆನ್ನಿಸಿತ್ತು, ವಾಗ್ಮಿತೆ ಎನ್ನಿಸಿತ್ತು. ಆದರೆ ಆಶ್ಚರ್ಯದ ಮಾತೆಂದರೆ ಈ 'ಮುಂಡಾಸು' ಮಾತ್ರ ನನಗೆನಿಸಿದ್ದನ್ನೆ ತನ್ನೊಳಗೆ ಬಚ್ಚಿಟ್ಟುಕೊಂಡು ಆಗಾಗ ಬಯಲಿಗೆ ತರುತ್ತಿತ್ತು. ಆ ವಾತಾವರಣದಲ್ಲಿ ನನ್ನಲ್ಲಿ ಆಶೆಯನ್ನು ಆದರ ಭಾವ ವನ್ನೂ ಮೂಡಿಸಿತು ಈ ಮುಂಡಾಸಿನ ಮೂರ್ತಿ. ತರುವಾಯ ಪ್ರತ್ಯಕ್ಷ ದರ್ಶನ ವಾಯಿತು ಈ ಮೂರ್ತಿಯ ವಿಶ್ವರೂಪದ್ದು.

ವಿ.ಸೀ.ಯವರ ಪಾಂಡಿತ್ಯಕ್ಕೆ ದಣಿವಿಲ್ಲ, ತಣಿವಿಲ್ಲ. ಲಂಡನ್‌ನ 'ಟೈಮ್ಸ್' ಲಿಟರರೀ ಸಪ್ಲಿಮೆಂಟ್ ಮೊದಲು ಮಾಡಿ ಮದ್ರಾಸದ ಹಿಂದು ಪತ್ರಿಕೆಯಲ್ಲಿಯ ಸಾಹಿತ್ಯ ವಿಮರ್ಶೆಗಳವರೆಗೆ ಅವರು ತಪ್ಪದೆ ಓದುತ್ತಾರೆ. ಹೊರಗಿನ ಸಾಹಿತ್ಯ ಗಳಲ್ಲಿಯ ಒಳ್ಳೆಯದನ್ನು ಮೆಚ್ಚುವ, ನಮ್ಮಲ್ಲಿಯ ಕೊರತೆಗಳನ್ನು ಒಪ್ಪುವ ವಿಶಾಲ ಹೃದಯ ಅವರಿಗೆ ಈ ಪಾಂಡಿತ್ಯದ ಫಲವಾಗಿಯೆ ದೊರೆತುದು. ಒಂದು ಅರ್ಥದಲ್ಲಿ ಅವರು 'ಜಗಳಗಂಟ'ರಲ್ಲ ನಿಜ; ಆದರೆ ಸಾಹಿತ್ಯದ ಬಗ್ಗೆ ಅವರೊಡನೆ ಚರ್ಚಿಸುವ ವರಿಗೇ ಗೊತ್ತು, ಒಳ್ಳೆಯದೆನಿಸಿದ್ದನ್ನೆ ತೋರಿಸಿಕೊಡುವ ಅವರ ಹಟಮಾರಿ ಜಗಳ ಗಂಟತನ.

ಕನ್ನಡ ಸಾಹಿತ್ಯದ ವಿಮರ್ಶೆಗೆ ತಕ್ಕ ಭಾಷೆಯನ್ನು ಒದಗಿಸಿಕೊಡಲು ಅವರು ಎಷ್ಟರ ಮಟ್ಟಿಗೆ ಕಾರಣರಾಗಿದ್ದಾರೆ ಎಂಬುದನ್ನು ಇಂದಿಲ್ಲ ನಾಳೆ ನಮ್ಮ ಸಾಹಿತ್ಯದ ಇತಿಹಾಸಕಾರರು ಒಪ್ಪುವುದು ಖಂಡಿತ. ಅವರು ಸಂತತವಾಗಿ ಇಂಗ್ಲಿಷ್ ಪ್ರಕಟನೆ ಗಳನ್ನೆ ಹೆಚ್ಚಾಗಿ ಓದುತ್ತಿದ್ದರೂ ಸಭೆಯಲ್ಲಿ ನಿಂತರೆ ನಿರರ್ಗಳವಾದ, ಸುಲಭವಾದ

ಕನ್ನಡದಲ್ಲಿ ಮಾತನಾಡಬಲ್ಲರು (ಇಂದಿಗೂ ಇಂತಹವರ ಸಂಖ್ಯೆ ಕಡಮೆ, ಇಂಗ್ಲಿಷಿನ ಜ್ಞಾನ ಕೂಡ ಕಡಮೆಯಾಗಿರುವಾಗ).

ನಾನು ಧಾರವಾಡದ ಕರ್ನಾಟಕ ಕಾಲೇಜದಲ್ಲಿ ಪ್ರಾಧ್ಯಾಪಕನಾಗಿದ್ದಾಗ ಅವರು ಅನೇಕ ಸಲ ನನ್ನ ಅತಿಥಿಯಾಗಿದ್ದರು. ಅವರ ಶಿಸ್ತು, ಅವರ ಸೌಜನ್ಯ ಎಷ್ಟೋ ಸಲ ನನಗೆ ತೊಂದರೆಯನ್ನುಂಟು ಮಾಡುತ್ತಿತ್ತು. "ಇಂತಹ ವಿದ್ವಾಂಸರು ಇಂತಹ ವಿನಯಸೌಜನ್ಯವುಳ್ಳವರಾಗಿದ್ದಾರೆ" ಎಂದೂ ಆ ಗುಣಗಳು ನನ್ನಲ್ಲಿ ಇಲ್ಲ ಎಂದೂ ನನ್ನ ಮನೆಯವರಿಗೆ ಆಡಿ ತೋರಿಸಲು ಅವಕಾಶ ದೊರೆಯುತ್ತಿತ್ತು. ನಾನು ಒಪ್ಪುವ ಸಮಾಜದ ರೀತಿ–ನೀತಿಗಳ (manners) ಅಭ್ಯಾಸ ನನಗಿಲ್ಲ. ಇನ್ನೊಬ್ಬರನ್ನು ಒಲಿಸುವ ಚಾತುರ್ಯವಿಲ್ಲ. ಗೆಳೆತನವನ್ನು ಬೆಳೆಯಿಸುವ ಇಲ್ಲವೆ ಉಳಿಸಿಕೊಳ್ಳುವ ಸೌಜನ್ಯವಿಲ್ಲ. ಇಂತಹವನಿಗೆ ನಲ್ವತ್ತು ವರ್ಷಗಳಿಂದ ವಿ. ಸೀ.ಯವರು ನೆಚ್ಚಿನ ಗೆಳೆಯರಾಗಿದ್ದಾರೆ ಎಂಬುದಕ್ಕಿಂತ ಹೆಚ್ಚಿನ ಶಿಫಾರಸು ಪತ್ರವನ್ನು ಆ ಮಹಾನುಭಾವರಿಗೆ ಯಾರು ಕೊಡಬಲ್ಲರು?

ವಿ.ಸೀ.ಯವರ ಮಾತು, ರೀತಿ, ಹಾವ–ಭಾವ, ಊಟ–ಉಪಚಾರ, ವೇಷ ಇವನ್ನೆಲ್ಲ ನೋಡಿದರೆ ಅವರಲ್ಲಿದ್ದ 'ರಸಿಕತನ'ದ ಕಲ್ಪನೆ ಬರುವುದು. ಯಾವುದರಲ್ಲಿಯೂ ಒಳ್ಳೆಯದೆ ಆಗಬೇಕು. ಒಳ್ಳೆಯದಕ್ಕೆ ಕಾಲದೇಶಗಳ ಭೇದವಿಲ್ಲ. ಹಿಂದಿನದೆಲ್ಲ ಒಳ್ಳೆಯದು ಎಂಬ ಅಂದಿನ ವಾತಾವರಣದಲ್ಲಿ ನನ್ನಂತಹ ಕೆಲ ಕಿಡಿಗೇಡಿಗಳು ಬುದ್ಧಿಪೂರ್ವಕವಾಗಿ 'ಹಿಂದಿನದೆಂದರೆ ಹಳೆಯದು, ಹಳೆಯದು ಎಂದರೆ ಕೊಳೆತದು' ಎಂದು ಹಟದಿಂದ ಸಾಧಿಸುತ್ತಿದ್ದೆವು. ಆಗ ಮಾತ್ರ ವಿ. ಸೀ.ಯವರ ಸೌಮ್ಯ ಸ್ವಭಾವದ ನಿಜವಾದ ಕಲ್ಪನೆ ನಮಗೆ ಬರುತ್ತಿದ್ದಿತು. 'ಹಿಂದಿನ ಕಾಲದಲ್ಲೂ ಒಳ್ಳೆಯದು ಎಷ್ಟೋ ಇದ್ದಿತು' ಎಂದು ಹಟದಿಂದ, ಆವೇಶದಿಂದ, ಪಾಂಡಿತ್ಯ ಪೂರ್ಣ ದೃಷ್ಟಾಂತ ಸಹಿತವಾಗಿ ಸಾಧಿಸುವ ಅವರ ಚಿತ್ರ ನಮ್ಮ ಕಣ್ಣೆದುರು ಈಗಲೂ ನಿಲ್ಲುವುದು.

ಪ್ರತಿಯೊಂದರಲ್ಲೂ ದೋಷವನ್ನು ಎತ್ತಿ ತೋರಿಸುವುದರಲ್ಲಿ ತಜ್ಞ ಎಂದು ಹೆಸರುಗೆಟ್ಟ ನಾನು ಕೊನೆಯದಾಗಿ, ಗೆಳೆಯ ವಿ. ಸೀ.ಯವರಲ್ಲಿಯ ಒಂದು 'ದೋಷ'ವನ್ನು ಎತ್ತಿ ತೋರಿಸುತ್ತೇನೆ. ಅದೆಂದರೆ ಅತ್ಯಂತ ದಯಾರ್ದ್ರವಾದ ಅವರ ಅಂತಃಕರಣ. ಆದರೆ ಆ 'ದೋಷ'ಕ್ಕಾಗಿ ಇನ್ನೊಬ್ಬರಿಗೆ ಮಾತ್ರ ತಿಲಮಾತ್ರವಾದ ಅನ್ಯಾಯವಾಗಿಲ್ಲ. ಅದು 'ದೋಷ'ವೆಂದು ಕೂಡ ಒಪ್ಪದೆ ಇಂದಿಗೂ ಅದಕ್ಕಾಗಿ ಸ್ವಂತಕ್ಕೆ ಅನೇಕ ಕಷ್ಟ–ನಷ್ಟಗಳನ್ನು ಅನುಭವಿಸಿದ್ದಾರೆ. ಹೀಗಿರುವಾಗಲೂ

ಅನುದ್ವೇಗಕರಂ ವಾಕ್ಯಂ ಸತ್ಯಂ ಪ್ರಿಯಹಿತಂ ಚ ಯತ್
ಸ್ವಾಧ್ಯಾಯಾಭ್ಯಸನಂ ಚೈವ ವಾಙ್ಮಯಂ ತಪ ಉಚ್ಯತೇ

ಎಂದು ಭಗವದ್ಗೀತೆಯಲ್ಲಿ ಹೇಳಿದಂತೆ ಸಾತ್ವಿಕ ವೃತ್ತಿಯ ವಾಙ್ಮಯ ತಪಸ್ಸು ಅವರದು.

ಇಂತಹ ಮಾದರಿ ಇಂದು ಕಣ್ಣೆದುರಿನಲ್ಲಿ ಅಗತ್ಯ. ಅದಕ್ಕಾಗಿ ಸ್ವಾರ್ಥದ ದೃಷ್ಟಿಯಿಂದ, ಉಪಚಾರಕ್ಕಾಗಿ ಅಲ್ಲ, ವಿ. ಸೀ.ಯವರಿಗೆ ದೀರ್ಘಾಯುರಾರೋಗ್ಯಗಳು ದೊರಕಲಿ ಎಂದು ಹಾರೈಸುತ್ತೇನೆ. ಧೀಮಾನ್ ವಿ. ಸೀ.ಯವರು ಶ್ರೀಮಾನ್ ವಿ. ಸೀ.ಯಾಗಿ ಇರಲಿ.

ಶ್ರೀರಂಗ

* * *

# ನನ್ನ ಆರಾಧ್ಯ ಕವಿ

ಸೆಂಟ್ರಲ್ ಕಾಲೇಜಿನಲ್ಲಿ ಓದುತ್ತಿದ್ದಾಗ, ಸ್ವಾತಂತ್ರ್ಯ ಸಮರದ ಬಿಸಿಯು ನಾಡಿನಲ್ಲೆಲ್ಲಾ ಉಲ್ಬಣಗೊಳ್ಳುತ್ತಿತ್ತು. ಆದರೆ ನಮ್ಮ ಮೈಸೂರಿನಲ್ಲಿ, ದೇಶೀಯ ರಾಜ್ಯವಾಗಿದ್ದ ಕಾರಣವೋ ಏನೋ, ಸ್ವಾತಂತ್ರ್ಯ ಚಳುವಳಿಯು ಕಾಡುಕಿಚ್ಚಿನಂತೆ ಆಗ ಇನ್ನೂ ಹರಡಿರಲಿಲ್ಲ. ಮುಖ್ಯ ಷಹರುಗಳಲ್ಲಿ ಅಲ್ಪ ಸ್ವಲ್ಪ ಆಂದೋಳನವು ನಡೆಯುತ್ತಿತ್ತು. ಕಾಲೇಜು ವಿದ್ಯಾರ್ಥಿಗಳು ಪಾಠಪ್ರವಚನಗಳಲ್ಲಿ ಪೂರ್ಣಾಸಕ್ತರಾಗಿದ್ದರೂ, ಈ ಆಂದೋಳನದ ಕಾವು ಅವರನ್ನು ಬಡಿದಿತ್ತು. ಭಾರತದ ಇತರ ಕಡೆಗಳಿಂದ ಬರುತ್ತಿದ್ದ ನಾಯಕರ ಭಾಷಣಗಳನ್ನು ತಪ್ಪದೆ ಕೇಳುತ್ತಿದ್ದರು. ನಾಯಕರೊಬ್ಬರ ಭಾಷಣವಾಗುವ ಮೊದಲು ಸ್ವಯಂಸೇವಕರು ರಾಷ್ಟ್ರಪ್ರೇಮದ ಗೀತೆಯೊಂದನ್ನು ಹಾಡುವ ವಾಡಿಕೆಯಿತ್ತು. ಒಮ್ಮೆ ಉತ್ತರ ಭಾರತದಿಂದ ಬಂದಿದ್ದ ಸ್ವಯಂಸೇವಕರು "ಸಿರ್ ಜಾಯೇತೋ ಜಾಯೆ" ಎಂದು ಮೊದಲಾಗುವ ಗೀತೆಯನ್ನು ಹಾಡಿದರು. ತಲೆಯನ್ನೇ ಬಲಿಕೊಟ್ಟು ರಾಷ್ಟ್ರದ ಸ್ವಾತಂತ್ರ್ಯವನ್ನು ಗಳಿಸುತ್ತೇನೆ ಎಂದು ಪ್ರತಿಜ್ಞೆಯನ್ನು ಮಾಡುವ ವೀರಗೀತೆ ಅದು. ಗಾಯಕರು ಅತ್ಯುತ್ಸಾಹದಿಂದ ಹಾಡಿದ್ದರು. ಗೀತೆಯ ಪ್ರತಿಯೊಂದು ವಾಕ್ಯವೂ ನಮಗೆ ಅರ್ಥವಾಗದಿದ್ದರೂ ನಾವೆಲ್ಲರೂ ಪುಳುಕಿತರಾಗಿದ್ದೆವು.

ಅದಾದ ಕೆಲವು ದಿನಗಳ ನಂತರ ಬಿ. ಎಸ್. ರಾಮರಾಯರು ಒಂದು ಸಂಜೆ ಕನ್ನಡ ಗೀತೆಯೊಂದನ್ನು ಹಾಡಿದರು. "ಪೋಗುವೆವು ಸಮರ ಸಮ್ಮುಖಕೆ ನಾವು, ಬೇಗಲೈತನ್ನಿರಿ ನಲವಿಂದ ನೀವು" ಎಂದು ಪ್ರಾರಂಭವಾಗುವ ವೀರಗೀತೆ. ರಾಷ್ಟ್ರಪ್ರೇಮವನ್ನು ಸಾಲುಸಾಲಿನಲ್ಲೂ ಸೂಸುತ್ತಿರುವ ನಾಡಹಾಡು ಅದು. "ಝಳಪಿಸಿರಿ ಅಸಿಗಳಂ ಮೊಳಗಿಸಿರಿ ಶಂಖಗಳ, ಓಕುಳಿಯಾಡಿರಿ ಅರಿಯ ಕಾಳನೆತ್ತರೊಳು, ಕಾಳಿ ಗುಡಿಗಿನ್ನೊಮ್ಮೆ ಸಾಲಾಗಿ ಪೋಗಿರಿ, ಸಾಲ್ ಸಾಲಾಗಿ ಪೋಗಿರಿ, ಇಂದಾ ಕಾಳ ಪಕ್ಷದ ಕೊನೆಯ ಕಾಳ ರಾತ್ರಿ" ಎಂದು ರಾಮರಾಯರು ಹಾಡಿದಾಗ, ಎಲ್ಲ

ವಾಕ್ಯಗಳೂ ಅರ್ಥವಾಗುತ್ತಿದ್ದುದರಿಂದ, ರೋಮಾಂಚನವಾಗುತ್ತಿತ್ತು. ಆ ಕ್ಷಣದಲ್ಲಿ ಯಾರಾದರೂ ನನ್ನನ್ನು ಕಾಳಿಗುಡಿಗೆ ಹೋಗುವ ಬಾ ಎಂದು ಕರೆದಿದ್ದರೆ, ಅವನ ಹಿಂದೆ ಪ್ರತಿಜ್ಞಾ ದೀಕ್ಷೆಗೆಂದು ಹಿಂದು ಮುಂದು ನೋಡದೆ ತಟ್ಟನೆ ಹೊರಡುತ್ತಿದ್ದೆ. ನನ್ನ ಪುಣ್ಯ! ಯಾರೂ ಆಗ ಕರೆಯಲಿಲ್ಲ. ನಾನೂ ಬದುಕಿಕೊಂಡೆ; ದೇಶವೂ ಬದುಕಿಕೊಂಡಿತು.

ವಿ. ಸೀ. ಯವರ ಗೀತವನ್ನು ಪೌಗಂಡ ವಯಸ್ಸಿನ ಒಗರಿದ್ದಾಗ ಕೇಳಿದ್ದೆ. ಆಗ ಉದ್ವೇಗಗೊಂಡಿದ್ದೆ. ಸುತ್ತುಮುತ್ತಲಿನ ಪರಿಸರವನ್ನು ಮರೆಯುವಷ್ಟು ಭಾವೋದ್ರಿಕ್ತನಾಗಿದ್ದೆ.

* * *

ಪೌಗಂಡ ವಯಸ್ಸು ಮೀರಿತ್ತು. ಗಂಡ ವಯಸ್ಸು ಪ್ರಾಪ್ತವಾಗಿತ್ತು. ಒಂದು ಸಂಜೆ ನನ್ನ ಬ್ರಹ್ಮಚಾರೀ ಬಿಡದಿಗೆ ರಾಮರಾಯರು ಬಂದಿದ್ದರು. "ಉಂಗುರ ರವ ಕೇಳಿ, ಕಾಲುಂಗರ ರವ ಕೇಳಿ, ಸಂತಸವಾಂತೆದೆ ಮೊರೆಯುತಲಿದೆಯಿದೊ" ಎಂಬ ಕನ್ನಡ ಗೀತೆಯನ್ನು ಹಾಡಿದರು. ಪ್ರಾಯ, ಗೀತೆಯ ಲಾಲಿತ್ಯ, ಸುಮಧುರ ಪದ ಬಂಧ, 'ನಿನ್ನಯ ಮೊಗದಲಿ ನಗುತಿಹ ಕಣ್ಗಳು ಬರುತಿವೆ ತೇಲುತಲೆನ್ನ ಕಡೆ,' ಇತ್ಯಾದಿಗಳು; ಇಲ್ಲದ ಪ್ರೇಯಸಿಯು ಎದುರು ಬರುತ್ತಿರುವಂತೆಯೇ ಹಗಲು ಗನಸನ್ನು ಕಟ್ಟಿತು. ಭವಲೋಕದಿಂದ ಭಾವನಾಲೋಕಕ್ಕೆ ತೇಲಿಸುತ್ತ ಒಯ್ದಿತು.

ವಿ. ಸೀ. ಯವರ ಹೊಸಗೀತೆಯಿದು ಎಂದು ಅನಂತರ ರಾಮರಾಯರು ಹೇಳಿದರು. ವಿ. ಸೀ.ಯವರ ವೈಯಕ್ತಿಕ ಪರಿಚಯವನ್ನು ಮಾಡಿಕೊಳ್ಳಲು ಆಗ ಕಾತರನಾದೆ. ವೈದ್ಯನಾಗಿದ್ದುದರಿಂದ ಪರಿಚಯವು ನಿಕಟವಾಗಲು ಅನುಕೂಲ ವಾಯಿತು. ಮಾತುಕತೆಗಳನ್ನಾಡಲು ಅವಕಾಶವೂ ದೊರಕುತ್ತಿತ್ತು.

* * *

ಏನನ್ನು ಮಾಡಿದರೂ ಚೊಕ್ಕವಾಗಿ ಮಾಡಬೇಕು. ಸುಸಂಸ್ಕೃತ ರೀತಿಯಲ್ಲಿ ಮಾಡಬೇಕು. ಒಂದಲ್ಲ ಒಂದು ಕಾಲದಲ್ಲಿ ಎಲ್ಲರಿಗೂ ಬಾಳು ದುರ್ಭರವಾಗುತ್ತದೆ. ಅಂತಹ ಕಾಲದಲ್ಲಿ ಮನಸ್ಸಿನಲ್ಲಿರುವ ನಂಜನ್ನು ಕಾವ್ಯದ ಮೂಲಕ ಹೊರಗೆಡಹ ಬಾರದು. ತಾತ್ಕಾಲಿಕ ಸಮಾಧಾನವನ್ನು ಅಂತಹವು ತಂದರೂ, ಸಮಾಜದ ದೃಷ್ಟಿ ಯಿಂದ, ಎಲ್ಲರ ಒಳಿತಿನ ದೃಷ್ಟಿಯಿಂದ, ಹಾಗೆ ಮಾಡುವುದು ಸಾಧುವಲ್ಲ. ಯುವ ಜನರ ಮನ ಒಲಿಸಿಕೊಂಡು, ಹಿತವಿಹಿತ ಪಥದಲ್ಲಿ ನಡೆಯುವಂತೆ ಪ್ರೇರೇಪಿಸುವುದು, ಬರಹಗಾರನ ಆದ್ಯ ಕರ್ತವ್ಯ. Sense of Ethical Values ಅನ್ನು ಸರ್ವಥಾ ಮರೆಯಬಾರದು. ಇವುಗಳನ್ನೇ ಅವರು ಒತ್ತಿ ಒತ್ತಿ ಹೇಳುತ್ತಿದ್ದರು.

ನುಡಿದಂತೆ ನಡೆದರು. ಉಡುವ ನವಿರು ಪಂಚೆ, ತೊಡುವ ಅಂಗಿ, ಬಿಗಿದ ಪಾಗು, ಎಲ್ಲದರಲ್ಲೂ ಚೊಕ್ಕತನವಿದೆ. ತಿನ್ನುವ ತಿಂಡಿ, ಕುಡಿಯುವ ಪಾನೀಯ, ಮೆಲ್ಲುವ ವೀಳೆಯ ಇವುಗಳೆಲ್ಲದರಲ್ಲೂ ಉತ್ತಮ ರುಚಿ ಮತ್ತು ಅಂದ, ಎರಡೂ

ಸಮನ್ವಯವಾಗಿವೆ. ನುಡಿಯುವ ಮಾತಿನಲ್ಲಿ, ಬಾಳಿನಲ್ಲಿ, ಇತರರಿಗೆ ನೋವಾಗದಂತೆ, ಹಲವರಿಗಾದರೂ ಹಿತವಾಗುವಂತೆ ನಡೆದುಕೊಂಡಿದ್ದಾರೆ. ಕಷ್ಟನಿಷ್ಠುರಗಳು ವೈಯಕ್ತಿಕವಾದುವು, ಅಂತರಂಗದಲ್ಲಿರಬೇಕಾದುವು, ಪ್ರದರ್ಶನಕ್ಕಲ್ಲ ಎಂದು ನುಡಿದಂತೆ ನಡೆದುಕೊಂಡಿದ್ದಾರೆ.

ಆಗಾದ ಕಾಲಕ್ಕೆ ಆಗಿ ಬಂದವರ ವಿಷಯದಲ್ಲಿ ವಿ. ಸೀ. ಯವರು ಕೃತಜ್ಞತೆಯಿಂದ ಕರಗಿ ಹೋಗುತ್ತಾರೆ. ಉಪಕಾರವನ್ನು ಸ್ಮರಿಸುವ ಆವೇಶದಲ್ಲಿ ಆಗುಹೋಗುಗಳ ಕಲ್ಪನೆಯೂ ಅವರಿಗೆ ಸಾಧ್ಯವಿಲ್ಲ. ಅಮಿತ ಕೃತಜ್ಞತೆಯೇ ಅವರ ಬಾಳನ್ನು ನಡಸಿರುವ ಒಂದು ಶಕ್ತಿ. ಅದೇ ಅವರ ಬಾಳನಡೆಗೆ ತುಸು ತೊಡಕೂ ಆಗಿರಬಹುದೋ ಎಂದನಿಸುತ್ತದೆ. Gratitude is like the perfume that the Violet bestows on the heel that crushes it ಎಂಬ ಆಂಗ್ಲ ಅನುಭಾವಿ ನುಡಿಯು ವಿ. ಸೀ. ಯವರನ್ನು ಕಂಡಾಗಲೆಲ್ಲ ಸ್ಮರಣೆಗೆ ಬರುತ್ತದೆ.

* * *

ಹೆಣ್ಣು ಮಕ್ಕಳನ್ನು ವಿವಾಹಾನಂತರ ಅತ್ತೆಯ ಮನೆಗೆ ಕಳಿಸಿಕೊಡುವಾಗ ಹೆತ್ತವರಿಗೆ ಆತಂಕವು ತಪ್ಪಿದ್ದಲ್ಲ. ಹುಟ್ಟುಮನೆಯ ವಾತಾವರಣವೇ ಸೇರಿದ ಮನೆಯಲ್ಲೂ ಇರುವುದು ಅಸಂಭವ. ಹಾಗಾಗಿ ಕಾತರವೂ ಆತಂಕವೂ ಇದ್ದೇ ಇರುತ್ತದೆ. ಅಂತಹ ಪರಿಸ್ಥಿತಿಯಲ್ಲಿ ಮನದ ತೊಳಲನ್ನು ತೋಡಿಕೊಳ್ಳುವುದು ಸುಲಭವೂ ಅಲ್ಲ, ವಿಹಿತವೂ ಅಲ್ಲ. ಆದರೂ, "ಬಾ ಮಗಳೆ, ಬಾ ತಾಯಿ, ಅಣಕಾಡ ಕಲಿಸುವೆನು, ಬಾಳನಣಕಿಸುತ ನೀನಿರಲು ನೋಡಿ ತಣಿಯುವೆನು; ಅತ್ತೆ ಅತ್ತಿಗೆಯರು ಆಡಿದಾ ಮಾತುಗಳು, ಕೊರೆಯುವುವು ಅರಿಯದಾ ನಿನ್ನ ಅತುಮವ; ಕಾಡುಮಿಗಗಳು ಸಾಧುವೆಂದೆನಿಸಿದಾಗ;" ಎಂದು "ತಾಯ ಬಯಕೆ"ಯನ್ನು ಬಳಸಿಕೊಂಡು ಬೀಳ್ಕೊಟ್ಟಾಗ, ಮನಸ್ಸು ಸಮಾಧಾನದಿಂದಿತ್ತು. ಕಾತರ ಆತಂಕಗಳು ಕಡಿಮೆಯಾಗಿದ್ದುವು.

ಅಂತೆಯೇ ನಮ್ಮ ಮೆಡಿಕಲ್ ಕಾಲೇಜನ್ನು ಸರಕಾರಕ್ಕೆ ವಹಿಸಿಕೊಡುವ ಉತ್ಸವದಲ್ಲಿ, ವಿದ್ಯಾರ್ಥಿ ವಿದ್ಯಾರ್ಥಿನಿಯರನ್ನು ಏನೆಂದು ಹರಸಲಿ ಎಂದು ಕಾತರನಾಗಿದ್ದೆ. "ತಂದೆ ಹರಕೆ"ಯು ನೆನಪಾಯ್ತು. ಬಳಸಿಕೊಂಡೆ. "ನಾವು ಗಳಿಸಿಹ ಪುಣ್ಯ ಕೀರುತಿ ಇವರ ಬಾಳಿಗೆ ಬೆರೆಯಲಿ; ನೆರವು ಕೆಳೆಗಳ ಬಾಳ ನಡಸಿರೆ ಎಲ್ಲ ಕಾಲಕು ಉಳಿಯಲಿ; ಹೆರರ ನೋವಿಗೆ ಕರಗುವಂತಹ ಬಾಳನಿವರು ನಡಸಲಿ" ಎಂದು ಹರಸಿದೆ. ಹಾಯ್ ಎನಿಸಿತು.

* * *

. ಭೃಂಗದ ಬೆನ್ನೇರಿ ಬಂದ ಕಲ್ಪನಾ ವಿಲಾಸವೇ ಕವಿಗಳ ಆಸ್ತಿ; ಭವಲೋಕದ ಬೇಗೆ ತಾಪಗಳನ್ನು ಮರೆಯದೆ ಭಾವಲಹರಿಯಲ್ಲಿ ತೊಡಗುವವರು ಕವಿಗಳೇ ಅಲ್ಲ

ಎಂದು ಕೆಲವರ ಅಭಿಪ್ರಾಯ. ವಾದ ವಿವಾದಗಳ ಕಣಕ್ಕೆ ಇಳಿಯುವ ಸಾಹಸ್ಕತೆ ಯಾಗಲೀ, ಪಾಂಡಿತ್ಯವಾಗಲೀ ನನಗಿಲ್ಲ. ಆದರೆ ಇಷ್ಟನ್ನು ಮಾತ್ರ ಹೇಳಬಲ್ಲೆ. ಬಾಳಿನಲ್ಲಿ ಬೇಗೆ ಬೇನೆಗಳು ಮುತ್ತಿದಾಗ, ವಿ. ಸೀ. ಯವರ ಯಾವುದೊಂದಾದರೂ ಗೀತೆಯು ಮನಸ್ಸನ್ನು ಹಗುರಗೊಳಿಸಿ ತುಸು ಸಮಾಧಾನವನ್ನು ಕರುಣಿಸಿದೆ. ನಿಂತ ನೆಲದ ಕೆಸರನ್ನು ಮರೆಯದೆ ಗಗನದತ್ತ ಭಾವನಾಲಹರಿಯನ್ನು ತೇಲಿಬಿಡುವುದರಲ್ಲಿ ವಿ. ಸೀ. ಯಶಸ್ವಿಯಾಗಿದ್ದಾರೆ.

ಹಾಗಾಗಿ, ವಿ. ಸೀ. ನನ್ನ ಆರಾಧ್ಯ ಕವಿ.

ರಾ. ಶಿ.

* * *

## ವಿಶ್ವಾಸಿ ಶ್ರೀ ವಿ. ಸೀ.

ಹತ್ತಿರ ಹತ್ತಿರ ಐವತ್ತು ವರ್ಷಗಳ ಪರಿಚಯ. ಇದಕ್ಕೂ ಹತ್ತು ಹನ್ನೆರಡು ವರ್ಷಗಳ ಹಿಂದೆ, ನಾನು ಕೋಟೆ ಹೈಸ್ಕೂಲಿನಲ್ಲಿ ಓದುತ್ತಿದ್ದಾಗ, ಅವರನ್ನು ಆಗಾಗ್ಗೆ ನೋಡುತ್ತಿದ್ದುದರ ಜ್ಞಾಪಕ. ಆಗ ಅವರೂ ಅಲ್ಲೇ ಓದುತ್ತಿದ್ದರೇನೊ? ಈಚೆಗೆ ನಮ್ಮ ನಮ್ಮ ಮಾತುಕತೆಗಳ ನಡುವೆ, ಆಗಾಗ್ಗೆ ಆ ಕೋಟೆ ಹೈಸ್ಕೂಲಿನಲ್ಲಿ ಹೆಡ್‌ಮಾಸ್ಟರುಗಳಾಗಿ ಹೋಗಿರುವ, ದಿವಂಗತ ಸರ್ವಶ್ರೀ ಸಿ. ಕೃಷ್ಣರಾವ್, ಪಾಲ್ ಚಿನ್ನಪ್ಪ, ಎಲ್. ಶೇಷಗಿರಿರಾವ್ ಇವರುಗಳ ನೆನಪುಗಳು ಬಂದಿರುವುದುಂಟು. ಶ್ರೀ ವಿ. ಸೀ. ಯವರೂ ಅಲ್ಲಿ ಓದಿದವರೇನೊ ಎಂಬ ಸಂದೇಹ.

ಆದರೆ ಪರಿಚಯವಾದುದು ಮಾತ್ರ ಅವರು ಮೈಸೂರು ಯೂನಿವರ್ಸಿಟಿಯ ಎಂ. ಎ. ಪದವೀಧರರಾಗಿ, ಬೆಂಗಳೂರು ಸೆಂಟ್ರಲ್ ಕಾಲೇಜಿಗೆ ಕನ್ನಡ ಪ್ರಾಧ್ಯಾಪಕರಾಗಿ ಬಂದಾಗಲೆ. ಆಗ ಅವರ ಮನೆಯಿದ್ದುದು ಬೆಂಗಳೂರು ಚಾಮರಾಜ ಪೇಟೆಯ ಎರಡನೆಯ ಮೆಯಿನ್ ರಸ್ತೆಯಲ್ಲಿ ಬಲಗಡೆಯ ಮೊದಲನೆಯದು. ಈಗ ಇರುವುದೂ ಅಲ್ಲಿಯೆ. ನಾನು ಆಗ ವಾಸಿಸುತ್ತಿದ್ದ ಮನೆ ಅದೇ ಚಾಮರಾಜ ಪೇಟೆಯ ಐದನೆಯ ಮೆಯಿನ್ ರಸ್ತೆಯಲ್ಲಿ. ಆಗ ನನ್ನ ವ್ಯಾಯಾಮ ಶಾಲೆಯೂ ಅದೇ.

ಆಗ ಹಿಂದೂಸ್ತಾನಿ ಸೇವಾದಳದ ಸ್ಥಾಪಕರಾಗಿದ್ದ ಡಾಕ್ಟರ್ ಎನ್.ಎಸ್.ಹರ್ಡೀಕರರು, ಬಾಗಲಕೋಟೆ ಊರಿನಲ್ಲಿ ಒಂದು Physical Culture Centre ಅನ್ನು ಸ್ಥಾಪಿಸುವವರಿದ್ದು, ಅದರ ಉದ್ಘಾಟನೆಗೆ ನನ್ನನ್ನು ಆಹ್ವಾನಿಸಿದ್ದರು. ಇಂಗ್ಲಿಷಿನಲ್ಲಿದ್ದ ಆ ನನ್ನ ಅಂದಿನ ಅಧ್ಯಕ್ಷ ಭಾಷಣವನ್ನು ಸರಳ ಕನ್ನಡದಲ್ಲಿ ಮಾಡಿ ಕೊಟ್ಟವರು ಶ್ರೀ ವಿ. ಸೀ. ಅವರು. ಪರಿಚಯವಾದುದೂ ಆಗಲೆ. ಪರಿಚಯ ಮಾಡಿಸಿಕೊಟ್ಟವರು ಆಗ 'ರಾಮ್ ಮೋಹನ್ ಕಂಪನಿ ಪಬ್ಲಿಷರ್ಸ್ ಅಂಡ್

ಬುಕ್ ಸೆಲ್ಲರ್ಸ್'ನ್ನು ಸ್ಥಾಪಿಸಿದ್ದ ಶ್ರೀ ಬಿ. ಎಸ್. ರಾಮರಾಯರು. (ಆಗ ನೇಷನಲ್ ಹೈಸ್ಕೂಲು ಉಪಾಧ್ಯಾಯರೂ ಆಗಿದ್ದರು.)

ಈ ಪರಿಚಯ ಅಷ್ಟರಲ್ಲೇ ನಿಲ್ಲದೆ ವೃದ್ಧಿಸುತ್ತ ಒಂದು ಸ್ನೇಹ...ಅಲ್ಲ... ವಿಶ್ವಾಸ...ಅದೂ ಅಲ್ಲ...ನನ್ನ ಶಿಷ್ಯಭಾವ, ಅವರ ಗುರುಭಾವವಾಗಿ ಬೆಳೆದು ನಿಂತಿತು...ನಿಂತಿದೆ. ಅವರು ವಯಸ್ಸಿನಲ್ಲಿ ನನಗಿಂತ ಸ್ವಲ್ಪ ಕಿರಿಯರು; ಆದರೇನಂತೆ! 'ವೃದ್ಧ ಶಿಷ್ಯೋ, ಗುರೂರ್ ಯುವಃ' ಇದ್ದಿಲ್ಲವೇನು! ಈಗ ಇಲ್ಲವೇನು? 'ನನ್ನ ಪೂರ್ವಿಕರಲ್ಲಿ ವಿದ್ಯಾಬುದ್ಧಿಗಳಿಗೆ ಅವಶ್ಯಕತೆಯಾಗಲಿ, ಸಮಯ ಸನ್ನಿವೇಶಗಳಾಗಲಿ, ಕಾತರ ಆತುರತೆಗಳಾಗಲಿ ಇರಲಿಲ್ಲವೇನೊ!' ಎಂದೆನಿಸುತ್ತದೆ. ಅದಕ್ಕೇ ನಾನು ಇನ್ನೂ ಕಸರತ್ತು ಕಲಿಸುವ ದಡ್ಡನಾಗಿಯೆ ಉಳಿದಿದ್ದೇನೆ...ಉಳಿದುಬಿಟ್ಟೆ. ಇನ್ನೇನಾದರೂ ಆಗಲು ಸಮಯವಿರಲಿಲ್ಲ. ಸಾಧ್ಯವೂ ಇರಲಿಲ್ಲ. ಎಂಟು ಹತ್ತು ಜನರಿದ್ದ ಸಂಸಾರನೊಗವನ್ನು ಆಗ ನಾನು ಹೊರಬೇಕಾಗಿತ್ತು. ನನ್ನ ಮತ್ತು ಶ್ರೀ ವಿ. ಸೀ. ಅವರ ಪರಿಚಯ ಮತ್ತು ಭಾವನೆಗಳು ಹೇಗೆ ಮುಂದುವರೆದವೆಂಬುವನ್ನು ತಿಳಿಸಲು ಈ ನನ್ನ ಹರಕು ಬರವಣಿಗೆಯಲ್ಲಿ ಈಗ ಪ್ರಯತ್ನಿಸುತ್ತಿದ್ದೇನೆ.

ಬಲು ಹಿಂದೆ ಒಮ್ಮೆ ಎಲ್. ಶೇಷಗಿರಿರಾಯರು (ಕೋಟೆ ಹೈಸ್ಕೂಲ್ ಹೆಡ್ ಮಾಸ್ಟರ್ ಆಗಿದ್ದವರು) ಕೆಲಕಾಲ ಮೈಸೂರಿನಲ್ಲೂ ಇದ್ದರು. ಶ್ರೀ ವಿ. ಸೀ. ಯವರು ಓದುತ್ತಿದ್ದಾಗ ಅವರ ಹೆಡ್ ಮಾಸ್ಟರ್ ಆಗಿದ್ದರಂತೆ. ಶ್ರೀ ವಿ. ಸೀ. ಯವರೂ ಕೀರ್ತಿಶೇಷರಾದ ಶ್ರೀ ವೆಂಕಣ್ಣಯ್ಯನವರೂ (ಇಬ್ಬರೂ ಕನ್ನಡಶ್ರೀ ಭಾಗ್ಯವಂತರುಗಳೆ) ಒಟ್ಟಿಗೆ ಬೀದಿಗಳಲ್ಲಿ ನಡೆದಾಡುತ್ತಿದ್ದುದನ್ನು ಕಂಡು, ಒಮ್ಮೆ ವಿ. ಸೀ.ಯವರು ಒಬ್ಬರೇ ಸಿಕ್ಕಾಗ ಶೇಷಗಿರಿರಾಯರೇ ಬಳಿಗೆಬಂದು ಹೀಗೆಂದರಂತೆ: "ಲೋ! ಸೀತಾರಾಮು, ನೋಡೂ, ನೀನು ವೆಂಕಣ್ಣಯ್ಯನ ಜೊತೇಲಿ ಬೀದೀಲಿ ಮಾತ್ರ ನಡೆದು ಹೋ ೕ ಗ ಬೇ ೕ ಡ" ಒಡನೆ ವಿ. ಸೀ. ಯವರು ಈ ಮಾತನ್ನು ಮೇಷ್ಟ್ರು ಯಾವ ಅರ್ಥದಲ್ಲಿ ಹೇಳುತ್ತಿದ್ದಾರೆ ಎಂಬುದನ್ನು ಅರ್ಥಮಾಡಿಕೊಂಡು ನಕ್ಕು ಸುಮ್ಮನಾಗಿಬಿಟ್ಟರಂತೆ...ಅವರವರ ಹುಟ್ಟು, ಬೆಳವಣಿಗೆ ಹಾಗಿದ್ದರೆ ಯಾರು ಏನು ಮಾಡಲಾದೀತು? ಕೀರ್ತಿಶೇಷ ವೆಂಕಣ್ಣಯ್ಯನವರಿದ್ದುದು ಆರಡಿ, ಮೂರಂಗುಲಗಳ ಎತ್ತರ. ಶ್ರೀ ವಿ. ಸೀ.ಯವರ ನಿಲವು (ಅವರ ಠೀವಿ ರುಮಾಲು ತೆಗೆದಿಟ್ಟರೆ) ಐದಡಿ ಮೂರಂಗುಲಗಳಷ್ಟು. ಈ ಒಂದಡಿ ವ್ಯತ್ಯಾಸ ದಿವಂಗತ ಶೇಷಗಿರಿರಾಯರ ಕಣ್ಣುಗಳಿಗೆ ಎಷ್ಟು ವ್ಯತ್ಯಾಸವಾಗಿ ಕಂಡಿತೋ ಏನೋ!

ನಾನೂ, ಶ್ರೀ ವಿ. ಸೀ. ಅವರೂ ಒಟ್ಟಿಗೆ ನೂರಾರು...ಸಾವಿರಾರು ಸಲ ಬೀದಿಗಳಲ್ಲಿ ನಡೆದು ಹೋಗಿದ್ದೇವೆ. ಯಾರ್ಯಾರು ಏನೇನು ಕಂಡರೊ! ಹ್ಯಾಗ್ಯಾಗೆ ಕಂಡರೊ! ಏನೇನಂದು ಕೊಂಡರೊ! ಏನೇನೆಂದರೊ? ಆದರೂ, ಶ್ರೀ ವಿ. ಸೀ. ಅವರು "ಆ ದಡ್ಡ ಅಯ್ಯರ್ ಜತೆಯಲ್ಲಿ ನೀನು ತಿರುಗಾಡಬೇಡ" ಎಂದು ಯಾರೊಬ್ಬರೂ ಅವರಿಗೆ ಹೇಳಿದರೆಂದು ನನ್ನೊಡನೆ ಇದುವರೆಗೂ ಹೇಳಿಲ್ಲ. ಒಂದುವೇಳೆ

ಕೊಳ್ಳುವಂಥ ಆಸಾಮಿಯೂ ಅಲ್ಲ ಅವನು. ಎಂಥ ಪ್ರಬಲ ಶಕ್ತಿಗಳೂ ಅವನನ್ನು ಹಿಂದಕ್ಕೆ ಎಳೆಯಲಾರವು. ಆದುದರಿಂದ ಅವನ ಕಾಣ್ಕೆಯ ಸೌಭಾಗ್ಯವನ್ನು ಇತರರಿಗೂ ಹಂಚಲು ವಿಮರ್ಶಕ ಅತ್ಯಾವಶ್ಯಕ. ಆದರೆ ಅವನ ತೀರ್ಪನ್ನು ಒಪ್ಪುವುದು ಅಥವಾ ಬಿಡುವುದು ಜನತೆಯ ಮತಿಗೆ ಸಂಬಂಧಿಸಿದ್ದು. ಕಾವ್ಯದಲ್ಲಿ ಆಸಕ್ತಿ ಹುಟ್ಟಿಸುವುದು ಅವನ ಮುಖ್ಯ ಕರ್ತವ್ಯ.

ಕಾವ್ಯಗಂಗೆಯ ಮಾನಸ ಸರೋವರ ಜನಮನಸ್ಸು; ಅದರ ಗಮ್ಯಸ್ಥಾನ ಜನಮನೋಸಾಗರ. ಜನಮನಸ್ಸನ್ನು ಸೇರಿದಾಗಲೇ ಕಾವ್ಯಕ್ಕೆ ಸಾರ್ಥಕತೆ. ಅದನ್ನು ಸಹೃದಯ ಪುನಃ ಅನುಭವಿಸಿದಾಗಲೆ ಅದರ ಮಹಿಮೆ ವ್ಯಕ್ತವಾಗುತ್ತದೆ. ವಿಮರ್ಶಕನ ಪುನರನುಭವವೆ, ಅಂದರೆ ಕಾವ್ಯವನ್ನು ಗ್ರಹಿಸಿಕೊಳ್ಳಲು ಎಸಗುವ ಪ್ರಯತ್ನವೆ, ವಿಮರ್ಶೆ. ಈ ದೃಷ್ಟಿಯಿಂದ ವಿಮರ್ಶೆ ಪುನಸ್ಸೃಷ್ಟಿಯಾಗುತ್ತದೆ.

ಕರ್ನಾಟಕ ಕಾದಂಬರಿ, ಅಭಿಜ್ಞಾನ ಶಾಕುಂತಲ ನಾಟಕ ಮತ್ತು ಅಶ್ವತ್ಥಾಮನ್—ಈ ಮೂರು ವಿ. ಸೀ. ಅವರ ವಿಮರ್ಶಾಕೃತಿಗಳು. ಮೊದಲ ಎರಡು ಮುಖ್ಯವಾಗಿ ವರ್ಣನಾತ್ಮಕವಾದವು; ವರ್ಣನಾತ್ಮಕ, ದರ್ಶನಾತ್ಮಕ ಮತ್ತು ತುಲನಾತ್ಮಕ ದೃಷ್ಟಿಗಳು ಮೂರು ಸೇರಿ ಮೂರನೆಯ ವಿಮರ್ಶೆ ಬೆಳೆದಿದೆ. ಕರ್ನಾಟಕ ಕಾದಂಬರಿಗೆ ಕನ್ನಡ ಸಾಹಿತ್ಯದಲ್ಲೊಂದು ಗೌರವವಾದ ಸ್ಥಾನವಿದೆ. ಆ ಗೌರವಕ್ಕೆ ಆ ಕೃತಿಯ ಭಾಷಾ ಪ್ರೌಢಿಮೆಗಿಂತ ಹೆಚ್ಚಾಗಿ ಅದರಲ್ಲಿ ಮೊದಲಿಂದ ಕೊನೆಯ ತನಕ ಕ್ರತುಶಕ್ತಿಯಾಗಿ ಪ್ರವಹಿಸುತ್ತಿರುವ ಪ್ರೇಮ ಕಾರಣ. ಈ ಚಂಪೂ ಕೃತಿ ಬಾಣನ ಗದ್ಯಕಾದಂಬರಿಯ ಅನುಕೃತಿಯಾದರೂ ಸಹೃದಯರಿಗೆ ಅದೊಂದು ಸ್ವತಂತ್ರ ಕೃತಿಯೆಂದು ಅನ್ನಿಸದಿರದು. ಹೆಜ್ಜೆ ಹೆಜ್ಜೆಗೂ ಕಾಣುವ ಅದ್ಭುತ ರಮ್ಯ ಚಿತ್ರಗಳ, ರಸಘಟ್ಟಗಳ ಮತ್ತು ಅಲ್ಲಲ್ಲೆ ಕಾಣ್ಕೆಗೆ ಲಭ್ಯವಾಗುವ ದರ್ಶನಧ್ವನಿಯ ಸೌಂದರ್ಯಕ್ಕೆ ಮನಸೋಲದವರಿಲ್ಲ. ಕಥಾ ಸಂವಿಧಾನ, ಪಾತ್ರ ರಚನೆ, ಸನ್ನಿವೇಶ ಕಲ್ಪನೆ, ಚಿತ್ರಕಲೆ, ವರ್ಣನೆ, ಪ್ರೇಮ ದರ್ಶನ, ಜೀವನ ದರ್ಶನ, ಸಂಸ್ಕೃತಿ, ಪ್ರಕೃತಿ-ಮಾನವ ಸಂಬಂಧ, ನರಾಮರ ಸಂಬಂಧ—ಇವೇ ಮೊದಲಾದ ವಿಷಯಗಳ ಮೇಲೆ ಅನೇಕ ವಿಮರ್ಶಾಕೃತಿಗಳನ್ನು ರಚಿಸಬಹುದು. ಅಲ್ಲಿ ಇಲ್ಲಿ ಬಂದಿರುವ ಒಂದೆರಡು ದರ್ಶನಾತ್ಮಕ ವಿಮರ್ಶನ ಪ್ರಬಂಧಗಳಿಂದ ನಾವು ತೃಪ್ತರಾಗಬೇಕಾಗಿದೆ. ಮೈಸೂರು ವಿಶ್ವವಿದ್ಯಾನಿಲಯದ ಪ್ರಚಾರ ಪುಸ್ತಕ ಮಾಲೆಯಲ್ಲಿ ಪ್ರಕಟವಾಗಿರುವ ವಿ. ಸೀ.ಯವರ 'ಕರ್ನಾಟಕ ಕಾದಂಬರಿ' ಮೂಲವನ್ನು ಓದಬಯಸುವವರಿಗೆ ಪ್ರವೇಶದಂತಿದೆ. ಇದರಲ್ಲಿ ಮೂರು ವಿಭಾಗಗಳಿದ್ದು ಮೊದಲನೆಯದರದಲ್ಲಿ ಕತೆಯನ್ನು ಸರಳವಾಗಿ ಸ್ವಾರಸ್ಯವಾಗಿ ಸಂಗ್ರಹಿಸಿ, ಕವಿಯ ಮತ್ತು ಕೃತಿಯ ಪರಿಚಯವನ್ನು ಸಂಕ್ಷೇಪವಾಗಿ ಮಾಡಿಕೊಟ್ಟಿದೆ. ಎರಡನೆಯದರಲ್ಲಿ ಚಿತ್ರ, ಸನ್ನಿವೇಶ ಮತ್ತು ವ್ಯಕ್ತಿಗಳ ಪರಿಚಯ ನಡೆದಿದೆ. ಕಾದಂಬರಿಯಲ್ಲಿ ಕತೆಗಿಂತ ವರ್ಣನೆಗೇ ಪ್ರಧಾನಸ್ಥಾನ; ಕೇವಲ ವರ್ಣನೆಗಾಗಿಯೆ ಈ ಕೃತಿಯನ್ನು ಓದಿ ಸವಿಯಬಹುದಾಗಿದೆ. 'ಈ ಕವಿಗೆ ಕಾಣದ

ಬಣ್ಣವಿಲ್ಲ, ವಸ್ತುವಿಲ್ಲ, ಕೇಳಿಸದ ಶಬ್ದವಿಲ್ಲ....ಮುದಿಗಿಳಿಯ ಸವೆದ ಕೊಕ್ಕು, ಮರಿಗಳ ತುಪ್ಪುಳು, ತೊವಲ ಪಂಜರ, ಬಿಸಿಲ ಜಳ, ಬೇಡರೊಡೆಯನ ಎದೆಮಾಟ, ಹಳದಿಕಲ್ಲ ಹಾಸು, ಸಂಗೀತಕ್ಕೆ ಕುಮರಿ ಒಲಿವ ರೀತಿ,....' ಇಂತಹ ಚಿತ್ರಗಳು ಗ್ರಂಥದಲ್ಲಿ ತಾವೇ ತಾವು. 'ತಾವೇ ತಾವು' ಎಂಬ ಪದಗುಚ್ಛದ ಅರ್ಥವನ್ನಿಲ್ಲಿ ಸಂಪೂರ್ಣವಾಗಿ ಗ್ರಹಿಸಬೇಕು. ಬೇಡ ಗಿಳಿಮರಿಗಳ ಗಂಟಲನ್ನು ಮುರಿದು ನೆಲಕ್ಕೆ ಬಿಸಾಡುವ ಹೃದಯವಿದ್ರಾವಕವಾದ ವರ್ಣನೆಯ ಪದ್ಯ ಯಾವ ಭಾಷೆಯ ಅತ್ಯುತ್ತಮ ಕವನದ ಮಟ್ಟಕ್ಕಾದರೂ ನಿಲುವಂಥದು. ಮೂರನೆಯ ಭಾಗದಲ್ಲಿ ಕಾದಂಬರಿಯಿಂದ ವ್ಯಕ್ತವಾಗುವ ಲೌಕಿಕ ನಯದ ಸ್ವರೂಪವನ್ನು ಕವಿದರ್ಶನದ ಸೌಂದರ್ಯವನ್ನು ಒಂದೆರಡು ಮಾತುಗಳಲ್ಲಿ ಪರಿಚಯ ಮಾಡಿಕೊಡಲು ಯತ್ನಿಸಿದ್ದಾರೆ. ಕಾದಂಬರಿಯಂಥ ಕೃತಿಯ ಸಂಪೂರ್ಣ ಸಮಗ್ರ ಪರಿಚಯವನ್ನು ಇಂಥದೊಂದು ಕಿರುಹೊತ್ತಗೆಯಲ್ಲಿ ಹೇಗೆ ತಾನೆ ಮಾಡಿಕೊಡಲಾದೀತು?

'ಅಭಿಜ್ಞಾನ ಶಾಕುಂತಲ ನಾಟಕ' ವಿ.ಸೀ. ಅವರ ಎರಡನೆಯ ವಿಮರ್ಶಾಕೃತಿ. ಕಾಳಿದಾಸನ ಈ ಅಮರ ಕೃತಿ ಸುಮಾರು ೧೫೦೦ ವರ್ಷಗಳಿಗೆ ಹಿಂದೆ ಅವತರಿಸಿದಾಗಿನಿಂದ ಇಂದಿನ ತನಕ ಪೌರ್ವಾತ್ಯ ಪಾಶ್ಚಾತ್ಯ ಪಂಡಿತರೆಲ್ಲ ವ್ಯಾಖ್ಯಾನ ವಿಮರ್ಶೆ ಟಿಪ್ಪಣಿಗಳನ್ನು ಬರೆಯುತ್ತಲೇ ಇದ್ದಾರೆ. ಅದನ್ನು ಎಷ್ಟು ಸಾರಿ ಓದಿದರೂ, ಎಷ್ಟು ಸಾರಿ ಇತರರಿಗೆ ಓದಿ ಹೇಳಿದರೂ ಜನರ ಮನಸ್ಸು ತಣಿಯದು. ಮತ್ತೆ ಮತ್ತೆ ಓದಿದಂತೆಲ್ಲ ಹೊಸ ಹೊಸ ಅನುಭವಗಳು ಹೊಸ ಹೊಸ ಭಾವಗಳು ಮೂಡುತ್ತಿರುತ್ತವೆ. ಈಗಲೂ ರಸಾಭಿಜ್ಞರು ಕವಿ ಹೃದಯವನ್ನು ಒಳಹೊಕ್ಕು ನೋಡುತ್ತಿದ್ದಾರೆ. ಇಷ್ಟಾದರೂ ಆ ಹೃದಯದ ಗುಟ್ಟೆಲ್ಲ ರಟ್ಟಾಗಿದೆ ಎನ್ನುವಂತಿಲ್ಲ. ಇದೇ ಹಿರಿಯ ಕವಿಯ ವಿಶ್ವಕೃತಿಯ ಗುಟ್ಟು. ಆದುದರಿಂದ ಎಲ್ಲ ಭಾಷೆಗಳಲ್ಲಿಯೂ ಆ ಕೃತಿಯ ಬಗ್ಗೆ ಲೇಖನಗಳು ಗ್ರಂಥಗಳು ಬರಬೇಕಾಗಿದೆ.

ನಾಟಕದ ಮೂಲಕಥೆ, ನಾಟಕದಲ್ಲಿ ಮಾಡಿಕೊಂಡಿರುವ ಮಾರ್ಪಾಟುಗಳು, ಕಥಾಸಂವಿಧಾನ, ಅಂಕಗಳ ರಚನೆ, ಅವುಗಳ ಪರಸ್ಪರ ಸಂಬಂಧ–ಇವು ಈ ವಿಮರ್ಶೆಯಲ್ಲಿ ಪ್ರತಿಪಾದಿತವಾಗಿರುವ ವಿಷಯಗಳು. ಕಥೆಯ ಬೆಳವಣಿಗೆಯ ನಿರೂಪಣೆಯಲ್ಲಿಯೆ ಒಂದು ಘಟನೆಗೂ ಮತ್ತೊಂದು ಘಟನೆಗೂ ಇರುವ ಪರಸ್ಪರ ಸಂಬಂಧ, ಅವುಗಳ ಚೋದಕ ಶಕ್ತಿಯಾಗಿ ಕಥೆಯ ತುಂಬ ಹಸರಿ ಹಬ್ಬಿರುವ ತತ್ತ್ವದರ್ಶನಗಳ ವಿವರಣೆಯನ್ನು ಕಾಣಿಸಿದೆ. ಅಲ್ಲಲ್ಲೆ ತಮ್ಮ ಅಭಿಪ್ರಾಯಗಳನ್ನು ವ್ಯಕ್ತಪಡಿಸಿದ್ದಾರೆ. ಆ ಹಿರಿಯ ಕೃತಿಯ ಸರ್ವತೋಮುಖವಾದ ಸರ್ವಾಂಗೀಣವಾದ ಪರಿಚಯವನ್ನು ಈ ಸಣ್ಣ ಹೊತ್ತಗೆಯಲ್ಲಿ ನಿರೀಕ್ಷಿಸಲಾಗದು. "ನಾಟಕದಲ್ಲಿನ ಎಲ್ಲ ವ್ಯಕ್ತಿಚಿತ್ರಗಳನ್ನಾಗಲೀ, ಎಲ್ಲ ರಮಣೀಯತೆಯನ್ನಾಗಲೀ, ಕವಿತೆಯ ಮಾಧುರ್ಯ, ಭಾವಾರ್ಥ ಪುಷ್ಟಿ, ಔಚಿತ್ಯ, ಕಾರ್ಯಸಾಧನಾಶಕ್ತಿ, ರಸದರ್ಶನಗಳನ್ನಾಗಲೀ ಇಲ್ಲಿ ವಿವರಿಸಲು ಅವಕಾಶವಿಲ್ಲ"ವೆಂದು ತಿಳಿಸಿದ್ದಾರೆ.

'ಅಶ್ವತ್ಥಾಮನ್' ಆಧುನಿಕ ನಾಟಕಕಾರರೊಬ್ಬರ ಕೃತಿಯನ್ನು ಕುರಿತ ವಿಮರ್ಶೆ. ಆಚಾರ್ಯ 'ಶ್ರೀ'ಯವರ ಈ ನಾಟಕ ಕನ್ನಡ ನಾಟಕ ಚರಿತ್ರೆಯಲ್ಲೊಂದು ಮೈಲಿಗಲ್ಲಿನಂತಿದೆ. ಅದು ಪ್ರಕಟವಾದಾಗ ವಿದ್ವಜ್ಜನರಲ್ಲಿ, ರಸಿಕರಲ್ಲಿ ಹೊಸ ಹೊಸ ಭಾವಗಳನ್ನು ಕೆರಳಿಸಿದಂತೆ, ನೂತನ ಪ್ರಭಾವವನ್ನು ಬೀರಿದಂತೆ, ಮುಂದೆಯೂ ಅದು ಜನಮನಸ್ಸಿನಲ್ಲಿ ಹೊಸ ಹೊಸ ಭಾವಗಳನ್ನು ಚಿಗುರಿಸಲಿದೆ, ಹೊಸ ಪ್ರಭಾವವನ್ನು ಬೀರಲಿದೆ. ಮಹಾಭಾರತದ ಅಶ್ವತ್ಥಾಮನ ಕಥೆಯನ್ನು ಏಜಾಕ್ಸ್ ಎಂಬ ಗ್ರೀಕ್ ನಾಟಕದ ಅಚ್ಚಿನಲ್ಲಿ ಎರಕಹೊಯ್ದು ಆದ ನಾಟಕವಿದು. ಮಹಾಭಾರತದ ಅಶ್ವತ್ಥಾಮನ ಜೀವನದರ್ಶನಕ್ಕೂ ಈ ನಾಟಕದ ಅಶ್ವತ್ಥಾಮನ ಜೀವನದರ್ಶನಕ್ಕೂ ವ್ಯತ್ಯಾಸವಿರುವುದರಿಂದ ಕಥೆಯೂ ಅಲ್ಲಲ್ಲಿ ಮಾರ್ಪುಗೊಳ್ಳಬೇಕಾಯಿತು. ಮೂಲದಲ್ಲಿಲ್ಲದ ಹೊಸ ವ್ಯಕ್ತಿಗಳ, ಹೊಸ ಸನ್ನಿವೇಶಗಳ ಕಲ್ಪನೆ ಅಗತ್ಯವಾಯಿತು. ಒಟ್ಟಿನಲ್ಲಿ ಈ ನಾಟಕ ಗ್ರೀಕ್ ನಾಟಕದ ಜಾಡನ್ನು ಹಿಡಿಯಿತು. ಇಲ್ಲಿ ಮಾಡಿಕೊಂಡಿರುವ ಕೆಲವು ಮಾರ್ಪಾಡುಗಳ ಬಗ್ಗೆ ವಿದ್ವಜ್ಜನರಲ್ಲಿ ಮತಭೇದವಿದ್ದರೂ ನಾಟಕದ ರೂಪಾಂಶ, ಚಿಂತನಾಂಶ, ಭಾವಾಂಶಗಳ ವಿಷಯದಲ್ಲಿ ಭಿನ್ನಾಭಿಪ್ರಾಯವೇ ಇಲ್ಲ. ಭಾಷಾ ಪ್ರೌಢಿಮೆ, ಧ್ವನಿಮನೋಹರತೆ, ಅರ್ಥಸಂಪನ್ನತೆ, ಭಾವ ಸಂಪನ್ನತೆ, ಛಂದಸ್ಸಿನ ಲಯ ವಿನ್ಯಾಸ ಮೊದಲಾದುವುಗಳಂತು ಓದುಗರನ್ನು ಮುಗ್ಧಗೊಳಿಸುವಂಥವು; ಕೃತಿಯನ್ನು ಅಮರಗೊಳಿಸುವಂಥವು.

ವಿ. ಸೀ. ಅವರು ಈ ಕೃತಿಯನ್ನು ತುಂಬ ದಕ್ಷತೆಯಿಂದಲೆ ಪರಿಚಯ ಮಾಡಿಕೊಟ್ಟಿದ್ದಾರೆ. ನಾಟಕಕಾರರ ಆಶಯ ಆದರ್ಶ ದರ್ಶನಗಳನ್ನು ಚೆನ್ನಾಗಿ ಗ್ರಹಿಸಿಕೊಂಡು, ನಾಟಕದ ಹಿರಿಮೆಗೆ ಕುಂದು ಬಾರದಂತೆ, ಗೌರವದಿಂದ, ಉತ್ಸಾಹದಿಂದ, ಶ್ರದ್ಧೆಯಿಂದ, ಅದನ್ನು ವಿಮರ್ಶಿಸಿದ್ದಾರೆ. ಯಾವ ಕೃತಿಯನ್ನೆ ಆಗಲಿ ವಿಮರ್ಶಿಸುವುದಕ್ಕೆ ಮುಂಚೆ ವಿಮರ್ಶಕ ಆ ಕೃತಿಕಾರನ ಆಸೆ ಆಕಾಂಕ್ಷೆಗಳನ್ನು, ಸ್ವರೂಪ ಸ್ವಭಾವಗಳನ್ನು, ನೀತಿ ರೀತಿಗಳನ್ನು ಧ್ಯೇಯ ದರ್ಶನಗಳನ್ನು ಚೆನ್ನಾಗಿ ಅರಿತುಕೊಂಡಿರಬೇಕು. ಯಾವುದಾದರೂ ಒಂದು ಗೀತೆಯನ್ನೊ ಕಾವ್ಯಭಾಗವನ್ನೊ ಬರೆಯಲು ಪ್ರಚೋದಿಸಿದ ಶಕ್ತಿಗಳಾವುವು, ಬರೆದ ಸನ್ನಿವೇಶ ಯಾವುದು, ಬರೆಯಲು ಕಾರಣವೇನು ಎಂಬಿವೇ ಮೊದಲಾದ ವಿಷಯಗಳಿಗೆ ಉತ್ತರಗಳನ್ನು ಸಮರ್ಪಕವಾಗಿ ದೊರಕಿಸಿಕೊಂಡರೆ ಆ ಕವಿಯ ಕಾವ್ಯವನ್ನು ಮೆಚ್ಚಲು ಅಥವಾ ತೂಗಿ ನೋಡಲು ಅನುಕೂಲವಾಗುತ್ತದೆ. ವಿ. ಸೀ. ಅವರು ಶ್ರೀ ಅವರನ್ನು ಚೆನ್ನಾಗಿ ಬಲ್ಲವರು ; ನಾಟಕದ ಚಾಲಕ ಶಕ್ತಿಯಾದ ಕವಿ ಮನೋಧರ್ಮವನ್ನು ಚೆನ್ನಾಗಿ ಅರಿತವರು. ಈ ಕೃತಿಯ ಬಗ್ಗೆ ಅಧಿಕಾರದಿಂದ ಮಾತಾಡಲರ್ಹರಾದವರು. ಆದುದರಿಂದ ಇವರ ಈ ವಿಮರ್ಶಾಕೃತಿಗೆ ತುಂಬ ಬೆಲೆಯಿದೆ. ಆದರೆ ಇಲ್ಲಿ ನಿರೂಪಿತವಾಗಿರುವ ಅಭಿಪ್ರಾಯಗಳನ್ನೆಲ್ಲ ತೆಕ್ಕೆತೆಕ್ಕೆಯಾಗಿ ಯಾರೂ ಒಪ್ಪಬೇಕಾಗಿಲ್ಲ. ತನ್ನ ಅಭಿಪ್ರಾಯವನ್ನು ನೀಡಲು ವಿಮರ್ಶಕ ಎಂತು ಸ್ವತಂತ್ರನೋ, ಆ ಅಭಿ

ಪ್ರಾಯವನ್ನು ಒಪ್ಪುವುದರಲ್ಲಿ ಅಥವಾ ಬಿಡುವುದರಲ್ಲಿ ವಾಚಕನೂ ಅಷ್ಟೇ ಸ್ವತಂತ್ರನು.

ಏಜಾಕ್ಸ್ ನಾಟಕದ ಕಥೆ, ಮಹಾಭಾರತದ ಮೂಲಕಥೆ, ಮತ್ತು ಪ್ರಕೃತ ನಾಟಕದ ಕಥೆ, ಅವುಗಳ ಪರಸ್ಪರ ಸಾಮ್ಯ-ವೈಷಮ್ಯಗಳು ವ್ಯಕ್ತಗೊಳ್ಳುವಂತೆ, ಆಯಾ ಕವಿಗಳ ದೃಷ್ಟಿಧ್ಯೇಯಗಳು ಗ್ರಾಹ್ಯವಾಗುವಂತೆ ಸ್ವಾರಸ್ಯವಾಗಿ ಸಂಗ್ರಹಿಸಿದ್ದಾರೆ. ನಾಟಕದ ತಂತ್ರವನ್ನು ಸಾಕಷ್ಟು ವಿವರಿಸಿದ್ದಾರೆ. ಗ್ರೀಕ್ ಮತ್ತು ಕನ್ನಡ ನಾಟಕಗಳ ಪಾತ್ರಗಳನ್ನು ಅವರವರ ವ್ಯಕ್ತಿತ್ವ ವ್ಯಕ್ತಗೊಳ್ಳುವಂತೆ ಚಿತ್ರಿಸಿದ್ದಾರೆ. ನಾಟಕದ ಕ್ರಿಯಾರಚನೆಯ ನಿರೂಪಣೆಯಲ್ಲಿ ಆ ಕ್ರಿಯಾರಚನೆಗೆ ಪ್ರಚೋದಕ ಶಕ್ತಿಗಳಾದ ತತ್ವಗಳನ್ನೂ ಭಾವಗಳನ್ನೂ ವಿಮರ್ಶಪೂರ್ಣವಾಗಿ ವಿವರಿಸಿದ್ದಾರೆ. ಉದ್ದಕ್ಕೂ ನಾಟಕಕಾರರು ಮಾಡಿಕೊಂಡಿರುವ ಮಾರ್ಪಾಡುಗಳನ್ನು ಅನುಮೋದಿಸುತ್ತಾರೆ. ಅವಸರದಿಂದಾದ ಕೆಲವು ಲೋಪದೋಷಗಳೂ ಅತಿರೇಕಗಳೂ ಪುನರುಕ್ತಿಗಳೂ ಗ್ರಂಥದಲ್ಲಿ ಉಳಿದುಕೊಂಡಿವೆಯೆಂದು ಅವರೇ ಹೇಳಿಕೊಂಡಿದ್ದಾರೆ. ಅದರಿಂದ ಅಲ್ಲಲ್ಲಿ ಶಿಥಲತೆ ಕಾಣಬಹುದು. ಆದರೆ ಅವರ ಉತ್ಸಾಹದ ಶೈಲಿಯಲ್ಲಿ ಆ ನ್ಯೂನತೆಗಳೆಲ್ಲ ಮರೆಸಿಹೋಗುತ್ತವೆ. ಒಟ್ಟಿನಲ್ಲಿ ಕನ್ನಡ ಸಾಹಿತ್ಯಕ್ಕೆ ಇದೊಂದು ಅಗತ್ಯವಾದ ಕೃತಿ, ಅಮೂಲ್ಯವಾದ ಕೃತಿ.

ಮೇಲಣ ಕೃತಿಗಳಲ್ಲದೆ ಕೆಲವು ಅತ್ಯುತ್ತಮವಾದ ವಿಮರ್ಶಾತ್ಮಕ ಲೇಖನಗಳು ಆಂಗ್ಲ ಮತ್ತು ಕನ್ನಡ ಪತ್ರಿಕೆಗಳಲ್ಲಿ ಬಂದಿವೆ. 1931ರಲ್ಲಿ ಕಾರವಾರದಲ್ಲಿ ನಡೆದ ಕನ್ನಡ ಕವಿ ಸಮ್ಮೇಳನದ ಅಧ್ಯಕ್ಷಪೀಠದಿಂದ ಮಾಡಿದ ಭಾಷಣ "ಈಗಿನ ಕವಿಕಾವ್ಯದೃಷ್ಟಿ"ಯಲ್ಲಿ ಕವಿಕಾವ್ಯಗಳ ಪರಸ್ಪರ ಸ್ವರೂಪವನ್ನೂ ಸಂಬಂಧವನ್ನೂ ವಿವೇಚಿಸಿದೆ. ಹಿಂದಿನ ಮತ್ತು ಇಂದಿನ ಕಾವ್ಯಗಳ ಈ ರೂಪರೇಷೆಗಳನ್ನೂ, ಅವುಗಳ ವ್ಯತ್ಯಾಸಗಳನ್ನೂ, ಆ ವ್ಯತ್ಯಾಸಗಳಿಗೆ ಕಾರಣಗಳನ್ನೂ ಕುರಿತು ಇಲ್ಲಿ ಆಲೋಚಿಸಲಾಗಿದೆ.

**ದೇ. ಜವರೇಗೌಡ**

# ವಿ. ಸೀ. ಯವರ ಲಲಿತ ಪ್ರಬಂಧಗಳು

'ಲಲಿತ ಪ್ರಬಂಧ' ವೆಂಬ ಸಾಹಿತ್ಯ ಪ್ರಕಾರ ನಮಗೆ ದಶಕಗಳಷ್ಟು ಮಾತ್ರ ಹಳೆಯದು. ಅಷ್ಟೇನೂ ನಿರ್ದುಷ್ಟವಾಗಿ ಹೇಳಲಾಗದಿದ್ದರೂ, ಮೊದಲ ಲಲಿತ ಪ್ರಬಂಧದ ಗೌರವವನ್ನು ಪಂಜೆಯವರಿಗಿಂತ ಹಿಂದಕ್ಕೆ ಒಯ್ಯಲು ಸಾಧ್ಯವಿಲ್ಲ ವೇನೋ. ಅದೇನೆ ಇರಲಿ. ಈ ಪ್ರಕಾರದ ಬಗ್ಗೆ ಆಳವಾದ, ಪ್ರಕಾರನಿಷ್ಠವಾದ ವಿಮರ್ಶೆ ಕೂಡ ಬಂದಿಲ್ಲ. ಬಹಳಷ್ಟು ಜನ ಲಲಿತ ಪ್ರಬಂಧಗಳ ರಚನೆಗೆ ಮನಸ್ಸು ಮಾಡದೇ ಇರುವುದು ಇದಕ್ಕೆ ಕಾರಣವಾಗಿರಬಹುದು. ಮಿತ ಸಂಖ್ಯೆಯಲ್ಲಿರುವ ರಚನೆಗಳನ್ನೆ ಗಮನಿಸಿದರೂ ಸಾಕಷ್ಟು ಮಹತ್ತ್ವದ ಕೃಷಿಯೇ ನಡೆದಿದೆ ಎಂಬು ದರಲ್ಲಿ ಸಂದೇಹವಿಲ್ಲ. ನವೋದಯ ಕಾಲದ ಲೇಖಕರು ಈ ಪ್ರಕಾರವನ್ನು ಬಳಸಿ ಕೊಂಡಂತೆ ಕಂಡುಬಂದರೂ ಈಚೆಗೆ ಮತ್ತೆ ಲಲಿತ ಪ್ರಬಂಧಗಳ ಸಂಖ್ಯೆ ಇಲ್ಲವೆನ್ನು ವಷ್ಟು ಕಡಿಮೆಯಾಗಿದೆ. ಇದಕ್ಕೆ ಈ ಪ್ರಕಾರದ ಮಿತಿಗಳು ಮತ್ತು ವಿಶಿಷ್ಟತೆಗಳು ಕಾರಣವಾಗಿದೆ.

ನಮ್ಮ ಅಗ್ರಗಣ್ಯ ಲಲಿತ ಪ್ರಬಂಧಕಾರರ ಹೆಸರುಗಳಲ್ಲಿ ವಿ. ಸೀ.ಯವರದೂ ಒಂದು. [ವಿವರಗಳನ್ನು ಗಮನಿಸುವುದಾದರೆ: ಎರಡು ಲಲಿತ ಪ್ರಬಂಧ ಸಂಗ್ರಹ ಗಳು ಪ್ರಕಟವಾಗಿವೆ. **ಬೆಳುದಿಂಗಳು** (೧೯೫೫, ೧೯೬೮ ಮೂರನೆ ಮುದ್ರಣ) **ಸೀಕರಣೆ** (೧೯೭೦), ಒಟ್ಟು ೨೩ ಪ್ರಬಂಧಗಳು ಪ್ರಕಟವಾಗಿವೆ; ೩೩೬ ಪುಟಗಳ ಸಾಹಿತ್ಯ.] ಪ್ರಾಸಂಗಿಕವಾಗಿ ಮಾತು ಬಂದಾಗ ನಮ್ಮ ವಿಮರ್ಶಕರು ವಿ. ಸೀ. ಯವರ 'ಮೈಸೂರು ರುಮಾಲು' ಎನ್ನುವ ಪ್ರಬಂಧವನ್ನು ಅದರ ರುಚಿಕಟ್ಟಾದ ಬಗೆಗೆ ಮೆಚ್ಚಿದ್ದುಂಟು. ಬಿಟ್ಟರೆ ಅವರ ಪ್ರಬಂಧಗಳ ಒಟ್ಟಾರೆ ಮೌಲ್ಯ ನಿರ್ಧಾರ ವಿನ್ನೂ ಆಗಬೇಕಾಗಿದೆ.

ಕನ್ನಡದಲ್ಲಿ ಲಲಿತ ಪ್ರಬಂಧಗಳ ಪ್ರಕಾರವನ್ನು ತಮ್ಮ ಏಕೈಕ ಅಥವಾ ಪ್ರಮುಖ, ಸೃಜನಾತ್ಮಕ ಅಭಿವ್ಯಕ್ತಿ ಮಾಧ್ಯಮವನ್ನಾಗಿ–ಬಹುಶಃ ಎ. ಎನ್. ಮೂರ್ತಿರಾವ್ ಅವರನ್ನು ಬಿಟ್ಟರೆ ಯಾರೂ ಸ್ವೀಕರಿಸಿಲ್ಲ. ಹೀಗೆ ಒಂದು ಸಾಹಿತ್ಯ ಪ್ರಕಾರ ಒಬ್ಬನ ಪ್ರಮುಖ ಅಭಿವ್ಯಕ್ತಿ ಮಾಧ್ಯಮವಾಗದೇ ಇದ್ದಾಗ, ಆ ಪ್ರಕಾರ

ದಲ್ಲಿನ ಆತನ ಸಾಧನೆಗಳನ್ನು ಇತರ ಪ್ರಕಾರಗಳಲ್ಲಿನ ಸಾಧನೆಗಳಿಗೆ ಪೂರಕವೆಂದೇ ಭಾವಿಸುವುದು ಸೂಕ್ತ. ಆದ್ದರಿಂದ, ಲಲಿತ ಪ್ರಬಂಧಕಾರರಾಗಿ ವಿ. ಸೀ. ಒಟ್ಟಾರೆ ಸಾಹಿತಿ ವಿ. ಸೀ.ಗೆ ಎಷ್ಟು ಪೂರಕವಾಗಿದ್ದಾರೆ ಎಂಬುದನ್ನು ಗಮನಿಸಬೇಕು.

ಇಲ್ಲಿರುವ ಬಹುಪಾಲು ರಚನೆಗಳು 'ಸಡಿಲ ಬಂಧ'ಗಳು, ಲಲಿತ ರಚನೆಗಳು. ಹೀಗೆನ್ನುವುದು ಒಂದು ಇತ್ಯಾತ್ಮಕ ನಿಲುವು ಮಾತ್ರ; ಅವಗುಣ ಗಣನೆಯಲ್ಲ. ಏಕೆಂದರೆ ಈ ರಚನೆಗಳ ಉದ್ದೇಶ ಓದುಗನಿಗೊಂದು ಹೊಸ ಬೆಳಕನ್ನು ತೋರಿಸುವುದಲ್ಲ; ಬೇಕನ್ನನ ಬದ್ಧಪ್ರಬಂಧಗಳ ಹಾಗೆ. ಇವುಗಳ ಲಕ್ಷಣವನ್ನೂ ವಿ. ಸೀಯವರೇ ಹೀಗೆ ಹೇಳುತ್ತಾರೆ—"ಎದುರಿನ ಪ್ರಪಂಚದಿಂದ ಕಲ್ಪನೆಗೆ, ಇಂದಿನದರಿಂದ ಎಂದಿನದೋ ಘಟನೆಗೆ, ಸಾಮಾನ್ಯದಿಂದ ವಿಶೇಷಕ್ಕೆ, ಚಪಲತೆಯಿಂದ ಗಂಭೀರತೆಗೆ ದಾಟಿಹೋಗುವುದೂ, ಅಲ್ಲಿ ಇಲ್ಲಿ ಲೋಕಜೀವನಕ್ಕೂ ನಮ್ಮ ಅನುಭವಕ್ಕೂ ಸಂಬಂಧಿಸಿದ ಸಂಗತಿಗಳನ್ನು ಇವುಗಳೊಡನೆ ಬೆರಸುವುದೂ, ಭ್ರಮಿಸುವುದೂ ಇಲ್ಲಿ ಕಾಣುವ, ಬಲಿವ ನೋಟ" [ಬೆಳುದಿಂಗಳು; ಮುನ್ನುಡಿ] ಈ ದೃಷ್ಟಿಯಿಂದ ಪ್ರತಿಯೊಂದು ಲಲಿತ ಪ್ರಬಂಧವೂ ಪ್ರಚೋದಕ (Stimulus) ಒಂದನ್ನು ಬಯಸುತ್ತದೆ. ಇದನ್ನು ಉದ್ದೀಪನ ವಿಭಾವವೆಂದು ಬೇಕಾದರೂ ಕರೆಯೋಣ. ಈ ಪ್ರಚೋದಕಗಳು ವಿ.ಸೀ.ಯವರಲ್ಲಿ ಎರಡು ಬಗೆಗಳಲ್ಲಿ ಕಾಣಿಸುತ್ತವೆ ಎಂಬುದು ಗಮನಾರ್ಹ. ಒಂದು ಬಗೆಯವು ತಾವು ನಿರೀಕ್ಷಿಸುವ ಪ್ರತಿಕ್ರಿಯೆಯನ್ನೂ ಒಂದು ಚೌಕಟ್ಟಿನಲ್ಲಿ ಬಯಸುತ್ತವೆ; ಅಥವಾ ಪ್ರತಿಕ್ರಿಯೆಗಳು ಸಂವೃತವಾದವು. 'ಮೈಸೂರು ರುಮಾಲು', 'ಮಾವು', 'ಬದನೇಕಾಯಿ', 'ನಮ್ಮ ಅಜ್ಜಿಯ ಅಡಿಗೆ'—ಈ ಶೀರ್ಷಿಕೆಯಲ್ಲಿರುವ ಪ್ರಬಂಧಗಳು ಈ ಬಗೆಯವು. ಇನ್ನೊಂದು ಬಗೆಯವು ಬಯಸುವ ಪ್ರತಿಕ್ರಿಯೆಗಳು ಹೆಚ್ಚು ತೆರೆದುಕೊಂಡಿರುತ್ತವೆ–ವಿವೃತವಾಗಿರುತ್ತವೆ. 'ಸಾವು', 'ಬೆಳುದಿಂಗಳು', 'ನೆನಪು' ಇತ್ಯಾದಿಗಳು ಈ ವರ್ಗದವು. ಹೀಗೆ ವರ್ಗೀಕರಿಸಿದ್ದರ ಉದ್ದೇಶ: ಆಯಾ ಬಗೆಯ ಲಲಿತ ಪ್ರಬಂಧಗಳ ವಿಶ್ಲೇಷಣೆ ಸುಲಭವಾಗಲೆಂದು. ಮೊದಲ ಬಗೆಯ ಪ್ರಚೋದಕಗಳನ್ನುಳ್ಳ–ಅವುಗಳಿಂದ ಪ್ರಾರಂಭವಾಗುವ ಲಲಿತ ಪ್ರಬಂಧಗಳಲ್ಲಿ ಹೆಚ್ಚು ಆಳ ಕಂಡುಬರುವುದಿಲ್ಲ. ಏಕೆಂದರೆ ಲೇಖಕರ ಕಲ್ಪನೆ ಒಂದು ಮಿತಿಯೊಳಗೆ ಸುತ್ತಾಡಬೇಕು; ಈಜುಗೊಳದಲ್ಲಿದ್ದಂತೆ. ಇಲ್ಲಿನ ವಿಲಾಸಗಳು ಕೆಲವು ವೇಳೆ ಬುದ್ಧಿಯ ಕಸರತ್ತುಗಳೂ ಆಗಬಹುದು. 'ಕೋಳಿ' ಪ್ರಬಂಧ ಅಂತಹ ಅಪಾಯದ ಅಂಚನ್ನು ಮುಟ್ಟುತ್ತದೆ. ಈ ವಸ್ತುಗಳು ಕೆರಳಿಸಬಹುದಾದ ಅನುಭವದ ಬೇರೆ ಬೇರೆ ಸ್ತರಗಳು ಕೇಂದ್ರ ವಸ್ತುವಿನಿಂದ–ಪ್ರಚೋದಕದಿಂದ–ದೂರ ಹೋದಷ್ಟು ಸಂಬಂಧ ತೆಳುವಾಗುವ ಭಯದಿಂದ ಅಲ್ಲಲ್ಲೇ ಸುತ್ತುತ್ತವೆ. ಈ ಸಂಬಂಧ ಕೂಡ ಒಂದು ಬಗೆಯ ಗೌಣಪ್ರತಿಭೆಯದು. ಅಥವಾ ಕಾಲ್‌ರಿಜ್ ಮಾತಿನಲ್ಲಿ ಹೇಳುವುದಾರೆ Fancyಯ ಲೋಕದ್ದು. ಇಂತಹ ಮಿತಿಯಲ್ಲಿ ವಿ. ಸೀ.ಯವರನ್ನು ನಾವು ಗುರುತಿಸಬೇಕಾದ್ದು ಅವರ ಶೈಲಿಯ 'ಸಂವಹನ ಶೀಲತೆ'ಯಲ್ಲಿ. ಈ ಗುಣ ಯಾವುದೇ

ಲಲಿತ ಪ್ರಬಂಧವಲ್ಲಾದರೂ ಇರಬೇಕಾದುದೆಂದು ಹೇಳಬಹುದು; ಆದರೆ ಈ ಮಿತಾವಕಾಶದ ವಸ್ತುಗಳ ಪ್ರಬಂಧಗಳಲ್ಲಿ ಅದೇ ಪ್ರಮುಖವಾಗಿ ಕಾಣುತ್ತದೆ. ನಮಗೆ ಏನನ್ನೋ ಹೇಳುವ ಹಾಗೆ, ಒಪ್ಪಿಸುವ ಹಾಗೆ, ಪೂರ್ವ ಪಕ್ಷವನ್ನು ಕಲ್ಪಿಸಿಕೊಂಡು ವಾದ–ವಿವಾದವನ್ನು ಹುಡುಕುವ ಹಾಗೆ–ಹೀಗೆ ವಿವಿಧ ಭಂಗಿಗಳಲ್ಲಿ ವಾಕ್ಯಗಳು ರಚಿತವಾಗಿವೆ. 'ಮೈಸೂರು ರುಮಾಲ'ನ್ನು ಮೆಚ್ಚುವ ಈ ಗುಣ ಅದರಲ್ಲಿ ಢಾಳಾಗಿ ಕಾಣುವುದೇ ಕಾರಣವಾಗಿರಬೇಕು. 'ಭಾವಗೀತೆ, ಸಣ್ಣಕತೆ ಮತ್ತು ಲಲಿತ ಪ್ರಬಂಧಗಳದು ಜ್ಞಾತಿಲೋಕ' ಎನ್ನುವ ವಿ.ಸೀ.ಯವರ ಮಾತನ್ನೇ ಗಮನಿಸಿ ಹೇಳುವುದಾದರೆ ಈ ಸಂವೃತ ಪ್ರತಿಕ್ರಿಯೆಯ ವಸ್ತುಗಳ ಲಲಿತ ಪ್ರಬಂಧಗಳು ವ್ಯಕ್ತಿ, ಸಂದರ್ಭಗಳನ್ನು ಕುರಿತ ಭಾವಗೀತೆಗಳಿದ್ದಂತೆ.

ಎರಡನೇ ವರ್ಗದ ಪ್ರಚೋದಕಗಳ ವಿಚಾರದಲ್ಲಿ ಪ್ರತಿಭೆ ಮತ್ತು ಆಲೋಚನೆ–ಇದನ್ನು ಧಾಟಿ, ಧೋರಣೆ, ತಾತ್ತ್ವಿಕ ನಿಲವು ಹೀಗೆ ಏನು ಬೇಕಾದರೂ ಹೆಸರಿಟ್ಟು ಕರೆಯಿರಿ–ಎರಡೂ ಬೆಳಕಿಗೆ ಬರುತ್ತವೆ. ಹೆಚ್ಚು ತೆರೆದುಕೊಳ್ಳುವ ಈ ವಸ್ತುಗಳು ನಿಜವಾಗಿ ಯಾವುದೇ ಸ್ತರವನ್ನು ನಿಖರವಾಗಿ ಚುಚ್ಚುವುದಿಲ್ಲ ಅಥವಾ ಪ್ರತಿಕ್ರಿಯೆಗೆ ವೈವಿಧ್ಯವಿರುತ್ತದೆ. 'ಸಾವು' ಎನ್ನುವ ವಿಚಾರವನ್ನೆ ಗಮನಿಸಿ. 'ಸಾವು' ಒಂದು ಘಟನೆಯೇ ಆದರೆ ಅದಕ್ಕೆ ಕೊಂಡಿಹಾಕಿಕೊಳ್ಳುವ ಅನುಭವದ ಸ್ತರಗಳು ಅನಂತವಾಗಬಹುದು. ಆಗ ಪ್ರಬಂಧಕಾರನ ಪ್ರತಿಭೆ ಈ ಕೊಂಡಿಗಳು, ಕೇಂದ್ರ ವಸ್ತುವಿನ ಈ ಹರಿಯುವಿಕೆ 'ಸಾಧು' ಎಂದು ತೋರಿಸುವಲ್ಲಿ ನಿರತವಾಗಿರಬೇಕು. ಇದರ ಜತೆಗೆ ಇಡೀ ಪ್ರಬಂಧದ ಧಾಟಿಯೊಂದನ್ನು ರೂಪಿಸುತ್ತಾ ಹೋಗಬೇಕು. 'ನೆನಪು' ಎನ್ನುವ ಪ್ರಬಂಧವನ್ನೇ, ಉದಾಹರಣೆಗಾಗಿ, ಗಮನಿಸೋಣ (ಸೀಕರಣೆ ಪು. ೩೧-೪೩). ಮೊದಲು 'ನೆನಪ'ನ್ನು ಸರಳವಾಗಿ ಕೆದಕುತ್ತಾರೆ. ಅದು ಕೆಡುಕಾಗುವ, ಒಳಿತಾಗುವ ಸಂದರ್ಭಗಳಿಗೆ, ಅಲ್ಲಿಂದ ಮುಂದೆ ಬದುಕಿನಲ್ಲಿ, ಸಮಾಜದಲ್ಲಿ, ಸಂಸ್ಕೃತಿಯಲ್ಲಿ ನೆನಪು, ಮರೆವುಗಳ ಜಂಜಾಟವನ್ನು ಕಾಣುವ ಕಡೆಗೆ ನಿಧಾನವಾಗಿ ಜಾರುತ್ತಾರೆ. ಪ್ರಬಂಧ ಗಹನವಾಗುತ್ತದೆ. ಇದು ಧಾಟಿಯಾದರೆ, ವಸ್ತು ತೆರೆದುಕೊಳ್ಳುವ ರೀತಿಯಲ್ಲೂ ಒಂದು ಬಗೆಯ ಪ್ರತಿಭೆ ಎದ್ದು ಕಾಣುತ್ತದೆ. ಸಮಾಜದ ನೆನಪಿಗೆ, ತಾಜ್‌ಮಹಲ್ ಮತ್ತು ನೈಟಿಂಗೆಲ್‌ಗಳನ್ನು ಕುರಿತ ಚಿಟ್ಟೆಕತೆಗಳಿಗೆ, ಬದುಕಿನ ಸ್ಥಾಯಿಗೆ ಸಂಬಂಧ ಕಲ್ಪಿಸುವ ವಿಧಾನ ವಿ. ಸೀ ಅವರದೇ ಆದ 'ಬಗೆ'ಯನ್ನು ತೋರುತ್ತದೆ. ಇಂತಹ ಪ್ರಬಂಧಗಳ ಮಾತು ಲೆಕ್ಕಾಚಾರದ್ದಾಗಿ ಕಾಣುವುದಿಲ್ಲ. ಇಲ್ಲಿ ಪ್ರಬಂಧಕಾರರು ವಾದ ಹೂಡುವ, ಭಂಗಿಗಳನ್ನು ತೋರುವ ವಿಧಾನ ಇಲ್ಲ. ಮುಕ್ತರಾಗಿ ಕಾಣುತ್ತಾರೆ. ಭಾವಗೀತೆಗೆ ನಿಜವಾದ ಅರ್ಥದಲ್ಲಿ ಲಲಿತ ಪ್ರಬಂಧ ಜ್ಞಾತಿಯಾಗುವುದು ಇಂತಹ ಸಂದರ್ಭಗಳಲ್ಲಿ. ಈಗ ಹೇಳಿದ 'ನೆನಪು' ಪ್ರಬಂಧವಲ್ಲದೆ 'ಕಡಲಕರೆ', 'ಸಾವು' ಇತ್ಯಾದಿ ಪ್ರಬಂಧಗಳನ್ನು ನಾವು ಈ ವರ್ಗದಲ್ಲಿ ಗಮನಿಸಬಹುದು.

ಈ ಎರಡೂ ವರ್ಗಗಳ ಪ್ರಬಂಧಗಳ ಇನ್ನೊಂದು ಪ್ರಧಾನ ಲಕ್ಷಣ-ಇದನ್ನು ಗುಣವೆಂದು ಕರೆಯಬೇಕು-ವನ್ನು ಗಮನಿಸಬೇಕು. ವ್ಯಷ್ಟಿಯಿಂದ ಸಮಷ್ಟಿಗೆ ಅಥವಾ ಪ್ರಚೋದಕ ಏಕತೆಯಿಂದ ಪ್ರತಿಕ್ರಿಯೆಯು ಅದೇ ಕಡೆಗೆ ಹೋಗುವಾಗ ಈ ಪ್ರಬಂಧಗಳು ಸಾಧಾರಣೀಕರಿಸಿದ ನಿಲವುಗಳನ್ನು ವಾಕ್ಯರೂಪದಲ್ಲಿ ಕೊಡುವುದೇ ಇಲ್ಲ; ಸೂತ್ರಪ್ರಾಯವಾದ ಮಾತುಗಳು ಬರುವುದಿಲ್ಲ. ಅಂತಹ ಮಾತುಗಳು ಯಾವುದೇ ವಿಸ್ತೃತ ರಚನೆಯ ಬಂಧಕ್ಕೆ ಅಪಾಯಕಾರಿ ಎಂದು ಭಾಷಾ ವಿಜ್ಞಾನಿಗಳು ನಿರ್ಣಯಿಸುತ್ತಾರೆ. ಇದಕ್ಕೆ ಕಾರಣಗಳು ಎರಡು. (೧) ಸೂತ್ರಪ್ರಾಯವಾದ ಮಾತುಗಳು ಪ್ರಬಂಧದೊಳಗೆ ತರ್ಕಬಲವಿಲ್ಲದೆ ಸುಳ್ಳಾಗುತ್ತವೆ; ಸೋಲುತ್ತವೆ. (೨) ಒಟ್ಟಾರೆ ಪ್ರಬಂಧದ ವಿವರಗಳನ್ನು ಮರೆಮಾಡಿ ಇವೇ ಮೆರೆಯುತ್ತವೆ. ವಿ. ಸೀ.ಯವರ ಪ್ರಬಂಧಗಳು ಈ ಅಪಾಯಕ್ಕೆ ಒಳಗಾಗಿಲ್ಲದೇ ಇರುವುದು ಒಂದು ಗಮನಾರ್ಹ ಸಾಧನೆ.

ತೀರಾ ಸರಳವಾದ ಅಥವಾ ಲಘುವಾದ ಎರಡು ಮೂರು ರಚನೆಗಳನ್ನು ಬಿಟ್ಟರೆ–'ಪತ್ರದೂತ' ಅಂತಹುದೊಂದು–ಉಳಿದ ಎಲ್ಲ ಪ್ರಬಂಧಗಳ ಹಿಂದೆಯೂ ಇರುವ ಧಾಟಿಯಲ್ಲಿ ಏಕತೆಯಿದೆ. ಪರಸ್ಪರ ವೈದೃಶ್ಯಗಳು ಇವೆ. ಆದರೆ ಈ ವೈದೃಶ್ಯಗಳು ಧಾಟಿಗೆ ಸಂಬಂಧಿಸಿದವಾಗಿರದೆ ಪ್ರಬಂಧಗಳ ರಚನೆಯ ಕಾಲಗಳಲ್ಲಿ ಇರುವ ಅಂತರ ಸುತ್ತಲಿನ ಬದುಕಿನಲ್ಲಿ, ಪ್ರಬಂಧಕಾರರ ಬದುಕಿನಲ್ಲಿ ತಂದಿರುವ ಬದಲಾವಣೆಯಿಂದ ಉಂಟಾದಂತೆ ತೋರುತ್ತದೆ. ಮುಖ್ಯಧಾಟಿ ಎಲ್ಲ ರಚನೆಗಳ ಏಕಸೂತ್ರತೆ: "ಯಾವುದೂ ಕೊನೆಯ ಮಾತಲ್ಲ–absolute ಎನ್ನುವುದು ಏನೂ ಇಲ್ಲ" ಎಂಬುದು. ಎಂದೂ ಒಂದು ಸಂಗತಿಗೆ ಇತಿ ಮತ್ತು ನೇತಿಗಳು ಇದ್ದೇ ತೀರುತ್ತವೆ. ಅವುಗಳೊಡನೆ ವ್ಯವಹರಿಸುವ ಮನುಷ್ಯನ ವೈಲಕ್ಷಣ್ಯಗಳೂ ಕೂಡಿಕೊಂಡ ಮೇಲೆ 'ಇದು ಹೀಗೆಯೇ' ಎಂದು ಖಡಾಖಂಡಿತವಾಗಿ ಹೇಳುವುದಾದರೂ ಹೇಗೆ? ಇದು ವಸ್ತುಸ್ಥಿತಿ. ಈ ದೃಷ್ಟಿಕೋನವನ್ನು Amorphous ಎಂದೂ, ವಿ. ಸೀ. ಯವರಿಗೆ Commitment ಇಲ್ಲದೇ ಇರುವುದರಿಂದ ಹೀಗಾಗುತ್ತದೆಂದೂ ವಿಮರ್ಶಕರು ವಾದಿಸಬಹುದು. ಆದರೆ ದ್ವಂದ್ವವನ್ನು–ದ್ವೈವಿಧ್ಯವನ್ನು ಇಲ್ಲವೆಂದು ಅದು ಇರುವುದು ನಿಜವೆಂದ ಮೇಲೆ–ಹೇಳುವುದು ಆಸ್ಟ್ರಿಚ್ ಪಕ್ಷಿಯ ಬಗೆಯಾಗಬಹುದು ಅಷ್ಟೆ. ನಾನು ಗುರುತಿಸಿರುವ ಧಾಟಿ ವಿ.ಸೀ.ಯವರ ಲಲಿತ ಪ್ರಬಂಧಗಳ ಗುಣವಾಗಿರುವಂತೆ ಅವರ ಸಾಹಿತ್ಯ ವ್ಯಕ್ತಿತ್ವದ ಗುಣವೂ ಹೌದೂ. ಅವರು ಲಲಿತ ಪ್ರಬಂಧ ಸಂಗ್ರಹದಲ್ಲಿ ಸೇರಿಸಬಾರದಾಗಿತ್ತೆಂದು ಸೂಚಿಸಿದ 'ನನ್ನ ಜೀವನ ದರ್ಶನ' (ಬೆಳುದಿಂಗಳು-ಪು. ೧೦೨-೧೧೧) ಪ್ರಬಂಧ ನನ್ನ ಮಾತನ್ನು ಸಮರ್ಥಿಸುತ್ತದೆ. (ಅವರ ಕವನಗಳಲ್ಲೂ ನಾವು ಕಾಣುವುದು ಇದನ್ನೆ. 'ಶಬರಿ', 'ಕಸ್ಮೈದೇವಾಯ' ಮುಂತಾದವುಗಳ ನಿರ್ಣಯ ತಲುಪದ, ಅವ್ಯಕ್ತ ನೋವಿನ ಧಾಟಿ

ಯನ್ನು ಗಮನಿಸಿ.) ಆದ್ದರಿಂದ ಮೊದಲೇ ಹೇಳಿದ ಹಾಗೆ ಇಲ್ಲಿಯ ಸಾಧನೆ ಪೂರಕವಾಗಿ ನಿಲ್ಲುತ್ತದೆ.

ಇನ್ನೊಂದು ಮಾತು: ಅಲ್ಲಲ್ಲಿ ವಿ.ಸೀ. 'ಸಂದ ಜೀವನ'ಕ್ಕಾಗಿ ಕೊರಗುವವರೇನೋ ಎನ್ನುವ ಅಭಿಪ್ರಾಯಕ್ಕೆ ಅವರ ಲಲಿತ ಪ್ರಬಂಧಗಳು ಅವಕಾಶಕೊಡುತ್ತವೆ. ದೋಸೆ, ನಮ್ಮ ಅಜ್ಜಿಯ ಅಡುಗೆ, ಮಾವು-ಅಷ್ಟೇಕೆ ಅವರ ಯಶಸ್ವಿ ಪ್ರಬಂಧ 'ಮೈಸೂರು ರುಮಾಲ'ನ್ನೆ ನೋಡಿ. ಇಂದು ಇಲ್ಲದ, ಆದರೆ ತಾನು ಕಂಡ ದಿನಗಳ ಬಗ್ಗೆ ಮೆಚ್ಚುಗೆ ಇರುವಂತೆ ಕಾಣುತ್ತದೆ. ಈ 'ಮೆಚ್ಚುವಿಕೆ'ಯ ಧಾಟಿ ಕೆಲವು ವೇಳೆ ವಿ.ಸೀ. ವರ್ತಮಾನದಲ್ಲಿ ಇರಲಾರದೇ ಹೋದುದಕ್ಕೆ ಬಂದುದೇನೋ ಎಂಬ ಅನುಮಾನಕ್ಕೆ ಕಾರಣವಾಗುತ್ತದೆ. ಆದರೆ ವಿ.ಸೀ.ಯವರ ಮುಕ್ತ ದೃಷ್ಟಿಯಲ್ಲಿ ಅದು ಹಾಗಾಗಲಾರದು. ಅಂದಿನ ನೆನಪು ಅನುಭವವಾದದ್ದರಿಂದ ಕೆರಳುತ್ತದೆ. ಎಂದ ಮಾತ್ರಕ್ಕೆ ಅದು ಮೌಲ್ಯಾತ್ಮಕ ಇಲ್ಲವೆ ಶ್ರೇಷ್ಠವೆಂದೇನೂ ಅಲ್ಲ. ವಿ.ಸೀ.ಯವರ ತಲೆಮಾರಿನ ಇತರ ಕೆಲವು ಲೇಖಕರಲ್ಲಿ ಹಳೆಯದಕ್ಕಾಗಿ ಹಂಬಲಿಸುವ ಪ್ರವೃತ್ತಿಯಾಗಬಹುದಾದ ಈ ಬಗೆ ಇಲ್ಲಿ ಹೀಗಾಗುವುದಿಲ್ಲ. ಅಭಿರುಚಿಯ ಮೆಚ್ಚುಗೆ-ವಿ.ಸೀ.ಯವರ ಬಗೆಗಂತೂ ನನ್ನ ತಲೆಮಾರು ಅವರ ಅಭಿರುಚಿಯ ಬಗೆಗೆ ಚಿಟ್ಟೆ ಕಥೆಗಳನ್ನು ಕೇಳಿದೆ-ಮಾತ್ರ ಈ ಹಿಂದಕ್ಕೆ ನೋಡುವ ರೀತಿಗೆ ಕಾರಣ ಅಷ್ಟೆ.

ಇನ್ನೂ ಈ ಪ್ರಬಂಧಗಳ ಬಗ್ಗೆ ಅವುಗಳ ಹಿಂದಿರುವ ವ್ಯುತ್ಪತ್ತಿಯ ದೃಷ್ಟಿಯಿಂದ, ವಿ.ಸೀ.ಯವರ ತಲೆಮಾರಿನ ಸಾಹಿತ್ಯದ ದಾಖಲೆಯೆನ್ನುವ ದೃಷ್ಟಿಯಿಂದ -ಕಾಲ ಮಾಸುವ ಹಾಗೆ ಮಾಡಿದ ತಮ್ಮ ಚಿತ್ರಗಳ ಬಗ್ಗೆ ವಿ.ಸೀ.ಯವರೇ ಹೇಳಿಕೊಂಡಿದ್ದಾರೆ-(ಬೆಳುದಿಂಗಳು ಪು. iii-iv). ಕುತೂಹಲದ ಅಧ್ಯಯನ ನಡೆಸಬಹುದಾಗಿದೆ. "ಪೂರ್ತಿ ಅಸಂಬದ್ಧವಾಗುವಂತಿರುವಾಗ ಹರಟೆಯ ಎಳೆಯನ್ನು ಹಿಡಿವ, ಕಾಣುವ, ನಡೆಸುವ ಇಲ್ಲಿನ ರೀತಿ ಕೆಲವರಿಗೆ ರುಚಿಸಬಹುದು. ಎಲ್ಲರಿಗೂ ಎಲ್ಲ ರುಚಿಸೀತೆಂದು ಹೇಳಬಲ್ಲೆ ಹೇಗೆ" (ಬೆಳುದಿಂಗಳು: ಮುನ್ನುಡಿ) ಎನ್ನುತ್ತಾರೆ ವಿ.ಸೀ. ಈ ಪ್ರಬಂಧಗಳ ಆಸ್ವಾದನೆ ಬುದ್ಧಿಗೆ, ಹೃದಯಕ್ಕೆ ಸಂಬಂಧಪಟ್ಟ ಸಂಗತಿ. ಆದ್ದರಿಂದ ಅದರ ಬಗೆಗೆ ನಾನು ಬರೆಯಹೋಗಿಲ್ಲ. ಬದಲಾಗಿ ಈ ಪ್ರಬಂಧಗಳ ಮೂಲಕ ಲಲಿತ ಪ್ರಬಂಧಗಳ ಸ್ವರೂಪ (Form)ವನ್ನೂ ಕುರಿತು ತಿಳಿಯುವ ದೃಷ್ಟಿಯಿಂದ ಹೊರಟವನು ನಾನು. ಇಷ್ಟಕ್ಕೆ ನನ್ನ ಈ ಪ್ರಬಂಧಗಳ ಅಭ್ಯಾಸ ಸೀಮಿತ.

ಕೆ. ವಿ. ನಾರಾಯಣ

# ಪತ್ರ ಗುಚ್ಛ

## ಮೊದಲ ಮಾತು

ಹಿರಿಯರು–ಗೆಳೆಯರು ವಿವಿಧ ಸಂದರ್ಭಗಳಲ್ಲಿ ವಿ. ಸೀ. ಅವರಿಗೆ ಬರೆದಿರುವ ಅಸಂಖ್ಯ ಪತ್ರಗಳಲ್ಲಿ ಕೆಲವನ್ನು ಆರಿಸಿ ಇಲ್ಲಿ ಕೊಡುತ್ತಿರುವುದರ ಉದ್ದೇಶ: ಆ ಹಿರಿಯರು ಮತ್ತು ಗೆಳೆಯರು ವಿ. ಸೀ.ಯವರನ್ನು, ಅವರ ಕೃತಿಗಳನ್ನು ಕಂಡ ಮತ್ತು ಕಾಣುತ್ತ ಬಂದ ಬಗೆಯನ್ನು ಪರಿಚಯ ಮಾಡಿಕೊಡಬೇಕೆಂದು. ಅಂಥ ಒಂದು ಪರಿಚಯದ ಜೊತೆಗೆ, ಬರೆದವರ ಮನೋಧರ್ಮವನ್ನೂ ಇಲ್ಲಿನ ಹಲವು ಪತ್ರಗಳು ಪ್ರತಿಬಿಂಬಿಸುತ್ತವಾಗಿ ಅವಕ್ಕೆ ಹೆಚ್ಚಿನ ಮಹತ್ವ ದೊರೆಯುತ್ತದೆ. ಬಹುಶಃ ಈ ಕಾರಣದಿಂದಲೇ ಕೆಲವು ಪತ್ರಗಳು ವಿ. ಸೀ. ಅವರಿಗೂ ಪ್ರಿಯವಾಗಿವೆ. ಉದಾ: ತಾವು ಸಾಹಿತ್ಯ ಸಮ್ಮೇಳನದ ಅಧ್ಯಕ್ಷ ಸ್ಥಾನಕ್ಕೆ ಆಶಿಸದಿದ್ದವರು; ಅಲ್ಲಮ ಸಿದ್ಧರಾಮರು ಸೊನ್ನಲಾಪುರದಲ್ಲಿ ತಮ್ಮನ್ನು ಮೆರೆಸಬಯಸಿದ್ದಾರೆ ಎಂದುಕೊಂಡಿರುವ ಮನೋಭಾವ ಎಂ. ಆರ್. ಶ್ರೀ ಯವರ ಪತ್ರದಿಂದ ಸ್ಪಷ್ಟವಾಗುವಂತೆಯೇ, ಆ ಗೌರವದಿಂದ 'ಶ್ರೀಮತಿ ಮೂರ್ತಿಯವರಿಗೆ ಸಂತೋಷವಲ್ಲವೆ, ಕೇಳಿ'–ಎಂದಿರುವುದು ಅವರ ರಸಿಕತೆಯನ್ನು, ರಸಿಕತೆಗಿಂತ ಹೆಚ್ಚಾಗಿ ಬಾಳ ಸಂಗಾತಿಗೆ ಎಂ. ಆರ್. ಶ್ರೀ. ನೀಡಿದ್ದ ಸ್ಥಾನ–ಮಾನಗಳನ್ನು ಎತ್ತಿಕಾಣಿಸುತ್ತವೆ. ಶ್ರೀ ಕುವೆಂಪು ಅವರಿಗೆ ಆಗ ಆ ಗೌರವ ದೊರಕಿದ್ದರಾಗುತ್ತಿತ್ತು ಎನ್ನುವ ಮಾತೂ ಮೂರ್ತಿಯವರ ಉದಾತ್ತ ಮನೋಭಾವನೆಗೆ ಸಾಕ್ಷಿಯಾಗಿದೆ. ಅದೇ ಎತ್ತರದ ಇನ್ನೊಂದು ಮುಖ, ಶ್ರೀ ಕುವೆಂಪು ತಮಗೆ ಜ್ಞಾನಪೀಠ ಪ್ರಶಸ್ತಿ ದೊರೆತಾಗ ಬರೆದಿರುವ ಒಂದು ಪತ್ರದಲ್ಲಿಯೂ ಕಾಣುತ್ತದೆ. ಮೊದಲ ಕವನ ಸಂಗ್ರಹ ಪ್ರಕಟವಾದಂದಿನಿಂದ ತಮ್ಮ ಸಾಹಿತ್ಯಕ ಯಶಸ್ಸಿನಲ್ಲಿ ವಿ. ಸೀ. ಹರ್ಷಿತರೂ ಆಸಕ್ತರೂ ಆಗಿದ್ದಾರೆಂಬುದರ ಜೊತೆಗೆ, ಇಬ್ಬರಿಗೆ ಹಂಚಿದ ಪ್ರಶಸ್ತಿಯನ್ನು 'ಪ್ರೇಮಗಣಿತ'ದ ಲೆಕ್ಕಹಾಕಿ, ಆ ದೃಷ್ಟಿಯಿಂದ ತಾವು ಸ್ವೀಕರಿಸಿರುವುದನ್ನು ವ್ಯಕ್ತಪಡಿಸಿರುವುದು ಶ್ರೀಕುವೆಂಪುರ ಚೇತನ ನಿಜಕ್ಕೂ ಉನ್ನತವಾದುದು ಎಂಬುದನ್ನು ಸ್ಪಷ್ಟಪಡಿಸುತ್ತದೆ. 'ಕನ್ನಡಕ್ಕೆ ಬಂದ ಕೀರ್ತಿ ಕನ್ನಡಕ್ಕಾಗಿ ದುಡಿದ ನಿಮ್ಮೆಲ್ಲರಿಗೂ ಸೇರತಕ್ಕದ್ದು' ಎಂದಿರುವುದೂ ಅಷ್ಟೇ ದೊಡ್ಡ ಮಾತು.

ಸಮಕಾಲೀನ ಕನ್ನಡ ಕವಿಗಳಲ್ಲಿ ಅತ್ಯಂತ ಗಮನಾರ್ಹರಾದ ಶ್ರೀ ಕೆ.ಎಸ್.ನ.ರ ಪತ್ರ ಅವರು ವಿ. ಸೀ. ಅವರಲ್ಲಿಟ್ಟಿರುವ ಗೌರವಾದರಗಳಿಗೆ ಸಾಕ್ಷಿಯಾಗಿರುವಂತೆಯೇ ಕೆ. ಎಸ್. ನ.ರ ಮೇಲೆ ವಿ. ಸೀ. ಅವರ ಪ್ರಭಾವ ಎಷ್ಟರ ಮಟ್ಟಿನದು ಎಂಬು ದನ್ನು ತೋರಿಸುತ್ತದೆ. ಅಲ್ಲದೆ, ಬದುಕನ್ನು ದುಸ್ತರಗೊಳಿಸುತ್ತಿದ್ದ ಆಗಿನ ಸ್ಥಿತಿ ಗತಿಗಳು ಕೆ. ಎಸ್. ನ.ರ 'ಮೈಸೂರು ಮಲ್ಲಿಗೆ'ಯ ಮೃದು ಕೋಮಲ ಅಂತಃ ಕರಣದ ಕವಿಮನೋಧರ್ಮದ ಮೇಲೆ ಬಿದ್ದು, 'ಶಿಲಾಲತೆ'ಯಲ್ಲಿನಂತಹ ವಾಸ್ತವ ಮನೋಧರ್ಮದ ಕವನಗಳ ಸೃಷ್ಟಿಗೆ ಪ್ರೇರಣೆ ಕೊಡುವುದಕ್ಕೆ ಸೂಚನೆಯಾಗು ವಂತಿದೆಯೇನೋ ಎನಿಸುತ್ತದೆ.

ಚಿಕ್ಕವಾದರೂ ಚೊಕ್ಕವಾಗಿರುವ ಪತ್ರಗಳಲ್ಲಿ–ಶಿಷ್ಯನಿಗೆ ಗುರುವಿನ ಒಂದು ಸಕಾಲಿಕ ಮಾರ್ಗದರ್ಶನವನ್ನು ಡಾ॥ ರಾಧಾಕೃಷ್ಣನ್‌ರ ಪತ್ರದಲ್ಲಿ, 'ಅವನಿಚ್ಛೆ ಏನಿದೆಯೊ ಅದರಂತೆ ನಡೆಯಲಿ!' ಎನ್ನುವ ಒಂದು ಜಿನಮನೋಧರ್ಮವನ್ನು ವೆಂಕಣ್ಣಯ್ಯನವರ ಪತ್ರದಲ್ಲಿ, ಕಲೆ ಒಂದು ತಪಸ್ಸು, ಅಗ್ಗದ ವಸ್ತುವಲ್ಲ ಎಂಬ ಸಾಧನೆಯ ಭಾವವನ್ನು ಕೆ. ವೆಂಕಟಪ್ಪನವರ ಪತ್ರದಲ್ಲಿ ಕಾಣುತ್ತೇವೆ. ಜೊತೆಗೆ, ಹಿರಿಯರು–ಗೆಳೆಯರು ಅವರ ಕೃತಿಗಳ ಬಗೆಗೆ ನುಡಿದಿರುವ ಸ್ನೇಹದ ಮಾತುಗಳು ವಿಶ್ವಾಸದ ಉತ್ತೇಜನದ ಜೊತೆಗೆ ಕೃತಿಯ ಮೌಲ್ಯಾಂಕನವನ್ನೂ ಸ್ಥಾಪಿಸುತ್ತವೆ. 'ಪಂಪಾಯಾತ್ರೆ'ಯಲ್ಲಿನ ಕನಸಿನ ಪ್ರಸಂಗವನ್ನು ಅದು ಹೊರಬಂದ ತರುಣದ ಲ್ಲಿಯೇ–೧೯೨೮ರಷ್ಟು ಹಿಂದೆ–'an obvious Literary trick' ಎಂದ ಆಪ್ತ ಗೆಳೆಯ ಡಾ॥ ಎಚ್. ವಿ. ಆರ್. ಅಯ್ಯಂಗಾರ್– ರಿಸರ್ವ್ ಬ್ಯಾಂಕಿನ ಗವರ್ನರ್ ಆಗಿ ವಿಶ್ರಾಂತರಾದ, ಅಂತರ್ರಾಷ್ಟ್ರೀಯ ಖ್ಯಾತಿಗಳಿಸಿರುವ–ಅವರ ಅಭಿಪ್ರಾಯ ವನ್ನು ವಿ. ಸೀ. ಬಹುವಾಗಿ ಮೆಚ್ಚಿಕೊಂಡಿರುವುದುಂಟು, ಮಾತ್ರವಲ್ಲ ಅದನ್ನು ಉಲ್ಲೇಖಿಸಿರುವುದೂ ಉಂಟು. ಅರ್ಥಶಾಸ್ತ್ರ ಪಾರಂಗತರಾದ ವಿ. ಸೀ. ಬಹು ವರ್ಷಗಳಿಂದ ಪ್ರತಿಪಾದಿಸುತ್ತ ಬಂದಿದ್ದ Gold-revaluation ತತ್ವ ಕಾರ್ಯ ರೂಪಕ್ಕೆ ಬಾರದಾದಾಗ ಅರ್ಥಶಾಸ್ತ್ರದಲ್ಲಿ ಪರಮಾಧಿಕಾರ ಪಡೆದಿದ್ದ ಲಾರ್ಡ್ ಕೇನ್ಸ್ ಅವರೊಡನೆ ಮತ್ತು ಆಗ ಭಾರತ ಸರ್ಕಾರದ ಅರ್ಥಮಂತ್ರಿಗಳಾಗಿದ್ದ ದೇಶ್‌ಮುಖ್‌ರೊಡನೆ ವ್ಯವಹರಿಸಿ ತಮ್ಮ ನಿಲವನ್ನು ಸಮರ್ಥಿಸಿಕೊಂಡಿರುವು ದಕ್ಕೆ ಲಾರ್ಡ್ ಕೇನ್ಸ್ ಮತ್ತು ದೇಶ್‌ಮುಖ್‌ರು ಬರೆದಿರುವ ಪತ್ರಗಳು ಸಾಕ್ಷಿ ಯಾಗಿವೆ. ಶ್ರೀ ಕೃಪಲಾನಿಯವರು ಪತ್ರದಲ್ಲಿ ಬಯಸಿದಂತೆ ಕಳಿಸಿದ ಸಮೀಕ್ಷಾ ಲೇಖನದಲ್ಲಿ ವಿ. ಸೀ. ವ್ಯಕ್ತಪಡಿಸಿದ ಅಭಿಪ್ರಾಯಗಳು ಭಾರತದ ಎಲ್ಲ ಭಾಷಾ ಸಾಹಿತ್ಯಗಳಿಗೂ ಹೊಂದಿಕೊಳ್ಳುವಂತಿದ್ದು, ಟೈಮ್ಸ್ ಲಿಟೆರರಿ ಸಪ್ಲಿಮೆಂಟ್ (ಲಂಡನ್)ನಂತಹ ಪ್ರಮುಖ ಪತ್ರಿಕೆಯ ಸಂಪಾದಕೀಯ ಲೇಖನದಲ್ಲಿ ಉಧೃತ ಗೊಳ್ಳುವಂತಾದುದು ವಿ.ಸೀ. ಅವರ ವಿಮರ್ಶನ ದೃಷ್ಟಿಗೆ, ಶಕ್ತಿಗೆ ದೊರೆತ ಮನ್ನಣೆ ಯಾಗಿದೆ. ಮೊದಲ ವರ್ಷದ ಜ್ಞಾನಪೀಠ ಪ್ರಶಸ್ತಿಯನ್ನು ಡಾ. ಡಿ. ವಿ. ಜಿ. ಅವರ

'ಮಂಕು ತಿಮ್ಮನ ಕಗ್ಗ' ಕೃತಿಗೆ ದೊರಕಿಸಲು ವಿ. ಸೀ. ಪಟ್ಟ ಪ್ರಯಾಸ ಕನ್ನಡಿಗರಿಗೆ ತಿಳಿದ ಸಂಗತಿಯೇ ಆದರೂ, ಆ ವರ್ಷ ಪ್ರಶಸ್ತಿ ವಿಜೇತರಾದ ಶ್ರೀ ಶಂಕರ ಕುರು ಪರಿಗೂ ವಿ. ಸೀ. ಅವರ ಶ್ರಮ ಸಂತೋಷ ತಂದಿರುವುದು ಕನ್ನಡಿಗರೆಲ್ಲ ವಿ. ಸೀ. ಅವರಿಗೆ ಕೃತಜ್ಞರಾಗಿರಬೇಕಾದ ಅಗತ್ಯವನ್ನು ಸಮರ್ಥಿಸುತ್ತದೆ. ಕನ್ನಡ ನಾಡಿನಲ್ಲಿ ಮಾತ್ರವಲ್ಲದೆ, ಹೊರನಾಡುಗಳಲ್ಲಿಯೂ ವಿ.ಸೀ. ಸಂಚರಿಸಿ, ಅಭಿಮಾನಿವರ್ಗವನ್ನು ಬೆಳಸಿ, ಸ್ನೇಹ ವರ್ಗವನ್ನು ಕಟ್ಟಿ, ಕನ್ನಡ ನಾಡು–ನುಡಿ–ಸಂಸ್ಕೃತಿ–ಸಾಹಿತ್ಯಗಳಿಗೆ ಒಂದು ಸ್ಥಾನ ಮಾನ ದೊರಕಿಸಿಕೊಟ್ಟು, ಸಾಂಸ್ಕೃತಿಕ ರಾಯಭಾರಿಗಳಾಗಿದ್ದರೆಂಬು ದಕ್ಕೆ ಹೊರನಾಡಿನ ಸಾಹಿತಿಗಳು ಅವರಿಗೆ ಬರೆದಿರುವ ಪತ್ರಗಳು ಪುರಾವೆಯನ್ನೊದ ಗಿಸುತ್ತವೆ.

ಬಹುಪಾಲು ಪತ್ರಗಳೆಲ್ಲ ಇಂಗ್ಲಿಷಲ್ಲಿರುವುದು ಒಂದು ವಿಶೇಷವಾಗಿರು ವಷ್ಟೇ ಕೊರತೆಯ ಸಂಗತಿಯೂ ಆಗಿದೆಯೆನ್ನಬಹುದು. ಆದರೇನು? ಭಾವ ಮುಖ್ಯವೇ ಹೊರತು ಭಾಷೆಯಲ್ಲ. ಇಲ್ಲಿನ ಪತ್ರಗಳು ವಿ. ಸೀ. ಅವರ ವ್ಯಕ್ತಿತ್ವ ಮತ್ತು ಕೃತಿಗಳ ಒಂದು ಮುಖವನ್ನು ಸ್ಥೂಲವಾಗಿಯಾದರೂ ಕಾಣಿಸಿ, ಆ ಮೂಲಕ ಗ್ರಂಥದ ಮೌಲ್ಯವನ್ನು ಹೆಚ್ಚಿಸಬಹುದು ಎಂದು ನಿರೀಕ್ಷಿಸಿದೆ.

ಸಂಪಾದಕ

1408, I Cross, Malleswaram
27-12-1944

ಶ್ರೀಮಾನ್ ವಿ. ಸೀತಾರಾಮಯ್ಯನವರಿಗೆ,

ನಿಮ್ಮ ಕಾಗದ. ಮನೆಯಲ್ಲಿ ನಾನು ಹೆಂಡತಿ ಮಕ್ಕಳಲ್ಲದೆ ಯಾರೂ ಇಲ್ಲ, ಆಳು ಕೂಡ. ಮನೆಯಾಕೆಯೂ ಸ್ವಲ್ಪ ಸೂಕ್ಷ್ಮಸ್ಥಿತಿಯಲ್ಲಿದ್ದಾರೆ. ಆದ್ದರಿಂದ ನಾನು ಬರಲು ಸಾಧ್ಯವಾಗಲಿಲ್ಲ. ಇಂತಹ ಗೃಹೀ ಅನಿವಾರ್ಯಗಳು ನಿಮಗೂ ಅಪರಿಚಿತವಲ್ಲ. ಆದ್ದರಿಂದ ಕ್ಷಮಿಸುತ್ತೀರಿ ಎಂದು ಭಾವಿಸುತ್ತೇನೆ. ಎಲ್ಲರೂ ತಕ್ಕಮಟ್ಟಿಗೆ ಆರೋಗ್ಯದಿಂದಿದ್ದೇವೆ.

ಪ್ರ. ಕ. ಕ್ಕೆ ಏನು ಕಳುಹಿಸಲಿ? ನಿಮಗೆ ಕವನ ಬೇಕಾಗಿರುವುದು ಸಂಕ್ರಾಂತಿ ಸಂಚಿಕೆಗೋ ಬೆಳ್ಳಿಯ ಸಂಚಿಕೆಗೊ? ನಾನು ನಿಮಗೆ ಎಷ್ಟು ಸೇವೆ ಸಲ್ಲಿಸಬೇಕೊ ಅಷ್ಟನ್ನೂ ಸಲ್ಲಿಸಲು ಸಾಧ್ಯವಾಗಿಲ್ಲ. ಬೆಳ್ಳಿಯ ಸಂಚಿಕೆಗೆ 'ಕಾವ್ಯವಿಮರ್ಶೆಯಲ್ಲಿ ಪೂರ್ಣದೃಷ್ಟಿ' ಎಂಬ ಲೇಖನವನ್ನು ಬರೆಯಬೇಕೆಂದು ಟಿಪ್ಪಣಿ ಹಾಕಿಟ್ಟಿದ್ದೇನೆ. ಆದರೆ ನನ್ನ ಸಮಸ್ತ ಶಕ್ತಿಯೂ ರಾಮಾಯಣಕ್ಕಾಗಿ ಬಿಟ್ಟಿದೆ. ಅದು ಅದೃಷ್ಟದಿಂದ ತುದಿ ಕಾಣುವಷ್ಟರ ಮಟ್ಟಿಗೆ ಮುಂದುವರಿದಿದೆ. ಪ್ರಾಯಶಃ ಈ ವರ್ಷದಲ್ಲಿಯಾದರೂ ಮುಗಿಯುತ್ತದೆ ಎಂಬ ಆಶಂಸೆ. ಮುಗಿದರೆ ಒಂಭತ್ತು ವರ್ಷಗಳಾಗುತ್ತದೆ ಪ್ರಾರಂಭ ಮಾಡಿ. ಸದ್ಯಕ್ಕೆ ಮಹಾಕಾವ್ಯ ಮುಗಿದ ಹೊರತೂ ಬೇರೆ ಯಾವುದಕ್ಕೂ ಮನಸ್ಸು ಹೋಗುವಂತಿಲ್ಲ. ಅದು ಸುಮಾರು ೨೫.೦೦೦ ಪಂಕ್ತಿಗಳನ್ನು ಮೀರುತ್ತದೆಂದು ತಿಳಿಯುತ್ತದೆ. ಆ ಕೃತಿ ನನಗೇ ಮಹಾಛಂದಸ್ಸಿನ ವಿವಿಧ ವಿನ್ಯಾಸಗಳನ್ನು ಕಲಿಸಿ ಗುರುವಾಗಿದೆ. ನಾನು ಅದನ್ನು ರಚಿಸಿದೆ ಎನ್ನುವುದಕ್ಕಿಂತಲೂ ಅದು ನನ್ನನ್ನು ರಚಿಸಿದೆ ಎನ್ನುವುದು ಹೆಚ್ಚಿನ ಸತ್ಯವಾಗಿ ತೋರುತ್ತಿದೆ ನನಗೆ. ನಾನು ಬಹುಮಟ್ಟಿಗೆ ಬೇರೆಯ ವ್ಯಕ್ತಿ! ಶೂನ್ಯ ವ್ಯಕ್ತಿ!

ಈ ಸಲದ ಪ್ರ. ಕ. ಕೈಸೇರಿತು. ಬಹಳ ಚೆನ್ನಾಗಿದೆ. ವಸ್ತುಕೋಶ ಎಷ್ಟು ತುಂಬಿದೆ! ಎಲ್ಲ ಚೆನ್ನು, ಚೊಕ್ಕಟ! ನನಗಂತೂ ಅಂತಹ ಸಂಚಿಕೆ ತರಲು ಸಾಧ್ಯವೇ ಆಗುತ್ತಿರಲಿಲ್ಲ! ನಿಮ್ಮ ಕೈಯಲ್ಲಿ ಬೆಳ್ಳಿಯ ಸಂಚಿಕೆ ಅದ್ಭುತವಾಗುವುದರಲ್ಲಿ ಸಂದೇಹವಿಲ್ಲ.

ಸಂಪಾದಕನು ಪಂಕ್ತಿಗಳ ನಡುವಣ ಜಾಗದಂತೆ ಶೂನ್ಯನಾದರೇ ಲೇಖಕರ ಲೇಖನಿಗಳಿಗೆ ಮಸಿ ಇಳಿಯುತ್ತದೆಂದು ತೋರುತ್ತದೆ! ದಯವಿಟ್ಟು ಅಪಾರ್ಥ ಮಾಡಬೇಡಿ, ಹೇ ಸಂಪಾದಕ ಪಾರ್ಥ!

ನೀವೆಲ್ಲರೂ ಕ್ಷೇಮವೆಂದು ಹಾರೈಸುತ್ತೇನೆ. ನನ್ನ ಕಾಗದ ಓದಿದ ಮೇಲೆ ಏನಾದರೂ ಇತಿ ಸೂಚನೆಗಳನ್ನು ಕೊಡುವುದಿದ್ದರೆ ಕಾಗದ ಬರೆಯಿರಿ.

ಇತಿ ನಮಸ್ಕಾರಗಳು
ಕುವೆಂಪು

ಜಯನಗರ, ಮೈಸೂರು
10-12-48.

ಅಣ್ಣ ವಿ. ಸೀ. ಅವರಿಗೆ.

ನಾನು ನಿಮಗೆ ಕಾಗದ ಬರೆಯುತ್ತಿರುವುದನ್ನು ನನ್ನ ಹೆಂಡತಿ ಪಕ್ಕದಲ್ಲಿ ಎರಗಿ ನೋಡುತ್ತಿದಾಳೆ. ನಾನು ಯಾರಿಗೂ ಕಾಗದ ಬರೆಯುವವನಲ್ಲ. ನಾನು ನಿಮಗೆ ಬರೆಯುತ್ತಿರುವುದೇ ನನ್ನ ಬರವಣಿಗೆಗೆಲ್ಲ ಪ್ರಥಮ ಸಾಕ್ಷಿಯಾದ ನನ್ನ ಹೆಂಡತಿಯ ಪುಣ್ಯ. (ಈ ಸಾಲನ್ನು ಓದಿದಾಗ ಅವಳಿಗೆ ರೇಗಿಹೋಯಿತೆಂದರೆ ನೀವು ದಯ ಮಾಡಿ ಅಚ್ಚರಿಗೊಳ್ಳಬೇಡಿ (ರಿ) !)

ನನ್ನ ಬರವಣಿಗೆ-ಅದೂ ಅಲ್ಪಸ್ವಲ್ಪ-ಹಿಂದಕ್ಕಿಂತ ಕಡಿಮೆಯಾಗಿ-'ನಿಂತು ಹೋಗುವ' ಶುಭ ಸೂಚನೆಗೆ ಎಡೆಗೊಟ್ಟಿದೆ. ಈ ಲೇಖನಿ ಸಂಬಳಕ್ಕೆ ದುಡಿಯುವ ಕುದುರೆಯಾಗಿದೆ; ಭಿಕ್ಷಾ ಪಾತ್ರೆಯಾಗಿದೆ; ಅದನ್ನು ಸಾಹಿತ್ಯಕ್ಕಾಗಿ ಬಳಸುವ ಪ್ರಮೇಯ ಮಿತವಾಗುತ್ತಿದೆ. ಆದರೆ ಕಣ್ಣು ಹರಿತವಾಗುತ್ತಿದೆ, ಎದೆ ಗಟ್ಟಿಯಾಗು ತ್ತಿದೆ, ಮಾತು ಬಿಗಿಯುತ್ತಿದೆ. ಇನ್ನು ಮುಂದೆ ಬರೆದರೆ ಅದೆಲ್ಲ ಈ ಮಾರ್ಗದಲ್ಲೇ; ನನಗೆ ಹೀಗಾಗಬಹುದಲ್ಲ ಎನ್ನುವ ವ್ಯಥೆಯೇ ಇಲ್ಲ. ನನ್ನನ್ನು ಕವಿ ಎಂದು ವಿಳಾಸ ಮಾಡಿದ್ದೀರಿ. ನೀವು ಬರೆದಿರುವುದರಿಂದ ನಾನು ಚರ್ಚೆ ಮಾಡುವುದಿಲ್ಲ. ನಾನು 'ಬೀಚ್ ಪಾಂ ಪಾಂ' ಎಂಬ ಪದ್ಯ ಬರೆಯುತ್ತಿದ್ದೇನೆ. ಹೀಗಿದೆ ಅದು:

'ಬೀಚ್ ಪಾಂ ಪಾಂ
ಬೀಚ್ ಪಾಂ ಪಾಂ
ಯಾರಿಗೂ ಸುತರಾಂ
ಪತಿತ ಪಾವನ ಸೀತಾರಾಂ!'

ಇನ್ನು ವಿಮರ್ಶೆ; 'ಮಾಸ್ತಿಯವರ ಕವಿತೆ'. ಪಂಡಿತರೆಲ್ಲ ಹನುಮಂತರಾಯ ರಾಗುತ್ತಿದ್ದಾರೆ. ಮಾಸ್ತಿಯವರು-'ವಿ. ಸೀ.'- ನಾನು-ನಾವು ನಮ್ಮ ಮಾತನ್ನೂ ಹೇಳಿ ಇರೋಣ. ಇತರ ಜನ ಏನಾದರೂ ಆಡಿಕೊಳ್ಳಲಿ. ನನ್ನ ಉತ್ಸಾಹ ಅದೂ ಇರಲಿ ನಿಮ್ಮ ಸ್ಥಿತಿಗೂ ನನ್ನ ಗತಿಗೂ ೧೦೦ ಮೈಲಿ. ಆದರೆ ನಾನು ಅವರ ವಿಷಯ ದಲ್ಲಿ ಬರೆದಿರುವುದೆಲ್ಲ ಸರಿ ಎಂದು ನನ್ನ ನಂಬಿಕೆ. ನೀವೂ ಬಲ್ಲವರೇ. ಕತ್ತೆಗಳಿವೆ ಎಂದು ಬೀದಿಗೇ ಬಾರದೆ ಇರುವುದು ತಾನೆ ಹೇಗೆ? ಬಂದ ಮೇಲೆ ಧೈರ್ಯವೂ ಇರು ತ್ತದೆ. ಇಂದಲ್ಲ ನಾಳೆ ಹತ್ತು ಜನ ಓಡಾಡಿದ ಬೀದಿಯಲ್ಲಿ ಕತ್ತೆಗಳು ಸುಳಿಯವೆ, ಚೆಲುವು ಮೂಡಬಹುದು. ಆಗ ಕತ್ತೆಗಳಿದ್ದರೂ ಬೀದಿಯನ್ನು ಶುಚಿಯಾಗಿಡುವ ಕತ್ತೆಗಳವು.

ನೀವು ದೂರ ಆಗಿದ್ದೀರಿ: ಯಾರನ್ನು ದಿನಾ ನೋಡುತ್ತಿದ್ದೆನೋ, ಯಾರಿಂದ ದೂರ ಇರುವುದು ಸಾಧ್ಯವೇ ಅಲ್ಲ ಎನಿಸಿತ್ತೋ-ಅವರಿಂದ ದೂರ ಆಗಿದ್ದೇನೆ. ಆ ಕಡೆ ಬರುವ ಮನಸ್ಸು ಹತ್ತಾರು ಸಲ ಬಾಧಿಸಿದೆ. ಕವಿತೆಗೂ ಮೀರಿದ ಅಥವಾ

ಕವಿತೆಯು ಜೀವವೇ ಆದ ಮಾನವ ಹೃದಯದ ಹೊಂದಿಕೆ ಆಳದಲ್ಲಿ ಮೊರೆಯುವ ಹೊಳೆಯಂತೆ ಹರಿಯುತ್ತಿದೆ.

ನೀವು ಸದ್ಯದಲ್ಲೇ ಈ ಕಡೆ ಬರಬಹುದೇನೋ? ಇಲ್ಲವಾದರೆ ನಾನು ಆ ಕಡೆ ಬರುವ ಪ್ರಯತ್ನ ಮಾಡುತ್ತೇನೆ. ನೀವು ಎಂದಿಗೂ (ದಯೆಯಿಟ್ಟು) ನಿರುತ್ಸಾಹಕ್ಕೆ ಎಡೆಗೊಡಬೇಡಿರಿ; ಯಾರ ಬದುಕೂ ಇಂದು ಸುಂದರವಾಗಿಲ್ಲ; ಯಾರಿಗೂ ಇಂದು ಕೈಲಾಸವಾಸದ ಅನುಭವವೇ. ನಮ್ಮ ಹೊಟ್ಟೆಗೆ ಬಟ್ಟೆಗೆ ಸರಕಾರದ ಚೀಟಿಗಳು ಬಂದಿವೆ. ಕಳ್ಳರೂ ಬದುಕಲು ಕಷ್ಟವಾಗಿರುವ ಕಾಲದಲ್ಲಿ, ನಮ್ಮಂಥವರಿಗೆ ಕಠಿಣ ಉಪವಾಸ ಅರ್ಧವಾಸ ಇತ್ಯಾದಿ ಮಾಧ್ವ ಸಂಪ್ರದಾಯವೇ ಸರಿಹೊಂದುತ್ತಿದೆ. ಇಲ್ಲಿನ ಹೋಟಲುಗಳು ಬಾ ಗಿ ಲು ತೆರೆದ ದಿನವೂ ಕಾಗದದ ದೋಸೆಗಳನ್ನು ಪ್ರಿಂಟ್ ಮಾಡುತ್ತಿವೆ. ನಾನು 'ಮೈಸೂರು ಮಲ್ಲಿಗೆ' ಬರೆದ ಕಾಲದ ಇಂದ್ರಚಂದ್ರ ಭವನಗಳು ರೇಷನ್ ರಾಕ್ಷಸನ ಕಾಟಕ್ಕೆಸಿಕ್ಕಿ ಇನ್ನು ಆ ಕಡೆ ಸುಳಿಯದಿದ್ದರೆ ಕ್ಷೇಮ ವೆನ್ನಿಸಿವೆ. ಇತ್ತ ನಲ್ಲಿಯಲ್ಲಿ ನೀರೂ ಧಾರಾಳವಾಗಿ ಬರುತ್ತಿಲ್ಲ. ಹಾಲು–ಈ ಪದಾರ್ಥದಲ್ಲಿ ನನಗೆ ನಂಬಿಕೆಯೇ ಹೋಗಿದೆ – ಏನು ಮಾಡಿದರೂ (ತಪಸ್ಸು ಮಾಡಿ ದರೂ) ಕಾಫಿ ಆಗುವುದಿಲ್ಲ. ಹೆಂಡತಿ–ಮಕ್ಕಳು (ಏನಾಗಲಿ) ಸುಮ್ಮನಿದ್ದರೆ, ತಂಪಾಗಿ ದ್ದರೆ ಮಾತ್ರ ಈ ಕಾಲದಲ್ಲಿ ಮನೆಯಲ್ಲಿ ನಿಲ್ಲುವುದು ಸಾಧ್ಯವಾದೀತು; ಇಲ್ಲಿದೆ ಜೀವಾಳ. ನಾನಿರುವುದು ಹೀಗೆ. ಈ ಸ್ಥಿತಿಗತಿಗಳನ್ನೇ ದೊಡ್ಡದು ಮಾಡುವವನೇ ಕವಿಯಾಗದಿರಬಹುದು: ಆದರೆ ಇವನ್ನೆಲ್ಲ ಮರೆತು, ಇವಕ್ಕೆ ಸಂಬಂಧವೇ ಇಲ್ಲ ದಂತೆ ಬರೆಯುವುದು ಆಸ್ಥಾನ ಕವಿಗಳು ಮಾಡುತ್ತಿರುವ ತ್ರಿಕಾಲಾಬಾಧಿತವಾದ ಅನ್ಯಾಯ. ಅವರಿಗೆ ಸದ್–ಗತಿ ಇಲ್ಲಿಲ್ಲ!

ನಾನು ಗೋಕಾಕರ ವಿಷಯದಲ್ಲಿ ಕೆಲವು ಮಾತು ಬರೆಯುತ್ತಿದ್ದೇನೆ: (ಮುಂದೆ ಅದನ್ನು ನಿಮ್ಮಲ್ಲಿಗೆ ಕಳುಹಿಸುತ್ತೇನೆ).

ಶ್ರೀ—ಅವರಿಗೆ ನನ್ನ 'ತುಂಗಭದ್ರೆ'ಯಿಂದ ನನ್ನಲ್ಲಿ ಅಭಿಮಾನ ಬೆಳೆದಿದೆ ಯಂತೆ. ದಾರಿಯಲ್ಲಿ ಕಂಡಾಗ ನಿಂತು ಮಾತಾಡಿಸಿ ಮುಂದೆ ಹೋಗುತ್ತಿದ್ದಾರೆ. ಅವರ ಆಸ್ಪತ್ರೆಚೀಟಿಯಂತೆ ಅವರ ಕೃತಿಗಳನ್ನು ನಾನು ನೋಡುವುದಿಲ್ಲವಾದರೂ, ನಾನು ಅವರ ವಿಷಯದಲ್ಲಿ ನಿಜವಾದ ಒಳ–ಅಭಿಮಾನವುಳ್ಳವನೇ: ನೀವು ಬಲ್ಲ ವಿಷಯ ಇದು.

ಈ ಕಾಗದ ಗ್ರಂಥವಾಗುವ ಹೊತ್ತಿಗೆ ಸೌಭಾಗ್ಯವತಿಯೂ ನಿದ್ರಾಧೀನಳಾಗಿ ದ್ದಾಳೆ. ತುಂಗಭದ್ರೆಗೂ ತುಂಬು ನಿದ್ದೆ. ನಿಮಗೂ ನಿಮ್ಮ ಮನೆಯವರಿಗೂ ನಮ್ಮೆ ಲ್ಲರ ಹೃತ್ಪೂರ್ವಕ ವಂದನೆಗಳು. ತಪ್ಪಿದ್ದರೆ, ಕ್ಷಮಿಸಿ.

ಇಂತು ನಿಮ್ಮವ
**ನರಸಿಂಹಸ್ವಾಮಿ**

ಕನ್ನಡದಲ್ಲಿ ಮಾತನಾಡಬಲ್ಲರು (ಇಂದಿಗೂ ಇಂತಹವರ ಸಂಖ್ಯೆ ಕಡಮೆ, ಇಂಗ್ಲಿಷ್‌ದ ಜ್ಞಾನ ಕೂಡ ಕಡಮೆಯಾಗಿರುವಾಗ).

ನಾನು ಧಾರವಾಡದ ಕರ್ನಾಟಕ ಕಾಲೇಜದಲ್ಲಿ ಪ್ರಾಧ್ಯಾಪಕನಾಗಿದ್ದಾಗ ಅವರು ಅನೇಕ ಸಲ ನನ್ನ ಅತಿಥಿಯಾಗಿದ್ದರು. ಅವರ ಶಿಸ್ತು, ಅವರ ಸೌಜನ್ಯ ಎಷ್ಟೋ ಸಲ ನನಗೆ ತೊಂದರೆಯನ್ನುಂಟು ಮಾಡುತ್ತಿತ್ತು. "ಇಂತಹ ವಿದ್ವಾಂಸರು ಇಂತಹ ವಿನಯಸೌಜನ್ಯವುಳ್ಳವರಾಗಿದ್ದಾರೆ" ಎಂದೂ ಆ ಗುಣಗಳು ನನ್ನಲ್ಲಿ ಇಲ್ಲ ಎಂದೂ ನನ್ನ ಮನೆಯವರಿಗೆ ಆಡಿ ತೋರಿಸಲು ಅವಕಾಶ ದೊರೆಯುತ್ತಿತ್ತು. ನಾನು ಒಪ್ಪುವ ಸಮಾಜದ ರೀತಿ-ನೀತಿಗಳ (manners) ಅಭ್ಯಾಸ ನನಗಿಲ್ಲ. ಇನ್ನೊಬ್ಬರನ್ನು ಒಲಿಸುವ ಚಾತುರ್ಯವಿಲ್ಲ. ಗೆಳೆತನವನ್ನು ಬೆಳೆಯಿಸುವ ಇಲ್ಲವೆ ಉಳಿಸಿಕೊಳ್ಳುವ ಸೌಜನ್ಯವಿಲ್ಲ. ಇಂತಹವನಿಗೆ ನಲ್ವತ್ತು ವರ್ಷಗಳಿಂದ ವಿ. ಸೀ.ಯವರು ನೆಚ್ಚಿನ ಗೆಳೆಯರಾಗಿದ್ದಾರೆ ಎಂಬುದಕ್ಕಿಂತ ಹೆಚ್ಚಿನ ಶಿಫಾರಸು ಪತ್ರವನ್ನು ಆ ಮಹಾನುಭಾವರಿಗೆ ಯಾರು ಕೊಡಬಲ್ಲರು?

ವಿ.ಸೀ.ಯವರ ಮಾತು, ರೀತಿ, ಹಾವ-ಭಾವ, ಊಟ-ಉಪಚಾರ, ವೇಷ ಇವನ್ನೆಲ್ಲ ನೋಡಿದರೆ ಅವರಲ್ಲಿದ್ದ 'ರಸಿಕತನ'ದ ಕಲ್ಪನೆ ಬರುವುದು. ಯಾವುದರಲ್ಲಿಯೂ ಒಳ್ಳೆಯದೆ ಆಗಬೇಕು. ಒಳ್ಳೆಯದಕ್ಕೆ ಕಾಲದೇಶಗಳ ಭೇದವಿಲ್ಲ. ಹಿಂದಿನದೆಲ್ಲ ಒಳ್ಳೆಯದು ಎಂಬ ಅಂದಿನ ವಾತಾವರಣದಲ್ಲಿ ನನ್ನಂತಹ ಕೆಲ ಕಿಡಿಗೇಡಿಗಳು ಬುದ್ಧಿಪೂರ್ವಕವಾಗಿ 'ಹಿಂದಿನದೆಂದರೆ ಹಳೆಯದು, ಹಳೆಯದು ಎಂದರೆ ಕೊಳೆತದು' ಎಂದು ಹಟದಿಂದ ಸಾಧಿಸುತ್ತಿದ್ದೆವು. ಆಗ ಮಾತ್ರ ವಿ. ಸೀ.ಯವರ ಸೌಮ್ಯ ಸ್ವಭಾವದ ನಿಜವಾದ ಕಲ್ಪನೆ ನಮಗೆ ಬರುತ್ತಿದ್ದಿತು. 'ಹಿಂದಿನ ಕಾಲದಲ್ಲೂ ಒಳ್ಳೆಯದು ಎಷ್ಟೋ ಇದ್ದಿತು' ಎಂದು ಹಟದಿಂದ, ಆವೇಶದಿಂದ, ಪಾಂಡಿತ್ಯ ಪೂರ್ಣ ದೃಷ್ಟಾಂತ ಸಹಿತವಾಗಿ ಸಾಧಿಸುವ ಅವರ ಚಿತ್ರ ನಮ್ಮ ಕಣ್ಣೆದುರು ಈಗಲೂ ನಿಲ್ಲುವುದು.

ಪ್ರತಿಯೊಂದರಲ್ಲೂ ದೋಷವನ್ನು ಎತ್ತಿ ತೋರಿಸುವುದರಲ್ಲಿ ತಜ್ಞ ಎಂದು ಹೆಸರುಗೆಟ್ಟ ನಾನು ಕೊನೆಯದಾಗಿ, ಗೆಳೆಯ ವಿ. ಸೀ.ಯವರಲ್ಲಿಯ ಒಂದು 'ದೋಷ'ವನ್ನು ಎತ್ತಿ ತೋರಿಸುತ್ತೇನೆ. ಅದೆಂದರೆ ಅತ್ಯಂತ ದಯಾರ್ದ್ರವಾದ ಅವರ ಅಂತಃಕರಣ. ಆದರೆ ಆ 'ದೋಷ'ಕ್ಕಾಗಿ ಇನ್ನೊಬ್ಬರಿಗೆ ಮಾತ್ರ ತಿಲಮಾತ್ರವಾದ ಅನ್ಯಾಯವಾಗಿಲ್ಲ. ಅದು 'ದೋಷ'ವೆಂದು ಕೂಡ ಒಪ್ಪದೆ ಇಂದಿಗೂ ಅದಕ್ಕಾಗಿ ಸ್ವಂತಕ್ಕೆ ಅನೇಕ ಕಷ್ಟ-ನಷ್ಟಗಳನ್ನು ಅನುಭವಿಸಿದ್ದಾರೆ. ಹೀಗಿರುವಾಗಲೂ

ಅನುದ್ವೇಗಕರಂ ವಾಕ್ಯಂ ಸತ್ಯಂ ಪ್ರಿಯಹಿತಂ ಚ ಯತ್
ಸ್ವಾಧ್ಯಾಯಾಭ್ಯಸನಂ ಚೈವ ವಾಙ್ಮಯಂ ತಪ ಉಚ್ಯತೇ

ಎಂದು ಭಗವದ್ಗೀತೆಯಲ್ಲಿ ಹೇಳಿದಂತೆ ಸಾತ್ತ್ವಿಕ ವೃತ್ತಿಯ ವಾಙ್ಮಯ ತಪಸ್ಸು ಅವರದು.

ಇಂತಹ ಮಾದರಿ ಇಂದು ಕಣ್ಣೆದುರಿನಲ್ಲಿ ಅಗತ್ಯ. ಅದಕ್ಕಾಗಿ ಸ್ವಾರ್ಥದ ದೃಷ್ಟಿಯಿಂದ, ಉಪಚಾರಕ್ಕಾಗಿ ಅಲ್ಲ, ವಿ. ಸೀ.ಯವರಿಗೆ ದೀರ್ಘಾಯುರಾರೋಗ್ಯಗಳು ದೊರಕಲಿ ಎಂದು ಹಾರೈಸುತ್ತೇನೆ. ಧೀಮಾನ್ ವಿ. ಸೀ.ಯವರು ಶ್ರೀಮಾನ್ ವಿ. ಸೀ.ಯಾಗಿ ಇರಲಿ.

ಶ್ರೀರಂಗ

* * *

## ನನ್ನ ಆರಾಧ್ಯ ಕವಿ

ಸೆಂಟ್ರಲ್ ಕಾಲೇಜಿನಲ್ಲಿ ಓದುತ್ತಿದ್ದಾಗ, ಸ್ವಾತಂತ್ರ್ಯ ಸಮರದ ಬಿಸಿಯು ನಾಡಿನಲ್ಲೆಲ್ಲಾ ಉಲ್ಬಣಗೊಳ್ಳುತ್ತಿತ್ತು. ಆದರೆ ನಮ್ಮ ಮೈಸೂರಿನಲ್ಲಿ, ದೇಶೀಯ ರಾಜ್ಯವಾಗಿದ್ದ ಕಾರಣವೋ ಏನೋ, ಸ್ವಾತಂತ್ರ್ಯ ಚಳುವಳಿಯು ಕಾಡುಕಿಚ್ಚಿನಂತೆ ಆಗ ಇನ್ನೂ ಹರಡಿರಲಿಲ್ಲ. ಮುಖ್ಯ ಷಹರುಗಳಲ್ಲಿ ಅಲ್ಪ ಸ್ವಲ್ಪ ಆಂದೋಳನವು ನಡೆಯುತ್ತಿತ್ತು. ಕಾಲೇಜು ವಿದ್ಯಾರ್ಥಿಗಳು ಪಾಠಪ್ರವಚನಗಳಲ್ಲಿ ಪೂರ್ಣಾಸಕ್ತರಾಗಿದ್ದರೂ, ಈ ಆಂದೋಳನದ ಕಾವು ಅವರನ್ನು ಬಡಿದಿತ್ತು. ಭಾರತದ ಇತರ ಕಡೆಗಳಿಂದ ಬರುತ್ತಿದ್ದ ನಾಯಕರ ಭಾಷಣಗಳನ್ನು ತಪ್ಪದೆ ಕೇಳುತ್ತಿದ್ದರು. ನಾಯಕರೊಬ್ಬರ ಭಾಷಣವಾಗುವ ಮೊದಲು ಸ್ವಯಂಸೇವಕರು ರಾಷ್ಟ್ರಪ್ರೇಮದ ಗೀತೆಯೊಂದನ್ನು ಹಾಡುವ ವಾಡಿಕೆಯಿತ್ತು. ಒಮ್ಮೆ ಉತ್ತರ ಭಾರತದಿಂದ ಬಂದಿದ್ದ ಸ್ವಯಂಸೇವಕರು "ಸಿರ್ ಜಾಯೇತೋ ಜಾಯೆ" ಎಂದು ಮೊದಲಾಗುವ ಗೀತೆಯನ್ನು ಹಾಡಿದರು. ತಲೆಯನ್ನೇ ಬಲಿಕೊಟ್ಟು ರಾಷ್ಟ್ರದ ಸ್ವಾತಂತ್ರ್ಯವನ್ನು ಗಳಿಸುತ್ತೇನೆ ಎಂದು ಪ್ರತಿಜ್ಞೆಯನ್ನು ಮಾಡುವ ವೀರಗೀತೆ ಅದು. ಗಾಯಕರು ಅತ್ಯುತ್ಸಾಹದಿಂದ ಹಾಡಿದ್ದರು. ಗೀತೆಯ ಪ್ರತಿಯೊಂದು ವಾಕ್ಯವೂ ನಮಗೆ ಅರ್ಥವಾಗದಿದ್ದರೂ ನಾವೆಲ್ಲರೂ ಪುಳುಕಿತರಾಗಿದ್ದೆವು.

ಅದಾದ ಕೆಲವು ದಿನಗಳ ನಂತರ ಬಿ. ಎಸ್. ರಾಮರಾಯರು ಒಂದು ಸಂಜೆ ಕನ್ನಡ ಗೀತೆಯೊಂದನ್ನು ಹಾಡಿದರು. "ಪೋಗುವೆವು ಸಮರ ಸಮ್ಮುಖಕೆ ನಾವು, ಬೇಗಲೈತನ್ನಿರಿ ನಲವಿಂದ ನೀವು" ಎಂದು ಪ್ರಾರಂಭವಾಗುವ ವೀರಗೀತೆ. ರಾಷ್ಟ್ರಪ್ರೇಮವನ್ನು ಸಾಲುಸಾಲಿನಲ್ಲೂ ಸೂಸುತ್ತಿರುವ ನಾಡಹಾಡು ಅದು. "ಝಳಪಿಸಿರಿ ಅಸಿಗಳಂ ಮೊಳಗಿಸಿರಿ ಶಂಖಗಳ, ಓಕುಳಿಯಾಡಿರಿ ಅರಿಯ ಕಾಳನೆತ್ತಿರೊಳು, ಕಾಳಿ ಗುಡಿಗಿನ್ನೊಮ್ಮೆ ಸಾಲಾಗಿ ಪೋಗಿರಿ, ಸಾಲ್ ಸಾಲಾಗಿ ಪೋಗಿರಿ, ಇಂದಾ ಕಾಳ ಪಕ್ಷದ ಕೊನೆಯ ಕಾಳ ರಾತ್ರಿ" ಎಂದು ರಾಮರಾಯರು ಹಾಡಿದಾಗ, ಎಲ್ಲ

ವಾಕ್ಯಗಳೂ ಅರ್ಥವಾಗುತ್ತಿದ್ದುದರಿಂದ, ರೋಮಾಂಚನವಾಗುತ್ತಿತ್ತು. ಆ ಕ್ಷಣದಲ್ಲಿ ಯಾರಾದರೂ ನನ್ನನ್ನು ಕಾಳಿಗುಡಿಗೆ ಹೋಗುವ ಬಾ ಎಂದು ಕರೆದಿದ್ದರೆ, ಅವನ ಹಿಂದೆ ಪ್ರತಿಜ್ಞಾ ದೀಕ್ಷೆಗೆಂದು ಹಿಂದು ಮುಂದು ನೋಡದೆ ಬಟ್ಟಂತ ಹೊರಡುತ್ತಿದ್ದೆ. ನನ್ನ ಪುಣ್ಯ! ಯಾರೂ ಆಗ ಕರೆಯಲಿಲ್ಲ. ನಾನೂ ಬದುಕಿಕೊಂಡೆ; ದೇಶವೂ ಬದುಕಿಕೊಂಡಿತು.

ವಿ. ಸೀ. ಯವರ ಗೀತವನ್ನು ಪೌಗಂಡ ವಯಸ್ಸಿನ ಒಗರಿದ್ದಾಗ ಕೇಳಿದ್ದೆ. ಆಗ ಉದ್ವೇಗಗೊಂಡಿದ್ದೆ. ಸುತ್ತುಮುತ್ತಲಿನ ಪರಿಸರವನ್ನು ಮರೆಯುವಷ್ಟು ಭಾವೋದ್ರಿಕ್ತನಾಗಿದ್ದೆ.

* * *

ಪೌಗಂಡ ವಯಸ್ಸು ಮೀರಿತ್ತು. ಗಂಡ ವಯಸ್ಸು ಪ್ರಾಪ್ತವಾಗಿತ್ತು. ಒಂದು ಸಂಜೆ ನನ್ನ ಬ್ರಹ್ಮಚಾರೀ ಬಿಡದಿಗೆ ರಾಮರಾಯರು ಬಂದಿದ್ದರು. "ಉಂಗುರ ರವ ಕೇಳಿ, ಕಾಲುಂಗರ ರವ ಕೇಳಿ, ಸಂತಸವಾಂತೆದೆ ಮೊರೆಯುತಲಿದೆಯಿದೊ" ಎಂಬ ಕನ್ನಡ ಗೀತೆಯನ್ನು ಹಾಡಿದರು. ಪ್ರಾಯ, ಗೀತೆಯ ಲಾಲಿತ್ಯ, ಸುಮಧುರ ಪದ ಬಂಧ, 'ನಿನ್ನಯ ಮೊಗದಲಿ ನಗುತಿಹ ಕಣ್ಗಳು ಬರುತಿವೆ ತೇಲುತಲೆನ್ನ ಕಡೆ,' ಇತ್ಯಾದಿಗಳು; ಇಲ್ಲದ ಪ್ರೇಯಸಿಯು ಎದುರು ಬರುತ್ತಿರುವಂತೆಯೇ ಹಗಲು ಗನಸನ್ನು ಕಟ್ಟಿತು. ಭವಲೋಕದಿಂದ ಭಾವನಾಲೋಕಕ್ಕೆ ತೇಲಿಸುತ್ತ ಒಯ್ದಿತು.

ವಿ. ಸೀ. ಯವರ ಹೊಸಗೀತೆಯಿದು ಎಂದು ಅನಂತರ ರಾಮರಾಯರು ಹೇಳಿದರು. ವಿ. ಸೀ.ಯವರ ವೈಯಕ್ತಿಕ ಪರಿಚಯವನ್ನು ಮಾಡಿಕೊಳ್ಳಲು ಆಗ ಕಾತರನಾದೆ. ವೈದ್ಯನಾಗಿದ್ದುದರಿಂದ ಪರಿಚಯವು ನಿಕಟವಾಗಲು ಅನುಕೂಲ ವಾಯಿತು. ಮಾತುಕತೆಗಳನ್ನಾಡಲು ಅವಕಾಶವೂ ದೊರಕುತ್ತಿತ್ತು.

* * *

ಏನನ್ನು ಮಾಡಿದರೂ ಚೊಕ್ಕವಾಗಿ ಮಾಡಬೇಕು. ಸುಸಂಸ್ಕೃತ ರೀತಿಯಲ್ಲಿ ಮಾಡಬೇಕು. ಒಂದಲ್ಲ ಒಂದು ಕಾಲದಲ್ಲಿ ಎಲ್ಲರಿಗೂ ಬಾಳು ದುರ್ಭರವಾಗುತ್ತದೆ. ಅಂತಹ ಕಾಲದಲ್ಲಿ ಮನಸ್ಸಿನಲ್ಲಿರುವ ನಂಜನ್ನು ಕಾವ್ಯದ ಮೂಲಕ ಹೊರಗೆಡಹ ಬಾರದು. ತಾತ್ಕಾಲಿಕ ಸಮಾಧಾನವನ್ನು ಅಂತಹವು ತಂದರೂ, ಸಮಾಜದ ದೃಷ್ಟಿ ಯಿಂದ, ಎಲ್ಲರ ಒಳಿತಿನ ದೃಷ್ಟಿಯಿಂದ, ಹಾಗೆ ಮಾಡುವುದು ಸಾಧುವಲ್ಲ. ಯುವ ಜನರ ಮನ ಒಲಿಸಿಕೊಂಡು, ಹಿತವಿಹಿತ ಪಥದಲ್ಲಿ ನಡೆಯುವಂತೆ ಪ್ರೇರೇಪಿಸುವುದು, ಬರಹಗಾರನ ಆದ್ಯ ಕರ್ತವ್ಯ. Sense of Ethical Values ಅನ್ನು ಸರ್ವಥಾ ಮರೆಯಬಾರದು. ಇವುಗಳನ್ನೇ ಅವರು ಒತ್ತಿ ಒತ್ತಿ ಹೇಳುತ್ತಿದ್ದರು.

ನುಡಿದಂತೆ ನಡೆದರು. ಉಡುವ ನವಿರು ಪಂಚೆ, ತೊಡುವ ಅಂಗಿ, ಬಿಗಿದ ಪಾಗು, ಎಲ್ಲದರಲ್ಲೂ ಚೊಕ್ಕತನವಿದೆ. ತಿನ್ನುವ ತಿಂಡಿ, ಕುಡಿಯುವ ಪಾನೀಯ, ಮೆಲ್ಲುವ ವೀಳೆಯ ಇವುಗಳೆಲ್ಲದರಲ್ಲೂ ಉತ್ತಮ ರುಚಿ ಮತ್ತು ಅಂದ, ಎರಡೂ

ಸಮನ್ವಯವಾಗಿವೆ. ನುಡಿಯುವ ಮಾತಿನಲ್ಲಿ, ಬಾಳಿನಲ್ಲಿ, ಇತರರಿಗೆ ನೋವಾಗದಂತೆ, ಹಲವರಿಗಾದರೂ ಹಿತವಾಗುವಂತೆ ನಡೆದುಕೊಂಡಿದ್ದಾರೆ. ಕಷ್ಟನಿಷ್ಠುರಗಳು ವೈಯಕ್ತಿಕವಾದುವು, ಅಂತರಂಗದಲ್ಲಿರಬೇಕಾದುವು, ಪ್ರದರ್ಶನಕ್ಕಲ್ಲ ಎಂದು ನುಡಿದಂತೆ ನಡೆದುಕೊಂಡಿದ್ದಾರೆ.

ಆಗಾದ ಕಾಲಕ್ಕೆ ಆಗಿ ಬಂದವರ ವಿಷಯದಲ್ಲಿ ವಿ. ಸೀ. ಯವರು ಕೃತಜ್ಞತೆಯಿಂದ ಕರಗಿ ಹೋಗುತ್ತಾರೆ. ಉಪಕಾರವನ್ನು ಸ್ಮರಿಸುವ ಆವೇಶದಲ್ಲಿ ಆಗುಹೋಗುಗಳ ಕಲ್ಪನೆಯೂ ಅವರಿಗೆ ಸಾಧ್ಯವಿಲ್ಲ. ಅಮಿತ ಕೃತಜ್ಞತೆಯೇ ಅವರ ಬಾಳನ್ನು ನಡಸಿರುವ ಒಂದು ಶಕ್ತಿ. ಅದೇ ಅವರ ಬಾಳನಡೆಗೆ ತುಸು ತೊಡಕೂ ಆಗಿರಬಹುದೋ ಎಂದನಿಸುತ್ತದೆ. Gratitude is like the perfume that the Violet bestows on the heel that crushes it ಎಂಬ ಆಂಗ್ಲ ಅನುಭಾವಿ ನುಡಿಯು ವಿ. ಸೀ. ಯವರನ್ನು ಕಂಡಾಗಲೆಲ್ಲ ಸ್ಮರಣೆಗೆ ಬರುತ್ತದೆ.

* * *

ಹೆಣ್ಣು ಮಕ್ಕಳನ್ನು ವಿವಾಹಾನಂತರ ಅತ್ತೆಯ ಮನೆಗೆ ಕಳಿಸಿಕೊಡುವಾಗ ಹೆತ್ತವರಿಗೆ ಆತಂಕವು ತಪ್ಪಿದ್ದಲ್ಲ. ಹುಟ್ಟುಮನೆಯ ವಾತಾವರಣವೇ ಸೇರಿದ ಮನೆಯಲ್ಲೂ ಇರುವುದು ಅಸಂಭವ. ಹಾಗಾಗಿ ಕಾತರವೂ ಆತಂಕವೂ ಇದ್ದೇ ಇರುತ್ತದೆ. ಅಂತಹ ಪರಿಸ್ಥಿತಿಯಲ್ಲಿ ಮನದ ತೊಳಲನ್ನು ತೋಡಿಕೊಳ್ಳುವುದು ಸುಲಭವೂ ಅಲ್ಲ, ವಿಹಿತವೂ ಅಲ್ಲ. ಆದರೂ, "ಬಾ ಮಗಳೆ, ಬಾ ತಾಯಿ, ಅಣಕಾಡ ಕಲಿಸುವೆನು, ಬಾಳನಣಕಿಸುತ ನೀನಿರಲು ನೋಡಿ ತಣಿಯುವೆನು; ಅತ್ತೆ ಅತ್ತಿಗೆಯರು ಆಡಿದಾ ಮಾತುಗಳು, ಕೊರೆಯುವುವು ಅರಿಯದಾ ನಿನ್ನ ಆತುಮವ; ಕಾಡುಮಿಗಗಳು ಸಾಧುವೆಂದೆನಿಸಿದಾಗ;" ಎಂದು "ತಾಯ ಬಯಕೆ"ಯನ್ನು ಬಳಸಿಕೊಂಡು ಬೀಳ್ಕೊಟ್ಟಾಗ, ಮನಸ್ಸು ಸಮಾಧಾನದಿಂದಿತ್ತು. ಕಾತರ ಆತಂಕಗಳು ಕಡಿಮೆಯಾಗಿದ್ದುವು.

ಅಂತೆಯೇ ನಮ್ಮ ಮೆಡಿಕಲ್ ಕಾಲೇಜನ್ನು ಸರಕಾರಕ್ಕೆ ವಹಿಸಿಕೊಡುವ ಉತ್ಸವದಲ್ಲಿ, ವಿದ್ಯಾರ್ಥಿ ವಿದ್ಯಾರ್ಥಿನಿಯರನ್ನು ಏನೆಂದು ಹರಸಲಿ ಎಂದು ಕಾತರನಾಗಿದ್ದೆ. "ತಂದೆ ಹರಕೆ"ಯ ನೆನಪಾಯ್ತು. ಬಳಸಿಕೊಂಡೆ. "ನಾವು ಗಳಿಸಿಹ ಪುಣ್ಯಕೀರುತಿ ಇವರ ಬಾಳಿಗೆ ಬೆರೆಯಲಿ; ನೆರವು ಕೆಳೆಗಳ ಬಾಳ ನಡಸಿರೆ ಎಲ್ಲ ಕಾಲಕು ಉಳಿಯಲಿ; ಪೆರರ ನೋವಿಗೆ ಕರಗುವಂತಹ ಬಾಳನಿವರು ನಡಸಲಿ" ಎಂದು ಹರಸಿದೆ. ಹಾಯ್ ಎನಿಸಿತು.

* * *

. ಭೃಂಗದ ಬೆನ್ನೇರಿ ಬಂದ ಕಲ್ಪನಾ ವಿಲಾಸವೇ ಕವಿಗಳ ಆಸ್ತಿ; ಭವಲೋಕದ ಬೇಗೆ ತಾಪಗಳನ್ನು ಮರೆಯದೆ ಭಾವಲಹರಿಯಲ್ಲಿ ತೊಡಗುವವರು ಕವಿಗಳೇ ಅಲ್ಲ

ಎಂದು ಕೆಲವರ ಅಭಿಪ್ರಾಯ. ವಾದ ವಿವಾದಗಳ ಕಣಕ್ಕೆ ಇಳಿಯುವ ಮನಪಕ್ವತೆಯಾಗಲೀ, ಪಾಂಡಿತ್ಯವಾಗಲೀ ನನಗಿಲ್ಲ. ಆದರೆ ಇಷ್ಟನ್ನು ಮಾತ್ರ ಹೇಳಬಲ್ಲೆ. ಬಾಳಿನಲ್ಲಿ ಬೇಗೆ ಬೇನೆಗಳು ಮುತ್ತಿದಾಗ, ವಿ. ಸೀ. ಯವರ ಯಾವುದೊಂದಾದರೂ ಗೀತೆಯು ಮನಸ್ಸನ್ನು ಹಗುರಗೊಳಿಸಿ ತುಸು ಸಮಾಧಾನವನ್ನು ಕರುಣಿಸಿದೆ. ಹಿಂತ ನೆಲೆಯ ಕೆಸರನ್ನು ಮರೆಯದೆ ಗಗನದತ್ತ ಭಾವನಾಲಹರಿಯನ್ನು ತೇಲಿಬಿಡುವುದರಲ್ಲಿ ವಿ. ಸೀ. ಯಶಸ್ವಿಯಾಗಿದ್ದಾರೆ.

ಹಾಗಾಗಿ, ವಿ. ಸೀ. ನನ್ನ ಆರಾಧ್ಯ ಕವಿ.

ರಾ. ಶಿ.

* * *

## ವಿಶ್ವಾಸಿ ಶ್ರೀ ವಿ. ಸೀ.

ಹತ್ತಿರ ಹತ್ತಿರ ಐವತ್ತು ವರ್ಷಗಳ ಪರಿಚಯ. ಇದಕ್ಕೂ ಹತ್ತು ಹನ್ನೆರಡು ವರ್ಷಗಳ ಹಿಂದೆ, ನಾನು ಕೋಟೆ ಹೈಸ್ಕೂಲಿನಲ್ಲಿ ಓದುತ್ತಿದ್ದಾಗ, ಅವರನ್ನು ಆಗಾಗ್ಗೆ ನೋಡುತ್ತಿದ್ದುದರ ಜ್ಞಾಪಕ. ಆಗ ಅವರೂ ಅಲ್ಲೇ ಓದುತ್ತಿದ್ದರೇನೊ? ಈಚೆಗೆ ನಮ್ಮ ನಮ್ಮ ಮಾತುಕತೆಗಳ ನಡುವೆ, ಆಗಾಗ್ಗೆ ಆ ಕೋಟೆ ಹೈಸ್ಕೂಲಿನಲ್ಲಿ ಹೆಡ್‌ಮಾಸ್ಟರುಗಳಾಗಿ ಹೋಗಿರುವ, ದಿವಂಗತ ಸರ್ವಶ್ರೀ ಸಿ. ಕೃಷ್ಣರಾವ್, ಪಾಲ್ ಚಿನ್ನಪ್ಪ, ಎಲ್. ಶೇಷಗಿರಿರಾವ್ ಇವರುಗಳ ನೆನಪುಗಳು ಬಂದಿರುವುದುಂಟು. ಶ್ರೀ ವಿ. ಸೀ. ಯವರೂ ಅಲ್ಲಿ ಓದಿದವರೇನೊ ಎಂಬ ಸಂದೇಹ.

ಅವರ ಪರಿಚಯವಾದುದು ಮಾತ್ರ ಅವರು ಮೈಸೂರು ಯೂನಿವರ್ಸಿಟಿಯ ಎಂ. ಎ. ಪದವೀಧರರಾಗಿ, ಬೆಂಗಳೂರು ಸೆಂಟ್ರಲ್ ಕಾಲೇಜಿಗೆ ಕನ್ನಡ ಪ್ರಾಧ್ಯಾಪಕರಾಗಿ ಬಂದಾಗಲೆ. ಆಗ ಅವರ ಮನೆಯಿದ್ದುದು ಬೆಂಗಳೂರು ಚಾಮರಾಜಪೇಟೆಯ ಎರಡನೆಯ ಮೆಯಿನ್ ರಸ್ತೆಯಲ್ಲಿ ಬಲಗಡೆಯ ಮೊದಲನೆಯದು. ಈಗ ಇರುವುದೂ ಅಲ್ಲಿಯೆ. ನಾನು ಆಗ ವಾಸಿಸುತ್ತಿದ್ದ ಮನೆ ಅದೇ ಚಾಮರಾಜಪೇಟೆಯ ಐದನೆಯ ಮೆಯಿನ್ ರಸ್ತೆಯಲ್ಲಿ. ಆಗ ನನ್ನ ವ್ಯಾಯಾಮ ಶಾಲೆಯೂ ಅದೇ.

ಆಗ ಹಿಂದೂಸ್ಥಾನಿ ಸೇವಾದಳದ ಸ್ಥಾಪಕರಾಗಿದ್ದ ಡಾಕ್ಟರ್ ಎನ್.ಎಸ್.ಹರ್ಡೀಕರರು, ಬಾಗಲಕೋಟೆ ಊರಿನಲ್ಲಿ ಒಂದು Physical Culture Centre ಅನ್ನು ಸ್ಥಾಪಿಸುವವರಿದ್ದು, ಅದರ ಉದ್ಘಾಟನೆಗೆ ನನ್ನನ್ನು ಆಹ್ವಾನಿಸಿದ್ದರು. ಇಂಗ್ಲಿಷಿನಲ್ಲಿದ್ದ ಆ ನನ್ನ ಅಂದಿನ ಅಧ್ಯಕ್ಷ ಭಾಷಣವನ್ನು ಸರಳ ಕನ್ನಡದಲ್ಲಿ ಮಾಡಿಕೊಟ್ಟವರು ಶ್ರೀ ವಿ. ಸೀ. ಅವರು. ಪರಿಚಯವಾದುದೂ ಆಗಲೆ. ಪರಿಚಯ ಮಾಡಿಸಿಕೊಟ್ಟವರು ಆಗ 'ರಾಮ್ ಮೋಹನ್ ಕಂಪನಿ ಪಬ್ಲಿಷರ್ಸ್ ಅಂಡ್

ಬುಕ್ ಸೆಲ್ಲರ್ಸ್'ನ್ನು ಸ್ಥಾಪಿಸಿದ್ದ ಶ್ರೀ ಬಿ. ಎಸ್. ರಾಮರಾಯರು. (ಆಗ ನ್ಯಾಷ ನಲ್ ಹೈಸ್ಕೂಲು ಉಪಾಧ್ಯಾಯರೂ ಆಗಿದ್ದರು.)

ಈ ಪರಿಚಯ ಅಷ್ಟರಲ್ಲೆ ನಿಲ್ಲದೆ ವೃದ್ಧಿಸುತ್ತ ಒಂದು ಸ್ನೇಹ...ಅಲ್ಲ... ವಿಶ್ವಾಸ...ಅದೂ ಅಲ್ಲ...ನನ್ನ ಶಿಷ್ಯಭಾವ, ಅವರ ಗುರುಭಾವವಾಗಿ ಬೆಳೆದು ನಿಂತಿತು...ನಿಂತಿದೆ. ಅವರು ವಯಸ್ಸಿನಲ್ಲಿ ನನಗಿಂತ ಸ್ವಲ್ಪ ಕಿರಿಯರು; ಆದರೇನಂತೆ! 'ವೃದ್ಧ ಶಿಷ್ಯೋ, ಗುರೂರ್ ಯುವಃ' ಇದ್ದಿಲ್ಲವೇನು! ಈಗ ಇಲ್ಲವೇನು? 'ನನ್ನ ಪೂರ್ವಿಕರಲ್ಲಿ ವಿದ್ಯಾಬುದ್ಧಿಗಳಿಗೆ ಅವಶ್ಯಕತೆಯಾಗಲಿ, ಸಮಯ ಸನ್ನಿವೇಶ ಗಳಾಗಲಿ, ಕಾತರ ಆತುರತೆಗಳಾಗಲಿ ಇರಲಿಲ್ಲವೇನೊ!' ಎಂದೆನಿಸುತ್ತದೆ. ಅದಕ್ಕೇ ನಾನು ಇನ್ನೂ ಕಸರತ್ತು ಕಲಿಸುವ ದಡ್ಡನಾಗಿಯೆ ಉಳಿದಿದ್ದೇನೆ...ಉಳಿದುಬಿಟ್ಟೆ. ಇನ್ನೇನಾದರೂ ಆಗಲು ಸಮಯವಿರಲಿಲ್ಲ. ಸಾಧ್ಯವೂ ಇರಲಿಲ್ಲ. ಎಂಟು ಹತ್ತು ಜನರಿದ್ದ ಸಂಸಾರನೊಗವನ್ನು ಆಗ ನಾನು ಹೊರಬೇಕಾಗಿತ್ತು. ನನ್ನ ಮತ್ತು ಶ್ರೀ ವಿ. ಸೀ. ಅವರ ಪರಿಚಯ ಮತ್ತು ಭಾವನೆಗಳು ಹೇಗೆ ಮುಂದುವರೆದವೆಂಬುವನ್ನು ತಿಳಿಸಲು ಈ ನನ್ನ ಹರಕು ಬರವಣಿಗೆಯಲ್ಲಿ ಈಗ ಪ್ರಯತ್ನಿಸುತ್ತಿದ್ದೇನೆ.

ಬಲು ಹಿಂದೆ ಒಮ್ಮೆ ಎಲ್. ಶೇಷಗಿರಿರಾಯರು (ಕೋಟೆ ಹೈಸ್ಕೂಲ್ ಹೆಡ್ ಮಾಸ್ಟರ್ ಆಗಿದ್ದವರು) ಕೆಲಕಾಲ ಮೈಸೂರಿನಲ್ಲೂ ಇದ್ದರು. ಶ್ರೀ ವಿ. ಸೀ. ಯವರು ಓದುತ್ತಿದ್ದಾಗ ಅವರ ಹೆಡ್ ಮಾಸ್ಟರ್ ಆಗಿದ್ದರಂತೆ. ಶ್ರೀ ವಿ. ಸೀ. ಯವರೂ ಕೀರ್ತಿಶೇಷರಾದ ಶ್ರೀ ವೆಂಕಣ್ಣಯ್ಯನವರೂ (ಇಬ್ಬರೂ ಕನ್ನಡಶ್ರೀ ಭಾಗ್ಯವಂತರುಗಳೆ) ಒಟ್ಟಿಗೆ ಬೀದಿಗಳಲ್ಲಿ ನಡೆದಾಡುತ್ತಿದ್ದುದನ್ನು ಕಂಡು, ಒಮ್ಮೆ ವಿ. ಸೀ.ಯವರು ಒಬ್ಬರೇ ಸಿಕ್ಕಾಗ ಶೇಷಗಿರಿರಾಯರೇ ಬಳಿಗೆಬಂದು ಹೀಗೆಂದರಂತೆ: "ಲೋ! ಸೀತಾರಾಮು, ನೋಡೂ, ನೀನು ವೆಂಕಣ್ಣಯ್ಯನ ಜೊತೇಲಿ ಬೀದೀಲಿ ಮಾತ್ರ ನಡೆದು ಹೋ ೯ ಗ ಬೇ ಡ" ಒಡನೆ ವಿ. ಸೀ. ಯವರು ಈ ಮಾತನ್ನು ಮೇಷ್ಟ್ರು ಯಾವ ಅರ್ಥದಲ್ಲಿ ಹೇಳುತ್ತಿದ್ದಾರೆ ಎಂಬುದನ್ನು ಅರ್ಥಮಾಡಿಕೊಂಡು ನಕ್ಕು ಸುಮ್ಮನಾಗಿಬಿಟ್ಟರಂತೆ...ಅವರವರ ಹುಟ್ಟು, ಬೆಳವಣಿಗೆ ಹಾಗಿದ್ದರೆ ಯಾರು ಏನು ಮಾಡಲಾದೀತು? ಕೀರ್ತಿಶೇಷ ವೆಂಕಣ್ಣಯ್ಯನವರಿದ್ದುದು ಆರಡಿ, ಮೂರಂ ಗುಲಗಳ ಎತ್ತರ. ಶ್ರೀ ವಿ. ಸೀ.ಯವರ ನಿಲವು (ಅವರ ಟೋಪಿ ರುಮಾಲು ತೆಗೆ ದಿಟ್ಟರೆ) ಐದಡಿ ಮೂರಂಗುಲಗಳಷ್ಟು. ಈ ಒಂದಡಿ ವ್ಯತ್ಯಾಸ ದಿವಂಗತ ಶೇಷಗಿರಿ ರಾಯರ ಕಣ್ಣುಗಳಿಗೆ ಎಷ್ಟು ವ್ಯತ್ಯಾಸವಾಗಿ ಕಂಡಿತೋ ಏನೋ!

ನಾನೂ, ಶ್ರೀ ವಿ. ಸೀ. ಅವರೂ ಒಟ್ಟಿಗೆ ನೂರಾರು...ಸಾವಿರಾರು ಸಲ ಬೀದಿ ಗಳಲ್ಲಿ ನಡೆದು ಹೋಗಿದ್ದೇವೆ. ಯಾರ್ಯಾರು ಏನೇನು ಕಂಡರೋ! ಹ್ಯಾಗ್ಯಾಗೆ ಕಂಡರೊ! ಏನೇನಂದು ಕೊಂಡರೊ! ಏನೇನೆಂದರೊ? ಆದರೂ, ಶ್ರೀ ವಿ. ಸೀ. ಅವರು "ಆ ದಡ್ಡ ಅಯ್ಯರ್ ಜತೆಯಲ್ಲಿ ನೀನು ತಿರುಗಾಡಬೇಡ" ಎಂದು ಯಾರೊ ಬ್ಬರೂ ಅವರಿಗೆ ಹೇಳಿದರೆಂದು ನನ್ನೊಡನೆ ಇದುವರೆಗೂ ಹೇಳಿಲ್ಲ. ಒಂದುವೇಳೆ

ಹೇಳಿದ್ದರೂ, ಅದನ್ನು ನನಗೆ ತಿಳಿಸಬಾರದೆಂಬ ಔಚಿತ್ಯವೂ, ಶುಚಿ ಮನಸ್ಸೂ, ಶ್ರೀ ವಿ. ಸೀ. ಅವರನ್ನು ತಡೆದು ಹಿಡಿದಿರಬೇಕು ಎಂದು ನಾನೆಂದುಕೊಂಡಿದ್ದೇನೆ. 'ಕನಕಗಿರಿಗೂ ಕಾಡುಬೆಟ್ಟಕ್ಕೂ ಅದ್ಯಾವ ಸಂಬಂಧ' ಎಂಬುದು ಸರ್ವರಿಗೂ ತಿಳಿದ ವಿಷಯವಾಗಿಯೆ ಇದೆ.

ಈ 'ಪಿಟ್ಟಿತ್ತೈದ್ಯೆ ವೆಂಕಟೇಶ್' (ದಿವಂಗತ ಶ್ರೀ ಕೈಲಾಸಂ ನನಗೆ ಕೊಟ್ಟ ಹೆಸರು) ವಿದ್ಯಾಬುದ್ಧಿಗಳಲ್ಲಿ ತುಂಬಿದ ಕೊಡಗಳಂತಿರುವ ಶ್ರೀ ವಿ. ಸೀ., ಶ್ರೀ ಜಿ. ಪಿ. ರಾಜರತ್ನಂ, ದಿವಂಗತ ಶ್ರೀ ಟಿ. ಪಿ. ಕೈಲಾಸಂರಂಥವರ ಬಳಿ ಏಕೆ ಇದ್ದೆನೊ, ಏಕೆ ತಿರುಗಾಡಿದೆನೊ, ಏಕೆ ಅವರಾದರೂ ನನಗೆ ಆಶ್ರಯವಿತ್ತರೊ! ಇವೆಲ್ಲ ಬಿಡಿಸಲಾಗದ ಸಮಸ್ಯೆಗಳು. ಇಂತಹ ಮಹಾನುಭಾವರುಗಳ ಸಾಮೀಪ್ಯ ಒದಗಿದುದು 'ನನ್ನ ಜನ್ಮ ಸಾರ್ಥಕತೆಗಾಗಿಯೆ' ಎಂದುಕೊಂಡಿದ್ದೇನೆ. 'ಓದದೆಯೆ, ಬರೆಯದೆಯೆ, ಅವೆರಡೂ ನನಗೆ ಸ್ವಲ್ಪ ಸ್ವಲ್ಪ ಬಂದುದು ಈ ಮಹಾನುಭಾವರುಗಳ ಸಂಶ್ರಯದಿಂದಲೇ' ಎಂಬುದರಲ್ಲಿ ನನಗೆ ಅನುಮಾನವೇ ಇಲ್ಲ.

ಹಲವಾರು ಮಹೋನ್ನತ ಗುಣಗಳನ್ನು ನಾನು ಶ್ರೀ ವಿ. ಸೀ.ಯವರಲ್ಲಿ ಕಂಡಿರುವುದುಂಟು. ಇವರ ವಿದ್ವತ್ತೂ ಹಲವಾರು ಮುಖಗಳಲ್ಲಿವೆ: ಅಂದರೆ 'Jack of all trades' ಎಂದಲ್ಲ...'Master of many Trades'ಎಂದೆನ್ನಬಹುದು. ಕನ್ನಡದಲ್ಲಿ ಇವರಿಗೆ ಅಪಾರ ಸಂಪತ್ತಿದೆ; 'ಆಳವಿಷ್ಟೇ' ಎಂದು ಹೇಳಲಾಗದಷ್ಟು. ಇಂಗ್ಲಿಷ್ ಭಾಷೆಯಲ್ಲೂ ಹಾಗೆಯೆ. ಅರ್ಥಶಾಸ್ತ್ರದಲ್ಲೂ ಮಹಾ ನೈಪುಣ್ಯವಿದೆ. ಸಂಗೀತದಲ್ಲಿ ರಾಗಜ್ಞಾನ, ಸ್ವರಜ್ಞಾನ,ತಾಳಜ್ಞಾನ ಚೆನ್ನಾಗಿದೆ.ಹಿಂದೂಸ್ತಾನಿ ಸಂಗೀತದ ಅನುಭವವೂ ಇದೆ. ಪಾಶ್ಚಾತ್ಯ ಸಂಗೀತವನ್ನೂ ಚೆನ್ನಾಗಿ ತಿಳಿದುಕೊಂಡಿದ್ದಾರೆ. ಜೋಷುವಾ ಹೈಫೆಟ್ಸ್, ಯೆಹೂದಿ ಮೆನುಹಿನ್ ಇವರುಗಳ ಪಿಟೀಲು ವೈಖರಿಗಳನ್ನು ನಾವಿಬ್ಬರೂ ಒಟ್ಟಿಗೆ ಕುಳಿತು (ಬೆಂಗಳೂರಲ್ಲಿ ಆದಾಗ) ಕೇಳಿದ್ದೇವೆ. ಬೆತೂವೆನ್, ಮೊಟ್ಸಾರ್ಟ್, ಚೈಕೊವಿಸ್ಕಿ ಇಂಥವರ ಕೈವಾಡಗಳನ್ನೂ ಕೃತಿಗಳನ್ನೂ ಇವರು ಚೆನ್ನಾಗಿ ಬಲ್ಲವರು. 'ರಷ್ಯನ್ ಕ್ಲಾಸಿಕ್' ಎಂದರೆ ಪ್ರೇಮ. ಆ ದಿಗ್ದಂತಿಗಳ ಪ್ರತಿಭೆಗಳನ್ನೂ ಚೆನ್ನಾಗಿ ಅರಿತಿದ್ದಾರೆ...ಇದಿಷ್ಟೂ ಸಂಗೀತಕ್ಕಾಯಿತು. ಇನ್ನು ಕಾವ್ಯ ನಾಟಕಗಳೆಂದರೆ, ಇವರು ಓದದ, ಉದಾಹರಿಸದ, ಪಾಠ ಹೇಳದ, ಸಂಸ್ಕೃತ ನಾಟಕಗಳಿಲ್ಲ ಎಂದು ಹೇಳುವ ಧೈರ್ಯ ನನಗಿದೆ. ಪ್ರಾಚೀನ ನಾಟಕಗಳಷ್ಟೇ ಅಲ್ಲ, ಆಧುನಿಕ ನಾಟಕಗಳನ್ನೂ ಚೆನ್ನಾಗಿ ಬಲ್ಲವರು. 'ಜಾಸ್ ಮ್ಯೂಸಿಕ್'ನಲ್ಲಿ ಇವರಿಗೆ ಹಿತವಿಲ್ಲ. ಹಾಗೂ, ನಮ್ಮ ದೇಶದಲ್ಲಿ ಈಗೀಗ ಹುಟ್ಟಿ ಹರಡುತ್ತಿರುವ 'ಅತಿ ನವೀನ' ನಾಟಕಗಳೂ ಇವರಿಗೆ ಹಿಡಿಸಿಲ್ಲ. ಇತ್ತೀಚಿನವರಾದ ಬರ್ನಾಡ್‌ಷಾ ಮುಂತಾದವರ ನಾಟಕಗಳನ್ನೂ ಶ್ರೀ ವಿ. ಸೀ.ಯವರು ಸೊಗಸಾಗಿ ಕನ್ನಡಿಸಿದ್ದಾರೆ. ಇಬ್ಸೆನ್‌ರವರ ನಾಟಕಗಳೂ ಇವರಿಗೆ ಬಲು ಇಷ್ಟ. ತಾವೇ ಸ್ವಂತವಾಗಿ ಅನೇಕ ನಾಟಕಗಳನ್ನು ರಚಿಸಿದ್ದಾರೆ. ಯಾವುದೊಂದು ವಿಷಯ, ವಸ್ತು,

ಸಂದರ್ಭ, ಸನ್ನಿವೇಶಗಳ ಮೇಲೆಯಾಗಲಿ ಚೆನ್ನಾಗಿ ವ್ಯಾಖ್ಯಾನ ಮಾಡಬಲ್ಲವರು, ವಿಮರ್ಶನೆ ಮಾಡಬಲ್ಲವರು, ಪ್ರಬಂಧ ಬರೆಯಬಲ್ಲವರು. ಇವರ ಭಾಷಣ ಕೇಳುವು ದೆಂದರೆ ಅದೊಂದು ಸುಯೋಗ.

ಇವರ ಜೀವನೋದ್ಯೋಗ ವಿದ್ಯೆ ಕಲಿಸುವುದು. ಅದೆಷ್ಟು ಸಾವಿರ ಸಾವಿರ ವಿದ್ಯಾರ್ಥಿಗಳಿಗೆ ಕನ್ನಡ ಸಾಹಿತ್ಯ ಪಾಠ ಹೇಳಿದ್ದಾರೆಯೊ, ಎಣಿಕೆ ಇಲ್ಲ. ಕನ್ನಡ ಸಾಹಿತ್ಯ ಹೇಳಿಕೊಡುವಾಗ ಅದಕ್ಕೆ ಸಮ ಸಮ ತೂಗಬಲ್ಲ, ಜೋಡಿಯಾಗಬಲ್ಲ ಇಂಗ್ಲಿಷ್ ಸಾಹಿತ್ಯದ, ಪ್ರಾಕೃತ ಹಳಗನ್ನಡ ಸಾಹಿತ್ಯದ ಉದಾಹರಣೆಗಳೆಷ್ಟೊ! ಬೇರೆಯವರ ಪಾಠ ಪ್ರವಚನಗಳೆಂದರೆ ಅಸಹ್ಯ ಹಿಡಿದ ವಿದ್ಯಾರ್ಥಿಗಳು ಶ್ರೀವಿ.ಸೀ. ಯವರ 'period' ಎಂದರೆ 'ಚಕ್ಕರ್' ಹಾಕುತ್ತಲೇ ಇರಲಿಲ್ಲ. ಪಾಠಗಳನ್ನು ಸರ್ವ ತೋಮುಖ ರುಚಿಕರವಾಗಿ, ನಾರಿಕೇಳಪಾಕವಾಗಿ ಮಾಡಿಕೊಟ್ಟರೆ ವಿದ್ಯಾರ್ಥಿಗಳು ಏಕೆ ಸ್ವೀಕರಿಸುವುದಿಲ್ಲ? 'ಇನ್ನೂ ಕೊಡಿ' ಎನ್ನುತ್ತಾರೆಯೆ ವಿನಾ 'ಸಾಕು' ಎಂದೆನ್ನು ವುದೇ ಇಲ್ಲ. ಹೇಳಿಕೊಡಬೇಕಾದುದನ್ನು ಇನ್ನಷ್ಟು 'ಕಬ್ಬಿಣದ ಕಡಲೆ' ಮಾಡಿ ಕೊಟ್ಟರೆ, ಅವರಿಗೆ ಹಿಡಿಸುವುದೇ ಇಲ್ಲ. ಹಿಂದಿನ ಕಾಲೇಜು, ಹೈಸ್ಕೂಲುಗಳಲ್ಲಿ ಶ್ರೀ ವಿ. ಸೀ.ಯವರಂಥ ಅಧ್ಯಾಪಕರು ಇದ್ದರು. ಶಾಲಾ ಕಾಲೇಜುಗಳಲ್ಲಿ ಪಾಠ ಪ್ರವಚನಗಳು ಸುಗಮವಾಗಿ ನಡೆಯುತ್ತಿದ್ದುವು. ವಿದ್ಯಾರ್ಥಿಗಳೂ ಅವರವರ ಶಾಲಾ ಕಾಲೇಜುಗಳಿಗೆ ಭೂಷಣವಾಗಿರುತ್ತಿದ್ದರು. ಈಗಿನ ವಿದ್ಯಾಭ್ಯಾಸದ ತೆರನೇ ಬೇರೆ. ವಿದ್ಯಾರ್ಥಿಗಳೂ ಹಾಗೆ ಹಾಗೆಯೇ. ಮೇಷ್ಟ್ರುಗಳಿಗೆ ವಿದ್ಯಾರ್ಥಿಗಳ ಮೇಲೆ ಏನೇನೂ ಅಭಿಮಾನವಿಲ್ಲ; ವಿದ್ಯಾರ್ಥಿಗಳಿಗೂ ಮೇಷ್ಟ್ರ ಮೇಲೆ ಗೌರವವಿಲ್ಲ. ಇನ್ನು 'ಓದು' ಹೇಗೆ ಬಂದೀತು?

ಎಷ್ಟೋ ಸಲ ನಾನು ಶ್ರೀ ವಿ.ಸೀ.ಯವರೊಡನೆ ಬೀದಿಯಲ್ಲಿ ನಡೆದುಹೋಗು ತ್ತಿರುವಾಗ, ಆಕಸ್ಮಾತ್ ಸಂಧಿಸಿದ ಯುವಕ 'ನಮಸ್ಕಾರ ಮೇಷ್ಟ್ರೆ' ಎಂದು ನಮ ಸ್ಕರಿಸುತ್ತ ಅವರ ಬಳಿಗೆ ಬಂದುದುಂಟು. ಅದೇನು ಅದ್ಭುತ ನೆನಪೊ ಶ್ರೀ ವಿ.ಸೀ. ಯವರದು. ಅವರೂ ನಸುನಕ್ಕು ಯುವಕನ ಹೆಸರನ್ನೂ ಹೇಳಿ "ಚೆನ್ನಾಗಿ ದ್ದೀಯಾ? ಈಗ ಎಲ್ಲಿದ್ದೀಯಪ್ಪ? ಏನ್ಮಾಡ್ಕೊಂಡಿದ್ದೀಯೆ?" ಎಂದು ಕೇಳು ತ್ತಾರೆ. (ಆತ ಉದ್ಯೋಗ ಹೇಳಿದರೆ) "ಬಲು ಸಂತೋಷ...ನಿಮ್ಮ ಆಫೀಸರು ಈ ಹೆಸರಿನವರಲ್ಲವೆ? ಒಳ್ಳೆಯವರು. ಚೆನ್ನಾಗಿ ನಡ್ಕೋಪ್ಪಾ, ಮದ್ವೆ ಮಾಡ್ಕೊಂಡ್ಯಾ, ಮಕ್ಕಳೆಷ್ಟು? ಎಲ್ಲರೂ ಚೆನ್ನಾಗಿದ್ದೀರಿ ತಾನೆ?" ಎಂದೆಲ್ಲ ಪ್ರಶ್ನೆ ಮಾಡುತ್ತಾರೆ. ಆತ 'ಏನೋ ಸಾರ್ ತಾವ್ಹೇಳಿಕೊಟ್ಟ ನಾಲ್ಕಕ್ಷರ, ಒಳ್ಳೆ ನಡತೆ, ನನ್ನನ್ನಿದು ವರ್ಗೆ ಕಾಪಾಡ್ಕೊಂಡ್ಬಂದಿದೆ...ಎಲ್ಲಾ ತಮ್ಮ ಆಶೀರ್ವಾದ' ಎಂದರೆ, ಶ್ರೀ ವಿ. ಸೀ.ಯವರು "ಮಣ್ಣು, ಮಣ್ಣು. ಯಾರ ಆಶೀರ್ವಾದವೂ ಅಲ್ಲ. ನಿನ್ನ ಮನಸ್ಸು ಚೆನ್ನಾಗಿದೆ. ಚೆನ್ನಾಗಿ ಕಲಿತೆ. ದೇವರು ಒಳ್ಳೆಯದು ಮಾಡಿದ...

ಇನ್ನೂ ಮಾಡ್ತಾನೆ" ಎಂದು ಹೇಳಿ—'ನಮಸ್ಕಾರ' ಎಂದು ಮತ್ತೆ ಉಚ್ಚರಿಸಿ, ಮುಂದಡಿಯಿಡುತ್ತಾರೆ.

ಇಂತಹ ಮೇಷ್ಟ್ರನ್ನ ವಿದ್ಯಾರ್ಥಿ ಎಂದಿಗಾದರೂ ಮರೆಯುತ್ತಾನೆಯೆ? ಖಂಡಿತ ವಾಗಿಯೂ ಇಲ್ಲ.

ಶ್ರೀ ವಿ. ಸೀ.ಯವರ ಜ್ಞಾಪಕಶಕ್ತಿ ಅದ್ಭುತವಾದುದೆಂದು ಹೇಳಿದೆ. ಇದು ಸ್ವಲ್ಪವೂ ಹೊಗಳಿಕೆಯ ಮಾತಲ್ಲ. 'ದಶಾವಧಾನ, ಶತಾವಧಾನ' ಪಂಡಿತ ಪಂಕ್ತಿಗಳಿಗೆ ಸೇರಿದವರಿವರು. ಎಷ್ಟೋ ಸಲ, ಒಮ್ಮೆ ಮಾತ್ರ ಪರಿಚಯರಾದವ ರನ್ನೂ ಯಾವುದೋ ಸಂದರ್ಭದಲ್ಲಿ ಒಮ್ಮೆ ಮಾತ್ರ ಮಾತನಾಡಿಸಿದವರನ್ನೂ ಇನ್ಯಾವಾಗಲೋ—ಅನಿರೀಕ್ಷಿತ ಭೇಟಿಯಾದಾಗಲೂ, ಹೆಸರನ್ನು ತಮ್ಮ ಜ್ಞಾಪಕ ದಲ್ಲಿಟ್ಟುಕೊಂಡು, ಹಿಂದೆ ನಡೆದ ವಿಷಯ, ಸಂದರ್ಭಗಳನ್ನೂ ನೆನೆಪಿನಲ್ಲಿಟ್ಟುಕೊಂಡು ಭೇಟಿಯಾದವರೊಡನೆ—ಬಹಳ ದಿನಗಳ ಪರಿಚಯವಿದ್ದಂತೆ, ಮಾತನಾಡಿಸಿ, ಕುಶಲ ಕೇಳಿ ಸಲ್ಲಾಪಿಸಿದುದುಂಟು. ಇಂತಹ ಸನ್ನಿವೇಶಗಳು ನನ್ನನ್ನು ಮೂಕನಾಗಿಸಿ, ಮುಗ್ಧನನ್ನಾಗಿ ಮಾಡಿವೆ. ಬಹಳ ಹೊತ್ತಿನ ಮೇಲೆ ನಾನು 'ಏನು ಸಾರ್—ಅವರು ತಮಗೆ ಅಷ್ಟು ಹಿಂದಿನ ಪರಿಚಿತರೇನು? ತಮಗೆ ಸಮೀಪ ಬಂಧುಗಳೇನು' ಎಂದು ಕೇಳಿದುದುಂಟು. ಆ ಮಾತಿಗೆ ಶ್ರೀ ವಿ. ಸೀ.ಯವರು 'ಏಕೆ ಈಗ್ಗೆ ಎರಡು ತಿಂಗಳ ಹಿಂದೆ ಇಂಥವರ ಭಾಷಣ ಅಥವಾ ಮರ್ಯಾದೆ ನಡೆದ ದಿನ, ನಮ್ಮಿಬ್ಬರ ಪಕ್ಕದಲ್ಲಿಯೇ ಕುಳಿತಿರಲಿಲ್ಲವೆ? ನಿಮ್ಮನ್ನೂ ಮಾತನಾಡಿಸಿದರಲ್ಲವೆ?' ಎಂದು ಉತ್ತರಿಸಿದುದುಂಟು. ಅಂಥಾ ವೇಳೆಗಳಲ್ಲಿ, ಈ ನನ್ನ ದಡ್ಡ ತಲೆಯನ್ನು ಚೆನ್ನಾಗಿ 'ಜಜ್ಜಿ'ಕೊಂಡರೆ ತಪ್ಪೇನು!—ಎಂದು ನನಗನ್ನಿಸಿದುದುಂಟು.

ಈಗ ಓದಿದ್ದು ನಾಳೆಗೇ ಮರೆತರೆ, ನನ್ನ ತಲೆಗೇನೆನ್ನಬೇಕು? ಅಥವಾ 'ನೆನಪು' ಎಂಬುದು ಒಂದು 'ಸಾಧನೆ' ಮಾತ್ರದಿಂದಲೇ ಲಭ್ಯವೊ? ಜ್ಞಾಪಕಶಕ್ತಿಯೇ ಇಲ್ಲ ದಿದ್ದಮೇಲೆ ಓದ್ಯಾಕೆ? ಬರೆಯುವುದ್ಯಾಕೆ? ಇದು ಒಂದು ವೇಳೆ ಉತ್ತಮ ವಿದ್ವಾಂಸರ 'ವಂಶಪಾರಂಪರ್ಯ'ವೇ ಆಗಿದ್ದರೆ ದಡ್ಡರ ಮಕ್ಕಳೂ ಬುದ್ಧಿವಂತರಾಗಿ ಲ್ಲವೆ! ಮುಖ್ಯ ಅವರವರ ಜಾತಕಗಳಲ್ಲಿ 'ಗುರು, ಬುಧ'ರು ಒಳ್ಳೆಯ ಸ್ಥಾನಗಳಲ್ಲಿ ವಿರಾಜಮಾನರಾಗಿರಬೇಕು...ಇಲ್ಲದಿದ್ದರೆ ಅವನು 'ಮಣ್ಣು ಹೊರಬೇಕು' ಅಷ್ಟೆ... ಒಂದೆರಡೇ ನಿಮಿಷಗಳ ಪರಿಚಯ ಸಂದರ್ಭಗಳಲ್ಲಿಯೂ, ಶ್ರೀ ವಿ. ಸೀ.ಯವರು ಪರಿಚಯ ವ್ಯಕ್ತಿಯ ರೂಪರೇಖೆಗಳನ್ನು ಛಾಯಾಗ್ರಾಹಿ ಕೇಮರಾದಂತೆ, 'ಫೋಟೋ' ಹಿಡಿದು ತಮ್ಮ ಮೆದುಳಿನಲ್ಲಿಟ್ಟುಕೊಂಡು ಬಿಡುತ್ತಾರೆ. ಸಂದರ್ಭ ವನ್ನೂ, ಆಡಿದ ಮಾತುಗಳನ್ನೂ ಅವರ ತಲೆಯೊಳಗಿನ ಕಂಪ್ಯೂಟರ್ ಹಿಡಿದಿಟ್ಟು ಕೊಂಡಿದ್ದು, 'ಬಟನ್ ಪ್ರೆಸ್' ಮಾಡಿದಾಗ್ಗೆ 'ರಿಲೀಸ್' ಮಾಡಿಕೊಡುತ್ತದೆ...ಇವೆ ರಡೂ ಶ್ರೇಷ್ಠ ಮಾನವನ ಘನತೆಗಳು. ಒಮ್ಮೆ ಶ್ರೀ ವಿ. ಸೀ.ಯವರನ್ನು ನಾನು ಪ್ರಶ್ನಿಸಿಯೂ ಬಿಟ್ಟೆ. ಆಗ ಅವರು ಉತ್ತರವಿತ್ತುದು: "ಮಣ್ಣು, ಮಣ್ಣು,

ಅಂತಹ ಅವಧಾನಗಳಿಗೆ ನನಗೆ ವ್ಯವಧಾನವಿಲ್ಲ. ಮೇಷ್ಟ್ರಾದವನು ವಿದ್ಯಾರ್ಥಿಗಳ ಪರಿಚಯುಗಳನ್ನಿಟ್ಟುಕೊಳ್ಳಬೇಕು. ತಾನು ಓದಿದ್ದನ್ನೂ, ಓದುತ್ತಿರುವುದನ್ನು ಜ್ಞಾಪಕದಲ್ಲಿಟ್ಟುಕೊಳ್ಳಬೇಕು. ಇವನ್ನೇ ಮರೆತರೆ ಇನ್ನು ಹುಡುಗರಿಗೆ ಹೇಳಿಕೊಡು ವುದೇನು?" ಎಂದು ಬಿಟ್ಟರು.

ಶ್ರೀ ವಿ.ಸೀ.ಯವರು ಸಿಟ್ಟಾದುದನ್ನು ನಾನು ಕಂಡಿಲ್ಲ. ಯಾವುದಾದರೊಂದು ವಿಷಯದಲ್ಲಿ ಮನಸ್ಸಿಗೆ ಅಸಹ್ಯತೆ ತೋರಿಬಂದರೆ ಮುಖಮುದ್ರೆಯಲ್ಲಾಗಲಿ, ಮಾತಿನ ಕಠೋರತೆಯಲ್ಲಾಗಲಿ ಅದನ್ನು ತೋರ್ಪಡಿಸುತ್ತಿರಲಿಲ್ಲ. ಮೌನವಾಗಿದ್ದು ಬಿಡುತ್ತಿದ್ದರು. ತಮ್ಮ ಅಸಹನತೆಯನ್ನು ಇನ್ನೊಬ್ಬರೆದುರಿಗೆ ತೋರ್ಪಡಿಸಿದು ದನ್ನು ನಾನಿದುವರೆಗೆ ಕಂಡಿಲ್ಲ. ಹೇಗೊ ಸಹಿಸಿಬಿಡುತ್ತಿದ್ದರು. ಸಮಯ ಸಿಕ್ಕಾಗ, ಪ್ರಸ್ತಾಪ ಬಂದಾಗ "ಅದು ಹೀಗಿದ್ದಿದ್ದರೆ ಅಥವಾ ಹಾಗೆ ಮಾಡಿದ್ದಿದ್ದರೆ ಚೆನ್ನಾ ಗಿರುತ್ತಿತ್ತೇನೊ" ಎಂದು ಸಲಹೆಕೊಟ್ಟಂತೆ ಹೇಳಿಬಿಡುತ್ತಿದ್ದರು. ಎಂತೆಂತಹ ಕಠಿಣ ಪರಿಸ್ಥಿತಿಯನ್ನೂ ತಾವೊಬ್ಬರೇ ಮನಸ್ಸಿನಲ್ಲಿ ಅನುಭವಿಸುತ್ತಿದ್ದರೆ ವಿನಾ ಇನ್ನೊಬ್ಬ ರನ್ನು 'ಇದು ನಿನ್ನ ತಪ್ಪು' ಎಂದು ಮೂದಲಿಸುತ್ತಿರಲಿಲ್ಲ. ಈ ತೆರನ ಸಹನೆ ಮಾನವಾತೀತ.

ವಿಧಿಯೂ, ದುರದೃಷ್ಟವೂ ಶ್ರೀ ವಿ. ಸೀ. ಯವರನ್ನು ಒಂದಲ್ಲ ಬಲುವೇಳೆ ಇಕ್ಕಟ್ಟಿನಲ್ಲಿ ಸಿಲುಕಿಸಿ ಪರೀಕ್ಷಿಸಿದೆ. ಮೂರ್ತಿ ಚಿಕ್ಕದೇ ಆದರೂ, ಕತ್ತೆತ್ತಿ ಹತ್ತು ಪುರುಷಪ್ರಮಾಣಕ್ಕೆ ಎದ್ದು ನಿಂತಿರುವ 'ಮಹಾಗುಮ್ಮಟ'ನಂತೆ ಆಗ ಅವರು ಅದನ್ನು ತಾಳುತ್ತಾರೆ. ಸುಖವೂ, ದುಃಖವೂ—ಎರಡೂ ಮುಖವಾಡಗಳನ್ನು ಧರಿಸಿದ ಮೋಸಗಾರರೆ (impesters)—ಎನ್ನುತ್ತಾರೆ ಅವರು. ಯಾರೊಬ್ಬರನ್ನೂ ಅವರು ತಮಗೆ ಆಗದವರನ್ನಾಗಿ ಇದುವರೆಗೂ ಮಾಡಿಕೊಂಡಿಲ್ಲ. ತಮ್ಮ ಕೈಲಾ ಗುವ ಸಹಾಯವನ್ನು ಇನ್ನೊಬ್ಬರಿಗೆ ಮಾಡಿಕೊಡುವವರೇ ವಿನಾ—ನನಗೆ ತಿಳಿ ದಂತೆ—ಅವರು ಇನ್ನೊಬ್ಬರ ಸಹಾಯವನ್ನು ಅಪೇಕ್ಷಿಸಿಯೂ ಇಲ್ಲ. ಇನ್ನೊಬ್ಬರ ಹೊಗಳುವಿಕೆಯನ್ನೂ ಅಪೇಕ್ಷಿಸಿದವರಲ್ಲ; ತೆಗಳುವಿಕೆಯನ್ನೂ ಮನಸ್ಸಿಗೆ ತಂದುಕೊಂಡವರಲ್ಲ. ಯಾರೊಬ್ಬರನ್ನೂ ಕೆಟ್ಟವರೆಂದಿಲ್ಲ; ಅನ್ನುವುದೂ ಇಲ್ಲ. "ಅವರವರ ಮನಸ್ಸು, ಸಮಯ ಸಂದರ್ಭಗಳು ಹೇಗಿತ್ತೊ, ಏನೋ?" ಎಂದು ಬಿಡುತ್ತಾರೆ. ಅಂದು ಆಡಿದವರನ್ನೂ ಇಂದು ಕಂಡಾಗ ನಸುನಕ್ಕು, ಕುಶಲ ಕೇಳಿ ಇವರೇ ಮಾತನಾಡಿಸುತ್ತಾರೆ. 'ಇಂತಹ ಮಹಾನುಭಾವರನ್ನೂ, ಇದ್ದುದ ರಲ್ಲೇ ತೃಪ್ತಿಹೊಂದಿ ಬಾಳುತ್ತಿರುವವರನ್ನೂ ವಿಧಿ ಮತ್ತೆ ಮತ್ತೆ ಪರೀಕ್ಷಿಸುತ್ತಿದೆ ಯಲ್ಲಾ' ಎಂದು ನನಗೆನಿಸಿದೆ. 'ಪುಟ ಹಾಕಿದಷ್ಟೂ ಚಿನ್ನ ಮತ್ತೂ ಮತ್ತೂ ಅಪ ರಂಜಿಯಾಗುತ್ತೆ' ಎಂದೇನೋ? ಒಂದು ಸಲ ಅಪರಂಜಿ ಆಯಿತೆಂದರೆ, ಅದು ಮುಂದೆ ಸರ್ವಕಾಲಕ್ಕೂ ಅಪರಂಜಿಯಾಗಿಯೇ ಉಳಿಯುತ್ತದೆಯಲ್ಲವೆ? ಕಿಲುಬು ಕಟ್ಟು ತ್ತದೆಯೇ? ಮಸಕು ಮುಸುಕುತ್ತದೆಯೆ? ಮತ್ತೆ ವಿಧಿ ಏಕೆ ಮೇಲಿಂದ ಮೇಲೆ ಪರೀ

ಕ್ಷಿಸುತ್ತದೆ? "ಇದು ನನ್ನ ಮನಸ್ಸಿಗೆ ಹಿತ. ನಾನು ಹೀಗೇ ಇದ್ದು ಬಿಡುತ್ತೇನೆ" ಎಂಬುದು ಸ್ಥಿತಪ್ರಜ್ಞನ ವಾಕ್ಯ. ಎಷ್ಟು ಎಡರು ತೊಡರುಗಳು ಬರಲಿ, ಅವು ಆತನ ಮನಸ್ಸನ್ನು ಛಿದ್ರಿಸಲಾರವು. ಇದು ಶ್ರೀ ವಿ. ಸೀ. ಯವರ ಗಾಂಭೀರ್ಯ, ನಡೆ, ನುಡಿ, ಆಚಾರ, ಧರ್ಮ.

ನನಗೂ ಅವರಿಗೂ ಯಾವೊಂದು ರೀತಿಯಲ್ಲೂ ಸಮಾನತೆ ಇಲ್ಲ. ನಾನು ಕೆಟ್ಟವನಲ್ಲೆಂದು ಅವರ ವಿಶ್ವಾಸ ನನ್ನ ಮೇಲೆ. ಅದನ್ನು ಉಳಿಸಿಕೊಳ್ಳುವುದ ಕ್ಕಾದರೂ ನಾನು ಕೆಟ್ಟವನಾಗಬಾರದೆಂದು ನನ್ನ ಈ ಎಲ್ಲ ಅಭ್ಯಾಸ, ಬಾಳು, ಬದುಕು. ಆದರೆ ಯಾವ ಕಠಿಣ ಪರಿಸ್ಥಿತಿಯಲ್ಲಿ ಏನಾಗಿಬಿಡುತ್ತೇನೆಯೊ ಎಂಬ ಭಯ ನನಗಿದೆ, ಇರುತ್ತೆ. ಇರಲಿ.

ನನ್ನ, ಅವರ ಮೊದಲು ಮೊದಲು ಪರಿಚಯಗಳಾದಾಗ ಚಾಮರಾಜ ಪೇಟೆಯಲ್ಲಿ ಹತ್ತಿರ ಹತ್ತಿರದಲ್ಲೇ ವಾಸಿಸುತ್ತಿದ್ದೆವು. ಕೆಲವಾರು ವರ್ಷಗಳು ಕಳೆದ ಮೇಲೆ ನಾನು ಶಂಕರಪುರದಲ್ಲಿ ವಾಸಿಸತೊಡಗಿದೆ. ಈಗಂತೂ ನಾನು ಜಯಚಾಮರಾಜೇಂದ್ರ ರಸ್ತೆಯಲ್ಲಿದ್ದೇನೆ. ಈಗ ನನಗೆ ಅವರಲ್ಲಿಗೆ ಹೋಗುವು ದಕ್ಕೆ ದೂರವಾಯ್ತೇ ವಿನಾ, ಅವರಿಗೆ ಮಾತ್ರ ದೂರವಾಗಲಿಲ್ಲ. ತಿಂಗಳಿಗೊ, ಎರಡು ತಿಂಗಳಿಗೊ ಒಮ್ಮೆ ಬಂದು ಗುರುಗಳೇ ಶಿಷ್ಯನನ್ನು ವಿಚಾರಿಸಿಕೊಂಡು ಹೋಗುತ್ತಾರೆ. ಬರುವಾಗ ಅವರೇ ಬರೆದ ಒಂದು ಹೊಸ ಪುಸ್ತಕವನ್ನೂ ತಂದು ಕೊಟ್ಟು, ಒಂದು ಗಂಟೆಯ ಕಾಲವಾದರೂ ಬಳಿಯೆ ಕುಳಿತು ಸಾಕಷ್ಟು ಮಾತನಾಡಿ, ಮಾತನಾಡಿಸಿ, ನನ್ನ ಹೃದಯವನ್ನು ಉಕ್ಕಿಸಿ ಹೋಗುತ್ತಾರೆ. ಅವರ ಕರುಣದ ಘನತೆ ಇದು. ನಾನಿರುವಷ್ಟು ಕಾಲ ನನಗೆ ಈ ಭಾಗ್ಯವಿರಲಿ.

ಇನ್ನೊಂದೆರಡು ಮಾತುಗಳನ್ನು ಬರೆಯದಿದ್ದರೆ ನಮ್ಮ ನಮ್ಮ ವಿಶ್ವಾಸಗಳನ್ನು ಪೂರ್ಣ ಹೇಳಿದಂತಾಗುವುದಿಲ್ಲವೇನೊ ಎನಿಸುತ್ತೆ. ಹೇಳಿದರೂ ತಪ್ಪೇನಿಲ್ಲ. ಶ್ರೀ ವಿ. ಸೀ. ಯವರು ಈ ನನ್ನ ಲೇಖನವನ್ನು ಓದಿದರೂ ನನ್ನನ್ನು ಕ್ಷಮಿಸಿ ಬಿಡುತ್ತಾ ರೆಂಬ ದೃಢ ವಿಶ್ವಾಸದ ಮೇಲೆ ಬರೆದು ಬಿಡುತ್ತೇನೆ...ಅವರ ಕ್ಷಮೆಯನ್ನು ಬೇಡುತ್ತೇನೆ.

ನನ್ನ ಮೇಲೆ ಅವರ ವಿಶ್ವಾಸ ನೆಲೆಯೂರಿ ಬೆಳೆದ ಕಾಲವದು. ನಾನೂ ಅವರೂ ಒಟ್ಟಿಗೆ ತಿಂಗಳಿಗೊಂದೊ ಎರಡೊ ಸಿನಿಮಾಗಳನ್ನು ನೋಡುತ್ತಿದ್ದೆವು. ಆಗ ಕನ್ನಡ ಸಿನಿಮಾಗಳ ಹೆಸರೇ ಇರಲಿಲ್ಲ. ಇದ್ದುವು ಇಂಗ್ಲಿಷ್, ಅಮೆರಿಕನ್ ಸಿನಿಮಾ ಗಳೆ. ಇವು ಇದ್ದುದು ಹೆಚ್ಚಾಗಿ ಬೆಂಗಳೂರು ಕಂಟೋನ್ಮೆಂಟಿನಲ್ಲೆ. ನಾವು ಅಲ್ಲಿಗೆ ಹೋಗುತ್ತಿದ್ದುದು ಹೆಚ್ಚಾಗಿ ಜಟ್ಕಾದಲ್ಲಿ. ಒಂದೆರಡು ಕಡೆ ಬಸ್ಸುಗಳೂ ಆಗ ತಾನೆ ಬಂದಿದ್ದುವು. ಆಗ ಇದ್ದ ಸಿನಿಮಾಗಳು 'ಟಾಕಿ'ಅಲ್ಲ, 'ಮೂಕಿ'ಗಳು. ಆದರೆ ಆಗಿದ್ದ ಸಿನಿಮಾ ನಟನಟಿಯರು ಈಗ ಇಲ್ಲ. ಅಂದರೆ, ಆ ಚತುರತೆ, ನೈಪುಣ್ಯ, ಆ ಗಾಂಭೀರ್ಯ ಈಗ ಇಲ್ಲ. ಆಗ ಸಿಸಿಲ್ ಡಿ ಮಿಲ್ ತಯಾರಿಸಿದ ಚಿತ್ರಗಳು

ಲೋಕೋತ್ತರವಾದುವು. 'King of Kings', 'Sign of the Cross,' 'Ten Commandments' ನಂತಹ ಅನೇಕಾನೇಕ ಚಿತ್ರಗಳು ಇನ್ನು ತೆರೆಯನ್ನು ಕಾಣಲಾರವು. ಆ ಭಾಗ್ಯ ಈ ಕಾಲದವರಿಗಿಲ್ಲ. ಆಗ ಇಂಗ್ಲಿಷಿನಲ್ಲಿ 'Classical Literature' ಎನಿಸಿಕೊಂಡಿದ್ದ, historical, biblical ಕಥೆಗಳು, Scott, Dickens ಅವರ ಕಾದಂಬರಿಗಳು, ಆಗಿನ ಕಾಲದ 'ಕ್ಲಾಸಿಕ್ಸ್' ಎನಿಸಿಕೊಂಡಿದ್ದ ಲೋಕೋತ್ತರ ಕಥೆಗಳೂ ತೆರೆಗೆ ಬರುತ್ತಿದ್ದುವು. 'ಘಟಾನುಘಟಿ' ನಟನಟಿಯರಿದ್ದ ಕಾಲವದು. ಆ ವೈಖರಿ...ಆ ಪ್ರತಿಭೆ...ಆ ನೈಪುಣ್ಯ ಎಲ್ಲಾ ಆ ಕಾಲಕ್ಕೇ ಆಯಿತು, ಹೋಯಿತು.

ಮನೆಗೆ ತಿರುಗಿ ಬರುತ್ತಾ ನಾವುಗಳು ಆ ಚಿತ್ರದಲ್ಲಿನ ಸನ್ನಿವೇಶಗಳನ್ನೆ ಚರ್ಚಿಸು ತ್ತಿದ್ದೆವು. ಅದು ನನಗೆ ರಸದೂಟ. ಆಗ ಶ್ರೀ ವಿ. ಸೀ. ಯವರ ಪ್ರತಿಭಾಶಕ್ತಿ ನನಗೆ ಕಾಣಬರುತ್ತಿತ್ತು: 'ವಿಮರ್ಶೆಯಲ್ಲಿ ಇವರು ಎಷ್ಟು ಶಕ್ತರಿದ್ದರು, ಯಾವೊಂದು ವಿಷಯ, ಸನ್ನಿವೇಶವನ್ನಾದರೂ ಎಷ್ಟು ಕೂಲಂಕಷವಾಗಿ ನೋಡುತ್ತಾರೆ. ಎಷ್ಟು ದೃಷ್ಟಿಕೋನಗಳಿಂದ ನೋಡುತ್ತಾರೆ' ಎಂಬುದು. ಆ ಬಗೆಗಣ್ಣು ನನಗಿರಲಿಲ್ಲ. ಅವರ ವಾಕ್ಚಾತುರ್ಯವೂ ಅಷ್ಟೇ ಅಸಾಧಾರಣವಾದದ್ದು. ಅವರ ವಾದದ ವಿಷ ಯವೂ ಘನವಾದದ್ದೇ. ಅದು ಮುಗಿದ ನಂತರ–ಅದೇ ವಿಷಯದ ವಿವಾದವೂ ಅಷ್ಟೇ ಘನವಾದದ್ದು...ಅಲ್ಲ... 'ವಾದಕ್ಕಿಂತಲೂ ವಿವಾದವೇ ಘನವಾಗಿತ್ತು' ಎಂದು ಎಷ್ಟೋ ಸಲ ನನಗನ್ನಿಸಿದೆ. ಇಂತಹ ವಾಕ್ಚತುರತೆ ದೊಡ್ಡ ದೊಡ್ಡ ಲಾಯರುಗಳಿಗಿರಬೇಕಾದುದು. ಆದರೂ ಶ್ರೀ ವಿ. ಸೀ. ಯವರ ಮಧುರ ಮನಸ್ಸು ಕೊನೆಗೆ ಓಲುವುದು ನ್ಯಾಯದ ಕಡೆಗೇ...ದೊಡ್ಡತನದ ಕಡೆಗೇ. ನನಗೆ ಇದೊಂದು ಬಗೆಯ ಶಿಕ್ಷಣವೇ ಆಯಿತು. ಈಗಲೂ ಯಾವಾಗಲಾದರೂ ಶ್ರೀ ವಿ. ಸೀ. ಯವರು ನನ್ನಲ್ಲಿಗೆ ಬಂದರೆ ಹೇಗಾದರೂ ಸ್ವಲ್ಪಕಾಲ ನನ್ನ ಕಾರ್ಯಗಳನ್ನು ಬದಿಗಿಟ್ಟು ಅವ ರೊಂದಿಗೆ ಆ ಮಾತು ಈ ಮಾತು ಆಡುತ್ತ, ಯಾವುದಾದರೊಂದು (ನನಗೆ ಬೇಕಾ ದುದೇ ಇರಬಹುದು) ಗಹನ ವಿಷಯವನ್ನು ಚರ್ಚಿಸಲು ತೊಡಗುತ್ತೇನೆ. ಆನಂದ ವಾಗಿ ಕೇಳುತ್ತ ನಡು ನಡುವೆ ಪ್ರಶ್ನೆಗಳನ್ನು ಕೇಳಿ ಸಂದೇಹಗಳನ್ನು ಬಗೆಹರಿಸಿ ಕೊಳ್ಳುತ್ತ ಕುಳಿತುಕೊಳ್ಳುತ್ತೇನೆ. ಶ್ರೀಮಾನ್ ಜಿ. ಪಿ. ರಾಜರತ್ನಂ ಅವರು ಬಂದಾಗಲೂ ಹೀಗೆಯೇ ಮಾಡುತ್ತೇನೆ. ಈಗ ನನಗೆ ಈ ತೆರನ ಇನ್ನೊಬ್ಬ ಗುರು ಗಳು ಸಿಕ್ಕಿದ್ದಾರೆ. ಅವರು ಡಾಕ್ಟರ್. ಯಚ್. ಕೆ. ರಂಗನಾಥ್ ಅವರು. ಇವರು ಗಳು ಬಂದರೆ ನನಗೆ ವಿದುರನ ಮನೆಗೆ ಕೃಷ್ಣ ಬಂದಂತೆಯೇ ಆಗುತ್ತದೆ. "ಸ್ವರ್ಗ ದೊಳೀ ಸ್ನೇಹ ದೊರೆವುದೇನು?" ಎಂದು ಶ್ರೀ ವಿ. ಸೀ. ಯವರು ಒಂದು ಸೊಗಸಾದ ಪದ್ಯವನ್ನು ಬರೆದಿದ್ದಾರೆ. ಭೂಮಿಯ ಮೇಲೆ ಮಾನವನ ಬದುಕು ಹಾಗಿದ್ದಿದ್ದರೆ....ಇರುವುದಾದರೆ??? ಸರ್ವಜ್ಞನ ಪದ್ಯವೊಂದು ಜ್ಞಾಪಕಕ್ಕೆ ಬರುತ್ತದೆ :

ಬೆಚ್ಚನ್ನ ಮನೆಯಾಗಿ, ವೆಚ್ಚಕ್ಕೆ ಹೊನ್ನಾಗಿ
ಇಚ್ಛೆಯರಿವ ಸತಿಯಿರ್ದೊಡೆ
ಸ್ವರ್ಗಕ್ಕೆ ಕಿಚ್ಚು ಹಚ್ಚೆಂದ ಸರ್ವಜ್ಞ ॥

ಅಂದರೆ ಇಂತಹ ಸ್ಥಿತಿ ಈಗ ಯಾರಿಗೂ ಇಲ್ಲವೇ ಇಲ್ಲವೇನೊ ಎನಿಸುತ್ತಿದೆ. ನಾಳೆ ಏನಾಗಿಬಿಡುತ್ತದೆಯೊ – ಇನ್ನೆಂಥೆಂಥ ಕಷ್ಟಕಾರ್ಪಣ್ಯಗಳನ್ನೆದುರಿಸಬೇಕಾಗುತ್ತದೆಯೊ?–ಎಂದು ಬಾಳುತ್ತಿರುವವರು ನಾವು. ಒಂದು ದಿನ ಕಳೆದರೆ ಒಂದು ಯುಗವೇ ಕಳೆಯಿತು, ಅಬ್ಬ!–ಎನ್ನುವವರು ನಾವು. ಪ್ರತಿನಿತ್ಯ ಲಂಚದ ಸುರಿಮಳೆಯನ್ನೇ ಸುರಿಸಿಕೊಳ್ಳುವ ಭೂಪರೂ ಇದ್ದಾರೆ. ಅವರು ಸುಖಪಡುವುದಕ್ಕಷ್ಟೆ ಹುಟ್ಟಿರುವ ದೇವರ ಮಕ್ಕಳು. ಹುಂ...ಇದ್ದುಕೊಳ್ಳಲಿ...ಇದು ಬೇರೆ ಮಾತಾಯಿತು.

ಶ್ರೀ ವಿ. ಸೀ. ಯವರದು ದೊಡ್ಡ ಕವಿಹೃದಯ. ಒಳ್ಳೆಯದನ್ನೇ ನೋಡುತ್ತದೆ. ಒಳ್ಳೆಯದನ್ನೆ ನೆನೆಯುತ್ತದೆ. "ಊರಿನಲ್ಲಿ ಉದ್ಯಾನವನವೂ ಇದೆ. ಗ್ರಾಮದ ಕೊಳೆಯನ್ನೆಲ್ಲಾ ಹೊತ್ತುಹೋಗುವ ಚರಂಡಿಯೂ ಇದೆ. ಆದರೆ ನಾವು ಉದ್ಯಾನವನವನ್ನಾಮೋದಿಸಬೇಕು" ಎಂಬುದು ಅವರ ಮತ. ಅದು ನ್ಯಾಯವೂ ಹೌದು. ಬದುಕನ್ನು ಸಾರ್ಥಕಗೊಳಿಸಿಕೊಳ್ಳಬೇಕಾದುದೇ ನಿಜ. ಶ್ರೀ ವಿ. ಸೀ. ಯವರು ಮಹಾ ಅನುಭವಿಗಳು. ಜೀವನದಲ್ಲಿ ಎಲ್ಲ ತೆರನ ಕಷ್ಟಗಳನ್ನೂ ಎದುರಿಸಿ ನಿಂತವರಿವರು. ಸೋಲಲಿಲ್ಲ; ಗೆದ್ದರು. ಸಾಧಾರಣದವರಾಗಿದ್ದರೆ ಎಂದೋ ಮುರಿದು ಬೀಳುತ್ತಿದ್ದರು.

ಶ್ರೀ ವಿ. ಸೀ. ಯವರದು ಏನೇ ಇರಲಿ, ಎಷ್ಟೇ ಇರಲಿ, ಹೇಗೇ ಇರಲಿ–ಒಳ್ಳೆಯ ಶುಚಿ, ರುಚಿ ಜೀವನ. ಯಾರೂ ಎಂದೂ ಅವರನ್ನು ಕೊಳಕು ಬಟ್ಟೆಗಳಲ್ಲಿ, ಹರಕುಗಡ್ಡದೊಡನೆ ಕಂಡಿಲ್ಲ. ಸೊಗಸಾದ–ಮಡಿಮಾಡಿದ–ಅಂಚಿಲ್ಲದ ಧೋತ್ರವನ್ನುಡುತ್ತಾರೆ. ಹಿಂದೆ 'Lancashire' ನ 1703 ಮಲ್ ಗಜ 10 $\frac{1}{4}$ ಆಣೆ ಇದ್ದಾಗ–ಅದನ್ನೇ ಉಡುತ್ತಿದ್ದರು. ಗಂಜಿ ಹಾಕಿ ಅಗಸ ಮಡಿಮಾಡಿದ Glasgow mullನ್ನು ತಿದ್ದಿ ತೀಡಿ, 'ಲೀವಿಯ' ರುಮಾಲನ್ನು ಧರಿಸುತ್ತಿದ್ದರು. ಅದರಿಂದ ಅವರ ಎತ್ತರ ಇನ್ನೂ ಮೂರು ಅಂಗುಲ ಬೆಳೆಯುತ್ತಿತ್ತು. ಅವರು ಯಾವಾಗಲೂ ಧರಿಸುತ್ತಿದ್ದುದು 'close collar' ಕೋಟು. 'ಟೈ' ಎಂಬ ಬಟ್ಟೆಯ ತುಂಡನ್ನು ಅವರು ಕಟ್ಟಿಯೇ ಇಲ್ಲ. ಕೋಟಿಗೆ ಇಂತಿಷ್ಟೇ ಗುಂಡಿಗಳಿರಬೇಕು. ಅವು ಕೋಟಿಗೆ 'Match' ಆಗಬೇಕು. ಷರಟಿನ ಗುಂಡಿಗಳಿಗೆ 'Mother of pearl' ಏ ಚೆನ್ನು, ಅವು ಒಂದು ಮಾದರಿಯದೇ ಇರಬೇಕು. ಕಾಲ್ಗಳಿಗೆ 'ಚಪ್ಪಲಿ'ಯೇ ಬೇಕು. 'Slip on Shoes', 'Pump Shoes'ಗಳನ್ನು ಅವರು ಮೆಟ್ಟಿದ್ದನ್ನು ನಾನು ನೋಡಿಲ್ಲ. 'Wrist watch'ಗಿಂತ ಒಳ್ಳೆಯ 'Pocket watch' ಏ ಅವರಿಗೆ ಒಪ್ಪಿಗೆ.

ಇನ್ನು ಭಕ್ಷ್ಯ, ಭೋಜ್ಯ, ಖಾದ್ಯಗಳಲ್ಲಿಯೂ ಶ್ರೀ ವಿ. ಸೀ. ಯವರು ರಸ

ಜ್ಞರು. ಇಂಥಿಂಥ ಪದಾರ್ಥಗಳ ರುಚಿ ಹೀಗೇ ಇರಬೇಕೆಂಬ ನಿಷ್ಕರ್ಷೆಯುಳ್ಳವರವರು. ಶುಚಿಗೆ (cleanliness) ಅವರು ಪ್ರಪ್ರಥಮ ಸ್ಥಾನವನ್ನು ಕೊಡುತ್ತಾರೆ. ನಾನು ಅವರೊಡನೆ ಬ ಹ ಳ ಹಿಂದಿನ ಕಾಲದಲ್ಲಿ ಮಾವಳ್ಳಿ ಟಿಫನ್ ರೂಂಗೆ–ಆಗ ಅದು ಮಾವಳ್ಳಿ ರಸ್ತೆಯಲ್ಲೇ ಇತ್ತು–ಭಾನುವಾರಗಳಲ್ಲಿ ಹೋಗಿ, ಒಳ್ಳೆಯ special ಮಸಾಲೆ ದೋಸೆ, ಉದ್ದಿನ ವಡೆ, ಪೂರಿ ಪಲ್ಲೆಯ ಇವುಗಳನ್ನು ತಿಂದುದುಂಟು. ಶ್ರೀ ವಿ. ಸೀ. ಯವರು ಬಂದರೆ ಹೋಟೆಲಿನವರು ಅವರನ್ನು ಸ್ವಚ್ಛವಾದ ಒಂದು ಚಿಕ್ಕಕೋಣೆಯಲ್ಲೆ (ಮಹಡಿಯಲ್ಲಿ) ಕುಳ್ಳಿರಿಸಿಕೊಳ್ಳುತ್ತಿದ್ದರು. ಒಬ್ಬ ಒಳ್ಳೆ ಜೊಟಿ ಮಾಣಿ ಅವರಿಗೆ 'Attender.' ತಂದಿಡುತ್ತಿದ್ದ ತಟ್ಟೆ, ಬಟ್ಟಲು, ಚಂಚೆಗಳು ಬಲು ಶುಭ್ರ. 'Table' ಸಹ ಶುಭ್ರ. ಒಳ್ಳೆಯ 'Service.' ಎಲ್ಲವೂ ಸರ್ವ ವಿಷಯದಲ್ಲೂ ಒಪ್ಪ, ಓರಣ...ಶ್ರೀ ವಿ. ಸೀ. ಯವರು gourmand–ಅಲ್ಲ–gourmet. ನಾನು ಯಾವುದೊ Japanese film ಒಂದರಲ್ಲಿ, ಮನೆಗೆ ಸ್ನೇಹಿತರೊ ಬಂಧುಗಳೊ ಬಂದಾಗ, ಒಟ್ಟಿಗೆ ಕುಳಿತು 'ಟೀ' ಯನ್ನು ಅವರು ತಯಾರು ಮಾಡುವ ಸಂಪ್ರದಾಯ ಬದ್ಧವಾದ ಕ್ರಮಾಚರಣೆಯನ್ನು ನೋಡಿದ್ದೇನೆ. ಶ್ರೀ ವಿ. ಸೀ. ಯವರು ರಜದ ದಿನಗಳಲ್ಲಿ ತಾವೇ ತಮ್ಮ ಕೋಣೆಯಲ್ಲಿ 'ಟೀ' ಮಾಡಿಕೊಳ್ಳುವ ವಿತರಣೆಯನ್ನೂ ಕಂಡಿದ್ದೇನೆ. ಒಂದು ತಟ್ಟೆಯಲ್ಲಿ ಮರಳುತ್ತಿರುವ ನೀರಿನ ಪಾತ್ರೆ, ಅಕ್ಕಪಕ್ಕಗಳಲ್ಲಿ ಕಾಯಿಸಿಟ್ಟಿದ್ದ ಹಾಲು, ಸಕ್ಕರೆ–ಚಿಕ್ಕ ಚಿಕ್ಕ ಬಟ್ಟಲುಗಳಲ್ಲಿ. ಕಪ್ಪು, ಬಸಿ. ಬಂದಿರುವವರಿಗೂ, ತನಗೂ. 'ಟೀ' ಸೊಪ್ಪನ್ನು (Lipton's green label)ಇವರೇ ಅಳತೆ ಮಾಡಿ ಬಿಸಿ ನೀರಿನಲ್ಲಿ ಹಾಕಿ ಸ್ವಲ್ಪವೇ ಹೊತ್ತು ಮುಚ್ಚಿಡುತ್ತಾರೆ. ಅದೆಷ್ಟು ಹೊತ್ತಿಡಬೇಕೆಂಬುದೂ ಅವರಿಗೆ ಗೊತ್ತಿದೆ. ಆಮೇಲೆ ಒಮ್ಮೆ ಕಲಸಿ, ಬಟ್ಟಲುಗಳಿಗೆ ಸುರಿಯುವ ರೀತಿ, ಇಂತಿಷ್ಟೇ 'ಸ್ಪೂನು' ಹಾಲು ಬೆರಸುವುದೂ ಹದವಾಗಿ ಸಕ್ಕರೆ ಬೆರಸುವುದೂ ಅವರಿಗೆ ಗೊತ್ತಿದೆ. ಇವೆಲ್ಲ ಅವರದೇ ಒಂದು ಕ್ರಮ....ಹದ. ಇನ್ನು ಅದರೊಟ್ಟಿಗೆ ತಿನ್ನಬಹುದಾದ 'Smack' ಹುರುಕಲು, ನವುರಾದ ಚಕ್ಕುಲಿ, ಕೋಡುಬಳೆ ಇರುತ್ತಿದ್ದುವು. ಕೋಡುಬಳೆ ಕೋಣನ ಕೋಡುಗಳಂತಿರದೆ, ಕೋಮಲಪ್ರಾಯದ ಹೆಣ್ಣಿನ ಕಿರುಬೆರಳಿನ ಗಾತ್ರದಷ್ಟೆ ಇರುತ್ತಿದ್ದುವು. ಚಕ್ಕುಲಿಯೂ ಅಷ್ಟೆ–ಸಣ್ಣಗೆ, ಬೆಳ್ಳಗೆ ಐದು ಆರೇ ಸುತ್ತು ಇರುತ್ತಿತ್ತು.

ಶ್ರೀ ವಿ. ಸೀ. ಯವರು ಉಪಯೋಗಿಸುತ್ತಿದ್ದ ತಾಂಬೂಲ ವೈವಿಧ್ಯವೂ ವೈಖರಿಯುಡೆ. ಅದನ್ನು ಇಲ್ಲಿ ಹೇಳದೇ ಇರುವುದು ನನ್ನೀ ಬರವಣಿಗೆಯಲ್ಲಿ ಶುದ್ಧ ಲೋಪವೇ ಆಗುವುದು. ಚಿಕ್ಕ, ಬಲು ಶುಭ್ರವಾದ, ಅದಕ್ಕೆಂತಲೇ ಮಾಡಿಸಿಟ್ಟಿರಬಹುದೇನೊ ಎನ್ನುವಂತಹ ತಟ್ಟೆ; ಒಂದು ಬಲು ಸಣ್ಣ ಬಟ್ಟಲಿನಲ್ಲಿ ಸುಣ್ಣ; ಇನ್ನು ಸ್ವಲ್ಪ ದೊಡ್ಡ ಬಟ್ಟಲಿನಲ್ಲಿ ಸೊಗಸಾಗಿ ಪುಡಿಮಾಡಿ, ಏಲಕ್ಕಿ ಜಾಪತ್ರೆ ಕೊಬ್ಬರಿ, ನಡುನಡುವೆ ಕೊಡಿಯಾ ಕಲ್ಲುಸಕ್ಕರೆ ಚೂರುಗಳು ಬೆರಸಿಟ್ಟ–

ಅಡಿಕೆ (ಹಸಿ ಅಡಿಕೆಯಲ್ಲ). ಇನ್ನು ವೀಳೆಯದೆಲೆ... ಅದು ಈ ಬೆಂಗಳೂರಿನಲ್ಲಿ ಅವರಿಗೆ ಹೇಗೆ, ಎಲ್ಲಿ ಸಿಕ್ಕುತ್ತಿತ್ತೋ! ಮೈಸೂರರಮನೆಯ ಮಧುವನದಲ್ಲಿ, ಅಪರೂಪವಾಗಿ ಅಲ್ಲಿಯ ದೇವರಾಜ ಮಾರ್ಕೆಟ್ಟಿನಲ್ಲಿ ಈ ತೆರನ ವೀಳೆಯದೆಲೆಯನ್ನು ನಾನು ನೋಡಿದ್ದೇನೆ. ಬೆಂಗಳೂರಿನಲ್ಲಿಯೂ ಇಂಥದು ಇವರಿಗೆ ಹೇಗೆ ಸಿಕ್ಕುತ್ತಿತ್ತೋ ಏನೋ! ಅದು ಎಳೆಯ ಚಿಗುರೆಲೆ, ತೆಳ್ಳಗೆ ಬೆಳ್ಳಗಿರಬೇಕು. ಅಂಗೈಗಿಂತ ಅಗಲವಾಗಿರಬಾರದು. ಬಾಡಿರಬಾರದು. ಹೀಗೆಲ್ಲ ಇದ್ದರೆ, ಇಷ್ಟೆಲ್ಲ ಇದ್ದರೆ ಮಾತ್ರ ಅವರು ತಾಂಬೂಲ ಮೆಲ್ಲುತ್ತಾರೆ. ಅದೂ ನಾಲ್ಕೆಲೆ ಸಾಕು. ಹೀಗೆ ಶ್ರೀ ವಿ. ಸೀ. ಯವರು ನಡೆ, ನುಡಿ, ಊಟ, ಉಡುಗೆ ಇವು ಮಾತ್ರವೇ ಅಲ್ಲ, ಎಲ್ಲ ವಿಷಯಗಳಲ್ಲೂ ನಾಜೂಕು...ಬಹು ನಾಜೂಕು 'ಊಟ ಬಲ್ಲವನಿಗೆ ರೋಗವಿಲ್ಲ...ಮಾತು ಬಲ್ಲವನಿಗೆ ಜಗಳವಿಲ್ಲ' ಎಂಬ ವಾಕ್ಯ ಶ್ರೀ ವಿ. ಸೀ. ಯವರ ವಿಷಯದಲ್ಲಿ ಸರ್ವಥಾ ನಿಜ. ನಾನು ಈ ಜನ್ಮದಲ್ಲಿ ಏನಾದರೂ ಒಳ್ಳೆಯವುಗಳನ್ನು ಕಲಿತಿದ್ದರೆ ಅದರಲ್ಲಿ ಬಹ್ವಂಶ ಶ್ರೀ ವಿ. ಸೀ. ಯವರ ಕೃಪೆ, ಸಂಶ್ರಯ, ಆಶೀರ್ವಾದ.

**ಕೆ. ವಿ. ಅಯ್ಯರ್**

* * *

## ಸೌಜನ್ಯಮೂರ್ತಿ

ಟಿ. ಎಸ್. ವೆಂಕಣ್ಣಯ್ಯನವರೂ ವಿ. ಸೀತಾರಾಮಯ್ಯನವರೂ ಜತೆಗೂಡಿ ಹೋಗುತ್ತಿದ್ದುದನ್ನು ಕಂಡ ಅವರ ಮಿತ್ರರು ಕೆಲವರು 'The long and the short of Kannada' ಎಂದು ಆಗಾಗ ಚಟಿಕೆ ಹಾರಿಸುತ್ತಿದ್ದುದುಂಟು. ವೆಂಕಣ್ಣಯ್ಯನವರ ನೇರ ನೀಳಮೈಯನ್ನೂ ಸೀತಾರಾಮಯ್ಯನವರ ತುಸ ಕುಗ್ಗು ಕುಳ್ಳನ್ನೂ ಕುರಿತ ಟೀಕೆ ಆಗಿತ್ತು ಅದು. ಅಲ್ಲದೆ, ಆ ಇಂಗ್ಲಿಷ್ ನುಡಿಗಟ್ಟಿನ ರೂಪಕಾರ್ಥವಾದ ಒಟ್ಟು ಅರ್ಥ, ತಾತ್ಪರ್ಯ ಎಂಬ ಧ್ವನಿಯೂ ಆ ಟೀಕೆಯಲ್ಲಿ ವಿವಕ್ಷಿತವಾಗಿತ್ತು ಎಂದು ತೋರುತ್ತದೆ. (ಸಂಸ್ಕೃತದಲ್ಲಿಯೂ ಸರ್ವಪ್ರಕಾರ, ವಿವಿಧ ಎಂಬ ಅರ್ಥದಲ್ಲಿ ಉಚ್ಚಾವಚ ಎಂಬ ಸಮಾಸ ಪದಪ್ರಯೋಗವಿದೆ). ಸೀತಾರಾಮಯ್ಯನವರ ಮತ್ತು ನನ್ನ ಪರಿಚಯ ಕೆಳೆಯ ಹದಕ್ಕೆ ಬಂದು ಅಂತರಂಗ ಮೈತ್ರಿ ಕುದುರಿದಾಗ ನಾವಿಬ್ಬರೂ ಸಾಮಾನ್ಯವಾಗಿ ಒಟ್ಟಿಗೆ ಇರುತ್ತಿದ್ದುದನ್ನು ಕಂಡು ನನ್ನ ಮಿತ್ರರು ಕೆಲವರು "ಏನಯ್ಯ! ನಿಮ್ಮಿಬ್ಬರಿಗೂ ದೋಸ್ತಿ ಹೇಗೆ ಬೆಳೆಯಿತು?" ಎಂದು ಕೆಣಕಿ ಕೇಳುತ್ತಿದ್ದುದುಂಟು. ಅವರ ಅಭಿಪ್ರಾಯದಲ್ಲಿ ನಾನು ಶುದ್ಧ ಒರಟ, ಒಡ್ಡ. ಇದನ್ನು ನೇರವಾಗಿ ಬಾಯಿಬಿಟ್ಟು ಹೇಳಲಾರದೆ ನನ್ನನ್ನು ಖಂಡಿತವಾದಿ, ನಿಷ್ಠುರವಾದಿ ಎಂದು ಹೊಗಳುತ್ತಿದ್ದರು. ಸೀತಾ

ರಾಮಯ್ಯನವರ ನಡೆ ನುಡಿ ಎಲ್ಲಾ ಹೇಳಿ ಕೇಳಿ ತುಂಬ ನಯ, ನವುರು. ಆ ನಯ ನವುರುಗಳಲ್ಲಿ ತಳುಕು ಎಳ್ಳಷ್ಟೂ ಇಲ್ಲ. ತಳುಕಿಗೂ ನಿಜವಾದ ನಯನವುರಿಗೂ ಮೇಲು ನೋಟಕ್ಕೆ ಬೇಗ ವ್ಯತ್ಯಾಸ ತೋರಿಬರುವುದು ಕಷ್ಟ. ಕಾಗೆ ಬಂಗಾರದ ಹೊಳಪು ಒಂದರ್ಥದಲ್ಲಿ ತಳುಕು ಎನ್ನಬಹುದಾದರೆ, ಗುಲಾಬಿ ಎಸಳಿನ ಮಾರ್ದವ, ಕೋಮಲತೆ ನಯ – ನವುರು ಎನ್ನಬಹುದು. ಅಂತರಂಗದ ಸದ್ಭಾವ ಸೌಹಾರ್ದ ಸುಪ್ರಸಾದಗಳ ಪರಿಣಾಮವಾಗಿ, ದ್ಯೋತಕವಾಗಿ ಬಾಹ್ಯಚರ್ಯೆಯಲ್ಲಿ ಮೂಡುವ ಸೌಜನ್ಯವೆ, ನಡೆ ನುಡಿಗಳಲ್ಲಿ ಹೊಮ್ಮುವ ಮೆದುವೆ ನಯನವುರು. ಅಂತರಂಗದ ಸುಪ್ತಭಾವಕ್ಕೂ ಬಹಿರಂಗದ ವ್ಯಕ್ತಚರ್ಯೆಗೂ ಭೇದವಿರದ ವ್ಯಕ್ತಿ ಸಾಚಾವ್ಯಕ್ತಿ, ಸತ್ಪುರುಷ. ಹಾಗಿರದೆ, ಅವೆರಡೂ ಬೇರೆ ಬೇರೆಯಾಗಿರುವುದೆ ತಳುಕು. ತಳುಕಿನ ಸುಳಿವೂ ಇರದ ನಯನವುರು ಸೀತಾರಾಮಯ್ಯನವರದು. ನಲವತ್ತು ವರ್ಷಗಳ ದೀರ್ಘ ಸಹವಾಸದಲ್ಲಿ ಅವರು ಪರರ ಬಗ್ಗೆ ಕಠಿನವಾಗಿ ನುಡಿದದ್ದನ್ನು, ಕೊನೆಗೆ ಅಸಂತೃಪ್ತಿಯಿಂದ ಗೊಣಗಿದ್ದನ್ನೂ, ನಾನು ಒಮ್ಮೆಯೂ ಕಂಡಿಲ್ಲ. ಸೀತಾರಾಮಯ್ಯನವರು ಸರ್ವದಾ ಪ್ರಸನ್ನಚಿತ್ತರು, ಪ್ರಸನ್ನವದನರು. ಅವರದು ಯಾವಾಗಲೂ ನಗುಮುಖ, ಗೆಲುಮುಖ. ಆದರೆ ನೋವರಿಯದ ನಗುವಲ್ಲ, ಬೇಗೆಯರಿಯದ ಗೆಲುವಲ್ಲ. ನೋವರಿಯದ ಬಾಳು ಬಾಳಲ್ಲ; ಜೀವನ ಜಂಜಾಟದ ಬೇಗೆಯ ಕುಲುಮೆಯಲ್ಲಿ ಪುಟಗೊಳ್ಳದ ಬಾಳು ಬಾಳಲ್ಲ. ಕುಹಕಿಗಳ ಕುಟುಕು ನುಡಿಗಳನ್ನು, ಲೇವಡಿಗರ ಕುಚೋದ್ಯಗಳನ್ನು, ನಂಟರ ನೋವುಗಳನ್ನು, ಮಿತ್ರರ ಮೋಸಗಳನ್ನು ತಾಳಿಕೊಂಡು, ನುಂಗಿಕೊಂಡು, ಅರಗಿಸಿಕೊಂಡು, ಮನದ ಹದಹಾಳಿತಗಳನ್ನು ತಪ್ಪಗೊಡದೆ ಸಾಧಿಸಿಕೊಂಡ ನೈಜವಾದ ನಗು ಗೆಲುವುಗಳು ಅವು. ಶ್ರೇಷ್ಠ ಗುರುಗಳಲ್ಲಿ ಶಿಷ್ಯವೃತ್ತಿ, ಹಲವು ಶಾಸ್ತ್ರ ಸಾಹಿತ್ಯಗಳ ಗಾಢಾವಗಾಹನೆ, ಅಧ್ಯಯನದಲ್ಲಿಯಂತೆಯೆ ಅಧ್ಯಾಪನದಲ್ಲೂ ನಿಷ್ಠಾಶ್ರದ್ಧೆಗಳು, ಶಿಷ್ಯವಾತ್ಸಲ್ಯ, ಉತ್ತಮ ಕಲಾಸ್ವಾದನಾಭಿರುಚಿ, ಜಟಿಲ ಜೀವನ ಕ್ಷೇತ್ರದ ದೈನಂದಿನ ಪ್ರತ್ಯಕ್ಷಾನುಭವಗಳಿಂದ ಹದಗೊಂಡು ಬೆಳಗುವ ಸಾರ್ಥಕ ಜೀವನ ಅವರದು.

ಇಂಥ ಮಹನೀಯರನ್ನು ಕಂಡೆ ಕವಿ ಹೇಳಿದ್ದು :

ಗುಣವಂತಃ ಸಮಶೀಲಾಃ
ವಿಸ್ರಂಭ ಸುಖೋಪಚಾರ ಸಂಭೋಗಾಃ
ಸಮ ದುಃಖ ಸುಖಾಃ ಸುಹೃದೋ
ರಸಾಯನಂ ಜೀವಲೋಕಸ್ಯ ॥

(ಒಪ್ಪುವಾ ನಡತೆಯರ್ ನೋವು ನಲಿವಿನಲಿ ಸರಿ
ಪಾಲಿಗರ್ ಭೋಗೋಪಚಾರಗಳ ವಿಶ್ವಾಸ
ದಿಂ ಸಲಿಪ ಸುಖವೀವ ಗುಣವಂತ ಕೆಳೆಯರ್. ರ
ಸಾಯನಂ ಜೀವಗಣಕೆ ॥)

ಸ್ನಿಗ್ಧಾನಾಂ ಅಶಠಾನಾಂ
ಸ್ಥಿರಸಂಧೀನಾಂ ಮಹಾನುಭಾವಾನಾಂ
ವ್ಯಸನೇಷು ಸಹಾಯಾನಾಂ
ಭದ್ರಂ ಕಲ್ಯಾಣಮಿತ್ರಾಣಾಂ ॥
(ತುಂಬುನಯ ಮೆದುಮನದ ಸಟೆಮೋಸವಿಸಿಸರಿಂಯ –
ದಡಸಿದಾಪತ್ತಿನಲಿ ನೆರವಪ್ಪ ಬೆಸೆದ ಸಂ
ಗಾತಿಗಳ ಮಂಗಳ ಸ್ನೇಹ ಮಹನೀಯರಸು
ಮೆಚ್ಚಿ ಜಯವೆಂಬೆ ನಾನು)
ಸಮರಸಮವಿಷಮಮಕುಟಿಲ
ಮನಸ್ಥಿತಂ ತುಲ್ಯಶೀಲ ಸಾಮರ್ಥ್ಯಂ
ಏಕಮಪಿ ಮಿತ್ರಮಚಲಿತ
ಮುದಾರ ಮಾರ್ಯಸ್ಯ ಪರ್ಯಾಪ್ತಂ ॥
(ವಿಷಮಿಸದೆ ಸರ್ವದಾ ತನ್ನೊಡನೆ ಸಮರಸದಿ
ನಡೆವ ಮರೆಮೋಸವಿನಿತಿರದ ಸಮಶೀಲದಿಂ
ನೆಲೆಗೊಂಡ ಕೆಳೆ ಒಬ್ಬನಾದೊಡಂ ಹಿರಿಯನಿಗೆ
ಸಾಕು ತಾನೊಬ್ಬ ಕೆಳೆಯೆ)

**ಕೆ. ವಿ. ರಾಘವಾಚಾರ್**

* * *

## ವಿ. ಸೀ.ಯವರೂ ನಾನೂ

ವಿ. ಸೀ. ಯವರೊಡನೆ ನನ್ನ ಆತ್ಮೀಯ ಸಂಪರ್ಕ ಕಳೆದ ನಲವತ್ತು ವರ್ಷಗಳ ಮೇಲಿಂದ ಇರುವುದಾದರೂ ಅವರ ವಿದ್ವತ್ತಿನ ಆಳ ನನಗಿನ್ನೂ ಎಟಕಲಿಲ್ಲ; ಅವರ ಸೌಜನ್ಯ, ಪ್ರೀತಿ, ವಿಶ್ವಾಸಗಳ ಗಾತ್ರ ಅಳೆಯಲು ನನಗಿನ್ನೂ ಸಾಧ್ಯವಾಗಲಿಲ್ಲ.

ವಿಷಯ ಯಾವುದೇ ಇರಲಿ, ಅವರೊಡನೆ ಒಂದು ಹತ್ತು ನಿಮಿಷ ಮಾತುಕತೆ ಬೆಳೆಸಿದರೆ ಸಾಕು, ನನ್ನ ಈ 77 ನೆಯ ವಯಸ್ಸಿನಲ್ಲೂ ನನಗೆ ಆ ವಿಷಯವನ್ನು ಕುರಿತು ಒಂದು ಹೊಸ ಬೆಳಕು, ಒಂದು ಹೊಸ ದೃಷ್ಟಿ, ಒಂದು ಹೊಸ ಅನುಭವ ಕೂಡಲೇ ಅವರಿಂದ ಲಭಿಸುವುದು. ಸಾಹಿತ್ಯದ ಯಾವ ಅಂಗವೇ ಇರಲಿ, ಲಲಿತ ಕಲೆಯ ಯಾವ ರೂಪವಾದರೂ ಆಗಲಿ (ಚಿತ್ರ, ಶಿಲ್ಪ, ನೃತ್ಯ, ರಂಗಭೂಮಿ ಇತ್ಯಾದಿ), ಮತ, ದರ್ಶನಗಳ ಯಾವ ಸ್ವರೂಪವೇ ಇರಲಿ, ಮನೋವಿಜ್ಞಾನ. ಆರ್ಥಿಕ ವಿಜ್ಞಾನ, ಅನೇಕ ವೇಳೆ ಭೌತವಿಜ್ಞಾನ ಕೂಡ — ಇವುಗಳಲ್ಲೆಲ್ಲ ಅವರಿಗಿ

ರುವ ಜ್ಞಾನ ಸಂಪತ್ತು ಅಗಾಧವಾದುದು. ಅದನ್ನು ಅವರು ನಿಶ್ಚಿತ ಮಾತುಗಳಿಂದ ನಿವೇದಿಸಿಕೊಳ್ಳುವ ರೀತಿಯೂ ಅಚ್ಚರಿಯನ್ನು ಉಂಟುಮಾಡುವಂತಹದು. ಇದು ಅವರೊಡನೆ ಒಡನಾಡಿದವರಿಗೆಲ್ಲ ತಿಳಿದ ವಿಷಯವೇ. ಇಷ್ಟು ವಿದ್ವತ್ತು, ವರ್ಚಸ್ಸು ಅವರಲ್ಲಿ ಮನೆಮಾಡಿಕೊಂಡಿದ್ದರೂ ಅವರ ಸೌಜನ್ಯ, ನಮ್ರತೆ, ಆತ್ಮೀಯ ಭಾವ, ಸರಳತೆ ಯಾರ ಮನಸ್ಸನ್ನಾದರೂ ಆಕರ್ಷಿಸದೆ ಇರಲಾರವು.

ಮನಸ್ಸು ಕುಗ್ಗಿದಾಗ, ಎಲ್ಲಿಯೂ ಬೆಳಕನ್ನು ಕಾಣದಿದ್ದಾಗ, ನಾನು ಅನೇಕ ವೇಳೆ ಅವರ ಮನೆಗೆ ಹೋಗಿ ಅವರ ಬಳಿ ಸುಮ್ಮನೆ ಕುಳಿತುಕೊಂಡಿದ್ದೇನೆ. ನನ್ನ ಮನಸ್ಸಿನ ಸ್ಥಿತಿಯನ್ನು ಅವರಿಗೆ ತಿಳಿಸದಿದ್ದರೂ ಬರೇ ಅವರ ವಿದ್ವತ್ತಿನ ಮಾತುಕತೆಯಿಂದ — ವಿಷಯವು ಏನೇ ಇದ್ದಿರಲಿ — ನಾನು ಹುರುಪುಗೊಂಡಿದ್ದೇನೆ, ಪುನಃ ಚೇತರಿಸಿಕೊಂಡಿದ್ದೇನೆ. ಅಂತಹ ಪ್ರಚೋದಕ ಶಕ್ತಿ ಅವರ ಮಾತುಗಳಲ್ಲಿ ಸಹಜವಾಗಿ ಅಡಕವಾಗಿರುತ್ತದೆ. ನನಗೆ ಅನೇಕ ವೇಳೆ ಕಾಣುತ್ತದೆ, ಸ್ಯಾಮುವೆಲ್ ಜಾನ್ಸನ್ನಿಗೆ ಬಾಸ್ವೆಲ್ ಇದ್ದಂತೆ ವಿ. ಸೀ. ಯವರಿಗೆ ಯಾರಾದರೊಬ್ಬ ಬಾಸ್ವೆಲ್ ಇದ್ದಿದ್ದರೆ ಅವರನ್ನು ಕುರಿತು ಎಂತಹ ಶ್ರೇಷ್ಠ ಜೀವನ ಚರಿತ್ರೆ ಈಗಾಗಲೇ ಹೊರಬರುತ್ತಿತ್ತೆಂದು.

ನನ್ನ ಜೀವನದ ಕಾಂಕ್ಷೆಗಳನ್ನು ರೂಪಿಸಿದ ಕೆಲವೇ ಮಹನೀಯರಲ್ಲಿ ವಿ. ಸೀ. ಯವರ ಸ್ಥಾನ ಹಿರಿದಾಗಿದೆ. ಇದಕ್ಕಾಗಿ ಅವರಿಗೆ ನನ್ನ ನಮ್ರ ಕೃತಜ್ಞತೆ, ಪ್ರೀತಿ, ವಿಶ್ವಾಸಗಳನ್ನು ಈ ಸುಸಂದರ್ಭದಲ್ಲಿ ಅರ್ಪಿಸಲು ನನಗೆ ಅತ್ಯಂತ ಸಂತೋಷವಾಗುತ್ತಿದೆ.

**ಪ. ರಮಾನಂದ**

* * *

## ನನ್ನ ಕವಿ-ಕಾವ್ಯ ಗುರು

....ಚಿಕ್ಕಂದಿನ ಸಾಹಿತ್ಯ ಸಂಸ್ಕಾರದ ಬಲದಿಂದ, ಮುಂದೆ ಕಾಲೇಜಿಗೆ ಬಂದಾಗ, ಒಂದು ಕಡೆ ರನ್ನನ ಗದಾಯುದ್ಧ, ಇನ್ನೊಂದು ಕಡೆ ನಾಗಚಂದ್ರನ ರಾಮಚಂದ್ರ ಚರಿತ ಪುರಾಣ, ಮತ್ತೊಂದು ಕಡೆ ಮುದ್ದಣನ ಶ್ರೀ ರಾಮಾಶ್ವಮೇಧ ನನ್ನನ್ನು ತಮ್ಮ ಸುಳಿಯೊಳಗೆ ಎಳೆದುಕೊಂಡುವು. ಅದೇ ಕಾಲದಲ್ಲಿ ಆಗ ತಾನೇ ಪ್ರಕಟವಾಗಿದ್ದ 'ಕಿರಿಯ ಕಾಣಿಕೆ'ಯ ಪ್ರಭಾವಕ್ಕೂ ನಾನು ಸಿಕ್ಕಿಕೊಂಡೆ. ನಮಗೆ ಪಾಠ ಹೇಳುತ್ತಿದ್ದ ಶ್ರೀ ಎ. ಆರ್. ಕೃಷ್ಣಶಾಸ್ತ್ರಿಗಳ ಗುರುತ್ವದಿಂದ ಆಕರ್ಷಿತವಾಗಿ ಕನ್ನಡಕ್ಕೆ ನಾನು ಅಭಿಮುಖನಾದೆ. ಹೊಸಗನ್ನಡ ಕವಿತೆಗಳನ್ನು ಹೇಗೆ ಓದುವುದೆಂದು ನಮಗೆ ಕಲಿಸಿದವರು ಶ್ರೀ ವಿ. ಸೀತಾರಾಮಯ್ಯನವರು. ಅವರು ಕಲಿಸಿದ್ದನ್ನು ಅನುಸರಿಸಿಕೊಂಡು ಹೋದಾಗ, ನನಗೂ ಕನ್ನಡದಲ್ಲಿ 'ಕವಿತೆ ಬರೆಯಬೇಕು'

ಎಂಬ ಆಸೆಯನ್ನು ಉಂಟುಮಾಡಿದ್ದು 'ಶ್ರೀನಿವಾಸ' ಅವರ 'ಅರುಣ'ದೊಳಗಿನ 'ಸ್ಥಳಗಳ ಹೆಸರು'. 'ಪದ್ಯ ಬರೆಯು'ವ ಅಷ್ಟಕ್ಕೇ ತೃಪ್ತನಾಗಬೇಡ. ಸಾಹಿತ್ಯದ ಇತರ ಪ್ರಕಾರಗಳನ್ನೂ ಬರೆಯಲು ಯತ್ನಿಸು. ಬರೆಯುವುದರ ಜೊತೆಯಲ್ಲೇ ಚೆನ್ನಾಗಿ ಓದುವುದನ್ನೂ ಇರಿಸಿಕೊ. ಬರೀ ಕನ್ನಡ, ಇಂಗ್ಲಿಷ್ ಎಂದುಕೊಂಡರೆ ಸಾಲದು; ಜಗತ್ತಿನಲ್ಲಿರುವ ಎಲ್ಲ ಸಾಹಿತ್ಯಗಳ ಪರಿಚಯವನ್ನೂ ಪಡೆಯಬೇಕು, ಎಂಬ ಅರ್ಥಬರುವಂತೆ ಶ್ರೀ ವಿ. ಸೀ. ಅವರು ಆ ಆರಂಭದ ದಿವಸಗಳಲ್ಲಿ ನನಗೆ ಹೇಳದೆ ಇದ್ದಿದ್ದರೆ, ಅನಂತರ ನಾನು ಬರೆದ ಬಾಲಿಶವಾದ ಬರಹಗಳನ್ನು ಸಹನೆಯಿಂದ ಓದಿ ತಿದ್ದದೆ ಹೋಗಿದ್ದರೆ, ಮುಂದೆ ನನ್ನ ಬೆಳವಣಿಗೆಯನ್ನು ನೋಡಿ ಆತ್ಮೀಯವಾದ ಮೆಚ್ಚುಗೆಯ ಮಾತುಗಳನ್ನು ಹೇಳದೆ ಹೋಗಿದ್ದರೆ—ನಾನು ಈಗ ಓದಿಕೊಂಡಿರುವಷ್ಟನ್ನು ಓದುತ್ತಿದ್ದೆನೋ ಇಲ್ಲವೋ! ಈಗ ಬರೆದಿರುವಷ್ಟನ್ನು ಬರೆಯುತ್ತಿದ್ದೆನೋ ಇಲ್ಲವೋ! ವಿ. ಸೀ. ಅವರಿಗೆ ನಾನು ತರಗತಿಯಲ್ಲಿ ವಿದ್ಯಾರ್ಥಿಯಾಗದೆ ಹೋಗಿದ್ದರೂ ಅವರ ಜೊತೆಯಲ್ಲಿ ಇದ್ದು ಅನೇಕ ಪಾಠಗಳನ್ನು ಕಲಿತಿದ್ದೇನೆ.

....ವಿ. ಸೀ. ಅವರ ಕಾವ್ಯವಾಚನದ ತರಗತಿಗಳು ಒಂದು ನಿಮಿತ್ತವಾಗಿ ನನಗೆ ಶ್ರೀ ಮಾಸ್ತಿ ವೆಂಕಟೇಶ ಅಯ್ಯಂಗಾರ್ಯರ, ಶ್ರೀಮಾನ್ ಡಿ. ವಿ. ಗುಂಡಪ್ಪನವರ ಸಾಹಿತ್ಯ ಕೃತಿಗಳಿಗೆ ಪ್ರವೇಶವಾಯಿತು. ಕಾಲಕ್ರಮದಲ್ಲಿ ಅವರಂತೆ ಬರೆಯಬೇಕು ಎಂಬ ಆಸೆಯೂ ಉಂಟಾಯಿತು....

**ರಾಜರತ್ನಂ ಜಿ. ಪಿ.**

## GOODNESS ITSELF

I most gladly join in doing honour to my friend, Mr. V. Sitaramiah.

I have known Mr. V. Sitaramiah for years as a man of talent, ability, enthusiasm and character. He has the gift of Poetic Imagination and can invest common things with significance and lustre. Morally, he is goodness itself and has endeared himself to a great many by his unassuming generosity and goodness of nature. He is an ornament and a source of strength to any institution of which he is a member.

God bless him and keep him cheerful for the sake of the large public that holds him in love and respect.

D. V. GUNDAPPA

## SUPERIOR BY VIRTUE

I have known Sri V. Sitaramiah for over half a century. I think we met first at the Amateur Dramatic Association, Bangalore. I am not quite sure if he appeared on the stage! Since my return to Bangalore in 1958, I have had the pleasure and honour of meeting him often and enjoying his literary conversations and expositions, and learnt to respect and admire his literary eminence. My appreciation of his contributions to Kannada literature was very limited as my knowledge of that language is not worth mentioning. He wrote the Monograph on Dr. D. V. Gundappa in the series of **Kannada Writers and their Work**. It was about Dr. Gundappa's contribution to Kannada literature. Luckily for me, he wrote the brochure in English, which enabled me to read it and appreciate the heights to which Dr. Gundappa had risen in that literature.

Though older than Sri Sitaramiah by about ten years–my 85th birthday falls on December 25, 1973–I consider him as my superior by virtue of his literary eminence and accomplishments and his selfless services to India, and am proud to render *Paada Puja* to him.

I wish him long life, excellent health and boundless energy to continue with increasing zest his splendid service to India.

P. KODANDA RAO

* * *

## EFFECTIVE SPEAKER AND TEACHER

It was during one of my visits, I think it was in 1947, to Bangalore on University work that I came into contact with the leaders of literature in Karnataka who had all gathered there after the annual session of the Kannada Sahitya Sammelan. The President that year was C. K. Venkata Ramayya, Chief Translator to Mysore Government. Gundappa whom I knew better introduced me to the other Kannada celebrities to Sri

Masti, 'V. Si.' who, I learnt later, was himself elected President of the Sammelan at a subsequent session.

Some days back I received Sitaramiah's letter saying that he was coming to Madras in a car with his children and wanted to look into the books of the late Prof. M. Hiriyanna,–with whom he had studied Philosophy,–which the Professor had bequeathed to the Kuppuswami Sastri Research Institute here. It was only when I took him to the Institute that Sitaramiah revealed that he was writing in Kannada something on Hiriyanna and wanted to see how the Professor used his books and what markings he made there. At the recent Hiriyanna Centenary Celebrations at the Mysore University, I had referred, in my address, to the revealing character of the book-markings of the Professor. It is just like Sitaramiah to have come all the way to Madras to read these marks and jottings of Hiriyanna in his books, at 75 as if he is a young research scholar! Well, that was the old tradition and training.

A Professor of and writer in Kannada, Sitaramiah is as good in Philosophy and English and Sanskrit literatures. We have had him with us in the Sanskrit Academy, Madras, to lecture on Valmiki Ramayana and found that he was thoroughly familiar with the whole text. I have just gone through his monograph on Vāلmiki for the Sahitya Academy. Many years ago I had corresponded with him on Sanskrit Prosody and published an article of his on the subject in the **Journal of Oriental Research, Madras**. Aesthetics with special reference to literature forms his main or comprehensive interest. **Kavi-kavya-drsti** is one of his works in Kannada. The other day, when we met at the Hiriyanna Seminar, we discussed certain questions in poetics and he referred to some recent articles in the **Times Literary Supplement.** He still manages to subscribe for it.

He is not only a writer and a booklover and reader but an effective extempore speaker and lecturer, as I have personally seen in meetings and Seminars. I remember his lecture on Purandaradasa which I arranged many years ago in the Music

Academy, Madras. He should have been a very impressive and effective teacher.

I wish him long life and health and hope to see more of his creative and critical writings.

**V. RAGHAVAN**

* * *

## V.Si.'s GRACIOUSNESS

I do not remember exactly when I first met Shri V. Sitaramiah, but I do remember that the moment we met, we became friends. The place of the meeting was Bangalore, of course. The year was 1952. I was very ill, then. And very much reduced in weight. Some friends had advised Bangalore as a cure. Madame Sophia Wadia had kindly made arrangements for my stay there.

The evening we arrived there, we were welcomed by a fine drizzle. The atmosphere was lovely. The lady, Miss Sophia Ten Broock, whose house we had rented at No. 1, B. P. Wadia Road, was very friendly. But I was afraid I would feel very lonely in Bangalore. I did not know anybody there except Shri C. K. Nagaraja Rao whom I had often met in Bombay. I expressed my apprehension to him. He took me in his charge. I was introduced by him to Shri V. Ashwatha Narayana Rao, of the Khadi Bhandar there. At his Bhandar I met a Shastriji, who was a very learned man. He, I think, introduced me to a poet friend of his, talking about whom he used to go in raptures. That friend was Shri V. Sitaramiah, V. Si. to his students, colleagues and the literature-loving people of Karnataka.

I remember the happy hours I have spent with V. Si. in Bangalore—at the Lal Baug gardens, at his home and mine, at meetings we attended together and at the places of friends that we visited. He presided at a meeting I was addressing and said: "Mr. Broker has a talent for friendship." I do not know whether I have that talent, but I know that he has it in plenty. While I say this, I remember the large number of friends he has in all parts of India.

During discussions with him, I was almost always overwhelmed by the vastness of his erudition and the variety of his interests. And that was always coupled with the simplicity of his person. I have always seen him in a simple dress—dhoti, shirt, coat and turban. And his personality, too, was equally simple. I have never seen him trying to show off, though I know he has many more things to show than many others in the literary field.

Though he never showed himself off, he was fond of showing to me the best points of so many of his friends and colleagues. I remember his reading and explaining to me with great affection some lovely lyrical pieces of Shri Narasimhachar and Narasimhaswami and some very striking pieces of Shri Rajaratnam. I remember his having told me that Shri Shivaram Karanth was a great novelist and that Shris Bendre and Puttappa were great poets. Through him I could strike a friendship with Shri K. V. Iyer, the strong man of Bangalore.

It was funny, the way I got to know Shri Iyer. I had heard about him and his school of physical culture. I had also gone to him on my own for my treatment. The price he had quoted for the same was rather on the high side, I had felt, and had left it at that. One day I was talking about my health to V. Si., and he suggested that I go and meet Shri K. V. Iyer. I said I had already done so, but he was rather costly.

"K. V. Iyer is not costly at any price," V. Si. asserted. "You go to him tomorrow and don't talk about the charges."

I went, and did not talk about it at all. Instead, talked about V. Si. who had sent me to him, and about the novels that V. Si. had told me K. V. Iyer had written. Through that contact I not only improved my health, but also formed a lasting friendship. There was no question of any fees now, costly or other because, as Shri Iyer said, I was not a patient of his but a friend. V. Si. was standing there all the time, enjoying the little argument we were having about it.

Another great man he introduced me to was not a friend but an elder. He was the famous painter Venkatappa who was

then in his eighties. He talked to us about his Guru, Abanindranath Tagore, and showed us with great affection many of his paintings. After we stepped out of his house, V. Si. told me :

"We were very lucky to-day."

"Why ?" I asked.

"Because Venkatappa is very temperamental. He rarely talks with the pleasantness he showed to-day."

"Do you know why he did that?" I asked with a twinkle.

"Because you were there." He smiled.

"No, no, Because there was a magician with me."

"Who's that ?" He asked, surprised.

"Who can it be but you ?" I said.

The smile he gave me was graciousness itself.

After those pleasant days in Bangalore, we have met only at seminars, conferences and congresses of writers. But, whenever we meet I always experience once again the magic of his personality and the warmth of his friendship. I also see the dignified way in which he behaves himself and the respect that he draws from one and all. Unfortunately, due to the ignorance of his language, I cannot read him, and thus, write about his work. But I can sense the value of his writings in the warmth with which all Kannadigas old and young–speak about him.

As I am writing this, I visualize him sitting in his small ground–floor room at 2nd Road, Chamarajpet, Bangalore, poring over his books. I also hear a knock, Somebody enters. The books are quickly put off and a smile lights up that friendly face of his.

"Am I disturbing you ?" the visitor asks.

"Oh no, you are welcome." V. Si. replies.

And a discussion follows, the richness of which the visitor will be proud to recall for a long time. May that smile and that richness be with us all for a long, long time.

GULABDAS BROKER

## SCHOLAR AND WRITER

In the old city of Bangalore, there are a number of streets whose names are derived from grains, pulses and other articles used for consumption. Thus, there is an Akkipet (Rice Bazar), Balepet (Bangle Bazar), Cottonpet (Cotton Bazar) and the like. My family lived in a small lane off Akkipet. My elder brother, who had just finished graduation and had taken up a post as teacher in the Government Collegiate High School at Bangalore told me one day – this was a little over 50 years ago – that he had a friend of the name of V. Seetharamiah universally called V. C., and that it would be a good thing if I went to meet him in his house. I asked how I could locate his house. He said "Go down cottonpet till you reach the timber market, pass the timber market till you reach a church and go on the right of the church and at the corner of the second turning to the right, you will find a small house. That is where V. C. lives".

Accordingly, on a Sunday morning, I went to call on V. C. I knocked at the door and it was opened by a young man of medium height, rather slim, dressed in dhoti and a closed-collar coat with a white turban on his head. It looked as if he was going out. I asked him whether V. Seetharamiah was at home and he said that he himself was V. Seetharamiah. I told him that I was the brother of H. V. Bhashyam Iyengar and added that as it looked as if he was going out, I would come some other time. He said "Not a bit of it. Any brother of Bhashyam Iyengar is always welcome in my house. Come, right in." There was a small room on the right-hand side with just two chairs in it, a couple of cheap carpets and a whole lot of books. There was dust all over the place. Seetharamiah asked me to sit down and asked what I was doing. I said, I was studying in the senior B. Sc. class with Physics as my main subject and I hoped I would be a distinguished scientist some day. His eyes shone with a mixture of benevolence and amusement and he said "I wish you good luck. It is good to have

dreams when we are young but do not get disappointed if those dreams don't come true." He went out of the room for a couple of minutes and came back with a cup of coffee. "Have this," he said. When I told him that I was not accustomed to taking coffee, he said he was sure that it would not hurt me, and I drank it. He conversed with me for about 15 minutes. All the time, he was sitting on the carpet on the floor leaning against the wall, and his conversation was full of quotations from people like George Bernard Shaw of whom I had only vaguely heard. He also talked of karma and dharma. "Wherever your fate takes you, you must carry out your dharma. Take your brother for instance. I have rarely met a person who is so *good* as he is. He has great intelligence, great sense of integrity, a fine sense of humour and altogether he has a fine character. The fates have been unkind to him. He has had a rheumatic heart at a very young age. No one, however, would believe it, just listening to him. His conversation is always gay and witty, though Heaven alone knows how much he is suffering. The only advice I can give you is, don't do anything of which you feel that your brother may be ashamed."

Some time back, I called again on V. Seetharamiah. This is, of course, not my first visit to him in 50 years. We had met off and on. But because my service kept me for many years in places like Bombay and Delhi, I paid only infrequent visits to Bangalore and so my contacts with him were few and far between. We sometimes corresponded; and I remember in particular, one letter which I wrote to him which, I hope, he has mercifully forgotten. In the letter I expressed the opinion that Kannada language seemed incapable of the refinements and nuances of feeling and emotion that the English language could express. I thought that Kannada was a "heavy" language incapable of expressing very delicate shades. I do not recollect if V. C. sent me a reply to this brash and stupid letter and if so, I have not kept it.

About a month ago, I again personally called on him in his house. I went down Cottonpet which has changed very little

in the last 50 years except that the street has now got a good surface; in the old days it used to be full of dust. I walked past the timber market which has not changed at all, passed the church and took the second turning to the right. The house at the corner where I had first visited him 50 years ago was exactly as it was then. I knocked at the door and a young man came to open it. I asked whether Mr. Seetharamiah was in and he said, "He has just gone out to pay a visit to Masti Venkatesha Iyengar and from there he would go on to visit Mr. Jagirdar." I gave the young man my name and said I would come on another day when I hoped to be able to find V. Seetharamiah in. So, I went along on an other day and this time I found V. Seetharamiah in his house. The room was quite unchanged. There was the same old faded carpet (it looked like the same old carpet or it may have been a new carpet which had faded over the years); there were the same two chairs and there was the same pile of books in some confusion and disorder. When I went through the door, I saw a person sitting on the carpet leaning against the wall. When a walked in, he got up with surprising agility and said warmly "come in, come in." For a moment, I thought time had stood still. There was not an ounce of additional flesh on the body, the figure was trim as it was fifty years previously and, except for the fact that the hair on the head was somewhat thin and white, it could have been the same young man on whom I had called some fifty years previously.

The fates have not dealt too kindly with V. Seetharamiah, as they did not deal too kindly with my brother Bhashyam Iyengar. (He died very young, after a prolonged illness, cheerful to the last.) But I am sure V.C. would just shrug his shoulders about this. From the point of view of material comforts, he is still what he then was, namely a member of a lower middle class Brahmin family. But his eyes have the same gleam of benevolence and humour. His conversation is still full of wit and, although he is a great scholar in English literature and a very eloquent writer in kannada and a good

student of economics, he has a modesty which is completely unaffected. V.C. has written a number of books in Kannada of which one is on the subject of economics–I believe the only comprehensive book on that subject in Kannada. I asked him once whether these books provided him with a modicum of income. He laughed and said that sometimes he has to pay for the publication. I have not had the cruelty to ask him how much income he has got over the years from the publication of his books; and even if the figure is a positive one, I am pretty certain that it is not substantial. Nevertheless, he goes on writing. His style is characteristically simple and lucid and is able to express fine shades of emotion Every time I read one of his books, I recall with a sense of shame what I wrote to him many, many years ago about the "heaviness" of the kannada language. Conversation with him is a rich intellectual treat. You forget the humble room in which he sits and works, you forget the noise and dust in the road outside. You are carried away on a stream of thought which is an unusual blend of something that intellectuals and philosophers thought of thousands of years ago and what is being thought of by contemporary writers on literature and philosophy. You come out of the room in a haze of wonder and admiration and suddenly you are struck by the incongruity of the surroundings in which he lives, namely the smallness and utter simplicity of his house, the manner of his living and the superb heights which he has reached in his writings.

Sometimes, when I think of the times through which we are passing, I get profoundly depressed as to where we are heading, but when I meet V. Seetharamiah, the faith in my country gets renewed. Surely, India cannot go down if it can produce people like him who are simple, modest and, in spite of the buffetings of fate, completely honest and dedicated to the profession of thinking and writing.

H. V. R. IENGAR

